ಜ್ಞಾನಿವರೇಣ್ಯ ಶ್ರೀನರಸಿಂಹದಾಸರಿಂದ ವಿರಚಿತವಾದ

# ಪರತತ್ತ್ವ ವರ್ಣನೆ

## (ಮುಕ್ತಿಮಾಣಿಕ್ಯಮಾಲಾ)



ಸಂಪಾದನೆ ಮತ್ತು ಪ್ರಕಾಶನ

ಸೀ.ಕೆ. ವಿಜಯ ಮತ್ತು ಸೀ.ಕೆ. ನಾರಾಯಣರಾವ್

॥ ಶ್ರೀಃ ॥

ಯಸ್ಸರ್ವಗುಣ ಸಂಪೂರ್ಣಃ ಸರ್ವದೋಷವಿವರ್ಜಿತಃ ।
ಪ್ರೀಯತಾಂ ಪ್ರೀತಯೇವಾಲಂ ವಿಷ್ಣುರ್ಮೇ ಪರಮಃ ಸುಹೃತ್॥

ಮನ್ಮನೋಭೀಷ್ಟದಾತಾರಂ ಸರ್ವಾಭೀಷ್ಟ ಫಲಪ್ರದಂ ।
ಪುರಂದರಗುರುಂ ವಂದೆ ದಾಸಶ್ರೇಷ್ಠಂ ದಯಾನಿಧಿಂ ॥

ಅಜ್ಞಾನ ತಿಮಿರಚ್ಛೇದಂ ಬುದ್ಧಿ ಸಂಪತ್ಪ್ರದಾಯಕಂ।
ವಿಜ್ಞಾನ ವಿಮಲಂ ಶಾಂತಂ ವಿಜಯಾಖ್ಯ ಗುರುಂ ಭಜೇ॥

ಜ್ಞಾನಿವರೇಣ್ಯ ಶ್ರೀ ನರಸಿಂಹದಾಸವರ್ಯ ಕೃತ

# ಪರತತ್ತ್ವ ವರ್ಣನಂ

## (ಮುಕ್ತಿಮಾಣಿಕ್ಯ ಮಾಲಾ)

ಸಂಪಾದನೆ
ಸೀ.ಕೆ ವಿಜಯ ಮತ್ತು ಸೀ.ಕೆ.ನಾರಾಯಣ ರಾವ್

***"PARATATTVA VARNANAM"*** a book on the phylosopy of Madhwa Siddhantha with the help of Dasa Sahitya. Edited and Published by Sri C.K. Vijaya and Sri C.K. Narayana Rao, # 49, 'Srivamana', NAL Layout, East End Main Road, Jayanagar 4th 'T' Block, Bangalore-560 04

Total Pages: 336

..s

Copies : 1000

First Edition : June 2007

Cover pages : Sri K.M. Sheshagiri

Price : **Rs. 150/-**

Printed at :
**Parishree Printers**
# 9 (H-137), J.T. Nivas, 4th Cross Road,
Nagappa Block, Srirampuram, Bangalore-560 021
Phone: 2312 8286, Email: parishree@yahoo.com

ॐ

**SRI DIGVIJAYARAMO VIJAYATE**

SRIMAJJAGADGURU MADHWACHARYA MOOLAMAHASAMSTHANA

# UTTARADI MATH

**Head Office:**
5th Cross, Shankarapuram, Basavanagudi, BANGALORE-560 004. Phone: 26678726 / 26526203

Camp: ಬೆಂಗಳೂರು Date: 28-05-2007

## ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ ಶ್ರೀಮದುತ್ತರಾದಿಮಠಾಧೀಶ್ವರರಾದ ಶ್ರೀಶ್ರೀ1008 ಶ್ರೀಸತ್ಯಾತ್ಮತೀರ್ಥಶ್ರೀಪಾದಂಗಳವರ

## ಅನುಗ್ರಹ ಸಂದೇಶ

ಶ್ರೀಮದಾಚಾರ್ಯರ ಶಾಸ್ತ್ರ ಪ್ರಮೇಯಗಳ ಆಗರ. ಪರತತ್ತ್ವದ ಬಗ್ಗೆ ಯಥಾರ್ಥ ತಿಳುವಳಿಕೆಯನ್ನು ನೀಡುವ ಏಕೈಕ ಆಕರ. ಇದರ ಅಧ್ಯಯನ – ಅರಿವುಗಳಿಲ್ಲದೆ ಸಂಸಾರ ಮೋಚನೆ ಅತಿಸುದುಷ್ಕರ-ಅತ್ಯಸಾಧ್ಯ. ಶೇಷಾದಿಗಳಿಗೂ ಅಗೋಚರವಾದ ಗೂಢಾರ್ಥಗಳನ್ನೊಳಗೊಂಡ ಈ ದಿವ್ಯಶಾಸ್ತ್ರದ ಅರಿವು ಮೂಢಮತಿಗಳಾದ ಮಾನವರಿಗೆ ಅಶಕ್ಯವೇ ಸರಿ. ಅಂತೆಯೇ ಮಹಾಜ್ಞಾನಿಗಳಾದ, ವಿಭೂತಿಪುರುಷರಾದ ಶ್ರೀಮಟ್ಟೀಕಾಕೃತ್ಪಾದರು, ಶ್ರೀ ವ್ಯಾಸರಾಜರೇ ಮೊದಲಾದ ಟೀಕಾ-ಟಿಪ್ಪಣಿಕಾರರು ಅವತರಿಸಿ ಶ್ರೀಮದಾಚಾರ್ಯರ ಶಾಸ್ತ್ರದ ಮರ್ಮವನ್ನು ತಿಳಿಸಿಕೊಡುವ ಅನೇಕ ಗ್ರಂಥರತ್ನಗಳನ್ನು ರಚಿಸಿಕೊಟ್ಟು ಪರಮೋಪಕಾರ ಮಾಡಿದ್ದಾರೆ.

ಅದರಂತೆಯೆ ಶ್ರೀಪುರಂದರದಾಸರು, ಶ್ರೀವಿಜಯದಾಸರೇ ಮೊದಲಾದ ದಾಸವರೇಣ್ಯರು ತಮ್ಮ ಪದ, ಪದ್ಯ, ಸುಳಾದಿಗಳಲ್ಲಿ ಸರ್ವಮೂಲಗಳಲ್ಲಿ ಬರುವ ಪ್ರಮೇಯಗಳನ್ನು ಸುಂದರವಾಗಿ ಸಂಗ್ರಹಿಸಿ ಸಾಮಾನ್ಯರಿಗೂ ತಿಳಿಯುವಂತೆ ತಿಳಿಯಾಗಿ ತಿಳಿಹೇಳಿ ಅನುಗ್ರಹಿಸಿದ್ದಾರೆ.

ಶ್ರೀ ನರಸಿಂಹದಾಸರು ಈ ಎರಡೂ ಸಾಹಿತ್ಯಗಳನ್ನು ವಿಶೇಷ ಅಧ್ಯಯನಮಾಡಿ ಇವುಗಳಲ್ಲಿ ಬರುವ ಪ್ರಮೇಯಗಳನ್ನು ತಮ್ಮ 'ಪರತತ್ತ್ವವರ್ಣನಂ' ಎಂಬ ಕೃತಿಯಲ್ಲಿ ಸುಂದರವಾಗಿ ಸಂಗ್ರಹಿಸಿದ್ದಾರೆ. ವಿಶೇಷವಾಗಿ ಸತತ್ತ್ವರತ್ನಮಾಲಾ ಹಾಗೂ ವಿಜಯದಾಸರ ಕೃತಿಗಳ ಬೆಳಕಿನಲ್ಲಿ ಅನೇಕ ವಿಷಯಗಳನ್ನು ವಿವರಿಸಿದ್ದಾರೆ. ಪ್ರಮೇಯಜಿಜ್ಞಾಸುಗಳಿಗೆ ಉಪಯುಕ್ತವಾಗಿದೆ ಈ ಕೃತಿ. ಆದರೂ ಇದರಲ್ಲಿ ಹೇಳಿರುವ ಅನೇಕ ವಿಷಯಗಳು ಆಕರ ಗ್ರಂಥವಾದ ಸರ್ವಮೂಲಗಳಲ್ಲಿಯಾಗಲಿ, ಟೀಕಾ-

ಟಿಪ್ಪಣಿಗಳಲ್ಲಾಗಲಿ ಸ್ಪಷ್ಟವಾಗಿ ಹೇಳಲ್ಪಟ್ಟಿಲ್ಲ. ಕೆಲವು ವಿಷಯಗಳು ಆಕರ ಗ್ರಂಥಗಳಿಗೆ ಅನುಗುಣವಾಗಿವೆ. ಹೀಗೆ ವಿಚಾರಣೀಯ ಅಂಶಗಳೂ ಕೆಲವು ಇದರಲ್ಲಿ ಇವೆ. ಅಂತಹ ವಿಷಯಗಳನ್ನು ವಿದ್ವಾಂಸರ ಹತ್ತಿರ ಕೇಳಿ ತಿಳಿದು ಸ್ಪಷ್ಟಪಡಿಸಿಕೊಳ್ಳುವುದು ಒಳ್ಳೆಯದು.

ನಮ್ಮ ಗುರುಗಳ ಶಿಷ್ಯರಾದ ಶ್ರೀಯುತ ಜಿ.ಕೆ. ಮಧ್ವರಾಯರು ಈ ಕೃತಿಯನ್ನು ವಿಶೇಷ ಶ್ರದ್ಧೆಯಿಂದ ಪ್ರತಿಮಾಡಿಟ್ಟುಕೊಂಡು ಸಂರಕ್ಷಿಸಿ ಪ್ರಶಂಸನೀಯ ಕೆಲಸವನ್ನು ಮಾಡಿದ್ದಾರೆ. ಈಗ ಅವರ ದೌಹಿತ್ರರಾದ ಸಿ.ಕೆ. ವಿಜಯ ಹಾಗೂ ಸಿ.ಕೆ. ನಾರಾಯಣರಾವ್ ಇವರು ಈ ಕೃತಿಯನ್ನು ಪರಿಶ್ರಮದಿಂದ ಸಂಶೋಧನೆಮಾಡಿ, ಸಂಪಾದಿಸಿ ಪ್ರಕಾಶನ ಮಾಡಿಸುತ್ತಿರುವುದು ಬಹಳ ಸಂತೋಷದ ವಿಷಯ. ಈ ಕೃತಿಯ ಲಾಭವನ್ನು ಜಿಜ್ಞಾಸುಗಳು ಪಡೆಯುವಂತಾಗಲಿ ಎಂದು ಆಶಿಸುತ್ತೇವೆ.

ಸಿ.ಕೆ. ವಿಜಯ ಹಾಗೂ ಸಿ.ಕೆ. ನಾರಾಯಣರಾವ್ ಇವರಿಗೂ, ಅವರ ಕುಟುಂಬಕ್ಕೂ ಭಗವಂತ ವಿಶೇಷವಾಗಿ ಜ್ಞಾನ, ಭಕ್ತಿ, ವೈರಾಗ್ಯಗಳನ್ನು ನೀಡಲಿ ಎಂದು ಅಸ್ಮದುಪಾಸ್ಯಮೂರ್ತಿಯಾದ ಗುರುಮಧ್ವಾಂತರ್ಗತ ಶ್ರೀಮನ್ಮೂಲರಾಮದಿಗ್ವಿಜಯರಾಮ ವೇದವ್ಯಾಸದೇವರಲ್ಲಿ ಪ್ರಾರ್ಥಿಸುತ್ತೇವೆ.

ಇತ್ಯನೇಕ ನಾರಾಯಣಸ್ಮರಣೆಗಳು

ಶ್ರೀಮತ್ಸತ್ಯಾತ್ಮತೀರ್ಥ ಶ್ರೀಪಾದರು, ಉತ್ತರಾದಿಮಠ

ಶ್ರೀ1008 ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರು
ಶ್ರೀ ಉತ್ತರಾದಿ ಮಠ

# ಮುನ್ನುಡಿ

*ಶ್ರೀಮದ್ವೇಂಕಟನಾಥಾಯ ಶ್ರೀನಿವಾಸಾಯ ತೇ ನಮಃ॥*
*ಸದಯಧವಳಹಾಸಂ ವಿಟ್ಠಲಂ ಚಿಂತಯಾಮಿ ॥*

ಪರತತ್ತ್ವ ವರ್ಣನಂ ಅಥವಾ ಮುಕ್ತಿಮಾಣಿಕ್ಯಮಾಲಾ ಎಂಬುದು ಈ ಗ್ರಂಥದ ಶೀರ್ಷಿಕೆ. ಇದನ್ನು ರಚನೆ ಮಾಡಿದ ಮಹನೀಯರು ಶ್ರೀ ನರಸಿಂಹ ದಾಸರು. ಇವರ ಬಗ್ಗೆ ವಿಶೇಷ ವಿವರಗಳಿಲ್ಲ. ಸುಮಾರು ನೂರ ಐವತ್ತು ವರ್ಷಕ್ಕೂ ಪೂರ್ವದಲ್ಲಿ ಬಿಳಿಗಿರಿರಂಗನ ಬೆಟ್ಟದ ಹತ್ತಿರದ ಊರಿನಲ್ಲಿದ್ದವರೆಂದು ತಿಳಿದು ಬರುತ್ತದೆ. ತಮ್ಮ ಗುರುಗಳಿಗೆ ಮತ್ತು ಶ್ರೀ ವಿದ್ಯಾಧೀಶರಿಗೆ ವಂದಿಸಿ ಗ್ರಂಥ ಸಮಾಪ್ತಿ ಮಾಡಿದ್ದಾರೆ.

ಗ್ರಂಥಕರ್ತರ ಹೆಸರು ಮತ್ತು ವಿದ್ಯಾಧೀಶರ ಹೆಸರು ಎರಡನ್ನುಳಿದು ಇನ್ನಾವ ವಿವರಗಳೂ ಕಂಡುಬರುವುದಿಲ್ಲ. ಪೂರ್ವಿಕರನೇಕರು, ಹೆಸರಾಂತ ಕವಿಗಳು ಮತ್ತು ಗ್ರಂಥಕರ್ತರು, ತಮ್ಮ ಬಗ್ಗೆ ವಿಶೇಷವಾಗಿ ಹೇಳಿಕೊಳ್ಳತಕ್ಕ ರೂಢಿ ಕಡಿಮೆ. ತಮ್ಮಬಗ್ಗೆ ವಿವರಗಳೆಲ್ಲವು ಆತ್ಮಶ್ಲಾಘನೆಯ ಸಂಕೇತವೆಂದು ತಿಳಿದು ಅವರು ತಿಳಿಸಲೇ ಇಲ್ಲ. ಶ್ರೀ ನರಸಿಂಹಾರ್ಯರೂ ಹಾಗೆಯೇ ಮಾಡಿದ್ದಾರೆ. ಗುರುಗಳ ಹೆಸರಂತೂ ಸೂಚಿಸಲೇ ಇಲ್ಲ. ಪ್ರಾಯಶಃ 'ಗುರೋರ್ನಾಮ ನಗೃಹ್ಣೀಯಾತ್' ಎಂಬ ಶಾಸ್ತ್ರ ವಚನವನ್ನು ಸ್ಮರಣೆಗೆ ತಂದು ಕೊಂಡು ಅನುಷ್ಠಾನಕ್ಕೆ ತಂದಿರಬಹುದು ಎನಿಸುತ್ತದೆ. ಅರ್ವಾಚೀನ ಪದ್ಧತಿ ಏನೆಂದರೆ ನಮ್ಮ ಪರಿಚಯ ವಿಸ್ತಾರವಾಗಿ ಪ್ರಕಟ ಪಡಿಸಬೇಕು, ಆದರಿಂದ ಗೌರವಾನ್ವಿತರಾಗಬೇಕು, ಇತ್ಯಾದಿ ಎಷ್ಟೋ ಮಹತ್ವಾಕಾಂಕ್ಷೆಗಳಿರುತ್ತವೆ. ನಮ್ಮಂತೆ ಅವರೂ ಯಾಕೆ ಪ್ರಕಟಿಸಲಿಲ್ಲವೆಂಬುದು ನಮ್ಮ ಆತಂಕ. ಪ್ರಾಚೀನ ಅರ್ವಾಚೀನರಲ್ಲಿ ಕಾಲಾಂತರದಲ್ಲಿ ಈ ಅಭಿಪ್ರಾಯ ಭೇದಗಳು ನುಸುಳಿದವು.

ಪ್ರಾಚೀನರಲ್ಲಿ ಅನೇಕರು ತಾವು ಮಾಡತಕ್ಕ ಕಾರ್ಯವನ್ನು ಹರಿಪ್ರೀತಿಗಾಗಿ ಮಾಡಿ ಎಲೆಮರೆಕಾಯಿಯಂತೆ ಇರುತ್ತಿದ್ದರು. ಪ್ರಖ್ಯಾತಿ ಪುರಸ್ಕಾರಗಳಿಗೆ ಪ್ರಾಧಾನ್ಯತೆ ಕೊಡುತ್ತಿರಲಿಲ್ಲ. ಪ್ರಾಯಶಃ ಶ್ರೀ ನರಸಿಂಹದಾಸರು ಆ ವರ್ಗಕ್ಕೆ ಸೇರಿದವರೆಂದು ತೋರುತ್ತದೆ. ಅರ್ವಾಚೀನರು ಬಹು ಬೇಗ ಸುದ್ದಿಯನ್ನು ಹರಡುತ್ತಾರೆ; ಯಾಕೆಂದರೆ ಈಗ ಆ ತರಹದ ಸೌಕರ್ಯಗಳಿವೆ. ನಮ್ಮ ಮಾನಸಿಕ ಧೋರಣೆಗಳು ಕಾಲಾನುಸಾರವಾಗಿ ಪರಿವರ್ತನೆಗೊಂಡಿವೆ.

ಸಂಸ್ಕೃತವಾಙ್ಮಯದಲ್ಲಿ ಸತ್ತತ್ವರತ್ನಮಾಲಾ, ಮಧ್ವಸಿದ್ಧಾಂತಸಾರ, ಷೋಡಸಿ – ಚತುರ್ದಶಿ ಇತ್ಯಾದಿ ತತ್ವ ಚಿಂತನೆ ಮಾಡತಕ್ಕ ಸ್ವತಂತ್ರ ಗ್ರಂಥಗಳಿವೆ. ದಾಸ ಸಾಹಿತ್ಯದಲ್ಲಿ ಆಧ್ಯಾತ್ಮ ಮಾಲಾ, ಪ್ರಮೇಯ ಮುಕ್ತಾವಳಿ, ಪಂಚಭೇದ ಇತ್ಯಾದಿ ಗ್ರಂಥಗಳಿವೆ. ಮೊದಲಿನ ಗ್ರಂಥರಾಶಿ ಕೇವಲ ಸಂಸ್ಕೃತ ವಾಙ್ಮಯದಲ್ಲಿರತಕ್ಕ ಪ್ರಮಾಣಗ್ರಂಥಗಳನ್ನಾಧರಿಸಿಕೊಂಡು ರಚಿತವಾದ ಗ್ರಂಥಗಳು. ಎರಡನೆಯ ಗ್ರಂಥರಾಶಿ ಕೇವಲ ದಾಸಸಾಹಿತ್ಯ ವಾಕ್ಯಗಳನ್ನಾಧರಿಸಿಕೊಂಡು ರಚಿತವಾದವುಗಳು. ಆದರೆ ನರಸಿಂಹದಾಸರ ವ್ಯವಸಾಯ ಈ ಎರಡೂ ತರಹದ ಗ್ರಂಥರಾಶಿಗಳಿಗಿಂತ ಭಿನ್ನ ಪಥದಲ್ಲಿ ಸಾಗಿದೆ. ಇವರ ಈ ಗ್ರಂಥ ಅವಲೋಕನ ಮಾಡಲಾಗಿ ಇವರು ಶಾಸ್ತ್ರಾಧ್ಯಯನಮಾಡಿದವರು ಎಂಬುದು ಸ್ಪಷ್ಟ: ಕೇವಲ ಅದರಲ್ಲಿಮಾತ್ರ ಪರಿಣಿತರಲ್ಲ ದಾಸಸಾಹಿತ್ಯವನ್ನೂ ಆಳವಾಗಿ ಅಧ್ಯಯನ ಮಾಡಿದ್ದಾರೆ. ಈ ಎರಡು ವಾಙ್ಮಯಗಳ ಪ್ರಭಾವಕ್ಕೊಳಗಾದ ಇವರ ಈ ಗ್ರಂಥದ ರೂಪರೇಖೆಗಳು ವಿಭಿನ್ನ ರೀತಿಯಲ್ಲಿರುವುದು ಸಹಜ.

ಇವರಿಗೆ ತಮ್ಮ ಗುರುಗಳು ಸ್ವಪ್ನದಲ್ಲಿ ಆದೇಶಿಸಿದ್ದನ್ನು ಶ್ರದ್ಧೆಯಿಂದ ಕಾರ್ಯಗತಮಾಡಿದ್ದಾರೆ. ಲೇಖನ ಕಾರ್ಯವು ಮನುಷ್ಯನ ಬುದ್ಧಿಯನ್ನು ಶುದ್ಧಗೊಳಿಸುತ್ತದೆ. ಬರವಣಿಗೆಯಿಂದ ತಾನು ಸಂಪಾದಿಸಿದ ಜ್ಞಾನದಲ್ಲಿ ವಿಶೇಷ ಸ್ಥೈರ್ಯ ಬರುತ್ತದೆ. ತಾನು ಸಂಪಾದಿಸಿದ ಜ್ಞಾನ ಅತ್ಯಮೂಲ್ಯವಾಗಿದೆ; ಅದನ್ನು ತನ್ನಂತೆಯೇ ಮನೋವೃತ್ತಿ ಇರುವವರ ಜೊತೆ ಜ್ಞಾನಾ(ಶಾಸ್ತ್ರಾ)ನಂದವನ್ನು ಹಂಚಿಕೊಳ್ಳಬೇಕು ಎಂಬ ಸ್ಫೂರ್ತಿ ಬಂದಾಗ ಲೇಖನ ಪ್ರವೃತ್ತಿ ಬರುವುದು.

ಈ ಗ್ರಂಥದ ಅಪೂರ್ವತೆ ಏನೆಂದರೆ, ಇವರು ತಾವು ಹೇಳಬೇಕಾದ ವಿಷಯಗಳನ್ನು ಚಿಂತನೆ ಮಾಡಿ, ಪ್ರಧಾನ ಶೀರ್ಷಿಕೆಗಳನ್ನು ಆಲೋಚಿಸಿ ಶಾಸ್ತ್ರ ಗ್ರಂಥಗಳ ಆಧಾರದ ಮೇಲೆ ಗ್ರಂಥರಚನೆಯನ್ನು ಮುಂದುವರೆಸಿದ್ದಾರೆ. ಶಾಸ್ತ್ರಗ್ರಂಥಗಳ ಪ್ರಮಾಣಗಳನ್ನು ಉದಾಹರಿಸುವುದರ ಜೊತೆಗೆ ದಾಸ ಸಾಹಿತ್ಯದಲ್ಲಿ ಅದೇ ವಿಷಯದ ಮೇಲೆ ಇರತಕ್ಕ ಸಮಾಖ್ಯಾವಾಕ್ಯಗಳನ್ನು ಅಲ್ಲಲ್ಲಿ ಉದಾಹರಿಸುತ್ತ ವಿಚಾರ ಮಂಥನ ಮಾಡಿದ್ದಾರೆ. ದಾಸ ಸಾಹಿತ್ಯದಿಂದ ಉದಾಹೃತ ವಾಕ್ಯಗಳು ಸಂದರ್ಭೋಚಿತವಾಗಿದ್ದು ಮೂಲ ಪ್ರಮಾಣವಾಕ್ಯಗಳನ್ನು ಅರ್ಥೈಸುತ್ತವೆ. ಕನ್ನಡ ಭಾಷೆ ಬಲ್ಲವರಿಗೆ ಹೆಚ್ಚಾದ ಸ್ಪಷ್ಟೀಕರಣ ಸಿಗುತ್ತದೆ. ಕನ್ನಡನಾಡಿನ ಜನತೆಗೆ ಕನ್ನಡ ಬಲ್ಲವರಿಗೆ ದಾಸ ಸಾಹಿತ್ಯವು ಒಂದು ವರ. ಹೀಗೆ ಒಂದಕ್ಕೊಂದು ಪೂರಕಗಳಾಗಿ ಪ್ರತಿಪಾದನೆ ಮಾಡತಕ್ಕ ಈ ವ್ಯವಸಾಯ, ವಿಚಾರಗಳಿಗೆ ಪುಷ್ಟಿದಾಯಕವಾಗಿವೆ.

ಪುರಂದರಾದಿ ದಾಸರೆಲ್ಲರೂ ರಚಿಸಿದ ದಾಸಸಾಹಿತ್ಯವೆಂದು ಇಂದು ಪ್ರಸಿದ್ಧಿ ಹೊಂದಿದ ಶಬ್ದರಾಶಿ ಎಲ್ಲವೂ ಕನ್ನಡ ವಾಙ್ಮಯದಲ್ಲಿಇಯೇ ಇದೆ. ಈ ಸಾಹಿತ್ಯವೆಲ್ಲವೂ ಪದ ಪದ್ಯ ಸುಳಾದಿ ಉಗಾಭೋಗಗಳ ರೂಪದಲ್ಲಿ ಹೊರಹೊಮ್ಮಿವೆ. ಇದರಲ್ಲಿ ಮೂರು ಅಂಶಗಳಿವೆ. ಸಂಗೀತ, ಸಾಹಿತ್ಯ ಮತ್ತು ತತ್ವ ಚಿಂತನೆ. ಈ ಸಾಹಿತ್ಯ ನೋಡಿದಕೂಡಲೇ ಇದು ಕನ್ನಡ ಭಾಷೆ ಮತ್ತೂ ಸಂಗೀತಮಾಧ್ಯಮದಲ್ಲಿದೆ ಎಂಬ ಜ್ಞಾನ ಜನ ಸಾಮಾನ್ಯರಿಗೆ ಆಗುತ್ತದೆ. ಮತ್ತು ನೀತಿ ನಿಯಮ ವಿಚಾರ ಹಿತ ವಚನಗಳು ಪರಮಾತ್ಮನ ಲೀಲಾವರ್ಣನೆಗಳು ತತ್ವಚಿಂತನೆಗಳು ಇತ್ಯಾದಿ ಅಂಶಗಳನ್ನೊಳಗೊಂಡಿವೆ. ಇವುಗಳಲ್ಲಿ ಅಡಗಿರತಕ್ಕ ದ್ವೈತ ತತ್ವಜ್ಞಾನದ ವಿಶೇಷ ಚಿಂತನೆಗಳು ಪದಗಳಿಗಿಂತ ಸುಳಾದಿಗಳಲ್ಲಿ ಹೆಚ್ಚಾಗಿ ಹೊರಹೊಮ್ಮಿವೆ. ಕನ್ನಡ ಮಾಧ್ಯಮ ಎಂದಾಕ್ಷಣಕ್ಕೆ ಕನ್ನಡಭಾಷೆ ಬಲ್ಲವರಿಗೆಲ್ಲ ಇವುಗಳ ಭಾವ ಅರ್ಥವಾಗದು. ಕನ್ನಡ ಭಾಷೆಯೊಡನೆ ಶಾಸ್ತ್ರ ಮತ್ತು ಪುರಾಣಗಳ ಶ್ರವಣದ ಹಿನ್ನೆಲೆಯು ದಾಸ ಸಾಹಿತ್ಯದ ಭಾವವನ್ನರಿಯಲು ತುಂಬ ಸಹಕಾರಿಯಾಗುತ್ತದೆ. ಈ ಶ್ರವಣದ ಹಿನ್ನೆಲೆ ಅವಶ್ಯಕ ಎಂದರೂ ತಪ್ಪಾಗಲಾರದು. ಆವರು ಯಾವ ಗ್ರಂಥಗಳಿಗೂ ವ್ಯಾಖ್ಯಾನಗಳನ್ನು ಬರೆದಿಲ್ಲ ; ಟಿಪ್ಪಣಿಯನ್ನೂ ಬರೆದಿಲ್ಲ. ಆದರೆ ಮದ್ವಾಗಮದ

ಅಥವಾ ದ್ವೈತ ಸಿದ್ಧಾಂತದ ಸಾರರೂಪವಾದ ಭಾವಗಳನ್ನು ಕೇವಲ ಪುರಂದರಾದಿ ದಾಸ ಚತುಷ್ಟಯರಲ್ಲ, ಶ್ರೀಪಾದರಾಜ, ಶ್ರೀವ್ಯಾಸರಾಜ, ಶ್ರೀ ವಾದಿರಾಜ ಇತ್ಯಾದಿ ಯತಿಗಳೂ, ಇವರೆಲ್ಲರ ಅನುಯಾಯಿಗಳೂ, ಅಸಂಖ್ಯಾತ ಪದ ಸುಳಾದಿಗಳನ್ನು ರಚಿಸಿ ಕನ್ನಡ ಮಾಧ್ಯಮದಿಂದ ಜನಸಾಮಾನ್ಯರಿಗೂ ತತ್ವಜ್ಞಾನ ತಿಳಿಯುವಂತಾಗಿ ಭಗವಂತನಲ್ಲಿ ಭಕ್ತಿ ಮಧ್ವಮತದಲ್ಲಿ ಶ್ರದ್ಧೆಗಳು ಧೃಢೀಕರಿಸಿವೆ. ಆದ್ದರಿಂದಲೇ ಇವರೇನು ಮಾಡಿದ್ದಾರೆ ಎಂದರೆ, ಅವರು ಅನ್ನುತ್ತಾರೆ– 'ಮಥಿಸಿ ಮಧ್ವಾಗಮಪಯೋಬ್ಧಿಯ ಕ್ಷಿತಿಗೆ ತೋರಿದ ಬ್ರಹ್ಮವಿದ್ಯಾ' ಎಂದು ದಾಸಸಾಹಿತ್ಯವನ್ನು ವರ್ಣಿಸಿದ್ದಾರೆ. ಇವರೆಲ್ಲರೂ ಧರೆಗಿಳಿದು ಬಂದ ದೇವತೆಗಳು. ದೇವಲೋಕದಿಂದ ನಿರ್ಧಿಷ್ಟಕಾರ್ಯಗಳಿಗಾಗಿ ಡೆಪ್ಯುಟೇಶನ್ ಮೇಲೆ ಬಂದು ತಮ್ಮ ಕಾರ್ಯ ಸಾಧಿಸಿಕೊಂಡು (ಅಂದರೆ ಭಗವದ್ಕಾರ್ಯ ಸಾಧಿಸಿಕೊಂಡು) ತಮ್ಮ ಲೋಕಕ್ಕೆ ಹಿಂತಿರಿಗಿದರು. ಆದ್ದರಿಂದ ಅವರು ಮಾತನಾಡಿದ್ದು ಕೇವಲ ಕನ್ನಡವಲ್ಲ ದೇವಗನ್ನಡ. ಯಾರಿಗಾದರೂ ಕನ್ನಡ ಮಾತೃಭಾಷೆಯಾಗಿದ್ದರೆ ಅಥವಾ ಕನ್ನಡ ಚೆನ್ನಾಗಿ ಪರಿಚಯವಿದ್ದರೆ ಶಾಸ್ತ್ರದಲ್ಲಿ ಪಾರಂಗತರಾದರೂ ಸಹ ಒಂದು ಸಲ ಈ ಪ್ರಾಕೃತ ಶಬ್ದರಾಶಿಯ ಕಡೆಗೆ ಗಮನ ಹರಿಸುವುದು ಲೇಸು. ಈ ಹಿನ್ನೆಲೆಯಲಿ ನರಸಿಂಹದಾಸರನ್ನು ನಾವು ಸಂದರ್ಶಿಸಬೇಕು; ಅಂದರೆ ಮಾತ್ರ ಈ ಗ್ರಂಥ ರಚನೆಗೆ ದಾಸರ ಜ್ಞಾನ ಸಂಗ್ರಹವೇನು ಅವರ ಉತ್ಸಾಹವೆಷ್ಟು ಎಂಬುದನ್ನು ಊಹಿಸಬಹುದು.

ಪ್ರಾರಂಭದಲ್ಲಿ ಅವರೇ ಹೇಳುವ ಮಾತಿನಲ್ಲಿ 'ಜೀವರಿಗೆ ಸಂಸಾರದಿಂದ ಮೋಕ್ಷ ಆಗಬೇಕಾದರೆ ಜೀವಗೆ ಐದು ಪ್ರಕಾರ ಜ್ಞಾನ ಹುಟ್ಟಿದ ತರುವಾಯ ಉಕ್ತಪ್ರಕಾರ ನಿಷ್ಟನಾಗಬೇಕು. ಆ ಐದು ವಿಧ ಜ್ಞಾನ ಎಂಥಾದ್ದೆಂದರೆ – ಅದರ ವಿವರ ೧) ಜೀವನ ಸ್ವರೂಪ ಗುಣಧರ್ಮಗಳು ತಿಳಿಯತಕ್ಕದ್ದು ೨)ಸಂಸಾರ ಧರ್ಮ ತಿಳಿಯೋಣ, ೩) ಸಂಸಾರದಿಂದ ಬದ್ಧನಾಗಿರೋ ಪ್ರಕಾರ ತಿಳಿಯೋಣ, ೪) ಅದರ ನಿವೃತ್ತಿಯಾಗೋ ಉಪಾಯ ತಿಳಿಯೋಣ, ೫) ಅನಂತರ ಮೋಕ್ಷಕ್ಕೆ ಜ್ಞಾನ ಹುಟ್ಟೋಣ ಮಾತ್ರವೇ ಪ್ರಯೋಜಕವಲ್ಲವಾದ್ದರಿಂದ ಅಧಿಕಾರಿ ತಿಳಿಯತಕ್ಕ ಜ್ಞಾನ, ಆ ಉಪಾಯಾನುಕೂಲ ಭಕ್ತಿಪೂರ್ವಕ ಭಗವದುಪಾಸನಾ ದೀಕ್ಷಿತನಾಗಬೇಕು, ೬) ಭಗವದುಪಾಸನಾ ಪ್ರಕಾರತಾ'.

ಗ್ರಂಥಕರ್ತರೇ ಸೂಚಿಸಿದ ಮೇಲಿನ ಆರು ಪ್ರಕರಣಗಳು.ಈ ಆರು ಪ್ರಕರಣಗಳೇ ಈ ಗ್ರಂಥದ ವಿಷಯಸೂಚಿ. ಅವುಗಳನ್ನೇ, ಒಂದೊಂದು ಪ್ರಕರಣವನ್ನೂ ವಿಸ್ತಾರವಾಗಿ ವಿವರಿಸಿದ್ದಾರೆ. ಬರವಣಿಗೆಯ ಶೈಲಿ ಶಾಸ್ತ್ರ(ವಾದ )ಗ್ರಂಥಗಳ ಮಾದರಿಯಲ್ಲಿದೆ. ಇವರು ಆಧರಿಸಿದ ಶಾಸ್ತ್ರಗ್ರಂಥಗಳ ಆಕರಗ್ರಂಥಗಳು- ಸತ್ತತ್ವರತ್ನಮಾಲಾ, ವಾಯುಪುರಾಣ ಶಾಂಡಿಲ್ಯತತ್ವ, ಮಾಧ್ವ ಪ್ರಸ್ಥಾನತ್ರಯೀ ಭಾಷ್ಯಗಳು, ಆಧ್ಯಾತ್ಮ ಮಾಲಾ, ಮುಕ್ತಿ ತತ್ವ, ಇತ್ಯಾದಿ. ದಾಸ ಸಾಹಿತ್ಯ ಪುರಂದರಾದಿ ದಾಸಚತುಷ್ಟಯ ಮತ್ತು ಅವರ ಪರಂಪರೆಯಿಂದ ಉಗಮಿಸಿದ ಪದ ಪದ್ಯ ಸುಳಾದಿಗಳು, ಹರಿಕಥಾಮೃತಸಾರ ಇತ್ಯಾದಿ ಗ್ರಂಥಗಳನ್ನು ಬಳಸಿದ್ದಾರೆ. ವಿಷಯ ವಿಚಾರ; ಪೂರ್ವಪಕ್ಷ-ವಿಶ್ಲೇಷಣೆಗಳು- ಆಕ್ಷೇಪ- ಸಂದೇಹ ನಿವಾರಣೆಗಲು; ಕೊನೆಯದಾಗಿ ಸಿದ್ಧಾಂತವಾಕ್ಯದಿದ ನಿಶ್ಚಿತಾರ್ಥವನ್ನು ದೃಢಪಡಿಸುವುದು. ಈ ರೀತಿ ಶಾಸ್ತ್ರಗ್ರಂಥಗಳ ಪಥದಲ್ಲಿ ಮುಂದುವರೆದು ಮುಕ್ತಾಯ ಹೊಂದಿದ ಈ ಗ್ರಂಥ.

ಈ ಗ್ರಂಥದ ವೈಶಿಷ್ಟವೇನು ಎಂಬ ದಿಶೆಯಲ್ಲಿ ಸ್ವಲ್ಪ ದೃಷ್ಟಿಹರಿಸೋಣ.

ಐದನೇ ಮೋಕ್ಷಾಧಿಕಾರ ಪ್ರಕರಣ. 'ಅಜ್ಞಾನ ನಿವಾರಣ ದ್ವಾರಾ ಮುಕ್ತಿಯೋಗ್ಯ ಜೀವರಿಗೆ ಮೋಕ್ಷಾಧಿಕಾರ ಸಿದ್ಧಿಸಬೇಕೆಂಬುದೇ ಈ ಅಧಿಕರಣದ ಮುಖ್ಯ ತಾತ್ಪರ್ಯವು. ಇದೆಲ್ಲವೂ ಭಗವದಧೀನವು. ಅನಂತಾನಂತ ಭಗವದ್ರೂಪಗಳಲ್ಲಿ ಜೀವಾಂತರ್ಯಾಮಿ- ಜೀವನಿಯಾಮಕ ಚೇಷ್ಟಾಮಾಡದಹೊರತು ಜೀವನ ಸ್ವರೂಪ ಬಾಹ್ಯದೇಹಗಳಲ್ಲಿ ಯಾವ ತರಹದ ಕ್ರಿಯೆಗಳು ಉಂಟಾಗಲಾರವು.' 'ಬಿಂಬಕ್ರಿಯಾಯ್ಯೆವಕ್ರಿಯಾವಾನ್' ।

'ಪಿಪೀಲಿಕಾದಿ ಬ್ರಹ್ಮಾಂತಾ ಜೀವಾ ಯೇಚಾಂಡಗೋಚರಾ । ತೇಷು ಕೋಪಿ ಕ್ವಚಿತ್ ಕ್ವಾಪಿ ನಕರ್ಮಂ ಕ್ಷಮತೇ ನರಃ । ಯದಶ್ನಾತಿ ತದಶ್ನಾತಿ ಯದಾವಕ್ತಿ ತದ್ವೈವಸ ।' ಇತ್ಯಾದಿ ವಾಯು ಪುರಾಣ ಶಾಂಡಿಲ್ಯತತ್ವ.

ಇದಕ್ಕೆ ಅನುಕೂಲವಾದ ಪುರಂದರದಾಸರ ಸುಳಾದಿ- 'ಹರಿನಡೆದರೆ ನಡೆಯದಿೀಜಗ । ಹರಿ ಅಲ್ಲಾಡದಿರೆ ಅಲ್ಲಾಡದೀ ಜಗ । ಹರಿಮಾತಾಡದಿರೆ ಮಾತಾಡದೀ ಜಗ । ಹರಿ ಎವೆ ಇಕ್ಕದೇ ಇಕ್ಕದೀ ಜಗವು ।' ....।

ಇನ್ನು ಆರನೆಯ ಉಪಾಸನಾ ಪ್ರಕರಣದಲ್ಲಿ ಈ ಮಾತನ್ನು ಕಾಣಾಬಹುದು;- 'ಜೀವಾಂತರ್ಯಾಮಿಯಾಗಿ ಇರತಕ್ಕ ಲಕ್ಷ್ಮೀಸಹಿತ ನರಸಿಂಹರೂಪಗಳು - ಅಸೀತಿಸಹಸ್ರ ಸಪ್ತಶತ ಪಂಚವಿಂಶತಿರೂಪಂ ಧೃತ್ವಾ ನರಸಿಂಹೋಪ್ಯಸ್ತಿ ಜೀವಸ್ವರೂಪಕೆ । ಜೀವೋಪ್ಯಾಗಮ ಮೃತ್ಯೂನಾಂ ಮೃತ್ಯುರೂಪೋಪ್ಯಹರ್ನಿಶಂ॥' (ಅಲ್ಲಿ ಒಟ್ಟು ೮೦೭೨೪ ಭಗವದ್ರೂಪಗಳಿವೆ). ಇನ್ನು ಮುಂದೆ ಶ್ರೀಹರಿಯು ಸ್ವಯಂ ಕೇಶವಾದಿ ಚತುರ್ವಿಂಶತಿ ರೂಪಗಳಧರಿಸಿ ಬ್ರಹ್ಮರುದ್ರಾದಿ ತಾತ್ವಿಕರ ನಾಮದಿಂದ ಸ್ವರೂಪದ ನೇತ್ರ ಶ್ರೋತ್ರಾದಿಗಳಲ್ಲಿ ಕುಳಿತು ಇದ್ದಾನೆ ; - 'ಜೀವಾಂಗುಷ್ಟ ಪ್ರಮಾಣೇನ ವಾಸುದೇವಃ ನಾಮಕಃ । ಅಂತರಾತ್ಮಾ ಬಿಂಬರೂಪೀ ಮುಕ್ತೌಬಿಂಬತ್ವಮಾಪ್ಯತೇ । ಜೀವಾಂಗುಷ್ಟ ಸಂಕಾಶೋ ಮೂರ್ತಿಮಾನ್ ಜೀವರೂಪಕೇ । ಜೀವಾಕಾರೋಸ್ತಿ ಪ್ರದ್ಯುಮ್ನೋ ಜೀವೇಯಂ ಜೀವನಾಮಕಃ । ಜೀವಸ್ವರೂಪೇಂದ್ರಿಯೇಷು ನಿಯಂತಾಹ್ಯನಿರುದ್ಧಕಃ । ಅಸೀತಿಸಹಸ್ರ ಸಪ್ತದಶ ಪಂಚವಿಂಶತಿ । ರೂಪಂ ಧೃತ್ವಾ ನಾರಸಿಂಹೋಪ್ಯಸ್ತಿ ಜೀವಸ್ವರೂಪಕೇ' ॥ ಇತಿ ಮುಕ್ತಿತತ್ವೇ ॥

ಸುಳಾದಿ: ಜೀವಾಂಗುಷ್ಟಾಗ್ರ ಮೂರ್ತಿ ಜೀವಾಂಗುಷ್ಟಮೂರ್ತಿ । ಜೀವಾಕಾರ ಮೂರ್ತಿ ಪುರುಷ ಮೂರ್ತಿ । ಜೀವೇಂದ್ರಿಯಗಳಲ್ಲಿ ತತ್ ಸ್ಥಾನವಾದ। ಆವಾವರೂಪದಂತೆ ಇಷ್ಟಮೂರ್ತಿ ಎಂತಲೂ- ಶ್ರೀವಾಸುದೇವ ಸಂಕರ್ಷಣ ಪ್ರದ್ಯುಮ್ನ ಜೀವನಾಮಕ ಅನಿರುದ್ಧ ಮೂರ್ತಿ । ಈ ಸರ್ವರೂಪಗಳು ದೇವಿಸಹಿತವಾಗಿಪ್ಪವು ॥ ಎಂತ ಜೀವಾಖ್ಯ ಸುಳಾದಿ ॥. ಹೀಗೆ ಉಭಯ ವಾಙ್ಮಯ ಪ್ರವಾಹಗಳು ಶ್ರೀಹರಿಯಪಾದಮಹಿಮಾಜಲಧಿಯನ್ನು ಸೇರುತ್ತವೆ.

ಈ ರೀತಿಯಾಗಿ ಉಭಯಸಾಹಿತ್ಯಗಳನ್ನು ಅಧ್ಯಯನ ಮಾಡಿದ ದಾಸರು ಇವುಗಳ ಸ್ವಾರಸ್ಯವನ್ನು ಒಂದಕ್ಕೊಂದು ಹೊಂದಾಣಿಕೆಯಾಗುವ ರೀತಿಯಿಂದ

ಓದುಗರಿಗೆ ಮನವರಿಕೆ ಮಾಡಿದ್ದಾರೆ. ದಾಸಸಾಹಿತ್ಯಕ್ಕೂ ಸಹ ಶಾಸ್ತ್ರಾರ್ಥಗಳನ್ನೊಳಗೊಂಡ ತತ್ವಚಿಂತನೆಯೇ ಪ್ರಧಾನ ವಿಷಯ ಎಂಬುದು ದ್ಯೋತಕವಾಗುತ್ತದೆ. ಸಂಗೀತ ಸಾಹಿತ್ಯ ಮಾಧ್ಯಮಗಳು ಅವರ್ಜನೀಯ ಸನ್ನಿಧಿ. ಸಾಧನ ಭಾಗದ ಎಷ್ಟೋ ರಹಸ್ಯಗಳನ್ನು ವಿಮರ್ಶಿಸಿ ವಿಶ್ಲೇಷಿಸಿ ಅವುಗಳ ಉತ್ತಮಾಂಶಗಳನ್ನು ಒತ್ತಿ ಹೇಳಿದ್ದಾರೆ. ಒಟ್ಟು ಹೇಳಬೇಕೆಂದರೆ ದಾಸರ ಶ್ರಮ ಸಾರ್ಥಕ. ಈ ಲೇಖನ ಸ್ತುತ್ಯವ್ಯವಸಾಯ. ಇದೊಂದು ಸಾಧಕರ ಕೈಪಿಡಿ ಎಂದು ಹೇಳಬಹುದು. ಈ ಗ್ರಂಥದ ಬಗ್ಗೆ ಬರೆದ ಈ ಎರಡು ಮಾತುಗಳಿಂದ ಶ್ರೀಹರಿಯು ಪ್ರೀತನಾಗಲಿ.

*– ಪಾಂಡುರಂಗಾಚಾರ್ಯ ಎಸ್. ವಾಯಿಕರ್*

॥ಶ್ರೀಃ॥

# ಸಂಪಾದಕರ ಮನವಿ

*ಪ್ರಾಚೀನಾಚೀರ್ಣಪುಣ್ಯೋಚ್ಚಯ ಚತುರತರಾ ಚಾರತಶ್ಚಾರುಚಿತ್ತಾನ್*
*ಅತ್ಯುಚ್ಚಾಂ ರೋಚಯಂತೀಂ ಶೃತಿ ಚಿತ ವಚನಾಂ ಶ್ರಾವಕಾಂಶ್ಚೋದ್ಯಚುಂಚೂನ್।*
*ವ್ಯಾಖ್ಯಾಮುತ್ಖಾತ ದುಃಖಾಂ ಚಿರಮುಚಿತ ಮಹಾಚಾರ್ಯ ಚಿಂತಾರತಾಂಸ್ತೇ*
*ಚಿತ್ರಾಂ ಸಚ್ಛಾಸ್ತ್ರ ಕರ್ತಶ್ಚರಣ ಪರಿಚರಾನ್ ಛ್ರಾವಯಾಸ್ಮಾಂಶ್ಚ ಕಿಂಚಿತ್॥*

ಭಗವಾನ್ ವೇದವ್ಯಾಸ ರೂಪಿ ನಿರ್ದೋಷ ಜ್ಞಾನಾನಂದಾತ್ಮಕ ಪರಮಾತ್ಮನು ಸಜ್ಜನರಿಗೆ ಸಮೀಚೀನ ಜ್ಞಾನವನ್ನು ಬೋಧಿಸುವ ಭಾರತಾದಿ ಗ್ರಂಥಗಳನ್ನು ರಚಿಸಿ ಬ್ರಹ್ಮ ರುದ್ರಾದಿಗಳಿಗೆ ಉಪದೇಶ ಮಾಡಿದ ಮಹಾಚಾರ್ಯರಾದರೆ. ಶ್ರೀಮದಾನಂದತೀರ್ಥ ಭಗವದ್ಪಾದರು ಶ್ರೀ ವೇದವ್ಯಾಸರ ಸಾಕ್ಷಾತ್ ಶಿಷ್ಯರಾಗಿ ಸಜ್ಜನರ ಉದ್ಧಾರಕ್ಕಾಗಿ ಸತ್ಸಿದ್ಧಾಂತ ರೂಪವಾದ ಸರ್ವಮೂಲಗ್ರಂಥಗಳನ್ನು ರಚಿಸಿ ರುದ್ರಾದಿಗಳಿಗೆ ಗುರುಗಳಾಗಿ ಜ್ಞಾನೋಪದೇಶ ಮಾಡಿದ್ದರಿಂದ ಮಹಾಚಾರ್ಯರೆನಿಸಿ ಕೊಂಡಿದ್ದಾರೆ. ಪ್ರಾಚೀನರು ಮಾಡಿದ ಪುಣ್ಯ ಕಾರ್ಯಗಳ ಪ್ರಭಾವದಿಂದ ಕಿಂಚಿತ್ ಯೋಗ್ಯತಾನುಗುಣವಾಗಿ ಸದಾಚಾರವನ್ನಿಟ್ಟು ಕೊಂಡು ಸಚ್ಛಾಸ್ತ್ರ ಶ್ರವಣ ಮಾಡುವ, ಪರಮಾತ್ಮನ ನಾಮಸ್ಮರಣೆ ಮಾಡುವ ಭಾಗ್ಯವು ಕೆಲವರಲ್ಲಿ ಅನುಗ್ರಹವಾಗಿ ವ್ಯಕ್ತವಾಗುತ್ತದೆ.

ಪ್ರಸಕ್ತದಲ್ಲಿ ಈ ಭಾರತ ದೇಶಕ್ಕೆ ಸ್ವಾತಂತ್ರ್ಯ ಬರುವುದಕ್ಕೂ ಮುಂಚೆ, ಹಿಂದಿನ ಮೈಸೂರು ರಾಜ ಮಹಾರಾಜರ ಸರಕಾರದಲ್ಲಿ ಉನ್ನತ ಹುದ್ದೆಯಲ್ಲಿದ್ದೂ ಸತ್ಸಂಪ್ರದಾಯಸ್ಥರಾಗಿದ್ದವರು ನಮ್ಮ ಮಾತಾಮಹರಾದ ಶ್ರೀಯುತ ಜಿ.ಕೆ. ಮಾಧವರಾಯರು. ಅನೇಕ ಗ್ರಂಥಗಳನ್ನು ಸಂಗ್ರಹ ಮಾಡಿ ಗುರು ಮುಖೇನ ಅಧ್ಯಯನ ಮಾಡುವವರಾಗಿದ್ದರು. ಬೆಂಗಳೂರಿನ

ಶ್ರೀ ಮದುತ್ತರಾದಿ ಮಠದ ಕಟ್ಟಡ ಸಮಿತಿ ಸದಸ್ಯರಾಗಿ ನಿಷ್ಠಾವಂತ ಕಾರ್ಯಕರ್ತರಾಗಿ ಶ್ರೀ ಶ್ರೀ ಸತ್ಯಪ್ರಮೋದ ತೀರ್ಥ ಶ್ರೀಪಾದಂಗಳವರ ಅನುಗ್ರಹಕ್ಕೆ ಪಾತ್ರರಾಗಿದ್ದವರು. ಕಾರಣ ಮಠದ ಆವರಣದಲ್ಲೇ ಒಂದು ಮನೆಯನ್ನು ವಾಸಿಸಲು ಕೊಟ್ಟಿದ್ದರು. ಈ ಮನೆಯಲ್ಲಿಯೇ ತಮ್ಮ ಎಂಬತ್ತೈದನೇ ಇಳಿ ವಯಸ್ಸಿನಲ್ಲಿ ಅಂದರೆ, ೧೯೬೪ ರಲ್ಲಿ  ಪರತತ್ತ್ವ ವರ್ಣನೆ – ಮುಕ್ತಿಮಾಣಿಕ್ಯಮಾಲಾ  ಎಂಬ ಗ್ರಂಥವನ್ನು ಸ್ವಹಸ್ತದಿಂದ ನಕಲು ಮಾಡಿ ಬರೆದು ಇಟ್ಟುಕೊಂಡಿದ್ದರು. ಇವರು ಮೂಲ ಗ್ರಂಥವನ್ನು ತಾತ್ಕಾಲಿಕವಾಗಿ ಯಾರಿಂದ ಎರವಲು ತೆಗೆದುಕೊಂಡಿದ್ದರು ಎನ್ನುವುದಕ್ಕೆ ದಾಖಲೆಗಳು ಇಲ್ಲ. ಐದು ಜನ ಮಕ್ಕಳು, ಮೂವತ್ತು ಮೊಮ್ಮಕ್ಕಳು ಹಲವಾರು ಮರಿಮಕ್ಕಳನ್ನು ಕಂಡು ಶತಾಯುಷಿಗಳಾಗಿ ೧೯೭೭ರಲ್ಲಿ ವೈಕುಂಠ ವಾಸಿಗಳಾದರು. ಈಗ ೨೦೦೬ರಲ್ಲಿ ಅವರ ಮಕ್ಕಳ ಪೈಕಿ ಉಳಿದಿದ್ದ ಒಬ್ಬರೇ ಆದ ನಮ್ಮ ಮಾತೃಶ್ರೀಯವರು ಕೂಡ ಶತಾಯುಷಿಗಳಾಗಿ ಮರಣ ಶಯ್ಯೆಯಲ್ಲಿದ್ದಾಗ ಆ ಹಸ್ತ ಲಿಖಿತ ಗ್ರಂಥವು ನನ್ನ ದೃಷ್ಟಿಗೆ ಪ್ರಥಮಬಾರಿಗೆ ಗೋಚರವಾಯಿತು. ನಮ್ಮ ತಾಯಿಯವರು ಸುಮಾರು ಸಲ ಈ ಕೃತಿಯನ್ನು ಅವಲೋಕನ ಮಾಡಿದ್ದಾರೆ. ಅವರು ಮರಣೋನ್ಮುಖರಾಗಿದ್ದಾಗ ಬಹಳಷ್ಟು ಬಂಧು ಮಿತ್ರರುಗಳು ಬಂದು ನೋಡುವವರ ಜೊತೆಯಲ್ಲಿ ಕೇವಲ ಆಧ್ಯಾತ್ಮಿಕ ವಿಷಯುಗಳನ್ನು ಅಚಿಂತಿತವಾಗಿ ನಿರೂಪಣೆ ಮಾಡಿ ಅವರುಗಳನ್ನು ಅಚ್ಚರಿಗೊಳಿಸಿದವರಾಗಿದ್ದರು. ನಮ್ಮ ಅಗ್ರಜರಂತೂ (ಸೀ.ಕೆ. ವಿಜಯ) ಮದರಾಸಿನಲ್ಲಿ ವಾಸವಾಗಿದ್ದ ಸಮಯದಲ್ಲಿ ಶ್ರೀ ಸುಬ್ಬಣ್ಣಾಚಾರ್ಯರು (ನಿವೃತ್ತ ಪೋಸ್ಟ್ ಮಾಷ್ಟ್ರು) ಮತ್ತು ಚಿಕ್ಕೇರೂರು ಗೋವಿಂದಾಚಾರ್ಯರ ಅಳಿಯಂದಿರಾದ ಶ್ರೀ ಶ್ರೀನಿವಾಸಾಚಾರ್ಯರಲ್ಲಿ ಸತ್ತತ್ತ್ವರತ್ನಮಾಲಾ, ವಿಷ್ಣು ರಹಸ್ಯ, ಗೀತಾಭಾಷ್ಯ ಹರಿಕಥಾಮೃತ ಸಾರ ಇತ್ಯಾದಿ ಗ್ರಂಥಗಳನ್ನು ಅಧ್ಯಯನ ಮಾಡಿದನಂತರ ಪರತತ್ತ್ವ ವರ್ಣನ ಎಂಬ ಗ್ರಂಥವನ್ನು ಅವಲೋಕನ ಮಾಡಿ ಅದರ ಸ್ವಾರಸ್ಯವನ್ನು ಅನುಭವಿಸಿದ್ದಾರೆ. ಆತಂಕದ ಸಮಯಗಳಲ್ಲಿ ಕಿಂಚಿತ್ಕಾಲದಲ್ಲಿ ಆ ಗ್ರಂಥದಲ್ಲಿನ ವಿಷಯಗಳಮೇಲೆ ಕಣ್ಣು ಹಾಯಿಸಿದಾಗ ಅದರಲ್ಲಿರುವ ಮೂಲ ಗ್ರಂಥಗಳಲ್ಲಿಬರುವ ಅಪೂರ್ವವಾದ ತತ್ತ್ವಗಳನ್ನು ಸ್ವಾರಸ್ಯವಾಗಿ ನಿರೂಪಿಸಿರುವುದು ಕಂಡುಬಂದಿತು. ನಿಜವಾಗಿಯು ತಕ್ಷಣ ಬಂದಿದ್ದು ಮೇಲಿನ ಶ್ರೀಹರಿವಾಯುಸ್ತುತಿಯ ಸ್ಮರಣೆ. ನಮ್ಮ ಮಾತಾಮಹರಿಂದ ಒಂದಲ್ಲಾ

ಒಂದುರೀತಿಯಿಂದ ಉಪಕಾರಪಡೆಯುದೇ ಇರುವ ಮಕ್ಕಳಾಗಲೀ ಮೊಮ್ಮಕ್ಕಳಾಗಲೀ ಯಾರೂ ಇಲ್ಲ. ಆದರಲ್ಲೂ ಮುಖ್ಯವಾಗಿ ಗಾಯತ್ರೀ ಉಪದೇಶ, ಲೌಕಿಕ ವಿದ್ಯಾಭಾಸಕ್ಕೆ, ಹೊಟ್ಟೆಗೆ ಮತ್ತು ಬಟ್ಟೆಗೆ ಕೊಟ್ಟು, ಉಪಕಾರ ಮಾಡಿದವರನ್ನು ಎಷ್ಟು ಸಾರಿ ಸ್ಮರಿಸಿದರೂ ಸಾಲದು. ಮಾತಾಮಹರ ಮರಣ ಶೈಯ್ಯೆಯಲ್ಲಿ ಕಿಂಚಿತ್ ಸುಶ್ರೂಷೆಮಾಡಿದ ನನ್ನ ವಿಶೇಷ ಭಾಗ್ಯ. ಈ ಕೃತಿಯನ್ನು, ದೊಡ್ಡ ಸಂಪತ್ತೆಂದು ಭಾವಿಸಿ, ಸಂರಕ್ಷಿಸಿ ಇಂದಿನವರು ಮತ್ತು ಮುಂದಿನವರು ಆದರಲ್ಲೂ ದಾಸಸಾಹಿತ್ಯದಲ್ಲಿ ಮಗ್ನರಾಗಿರುವವರಲ್ಲಿ ಹಂಚಿಕೊಳ್ಳೋಣ ಎಂಬ ಬುದ್ಧಿ ಉಂಟಾಯಿತು.

ಈ ಗ್ರಂಥದಲ್ಲಿನ ಪ್ರಮೇಯಗಳ ಪಟ್ಟಿಯಲ್ಲಿ ಸಂಸಾರ ನಿವೃತ್ತಿ ಉಪಾಯ ತಿಳಿಯೋಣ, ಮೋಕ್ಷಾಧಿಕಾರಿಯು ತಿಳಿಯತಕ್ಕ ಜ್ಞಾನ, ಉಪಾಸನಾ ಪ್ರಕರಣ ಇವೆಲ್ಲವನ್ನು ನೋಡಿದರೆ ಜಿಜ್ಞಾಸುಗಳು ಗುರುಮುಖೇನ ಶಾಸ್ತ್ರ ಅಧ್ಯಯನ ಮಾಡಿ "*ಪರೋಕ್ಷ ಜ್ಞಾನರೂಪಾತ್ತು ಸದಾ ಧ್ಯಾನಾತ್ರ್ರಸನ್ನಧೀಃ। ಅಪಸಾರ್ಯ ನಿರೋಧಂ ತಂ ಸ್ವಾತ್ಮಾನಂ ದರ್ಶಯೇತ್ಪ್ರಭುಃ॥*" ಎಂದು ಯುಕ್ತಿಮಲ್ಲಿಕಾ ಕಾರರ ಉಕ್ತಿಯಂತೆ ಈ ಗ್ರಂಥವನ್ನೂ ಗುರುಮುಖೇನ ಅಧ್ಯಯನ ಮಾಡಿ ತತ್ತ್ವಜ್ಞಾನ ಸಂಪಾದಿಸಲು ಉಪಯುಕ್ತವಾಗಲಿ ಎಂಬ ಉದ್ದೇಶದಿಂದ ಈ ಗ್ರಂಥವನ್ನು ಬೆಳಕಿಗೆ ತರುವ ಹಂಬಲವನ್ನು ನಮ್ಮ ಅಗ್ರಜರಲ್ಲಿ ಮುಂದಿಟ್ಟಾಗ ಅವರು ಸಮ್ಮತಿಸಿದರು. ಈ ಕೃತಿಯು ವ್ಯಾಸ ದಾಸ ಸಾಹಿತ್ಯಗಳ ಸಂಗಮ ರೂಪವಾಗಿರುವಂತಹದು. ಮೂಲಗ್ರಂಥವು ಹಳೆಯ ಜನಪದ ಭಾಷೆಯಿಂದ ಕೂಡಿರುವಂತಹದು. ಮೂಲದಲ್ಲಿ ಪ್ಯಾರ, ಅರ್ಧವಿರಾಮ, ಪೂರ್ಣ ವಿರಾಮ ಇತ್ಯಾದಿ ಚಿಹ್ನೆಗಳ ಬಳಕೆ ಅತಿ ವಿರಳ. ನಮ್ಮ ಮಾತಾಮಹರೂ ಕೂಡಾ ಹಾಗೆಯೇ ನಕಲು ಮಾಡಿರುವಂತೆ ಕಂಡುಬರುತ್ತದೆ. ಅವರ ಕನ್ನಡ ಹಸ್ತ ಲಿಪಿಯು ಹಳೇಯ ಕಾಲದ್ದಾಗಿದ್ದರು, ನಮಗಾದರೋ ರೂಢಿಯಾಗಿರುವಂತಹದು. ಆದ್ದರಿಂದ ಕಂಪ್ಯೂಟರನ್ನು ಬಳಸಿ, ಈಗಿನವರು ಸುಲಭವಾಗಿ ಓದುವುದಕ್ಕೆ ಅನುಕೂಲವಾಗಲೆಂಬ ಉದ್ದೇಶದಿಂದ, ಪ್ರತಿಗಳನ್ನು ಸಿದ್ಧಪಡಿಸಿ ಪ್ರಕಟಣೆ ಮಾಡುವ ಪ್ರಯತ್ನ ಮಾಡಿದ್ದೇವೆ.

ಶ್ರೀ ವೇದವ್ಯಾಸರು ರಚಿಸಿದ ಪುರಾಣ ಇತಿಹಾಸಾದಿಗಳಲ್ಲದೆ ಉಪಪುರಾಣಗಳ ಮಧ್ಯೆ ಶ್ರೀ ವಿಷ್ಣುರಹಸ್ಯ ಎನ್ನುವುದನ್ನು ಹಯಗ್ರೀವರೂಪನಾಗಿ ರಚಿಸಿರುತ್ತಾನೆ. ಇದು ಸೂತ ಶೌನಕಾದಿಗಳ ಸಂವಾದರೂಪವಾಗಿ ಬ್ರಹ್ಮದೇವರಿಗೆ ಉಪದೇಶಿಸಿದ್ದು. ಅದರಂತೆ ದ್ವೈತವೇದಾಂತ ತತ್ವಗಳನ್ನು ಪ್ರತಿಪಾದಿಸುವ 'ಸತ್ತತ್ವರತ್ನಮಾಲಾ' ಎನ್ನುವ ಸುಂದರವಾದ ಗ್ರಂಥವನ್ನು ಪ್ರಸಿದ್ಧ ತಾಮ್ರಪರ್ಣೀ ವಂಶಸ್ಥರಾದ ಶ್ರೀ ಆನಂದತೀರ್ಥಾಚಾರ್ಯರೆಂಬುವರು ರಚಿಸಿದ್ದಾರೆ. ಇದರಲ್ಲಿ ಅಚೇತನ ಪ್ರಕರಣ, ತಮೋಯೋಗ್ಯ ಪ್ರಕರಣ, ನಿತ್ಯ ಸಂಸಾರಿ ಪ್ರಕರಣ, ಮಧ್ಯಮಾಧಮ ಮುಕ್ತಿಯೋಗ್ಯ ಪ್ರಕರಣ ಇತ್ಯಾದಿಯಾಗಿ ೧೬ ಪ್ರಕರಣಗಳಿವೆ. ಸರ್ವ ಮಾಧ್ವರೂ ಅವಶ್ಯ ಗುರು ಮುಖೇನ ಅಧ್ಯಯನ ಮಾಡಲೇಬೇಕಾದ ಕೃತಿಗಳು.

ಈಗ್ಗೆ ಶತಮಾನಗಳ ಹಿಂದೆಯೇ ಶ್ರೀ ನರಸಿಂಹ ನಾಮಕ ಜ್ಞಾನಿಗಳೊಬ್ಬರು ಮೇಲೆ ತಿಳಿಸಿದಂಥ ಎರಡು ಮೂಲ ಕೃತಿಗಳನ್ನು, ವೇದವ್ಯಾಸರ ಶ್ರೀಮದಾನಂದತೀರ್ಥ ಭಗವದ್ಪಾದರ ಗ್ರಂಥಗಳನ್ನು ಮತ್ತು ಪುರಂದರಾದಿ ದಾಸ ವರೇಣ್ಯರುಗಳು ರಚಿಸಿದ ಕೀರ್ತನೆ ಹಾಗೂ ಸುಳಾದಿಗಳನ್ನು ವಿಪುಲವಾಗಿ ಉಲ್ಲೇಖಿಸಿ, ಏಕತ್ರ ಸಂಗ್ರಹ ಮಾಡಿ ಮೇಲೆ ತಿಳಿಸಿದಂತಹ ಪರತತ್ತ್ವ ವರ್ಣನೆ – ಮುಕ್ತಿ ಮಾಣಿಕ್ಯಮಾಲಾ ಎಂಬ ಅಮೂಲ್ಯ ಗ್ರಂಥವನ್ನು ಕನ್ನಡದಲ್ಲಿ ರಚಿಸಿಕೊಟ್ಟಿದ್ದಾರೆ. ಈ ಗ್ರಂಥಕರ್ತರ ದೇಶ ಕಾಲಗಳ ವಿವರಣೆಯು ಇದುವರೆಗೂ ಸಿಕ್ಕಿಲ್ಲ. ಕೃತಿಕಾರರು ಬಿಳಿಗಿರಿರಂಗನಬೆಟ್ಟದಲ್ಲಿ (ಯೆಳಂದೂರು – ಚಾಮರಾಜನಗರದ ಹತ್ತಿರ) ವಾಸವಾಗಿದ್ದ ತಮ್ಮ ಗುರುಗಳಾದ ದಾಸಶ್ರೇಷ್ಠರಿಗೆ ಹಾಗೂ ಶ್ರೀ ವಿಧ್ಯಾಧೀಶ ಗುರುಗಳಿಗೂ ಪ್ರಣಾಮಗಳನ್ನು ಅರ್ಪಿಸಿ ಗ್ರಂಥ ಸಮಾಪ್ತಿ ಮಾಡಿದ್ದಾರೆ. ಇದು ಪ್ರಕಟವಾಗಿರುವ ದಾಖಲೆಯೂ ಕಾಣುತ್ತಿಲ್ಲ. ಈ ಕೃತಿಯ ಶೈಲಿಯನ್ನು ಆಗಿನ ಜನಪದ ಭಾಷೆಯನ್ನು ಗಮನಿಸಿ ಕೂಲಂಕಷವಾಗಿ ಅವಲೋಕಿಸಿ ಸುಮಾರು ನೂರೈವತ್ತು ವರ್ಷದ ಹಿಂದಿನ ಕಾಲದಲ್ಲಿ ರಚಿಸಲ್ಪಟ್ಟ ಕೃತಿಯಿರಬಹುದೆಂದು ಪ್ರಾಜ್ಞರು ಅಭಿಪ್ರಾಯಪಟ್ಟಿದ್ದಾರೆ.

ಈ ಕಾಲವನ್ನು ಸಮರ್ಥಿಸುವುದಕ್ಕೆ ಒಂದು ಸಾಧಕ ದಾಖಲೆ ಈ ರೀತಿ ಇದೆ. ೧೮೮೩ ರಲ್ಲಿ ಜನಿಸಿದ ಆಂದ್ರ ಪ್ರದೇಶದಲ್ಲಿ ನೆಲಸಿದ ಗುಂಡುಗೂರ್ತಿ

ಶೇಷಮ್ಮ ಎನ್ನುವವರು ಮೈಸೂರು ಕಟ್ಟೆಮನೆ ಪ್ರಸಿದ್ಧರಾದ ಶ್ರೀ ಜಯೇಶ ವಿಠಲರ (ಅಟ್ಯಾಚಿ ವೆಂಕಟರಾಯರ, ೧೮೫೦-೧೯೩೨) ಶಿಷ್ಯರಾದ ಶ್ರೀ ಶಿರುಹುರಿ ಲಕ್ಷ್ಮೀನಾರಾಯಣ ರಾಯರ ಮಗಳು. ಚಿಕ್ಕವಯಸ್ಸಿನಲ್ಲಿಯೇ ಪತಿಯಾಗಿದ್ದ ಗುಂಡುಗೂರ್ತಿ ಆನಂದರಾಯರು, ಅಡ್ವೋಕೇಟ್ ಅವರನ್ನು ಕಳೆದುಕೊಂಡು ತಂದೆ ತಾಯಿಗಳ ಜೊತೆ ವಾಸಿಸುತ್ತಿದ್ದರು. ಬಹು ಭಾಷಾಪ್ರವೀಣರಾಗಿದ್ದ ಮಾವನವರು ಪಂ. ಗುಂಡುಗೂರ್ತಿ ಲಕ್ಷ್ಮೀನರಸಿಂಹಾಚಾರ್ಯರು. ನಿತ್ಯದಲ್ಲಿಯೂ ಸಾಯಂಕಾಲ ಸಮಯದಲ್ಲಿ ತಂದೆಯವರು ಶ್ರೀಮದ್ರಾಮಾಯಣ, ಮಹಾಭಾ ರತ, ಭಗವದ್ಗೀತಾ ಇವೇ ಮೊದಲಾದ ಗ್ರಂಥಗಳ ಪ್ರವಚನ ಮಾಡುತ್ತಿದ್ದರು. ಈ ಪ್ರವಚನಗಳ ಪ್ರಭಾವ ಮಗಳು ಶೇಷಮ್ಮನವರ ಮೇಲೆ ಭಾರಿ ಸ್ಫೂರ್ತಿದಾಯಕವಾಗಿತ್ತು. ಪ್ರವಚನ ಕೇಳಿದನಂತರ ಟಿಪ್ಪಣಿಗಳನ್ನು ಬರೆದುಕೊಳ್ಳುವ, ಕೃತಿಗಳನ್ನು ರಚಿಸುವ ಹವ್ಯಾಸವನ್ನು ಇಟ್ಟುಕೊಂಡಿದ್ದರು. ತಂದೆಯವರಿಂದ ಅದರಲ್ಲಿನ ತಪ್ಪುಗಳನ್ನು ತಿದ್ದಿಸಿಕೊಳುತ್ತಿದ್ದರು. ಪ್ರಸಕ್ತ ಗ್ರಂಥವಾದ, ಕನ್ನಡದಲ್ಲಿ ಹಸ್ತಲಿಖಿತವಾದ ೨೫೦ ಪುಟಗಳುಳ್ಳ ಪರತತ್ತ್ವ ವರ್ಣನೆಯನ್ನು ೧೯೧೯ರಲ್ಲಿ, ಮಚಲಿಪಟ್ಟಣದಲ್ಲಿ ಅದೇ ಶೇಷಮ್ಮನವರು ನಕಲು ಮಾಡಿಕೊಂಡಿದ್ದಾರೆ ಎಂದು ತಿಳಿಸುವ ಪತ್ರವೊಂದು ನಮಗೆ ಲಭ್ಯವಾಗಿದೆ. ಆದರೆ ಅವರ ವಂಶಸ್ಥರು ಮೂಲಗ್ರಂಥದ ನಕಲು ಪ್ರತಿಯನ್ನು ಸಂರಕ್ಷಿಸಿಲ್ಲವೆನ್ನುವುದು ದುರ್ದೈವ.

ಈ ಗ್ರಂಥದಲ್ಲಿ ಜೀವರ ಸ್ವರೂಪ, ಪರಿಮಾಣ, ಸಂಸಾರ ಧರ್ಮ, ಕರ್ತೃತ್ವ, ಜೀವರ ಸ್ವರೂಪ ಲಿಂಗ, ಅವ್ಯಕ್ತ ಅನಿರುದ್ಧ ಪ್ರಾಕೃತ ದೇಹಗಳಿಂದ ಬಂಧ, ಸತ್ಸಂಗದಿಂದ ಬಂಧ ನಿವೃತ್ತಿ ಉಪಾಯಗಳನ್ನು ಮೊದಲನೇ ಭಾಗದಲ್ಲಿ ನಿರೂಪಿಸಿದ್ದಾರೆ. ಎರಡನೇ ಭಾಗದಲ್ಲಿ ಮೋಕ್ಷಕ್ಕೆ ಸಾಧನೀಭೂತವಾದ ವಿಷಯಗಳಾದ ಜೀವಾಕಾರ ಪ್ರದ್ಯುಮ್ನ ಅನಿರುದ್ಧಾದಿ ಭಗವದ್ರೂಪ ಚಿಂತನೆ, ನಾಡೀ ಪ್ರಕರಣ, ನಾಭಿ ಚಕ್ರ, ಹೃದಯ ಕಮಲ ವರ್ಣನೆ, ಭಗವದ್ಪ್ರಸಾದ ಇವೇ ಮೊದಲಾದ ಅಪೂರ್ವವಾದ ವಿಷಯಗಳನ್ನು, ಜಿಜ್ಞಾಸುಗಳು ಗುರು ಮುಖೇನ ಅಧ್ಯಯನ ಮಾಡಿದ್ದನ್ನು, ಮನನ ಮಾಡಲು ಉಪಯುಕ್ತವಾಗುತ್ತದೆ ಎಂದು ಪಾಮರರುಗಳಾದ ನಮ್ಮ ಅಲ್ಪ ಪ್ರಯತ್ನವನ್ನು ಓದುಗರ ಮುಂದೆ ಇಡುತ್ತಿದ್ದೇವೆ. ಈ ಅಲ್ಪ ಸೇವಯು ಶ್ರೀ ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರ

ಮಹದನುಗ್ರಹದಿಂದ ಆಗಿದ್ದು. ನಮ್ಮ ಮಾತಾಮಹರುಗಳ ಹಾಗೂ ಮಾತಾ ಪಿತೃಗಳ ಅಂತರ್ಯಾಮಿ ಸೀತಾಪತಿ ಶ್ರೀ ರಾಮಚಂದ್ರದೇವರ ಪಾದಕಮಲಗಳಲ್ಲಿ ಅರ್ಪಿಸಿದ ಈ ಕೃತಿಯನ್ನು ಜಿಜ್ಞಾಸುಗಳು ಆದರದಿಂದ ಸ್ವೀಕರಿಸಬೇಕೆಂದು ಶ್ರೀಹರಿಯಲ್ಲಿ ಪ್ರಾರ್ಥಿಸುತ್ತೇನೆ.

ಸಂಪಾದಕರು

**ಸೀ. ಕೆ. ನಾರಾಯಣ ರಾವ್**

# ೪೯, 'ಶ್ರೀವಾಮನ, ಎನ್.ಎ.ಎಲ್. ಲೇಔಟ್,
ಈಸ್ಟ್ ಎಂಡ್ ಮೈನ್ ರಸ್ತೆ, ಜಯನಗರ ೪ನೇ ಟಿ ಬ್ಲಾಕ್,
ಬೆಂಗಳೂರು-೫೬೦ ೦೪೧

## ಕೃತಜ್ಞತೆಗಳು

ಶ್ರೀಮದ್ ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲ ಮಹಾಸಂಸ್ಥಾನ ಶ್ರೀ ಉತ್ತರಾದಿ ಮಠಾಧೀಶರಾದ ಪರಮ ಪೂಜ್ಯ ಶ್ರೀ ಶ್ರೀ ೧೦೦೮ ಶ್ರೀ ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರ ಅಂತರ್ಯಾಮಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀ ಸೀತಾಪತಿ ಶ್ರೀಮೂಲರಾಮಚಂದ್ರನ ಪಾದಯುಗ್ಮಗಳಲ್ಲಿ ಪರತತ್ತ್ವವರ್ಣನೆ ಎಂಬ ಗ್ರಂಥ ಕುಸುಮವನ್ನು ಭಕ್ತಿಪೂರ್ವಕ ಸಮರ್ಪಿಸುತಿದ್ದೇವೆ. ಮಹಾಸ್ವಾಮಿಗಳವರ ಫಲ ಮಂತ್ರಾಕ್ಷತೆ ಹಾಗೂ ಅವರ ಕೃಪಾಶೀರ್ವಾದ ಬಲದಿಂದ ಈ ಕುಸುಮವನ್ನು ಬಿಡಿಸಿದ್ದೇವೆ. ಶ್ರೀಗಳವರ ಅನುಗ್ರಹ ನಮ್ಮ ಮೇಲೆ ಸದಾ ಇರಲಿ ಎಂದು ಕೃತಜ್ಞತಾಪೂರ್ವಕ ನಮನಗಳನ್ನು ಸಲ್ಲಿಸುತ್ತೇವೆ.

ಶ್ರೀ ಪಾಂಡುರಂಗಾಚಾರ್ಯ ಶ್ರೀನಿವಾಸಾಚಾರ್ಯ ವಾಯಿಕರ್ ಅವರುಗಳು ವಿಜ್ಞಾನ ಮತ್ತು ಯಾಂತ್ರಿಕ ವಿಜ್ಞಾನ ಪದವೀದರರು.ಇದರಿಂದಾಗಿ ಭಾರತ ಸರ್ಕಾರದ ರಕ್ಷಣಾ ಮಂತ್ರಾಲಯ ವಿಭಾಗದ ಒಂದು ಸಂಸ್ಥೆಯಲ್ಲಿ ಅತ್ಯುನ್ನತ ಹುದ್ದೆಯಲ್ಲಿದ್ದು. ಅದರ ನಿರ್ದೇಶಕರಾಗಿ ನಿವೃತ್ತಿಯಾದವರು. ಈ ರೀತಿಯಾಗಿ ಲೌಕಿಕವಾಗಿ ಪ್ರಸಿದ್ಧರಾದವರು.

ಶ್ರೀ ವಾಯಿಕರಾಚಾರ್ಯರು ಸನಾತನ ಧರ್ಮ ರಕ್ಷಿಸುವವರ ಮನೆತನದಿಂದ ಬಂದವರು. ದೇಶದ ರಕ್ಷಣೆಗೆ ಮತ್ತು ಧರ್ಮದ ರಕ್ಷಣೆಗೆ ಜೀವನವನ್ನು ಮುಡಿಪಿಟ್ಟ ಅಪೂರ್ವ ಪುರುಷರು. ಇವರು ಶ್ರೀ ಸತ್ಯಪರಾಕ್ರಮತೀರ್ಥ ಶ್ರೀಪಾದಂಗಳವರ ವಂಶಸ್ಥರು ಎಂದು ತಿಳಿಯುವುದರಿಂದ ದೇಶ ಧರ್ಮಗಳ ರಕ್ಷಣೆಗೆ ಬೇಕಾದ ಪರಾಕ್ರಮದ ಅನುಗ್ರಹವನ್ನು ಪಡೆದವರಾಗಿದ್ದರು ಎಂದು ಹೇಳೀದರೆ ಅತಿಶಯೋಕ್ತಿಯಾಗಲಾರದು.

ಲೌಕಿಕವೃತ್ತಿಯಲ್ಲಿ ಹಾಗೂ ಜೀವನದಲ್ಲಿ ಒಂದು ಸ್ಥಿತವಾದ ಘಟ್ಟಕ್ಕೆ ಬಂದನಂತರ ಇವರು ಭಕ್ತಿ ಮತ್ತು ಶ್ರದ್ಧೆಯಿಂದ ಆಚಾರ ವಿಚಾರಗಳ ಸಂಕೋಚಮಾಡದಲೆ ಗಂಭೀರವಾಗಿ ತೊಡಗಿದ್ದು ಆಧ್ಯಾತ್ಮ ವಿದ್ಯೆಕಲಿಯುವುದಕ್ಕೆ. ಅದೂ ಗುರುಕುಲ ಪದ್ಧತಿಯಲ್ಲಿ. ಶ್ರೀ ಸತ್ಯಧ್ಯಾನತೀರ್ಥ ಶ್ರೀಪಾದಂಗಳವರ ಶಿಷ್ಯಕೋಟಿಯಲ್ಲಿ ಪ್ರಸಿದ್ಧರಾದ ಶ್ರೀ ವಾಸುದೇವಾಚಾರ್ಯ ಎಲಿಮೆಲಿಯವರ ಪ್ರೀತ್ಯಾಸ್ಪದ ಶಿಷ್ಯರಾಗಿ ನ್ಯಾಯ ತರ್ಕ ವೇದಾಂತ ಶಾಸ್ತ್ರಗಳನ್ನು ಧೀರ್ಘಕಾಲ ಅಧ್ಯಯನ ಮಾಡಿದವರಾಗಿದ್ದಾರೆ.

ಶ್ರೀ ವಾಯಿಕರಾಚಾರ್ಯರು ಲೌಕಿಕ ಅಲೌಕಿಕ ಉಭಯ ವಿದ್ಯೆಗಳಲ್ಲಿ ಪರಿಣಿತರಾಗಿ ಹಲವಾರು ಗ್ರಂಥಗಳನ್ನು ಆಂಗ್ಲ ಮತ್ತು ಕನ್ನಡ ಭಾಷೆಗಳಲ್ಲಿ ರಚಿಸಿದ್ದಾರೆ. ಇದರಲ್ಲಿ ಶ್ರೀಮದಾಚಾರ್ಯರು ತಮ್ಮ ಸರ್ವಮೂಲ ಗ್ರಂಥಗಳಲ್ಲಿ ಉಲ್ಲೇಖಿಸಿರುವ ಪಂಚರಾತ್ರ ಶ್ರುತಿ ಸ್ಮೃತಿ ಪುರಾಣಗಳ ಪ್ರಮಾಣಗಳನ್ನು ಏಕತ್ರ ಸಂಗ್ರಹ ಮಾಡಿ ಸುಮಾರು ೩೫೦೦ ಪುಟಗಳಲ್ಲಿ ಎಂಟು ಸಂಪುಟಗಳಲ್ಲಿ ಹೊರತಂದಿರುವುದು ಅತಿಮಹತ್ವದ ಕಾರ್ಯ. ಇವರು ರಚಿಸಿರುವ ಗಾಯತ್ರಿ ವೈಭವ ಮತ್ತು 'The glories of Gayatri' ಎಂಬ ಎರಡು ಕೃತಿಗಳು ದೇಶ ದೇಶಾಂತರಗಳಲ್ಲಿ ಪ್ರಚಾರವಾಗಿವೆ. ಆಚಾರ್ಯರು ಶ್ರೀ ಮಧ್ವಮತ (ವ್ಯಾಸ ದಾಸ ಸಾಹಿತ್ಯ) ಪ್ರಚಾರದಲ್ಲಿ ಗಣ್ಯ ವ್ಯಕ್ತಿಗಳಾಗಿದ್ದಾರೆ.

ಇಂತಹ ಮಹಾನುಭಾವರು ಪ್ರಸಕ್ತ ಪರತತ್ತ್ವ ವರ್ಣನೆ ಗ್ರಂಥದ ಪ್ರತಿ ಅಕ್ಷರ ಪದ ವಾಕ್ಯಗಳನ್ನು ಅಂಜನ ಹಚ್ಚಿಕೊಂಡ ಚಕ್ಷುಸ್ಸುಳ್ಳವರಂತೆ ವಿಮರ್ಶೆಮಾಡಿ ಈ ಗ್ರಂಥದ ಪ್ರಕಟಣೆಗೆ ಅಮೂಲ್ಯವಾದ ಸಲಹೆಗಳನ್ನು ಕೊಟ್ಟು ವಿದ್ವತ್ಪೂರ್ಣ ಮುನ್ನುಡಿಯನ್ನು ಬರೆದು ಕರುಣಿಸಿದ್ದಾರೆ. ಇವರಿಗೆ ನಾವು ಸಾಷ್ಟಾಂಗ ನಮಸ್ಕಾರಪೂರ್ವಕವಾಗಿ ಕೃತಜ್ಞತೆಗಳನ್ನು ಅರ್ಪಿಸುತ್ತೇವೆ.

ಇದರಂತೆ ಮಹಾಸ್ವಾಮಿಗಳ ಪೂರ್ವಾಶ್ರಮದ ತಮ್ಮಂದಿರಾದ ಪಂ.ಪೂ. ಶ್ರೀ ವಿದ್ಯಾಧೀಶಾಚಾರ್ಯರು ಸ್ವಾಮಿಗಳಷ್ಟೇ ಬಿಡುವುರಹಿತರಾದವರು. ಅವರಿಗೆ ಸಾಕಷ್ಟು ಹಿಂಸೆಕೊಟ್ಟೇ ಈ ಗ್ರಂಥದ ಅವಲೋಕನ ಕಾರ್ಯವನ್ನು ಮಾಡಿಕೊಡಿಯೆಂದು ಕೇಳಿಕೊಂಡಿದ್ದೇವೆ. ಅವರಲ್ಲಿ ಕ್ಷಮೆ ಬೇಡುತ್ತೇವೆ ಅಲ್ಪರಾದ ನಮಗೆ ವಿದ್ವಾಂಸರಾದಂತ ಅವರ ಬೆಂಬಲವಿಲ್ಲದೆ ನಾವೇನೂ ಮಾಡಲು ಶಕ್ಯರಲ್ಲ. ನಮ್ಮ ಮೇಲೆ ಕರುಣೆಯಿಟ್ಟು ಗ್ರಂಥಾವಲೋಕನ ಮಾಡಿ ಅದರ ಹಿರಿಮೆಯನ್ನು ವ್ಯಕ್ತಪಡಿಸಿ ಉಚಿತ ಸಲಹೆಗಳನ್ನು ನೀಡಿ ಮಾರ್ಗದರ್ಶನ ಮಾಡಿದ್ದಾರೆ. ಆಚಾರ್ಯರಿಗೆ ನಮನಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ.

ಅಂದವಾದ ಮುಖಪುಟವನ್ನು ರಚಿಸಿಕೊಟ್ಟ ಪ್ರಸಿದ್ಧ ಕಲಾವಿದರಾದ ಶ್ರೀ ಕೇ.ಎಂ.ಶೇಷಗಿರಿಯವರಿಗೆ ಹೃತ್ಪೂರ್ವಕ, ವಂದನಾಪೂರ್ವಕ ಕೃತಜ್ಞತೆಗಳು

ಈ ಗ್ರಂಥದ ಮುದ್ರಣ ಹಾಗೂ ಪ್ರಕಾಶನ ಕಾರ್ಯದಲ್ಲಿ ಸರ್ವವಿಧದಲ್ಲೂ ಸಹಕರಿಸಿದ ಕೆಂಗೇರಿ ಉಪನಗರದ ಶ್ರೀ ರಾಘವೇಂದ್ರ ಸ್ವಾಮಿಗಳ ಮಠದ ಆಶ್ರಯದಲ್ಲಿ ಕೆಲಸಮಾಡುತ್ತಿರುವ, ಶ್ರೀ ರಾಘವೇಂದ್ರ ದರ್ಶನ ಕೇಂದ್ರದ ಎಲ್ಲ ಪದಾಧಿಕಾರಿಗಳಿಗೆ ನಮ್ಮ ಧನ್ಯವಾದಗಳು.

ಮುದ್ರಣಕಾರ್ಯವನ್ನು ಅಲ್ಪ ಕಾಲದ ಸೂಚನೆಯಲ್ಲೂ ಅಂದವಾಗಿ ಮಾಡಿಕೊಟ್ಟ 'ಪರಿಶ್ರೀ ಪ್ರಿಂಟರ್ಸ್'ನ ಶ್ರೀ ಆರ್. ಶ್ರೀನಾಥ್ ಮತ್ತು ಅವರ ಸಂಗಡಿಗರಿಗೆ ಕೃತಜ್ಞತೆಗಳು.

ಈ ಗ್ರಂಥದ ಪ್ರಕಟನೆಗೆ ಆರ್ಥಿಕ ಸಹಾಯ ಮಾಡಿದ ಮೊದಲಿಗರಲ್ಲಿ ಶ್ರೀ ಎಚ್. ಶ್ರೀನಿವಾಸ ರಾವ್, ಎ.ಆರ್. ಉದ್ಯೋಗ್ ಏಜೆಂನ್ಸೀಸ್, ಇಂಡಿಯನ್ ಆಯಿಲ್ ಡೀಲರ್ಸ್, ಹೊಸಪೇಟೆ, ಇವರು ಲೋಕೋಪಕಾರಿಗಳಾಗಿ ಹೊಸಪೇಟೆಯಲ್ಲಿ ಪ್ರಸಿದ್ಧರಾಗಿದ್ದಾರೆ. ಶ್ರೀ ಕುಪ್ಪೂ ರಾವ್ ಹೈದರಾಬಾದ್, ಶ್ರೀ ಎಚ್.ಕೆ. ರಮೇಶ್, ಕಾರ್ಪೊರೇಷನ್ ಬ್ಯಾಂಕ್, ಬೆಂಗಳೂರು, ಹಾಗೂ ಅನೇಕ ಉಪಯುಕ್ತ ಸಲಹೆಗಳನ್ನು ನೀಡಿ ಧನ ಸಹಾಯ ಮಾಡಿದ ನಮ್ಮ ಆಪ್ತ ಮಿತ್ರ ಶ್ರಿ ಆರ್. ಜಗನ್ನಾಥ ರಾವ್ ಇವರಿಗೆಲ್ಲಾ ನಮ್ಮ ಹೃತ್ಪೂರ್ವಕ ಕೃತಜ್ಞತೆಗಳು.



ದೇಶದ ಸ್ವಾತಂತ್ರಪೂರ್ವದಲ್ಲಿಯೇ ಹಳೇ ಮೈಸೂರು ದೇಶದಲ್ಲಿ
ಸಂಪ್ರದಾಯಸ್ಥರಾಗಿಯೂ ಉನ್ನತ ಹುದ್ದೆಯಲ್ಲಿದ್ದು ನಿವೃತ್ತರಾಗಿ
ತಮ್ಮ ಎಂಬತ್ತೈದನೇ ಇಳಿ ವಯಸ್ಸಿನಲ್ಲಿ **'ಪರತತ್ತ್ವ ವರ್ಣನೆ'**
ಎಂಬ ಗ್ರಂಥವನ್ನು ನಕಲು ಮಾಡಿಕೊಂಡು ಶತಾಯುಷಿಗಳಾಗಿ

**ವೈ. ವಾ. ಶ್ರೀ ಗರ್ಗೇಶ್ವರಿ ಕೃಷ್ಣಮಾಚಾರ್ ಮಾಧವ ರಾವ್**
ಹಾಗೂ ಅವರ ಧರ್ಮ ಪತ್ನಿ
**ವೈ. ವಾ.ಸೌ ಸತ್ಯಭಾಮಾ ಬಾಯಿಯವರು**

ಸಂಪಾದಕರ ಮಾತಾಮಹರು ಮತ್ತು ಮಾತಾಮಹಿಯವರು.

# ಪರತತ್ವ ವರ್ಣನಂ

## (ಮುಕ್ತಿಮಾಣಿಕ್ಯಮಾಲಾ)

# ಪರತತ್ತ್ವ ವರ್ಣನಂ

## (ಮುಕ್ತಿಮಾಣಿಕ್ಯಮಾಲಾ)

॥ ಶ್ರೀ ಗುರುಭ್ಯೋನಮಃ॥

ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ಗುರುಭ್ಯೋನಮಃ।
ಶ್ರೀ ವೇದವ್ಯಾಸಾಯನಮಃ। ಶ್ರೀ ಹಯಗ್ರೀವಾಯ ನಮಃ।
ಶ್ರೀ ಲಕ್ಷ್ಮೀ ವೆಂಕಟೇಶಾಯನಮಃ॥ ಹರಿಃ ಓಂ॥

ಕಲ್ಯಾಣಾದ್ಭುತಗಾತ್ರಾಯ ಕಾಮಿತಾರ್ಥ ಪ್ರದಾಯಿನೇ।
ಶ್ರೀಮದ್ವೇಂಕಟ ನಾಥಾಯ ಶ್ರೀನಿವಾಸಾಯ ತೇ ನಮಃ॥ ॥೧॥

ಬ್ರಹ್ಮಾಂತಾಗುರವಸ್ಸಾಕ್ಷಾದಿಷ್ಟಂ ದೈವಂ ಶ್ರಿಯಃಪತಿಃ।
ಆಚಾರ್ಯಾಃ ಶ್ರೀಮದಾಚಾರ್ಯಾಃ ಸಂತುಮೇ ಜನ್ಮಜನ್ಮನಿ॥ ॥೨॥

ಪೃಥ್ವೀ ಮಂಡಲ ಮಧ್ಯಸ್ಥಾಃ ಪೂರ್ಣಬೋಧ ಮತಾನುಗಾಃ।
ವೈಷ್ಣವಾಃ ವಿಷ್ಣುಹೃದಯಾಃ ತಾನ್ನಮಸ್ಯೇ ಗುರೂನ್ಮಮಾ॥ ॥೩॥

ವಂದೇ ಪುರಂದರಾರ್ಯಾದಿನಾಮಜ್ಞಾನಾಧಿಕಾರಿಣಾಂ।
ತಾರಕಾನ್ವಿಜಯಾರ್ಯಾಖ್ಯಾನಹಂ ಜಾತಾಪರೋಕ್ಷಿಣ॥ ॥೪॥

ಪರತತ್ತ್ವವರ್ಣನಾಖ್ಯಾಂ ಪ್ರಾಕೃತ ವಚನಂ ಮಂದ ಬೋಧಾರ್ಥಂ।
ಕುರ್ವೇ ಹರಿಗುರು ತುಷ್ಟ್ಯೈ ಕ್ಷಾಮ್ಯಂ ತಜ್ಞೈಯಮ ಇಷ್ಟದಾಃ
ಸಂತಾಃ॥ ॥೫॥

ಜೀವಗೆ ಸಂಸಾರದಿಂದ ಮೋಕ್ಷ ಆಗಬೇಕಾದರೆ ಜೀವಗೆ ಐದು ಪ್ರಕಾರ ಜ್ಞಾನ ಹುಟ್ಟಿದ ತರುವಾಯ ಉಕ್ತಪ್ರಕಾರ ನಿಷ್ಟನಾಗಬೇಕು. ಆ ಐದು ವಿಧ ಜ್ಞಾನ ಎಂಥಾದ್ದೆಂದರೆ ಅದರ ವಿವರ, ೧. ಜೀವನ ಸ್ವರೂಪ ಗುಣ ಧರ್ಮಗಳು ತಿಳಿಯತಕ್ಕದ್ದು, ೨. ಸಂಸಾರ ಧರ್ಮ ತಿಳಿಯೋಣ ೩. ಸಂಸಾರದಿಂದ ಬದ್ದನಾಗಿರೋ ಪ್ರಕಾರ ತಿಳಿಯೋಣ. ೪. ಅದರ ನಿವೃತ್ತಿಯಾಗೋ ಉಪಾಯ ತಿಳಿಯೋಣ. ೫. ಅನಂತರ ಮೋಕ್ಷಕ್ಕೆ ಜ್ಞಾನ ಹುಟ್ಟೋಣ ಮಾತ್ರವೇ ಪ್ರಯೋಜಕವಲ್ಲವಾದ್ದರಿಂದ ಅಧಿಕಾರಿ ತಿಳಿಯುತಕ್ಕ ಜ್ಞಾನ. ಆ ಉಪಾಯಾನುಕೂಲ ಭಕ್ತಿ ಪೂರ್ವಕ ಭಗವದುಪಾಸನಾ ದೀಕ್ಷನಾಗ ಬೇಕು, ೬. ಭಗವದುಪಾಸನಾ ಪ್ರಕಾರತಾ.

## ತ್ರಿವಿಧ ಜೀವರ ಸ್ವರೂಪ ಲಕ್ಷಣ

ಪ್ರಥಮತಃ ಜೀವನ ಸ್ವರೂಪಗುಣ ಧರ್ಮಗಳು ಯಂಥಾದ್ದೆಂದರೆ– ಜೀವಗಣಗಳು ಮೂರು ಪ್ರಕಾರ. ತಮೋ ಯೋಗ್ಯ ಜೀವಗಣ(೧) ನಿತ್ಯಸಂಸಾರಿ ಜೀವಗಣ(೨) ಮುಕ್ತಿಯೋಗ್ಯ ಜೀವಗಣ(೩). ತಮೋಯೋಗ್ಯ ಜೀವ ಲಕ್ಷಣ ಅಜ್ಞಾನ ವಿಪರೀತ ಜ್ಞಾನ ಹರಿ ಗುರು ದ್ವೇಷ ದುಃಖ ಮೊದಲಾದದ್ದು ತಮೋಯೊಗ್ಯ ಜೀವ ಸ್ವರೂಪ. ವಿಕಾರಾವಯವ ದುರ್ಲಕ್ಷಣ ಕರೀ ವರ್ಣ ಕಲಿ ಮೊದಲು ತೃಣ ಪರ್ಯಂತ ತಾರತಮ್ಯವುಂಟು. ಅವರಿಗೆ ಸಂಪೂರ್ಣ ಹರಿ ಗುರು ದ್ವೇಷವು ಬ್ರಹ್ಮ ಕಲ್ಪಾಂತಕ್ಕೆ ಪೂರ್ಣಾಭಿವೃದ್ಧಿಯಾಗಿ ಸಂಸಾರದಿಂದ ಮುಕ್ತರಾಗಿ ಅಂಧಃ ತಮಸ್ಸಿಗೆ ಬೀಳುತ್ತಾರೆ (೧).

## ನಿತ್ಯಸಂಸಾರಿ ಜೀವರ ಸ್ವರೂಪ ಲಕ್ಷಣ

ಹರಿ ಗುರುಗಳಲ್ಲಿ ಉದಾಸೀನ ಹರಿಗುರು ದ್ವೇಷಿಗಳಲ್ಲಿಯೂ ಉದಾಸೀನ ಹರಿ ಸರ್ವೋತ್ತಮ ಎಂಬುವುದರಲ್ಲಿ ಸಂಶಯ ಜ್ಞಾನ. ಸಲಕ್ಷಣ ದುರ್ಲಕ್ಷಣ ಶರೀರವು ಕೆಂಪು ಬಣ್ಣ ಅವರಲ್ಲಿಯೂ ಪುರಂಜನ ಜೀವ ಮೊದಲಾಗಿ ತೃಣಜೀವ ಪರ್ಯಂತ ತಾರತಮ್ಯ ಉಂಟು. ಅವರಿಗೆ ಮೋಕ್ಷ ಇಲ್ಲ ಯಂತ ಪ್ರಾಯಃ ಬಹು ಜ್ಞಾನಿಗಳಿಗೆ ಸಿದ್ಧ. ರಾಜಸ ಸಿದ್ಧಾಂತದಲ್ಲಿ ಅವರಿಗೂ ಬ್ರಹ್ಮಕಲ್ಪಾಂತದಲ್ಲಿ ವಾಯುದೇವರ ಹೂಂ'ಕಾರದಿಂದ ಸಂಸಾರ ನಿವೃತ್ತಿ ಆಗಿ ನರಕಕ್ಕೆ ಉಪರಿ ರಜೋಭಾಗ ಪುರಂಜನ ಲೋಕವನ್ನು ಸೇರಿ ಜೀವ ಸ್ವರೂಪ ಧರ್ಮಗಳನ್ನು

ಸಂಸಾರಧರ್ಮಕ್ಕೆ ಸಮವನ್ನಾಗಿ ಮುಕ್ತಿ ಸುಖ ಮುಕ್ತಿ ದುಃಖ ಹೀಗೆ ಸ್ವಾರೂಪಿಕ ಮಿಶ್ರಾನುಭವ ಮಾಡುತಾರೆ. ಅತಏವ ಸಂಸಾರ ಶಬ್ಧ ಸ್ವರೂಪ ಧರ್ಮ ಪರವೇ ಹೊರತು ಲಿಂಗ ಬಂಧನ ಪರವಲ್ಲ. ಎಂದು ಒಂದು ಪಕ್ಷ. ಈ ಪಕ್ಷದಲ್ಲಿ ಬಾಧಕ ವೇನೆಂದರೆ ಹರಿಗುರು ಭಕ್ತಿ ಹರಿಗುರು ದ್ವೇಷ – ಈ ಎರಡು ಉದ್ರೇಕವೇ ಕರ್ಮ ಬಂಧಕ ಹೊರತು ಈ ಸ್ವಾರೂಪಿಕ ಉಭಯೋದಾಸೀನವು ಹ್ಯಾಗೆ ಕರ್ಮ ನಾಶ ಸಾಧಕವಾದೀತು? ಇದೇವೇ ಈ ಪಕ್ಷದಲ್ಲಿ ಅನುಮಾನ. ಉಳಿದ ಪಕ್ಷವನ್ನ ನಂಬಿದರೆ ಶ್ರೀಹರಿಗೆ ದುಃಖಾನುಭವವು ಹ್ಯಾಗೆ ಅಪ್ರಸಿದ್ಧವೋ ಹಾಂಗೆ ತಮ್ಮ ಕೇವಲ ಸ್ವರೂಪ ಧರ್ಮಗಳ ಅನುಭವವೇ ಅವರಿಗೆ ಸುಳ್ಳು ಆಗಿ ಹೋಗುತ್ತದೆ. ಸುಷುಪ್ತಿಯಲ್ಲಿ ಸ್ವರೂಪಾನುಭವ ಉಂಟಷ್ಟೆ? ಎಂದರೆ ಅದರ ಕ್ರಮ ಮುಂದೆ ಹೇಳುತ್ತೇವೆ.

*"ತ್ರಿವಿಧ ಜೀವರಿಗೆ ಮುಕುತಿ ಕೊಡೋ ತ್ರಿವಿಕ್ರಮನೇ"*
ಅಂತ ಒಂದು ಪುರಂದರದಾಸರ ವಚನವುಂಟು. ॥ಸುಳಾದಿ॥

*ಆನಂದ ಮುಕ್ತರಿಗೆ ದೈತ್ಯಾವಳಿಗೆ ದುಃಖ ಮನುಷ್ಯರಿಗೆ ಮಿಶ್ರ*
*ನಿಜಕಾಹೋದು!* ಯಂತ ಅನಾದಿ ಕರ್ಮ ಸುಳಾದಿ ॥
*ವಿಜಯ ರಾಯರ ಉಕ್ತಿಯಲ್ಲಿ ನಿಜ ಶಬ್ಧವದೆ॥*
ಶ್ರೀ ಹರಿಯು ಬ್ರಹ್ಮಕಲ್ಪಾಂತಕ್ಕೆ ಅವರನ್ನ ಏನು ಮಾಡುತ್ತಾನೋ
ಆದ್ದರಿಂದ ನಾವು ಹ್ಯಾಗೆ ತಿಳಿದುಕೊಂಡರೂ ವಿಹಿತವೇ ಅದೆ. ॥೨॥

## ಮುಕ್ತಿಯೋಗ್ಯರ ಲಕ್ಷಣ

ಮುಕ್ತಿಯೋಗ್ಯ ಜೀವರ ಸ್ವರೂಪ ಲಕ್ಷಣ ಏನೆಂದರೆ ಸಮೀಚೀನ ಜ್ಞಾನ ಆನಂದ ವಿಷಯ ವೈರಾಗ್ಯ ಹರಿ ಗುರು ಭಕ್ತಿ, ಹರಿ ಗುರು ದ್ವೇಷಿಗಳಲ್ಲಿ ದ್ವೇಷ. ಹರಿ ಗುರು ಉದಾಸೀನರಲ್ಲಿ ಉದಾಸೀನ, ಬಿಳೀ ವರ್ಣ, ಬಲ ವೀರ್ಯ ಅದರ ಸಾಮರ್ಥ್ಯ, ಶೌರ್ಯ ಅದರ ಪರಾಕ್ರಮ – ಔದಾರ್ಯ ಎಂದರೆ ತ್ಯಾಗ – ಗಾಂಭೀರ್ಯ ಚಾತುರ್ಯ ಶೃಂಗಾರ ಪ್ರಕಾಶ ಸೌಂದರ್ಯ, ಪ್ರಾಗಲ್ಭ್ಯ ಅಂದರೆ ಪ್ರೌಢ ಭಾವ ಇದು ಮೊದಲಾದದ್ದು – ಇವು ಜೀವ ಸ್ವರೂಪ ಗುಣಗಳು.

*ಸದ್ ಜ್ಞಾನಾನಂದ ವೈರಾಗ್ಯ ಭಕ್ತ್ಯಾದಿ ರೂಪಕಾಃ" ॥೧॥*
ಅಂತ ಸತ್ತತ್ವ ರತ್ನಾವಳಿ

ಇದರಲ್ಲಿ ಬ್ರಹ್ಮಾದಿ ತೃಣ ಜೀವಾಂತ ಸ್ವರೂಪ ತಾರತಮ್ಯ ಉಳ್ಳಂಥಾವರು. – ಈ ಜೀವರಾಶಿಗಳೇ ಅಪಾರವಾದ್ದರಿಂದ ಮುಕ್ತ ಜೀವಗಣಗಳಿಗೂ ಲೆಖ್ಖವಿಲ್ಲ ॥೨॥ ಅಮುಕ್ತ ಜೀವಗಳಿಗೂ ಲೆಖ್ಖವಿಲ್ಲ ॥೩॥

## ಜೀವ ಸ್ವರೂಪ ಪರಿಮಾಣವು

ಜೀವ ಸ್ವರೂಪ ಪರಿಮಾಣ : ಕುದುರೆ ಕೂದಲ ಕೊನೆಯ ಹತ್ತು ಸಾವಿರ ಶೀಳಿನಲ್ಲಿ ಒಂದರಷ್ಟು ಸೂಕ್ಷ್ಮ ರೂಪ. ಇದೇ ಬ್ರಹ್ಮಾದಿ ಸರ್ವಜೀವರ ಪ್ರಮಾಣ– ಇದರಲ್ಲಿ ಗಜ, ತುರಗ, ಖಗ, ಮೃಗ, ಪಶು, ಪಿಪೀಲಿಕಾ, ವೃಕ್ಷ, ಲತಾ, ತೃಣಾದಿ, ಮೀನ, ಜಲಕ, ಮಕರಾದಿ ೮೪ ಲಕ್ಷ ಯೋನ್ಯಾಕಾರಕಗಳಾಗಿ ತ್ರಿವಿಧಜೀವ ರಾಶಿಗಳಲ್ಲೂ ಅಪರಿಮಿತವಾಗಿ ನಿತ್ಯ ಸಿದ್ಧವಾಗಿ ಆದೆ. ಇಂಥಾ ಆಕಾರಗಳಿದ್ದ ಪ್ರಯುಕ್ತ ಸ್ವರೂಪಭೂತ ಜ್ಞಾನೇಂದ್ರಿಯಗಳು ಕರ್ಮೇಂದ್ರಿಯಗಳು ವಿಷಯಗಳು ಮೊದಲಾಗಿ ಉಂಟು –

ಸ್ವರೂಪ ಜ್ಞಾನೇಂದ್ರಿಯ ವ್ಯಾಪಾರವೇ, ಸ್ವರೂಪೇಚ್ಛಾ, ಸ್ವರೂಪ ಕರ್ಮೇಂದ್ರಿಯ ವ್ಯಾಪಾರವೇ ಸ್ವರೂಪ ಕ್ರಿಯಾ ॥ ಪರಮ ಸೂಕ್ಷ್ಮ ಜೀವ ಸ್ವರೂಪ ಕ್ರಿಯೆಯಿಂದ ಹಿಂದಿನ ಅನೇಕ ಬ್ರಹ್ಮ ಕಲ್ಪದಿಂದಲೂ ಪ್ರವಾಹ ರೂಪ ಅನಾದಿ ಕರ್ಮಗಳು ಅಪಾರವಾಗಿ ನಡೆದು ಬಂದಿರಲಿಕ್ಕೆ ಆ ಸ್ವರೂಪ ಕ್ರಿಯೆಯನ್ನೇ ಸ್ವಾಮಿಯು ನಿಮಿತ್ತ ಮಾಡಿ ಇದ್ದಾನೆ. ॥ ಪರಮ ಸೂಕ್ಷ್ಮ ಸ್ವರೂಪದಲ್ಲಿ ಕರ ಚರಣಾದ್ಯಾಕಾರ ಅನುಭವ ಬರೋದಿಲ್ಲವಲ್ಲ ಎಂದರೆ ಅತಏವ ನಮ್ಮ ಬುದ್ಧಿಯೇ ಸ್ಥೂಲ – ಆ ಆಕಾರಗಳು ಬಿಂಬಾಪರೋಕ್ಷ ಕಾಲದಲ್ಲಿ ಸ್ವರೂಪ ಕಣ್ಣಿನಿಂದ ಕಾಣತಕ್ಕದ್ದು. ॥ ಸುಳಾದಿ ॥ ವಿಜಯ ರಾಯರ ಉಕ್ತಿ ॥

*ಸ್ವರೂಪಾಚಕ್ಷಾದ್ದೃಷ್ಟಿರಪರೋಕ್ಷಮಿತೀರ್ಯತೆ ॥* ಯಂತ ಪ್ರಕಾಶ ಸಂಹಿತಾ.

ಪ್ರಕಾಶ ಸಂಹಿತಾ ಮತ್ತು ವಿಷ್ಣುರಹಸ್ಯ ಈ ಎರಡೂ ಪಾಂಚರಾತ್ರ ಅಷ್ಟೋತ್ತರ ಶತ ಸಂಹಿತೆಗಳಿಗೆ ಶೇರಿ ಆದೆ. ಪಾದ್ಮ ಸಂಹಿತಾ ಪ್ರಥಮಾಧ್ಯಾಯ ಜ್ಞಾನ

ಪಾದ ಪ್ರಥಮಾಧ್ಯಾಯದಲ್ಲಿ ರಹಸ್ಯಂ ವಿಷ್ಣು ಪೂರ್ವಕಂ ಎಂತಲೂ ತೇಜಃ ಎಂತಲೂ ಸಂಹಿತಾನಾಮ ನಿರೂಪಣೆಗಳ ಮಾಡಿ ಇದ್ದಾರೆ. ॥

ಆದ್ದರಿಂದ ಮುಕ್ತಿಯೋಗ್ಯ ಜೀವರಿಗೆ ಬಿಂಬಾಪರೋಕ್ಷ ಹೊರತಾಗಿ ಸ್ವರೂಪ ಜ್ಞಾನಕ್ಕೆ ಅಭಿವ್ಯಕ್ತಿಯಿಲ್ಲ. ಸ್ವರೂಪ ಜ್ಞಾನೇಚ್ಛಾ ಪ್ರಯತ್ನಗಳಿಂದಲೇ ಜೀವನು ಕರ್ತನಾಗಿದ್ದಾನೆ . ಮುಕ್ತ ಪ್ರಕರಣ ಸುಳಾದಿಯಲ್ಲಿ 'ಕರ್ತರಾಗಿರೋದು ಜೀವರ ಸ್ವಭಾವ. ಪ್ರಯತ್ನ- ಜ್ಞಾನ- ಇಚ್ಛೆ ಅನಾದಿ ಸಿದ್ಧವೋ ತತ್ವೇಶ ಮುಂತಾದ ತೃಣ ಜೀವಕ್ಕೆ ಯಂತ' ನಿಮಿತ್ತವೂ ಕೂಡ ಹೇಳಿ ಕರ್ತಾ ಎಂತ ತೋರಿಸಿದರು. ॥೧॥

ಎರಡನೇ ಸುಳಾದಿ – 'ಆ ವೇಳೆ ಜ್ಞಾನೇಚ್ಛಾಪ್ರಯತ್ನ ಜೀವಕೆ ಸ್ವರೂಪಭೂತವಾದರೂ ಸ್ವಭಾವಾಚರಣೆ ಮಾಡದೆ ಸುಮ್ಮನಿದ್ದದ್ದೇನೋಯಂತ॥ ಪುಣ್ಯ ಪಾಪಗಳೆರಡೂ ಎಂಬ ಸುಳಾದಿ ಸಿದ್ಧ॥ ಸ್ವಭಾವಾಚರಣೆ ಎಂದರೆ ಸ್ವಭಾವ ಭಕ್ತ್ಯಾಭಿವೃದ್ಧಿ ಸಾಧಕ ನಿಷ್ಕಾಮಾನುಷ್ಠಾನ ಮಾಡದೆ' ಎಂತ ಅರ್ಥ ॥೨॥

ಈ ಕರ್ತೃತ್ವ ವಿಷಯಕ್ಕೇನೇವೆ ೩ನೇ ಸುಳಾದಿ ॥ 'ನಾನು ಎಂಬೋ ಮಾತು ಮುಕ್ತಿಯಲಿಪ್ಪೋದು''ಯಂತ ಧ್ಯಾನ ಪ್ರಕರಣ ಸುಳಾದಿ ಸಿದ್ಧವು. ಹ್ಯಾಗೆಂದರೆ ಕರ್ತೃತ್ವವು ಸೃಷ್ಟಿಗೆ ಪೂರ್ವ ಸಂಕಲ್ಪದಿಂದಲೂ ಸ್ವರೂಪ ಸಿದ್ಧವಾದ ಪ್ರಯುಕ್ತ, ಮೋಕ್ಷದಲ್ಲಿಯೂ ಇದೇ ಉಳಿಯುತ್ತದೆಯಾದ್ದರಿಂದ ಮುಕ್ತರು ನಾನು ಎನಬಹುದು ಎಂದರ್ಥವು. ಈಗ ನಾವು ಯಾಕೆ ಅನಬಾರದು ಎಂದರೆ ಮೋಕ್ಷದಲ್ಲಿ ಅಜ್ಞಾನವಿಲ್ಲದ ಪ್ರಯುಕ್ತ 'ನಾನು' ಎಂಬ ಭಗವದ್ರೂಪವನ್ನು ಮರೆತು 'ನಾನು' ಎಂಬುವುದಿಲ್ಲ ಎಂತ ಭಾವ.

*"ಸರ್ವಥಾ ಬಾಧ್ಯ ಭೇಧೋಹಮುಕ್ತಾವಪಿ ಸುನಿಶ್ಚಿತಃ"*
ಎಂತ ಶೌನಕ ಸ್ಮೃತಿ ಸಿದ್ಧವು.

ಸುಳಾದಿ ಮೂರು ಆಯಿತು. ಇದೇ ವಿಷಯದಲ್ಲಿ ನಾಲ್ಕನೆಯ ಸುಳಾದಿ "ನೀನು ನಾನೆಂಬ ಉಕ್ತಿ ಮುಕ್ತಿ ಸಿದ್ಧ" ವೆಂದು ಶ್ರೀನಿವಾಸನ ಸ್ತೋತ್ರಗೈವುತಲಿ ಎಂತ ಜ್ಞಾನ ಸುಳಾದಿ ಸಿದ್ಧವು. ಇದೇ ಅರ್ಥಕ್ಕೆ ಐದನೇ ಸುಳಾದಿ "ಕಲಿಗೂ ಎನಗೂ

ಹೆಚ್ಚು ಕೊರತೆ ಎಂಬೋದಿಲ್ಲವೋ- ಇಲ್ಲವೋ ಚೇಷ್ಟೆ ಮಾತರ ಉಂಟು" ಎಂತ ಅಸೂಯಾ ಸುಳಾದಿ. ಕರ್ಮಾನುಭವಕ್ಕೆ ಯೋಗ್ಯವಾದಂಥಾ ಶಕ್ತಿ ಮಧ್ಯದಲ್ಲಿ ಶ್ರೀಹರಿಯು ಕೊಟ್ಟಿರುವ ಸ್ವಾತಂತ್ರ್ಯ ಶಕ್ತಿಯೂ ಈ ಸುಳಾದಿ ಮಾತಿನಲ್ಲಿ ಸೇರಿ ಬಂದಿದೆ. ಕರ್ಮಾನುಭವಕ್ಕೆ ತಕ್ಕ ಶಕ್ತಿ ಈಶ್ವರ ದತ್ತ ವಾದುದೆಂದು ಗೀತಾ ವಿವೃತ್ತಿಯ ವಚನವಿದೆ. ಸುಳಾದಿ

"ಪ್ರಾಣನಾದರೂ ಹರಿ ಜೀವನ ಚೇಷ್ಟೆಯಂತೆ ನಾನಾ ವಿಧದಲೀ ಅನುಸಾರಿಯಾಗಿ" ಎಂತ ಸುರರಾದಿಗಳ ದೆಸೆಯಿಂದ ಫಲಯ್ಯೈಸಿದರು. ಹರಿ ಪ್ರೇರಣೆ ಇಂದಲ್ಲಾದೆ ಸ್ವತಂತ್ರಾರೊಬ್ಬರಲ್ಲ.

"ಬರಿದೆ ಅವರವರ ಪ್ರೇರಣೆ ಪಾಲನೆಯು ಹಿರಿಯರು ತಮಗಿಂತ ನೀಚರಿಗಹುದೆನ್ನಿ" ಎಂತ ವೈರಾಗ್ಯ ಸುಳಾದಿ ಸಿದ್ಧವು. ಅಂದರೆ ಸುಮ್ಮಗಿದ್ದರೂ ಅದರದರ ಸ್ವರೂಪದಿಂದ ಚೇಷ್ಟೆ ನಡಿಯದೇ ಇರತಕ್ಕದ್ದಲ್ಲ ಎಂತ ಅರ್ಥವು. ಚೆನ್ನಾಗಿ ಐದನೇ ಪ್ರಕರಣದಲ್ಲಿ ವಿವರಿಸಲ್ಪಡುವುದು. ಇಂತಹ ಸರ್ವ ಜೀವರ ಮಧ್ಯದಲ್ಲಿ ಸಾಂಶರು ನಿರಂಶರು ಎಂಬ ಭೇದವಿರುವುದು ಮುಂದೆ ವಿವರಿಸಲ್ಪಡುವುದು.

*ಇತಿ ಜೀವ ಸ್ವರೂಪ ಗುಣ ಧರ್ಮ ನಿರೂಪಣ ಪ್ರಕರಣ ಸಂಪೂರ್ಣಂ ।*

ಅಥ ದ್ವಿತೀಯ ಸಂಸಾರ ಧರ್ಮ ಪ್ರಕರಣ ಪ್ರಾರಂಭವು
ಶ್ರೀ ಗುರುಭ್ಯೋ ನಮಃ॥

# ಲಿಂಗದೇಹದ ವರ್ಣನೆ

ಅಕ್ಕಿಯ ಮೇಲೆ ಹೊಟ್ಟು ಮುಚ್ಚಿಕೊಂಡು ಇರುವಂತೆ- ಜೀವನ ಸ್ವರೂಪದ ಮೇಲೆ ಷೋಡಶ ( ೧೬ ) ಕಲಾತ್ಮಕವಾದ ಲಿಂಗದೇಹ ವಿರುವುದು. ಇದು ಅನಾದಿಯಾದದ್ದು. ಮೇಲಿನ ಹೊಟ್ಟು ಸುಲಿದು ಹೋದರೆ ಪುನಃ ಹ್ಯಾಗೆ ಮುಚ್ಚಲಾರದೊ ಹಾಗೆ ಜೀವರ ಯೋಗ್ಯತಾನುಸಾರ ಬ್ರಹ್ಮ ಕಲ್ಪಾಂತಕ್ಕೆ ಮುಕ್ತಿಯಾದ ಮೇಲೆ ತಿರಿಗಿ ಯಾವ ಕಲ್ಪಕ್ಕೂ ಸಂಸಾರಿಗಳಲ್ಲಿ ಸೇರುವುದಿಲ್ಲ. ಬೀಜದ ಭತ್ತವು ಭೂಮಿಯ ಸೃಷ್ಟಿಕಾಲದಿಂದ ಹೊಟ್ಟುಕೂಡಿದ ಬೀಜ ಎಂದು ಪ್ರಸಿದ್ಧವಾಗಿ ಭೂಮಿಯಲ್ಲಿ ನೆಟ್ಟರೆ ಸಸಿಯಾಗಿ ದೊಡ್ಡದಾಗಿ ಹುವ್ವು ಕಾಯಿಗಳಾಗಿ ಕಡೆಗೆ ಫಲವಾಗಿ ಭತ್ತವೆಂಬ ಪ್ರಸಿದ್ಧಿಗೆ ಬರುವುದು. ಆದರೆ ಹೊಟ್ಟು ತೆಗೆದ ಕೇವಲ ಅಕ್ಕಿಯಕಾಳು ಬೀಜವಾಗುವುದಿಲ್ಲ. ಆದ್ದರಿಂದ ಹಾಗೆಯೇ ಲಿಂಗದೇಹವೇ ಸ್ಥೂಲದೇಹ ಪ್ರಾಪ್ತಿಗೆ ಕಾರಣವಾದುದರಿಂದ ಅದರ ವಿಯೋಗವು ಮುಂದೆ ಜನ್ಮಾದಿಗಳಿಗೆ ಕಾರಣವಾಗುವುದಿಲ್ಲ. ಲಿಂಗ ಎಂದರೆ ಹೇತು ಅಂದರೆ ಕಾರಣದೇಹ. ಅದು ಯಾವ್ಯಾವುದಕ್ಕೆ ಕಾರಣವೆಂದರೆ, ಜೀವರುಗಳಿಗೆ ಸ್ಥೂಲದೇಹದ್ವಾರ ಸ್ವರ್ಗಸುಖಾನುಭವಕ್ಕೆ, ನರಕ ಯಾತನಾನುಭವಕ್ಕೆ, ಭೂಲೋಕದಲ್ಲಿ ಗರ್ಭಯಾತನೆ, ಉತ್ಪತ್ತಿದುಃಖ ಮರಣ ದುಃಖ, ಅನೇಕ ವಿಧ ರೋಗ ದುಃಖ ಹಸಿವು, ನೀರಡಿಕೆ ಇತ್ಯಾದಿ ದೇಹದಿಂದ ಅನುಭವಿಸುವ ಸುಖ ದುಃಖಗಳು ಆದಿಭೌತಿಕ. ಆಧ್ಯಾತ್ಮಿಕ ಯಾವುದೆಂದರೆ ಮನೋ ರೋಗಗಳು ದ್ರವ್ಯನಾಶ ಜನ್ಯ, ಪತ್ನೀ ಪುತ್ರ ಸ್ನೇಹಭಾವ ಮುಂತಾದ ದೇಹ ಬಾಂಧವರಿಗೆ ಬಹು ವಿಧ ದುಃಖ ದರ್ಶನ ಜನ್ಯ ವ್ಯಸನ ಶೋಕವೆಂಬುವುದು ಇವು ಆಧ್ಯಾತ್ಮಿಕವು. ಆದಿದೈವಿಕ ಯಾವುವೆಂದರೆ ನಿರ್ನಿಮಿತ್ತ ಸಿಡಿಲು, ವಿಷಗಾಳಿ, ಮೋಸದಿಂದ ಪ್ರಾಪ್ತವಾಗತಕ್ಕದ್ದು. ಹಾಗೇ ಪ್ರಮಾದ ಅಜ್ಞಾನಗಳಿಂದ ವೈಪರಿತ್ಯ ದುಃಖಗಳು ಅಧಿದೈವಿಕಗಳು. ರಾಜೋಪದ್ರವ, ಚೋರೋಪದ್ರವಗಳು, ಸರ್ಪ

ವ್ಯಾಘ್ರಾದಿ ಉಪದ್ರವಗಳು ಆದಿಭೌತಿಕಕ್ಕೆ ಸೇರಿದವು. ಈ ತ್ರಿವಿಧ ದುಃಖಗಳನ್ನು ಸರ್ವರೂ ಅನುಭವಿಸುತ್ತಲೇ ಇರುತ್ತಾರೆ. ಪ್ರಮಾಣ:-

*ತಾಪೋಹ ಪ್ರೋಚ್ಯತೇ ದುಃಖಂ ತತ್ತುಸ್ಯಾತ್ತ್ರಿವಿಧಂ ಪುನಃ।*
*ಆತ್ಮೋಮನಸ್ಥು ತಸ್ಯೈವ ಜಾತಂ ಯದಪರಾಧತಃ ಧನ*
*ಪುತ್ರ ಗ್ರಹ ಕ್ಷೇತ್ರ ಕಳತ್ರಾದೇಃ ಪ್ರಿಯಸ್ಯಚ ॥*
*ಆಧ್ಯಾತ್ಮಿಕಂಚಾಧಿಭೂತಂ ಆದಿದೈವಿಕಮೇವಚ ॥*
*ವಿಘಾತಾದೇಸ್ತಥಾನಿಷ್ಟ ಪ್ರಾಪ್ತೇಶ್ಚಾಪ್ಯತಿ ಚಿಂತಯಾ।*
*ಅಸೂಯಯಾಭಿಮಾನೇನ ದುಃಸ್ವಪ್ನಾಚ್ಚ ವ್ಯಥಾಚಯತ್।*
*ಸ್ವಸ್ಥಸ್ಯಾಪಿ ಹಿ ಯದ್ದುಃಖಂ ತದಾಧ್ಯಾತ್ಮಿಕಮುಚ್ಯತೆ ।*
*ಭೂತಾನಿ ಪ್ರಾಣಿನಃ ಪ್ರೋಕ್ತಾಸ್ತಥಾಕಾಶಾದಿಪಂಚಕಂ ॥*
*ಸರ್ಪ ವ್ಯಾಘ್ರ ವರಾಹಾದೇಸ್ತಸ್ಕರಾದೇರ್ನೃಪಾದಪಿ ॥*
*ಸ್ವದೇಹೇ ಸ್ವಪ್ರಿಯಸ್ಯಾಪಿ ಪುತ್ರಾದೇಃ ಪೀಡನಾದ್ಭವೇತ್ ॥*
*ದುಃಖಂ ತಥೈವ ವಿಸ್ಫೋಟ ಹಿಕ್ಕಾಕಾಸ ಜ್ವರಾದಿನಾ।*
*ಭೌತಿಕೇಷ್ವಿಹದೇಹೇಷು ಜಾಯತೇ ದುಃಖಮುಲ್ಬಣಂ॥*
*ತಥಾದಿ ಭೌತಿಕನಾಮ ದೃಷ್ಯತೇಖಿಲ ಜಂತುಷು॥*
*ದೃಷ್ಟೇಕಾರಣ ಹೀನಂ ಯಜ್ಜಾಯತೇ ದೈವಯೋಗತಃ ॥*
*ಅಕಸ್ಮಾನ್ಮರಣಾದ್ಯಚ್ಚ ಮಹಾ ಮಾರುತ ವೃಷ್ಟಯಃ॥*
*ದುರ್ಭಿಕ್ಷಂ ಮಾರಕೇವಹ್ನಿ ವ್ಯಾಧ್ಯಾಸ್ಯಾ ಈಶಯಸ್ತಂಯಾ।*
*ಬಹುಸಾಧಾರಣಾ ಲೋಕೇದೃಶ್ಯಂತೇ ಜಂತುಪೀಡಿಕಾಃ॥*
*ತೇಭ್ಯೋಯಜ್ಜಾಯತೇ ದುಃಖಮಾದಿದೈವಿಕಮೇವತತ್॥*
*ನಹಿಕಸ್ಚಿತ್ತಥಾ ಜಂತುರ್ನಾನುಭೂತಾನ್॥*

ಎಂತ ವಿಷ್ಣುರಹಸ್ಯ ೧೯ನೇ ಅಧ್ಯಾಯ ಸಿದ್ಧವು.

ಈ ದುಃಖ ಸುಖಗಳಿಗೆ ಉಪಾದಾನ ಕಾರಣಗಳು ಪೂರ್ವ ಕರ್ಮಗಳಾದ್ದರಿಂದ ಈ ಲಿಂಗ ಶರೀರವು ನಿಮಿತ್ತ ಕಾರಣವೆಂದು ತಿಳಿಯಬೇಕು. ದೃಷ್ಟಾಂತ :- ದೀವಟಿಗೆ ಪಂಜಿನೋಪಾದಿಯಲ್ಲಿ ಲಿಂಗದೇಹವು. ತೈಲದೋಪಾದಿಯಲ್ಲಿ ಅನಾದಿ ಕರ್ಮಗಳು. ಅಗ್ನಿಜ್ವಾಲೆಯೋಪಾದಿಯಲ್ಲಿ

ಧೂಪದೋಪಾದಿಯಲ್ಲಿ ಎಲ್ಲ್ಯಾ ಜ್ಞಾನಾಜ್ಞಾನ ಸುಖ ದುಃಖಗಳು, ಈ ಪ್ರಕಾರ ನಾನಾ ದುಃಖಗಳು ಅನುಭವಕ್ಕೆ ನಿಮಿತ್ತವಾದ ಲಿಂಗದೇಹವೇ ನಾನಾ ಸೌಖ್ಯಗಳಿಗೂ, ಸ್ವರ್ಗಾದಿ ನಶ್ವರ ಸುಖಕ್ಕೂ ದೇಹ ಸೌಖ್ಯ, ಮನಃ ಸೌಖ್ಯ, ಜ್ಞಾನೇಂದ್ರಿಯ ಸೌಖ್ಯ, ಕರ್ಮೇಂದ್ರಿಯ ಸೌಖ್ಯಗಳಿಗೂ ಲಿಂಗಶರೀರವೇ ನಿಮಿತ್ತ ಕಾರಣವು.

ಈ ಲಿಂಗಶರೀರವು ಜೀವನ ನಿಜ ಆಕಾರಗಳು ಸಿಂಹ ವ್ಯಾಘ್ರಗಳಿಗೆ ಅನುಕೂಲವಾಗಿ ತಲೆ ಹೊಟ್ಟು ತಲೆ ಆಕಾರ, ಅವರೆ ಹೊಟ್ಟು ಅವರೆ ಆಕಾರ, ಹೀಗೆ ತ್ರಿವಿಧ ರಾಶಿಗಳಿಗೂ ತತ್ತದಾಕಾರ ಸಮವಾಗಿ ಅನಾದಿ ಲಿಂಗ ದೇಹವಿದೆ. ಈ ಮಾತು ವಿಷ್ಣು ರಹಸ್ಯದಲ್ಲಿ ಅದೆ. ಈ ಕಾರಣ ದೇಹದಿಂದ ಸೃಷ್ಟಿ ಕಾಲದಲ್ಲಿ ಶ್ರೀ ಹರಿಯು ಬಿಂದುಗಳನ್ನು ಹೊರಡಿಸಿ ಪ್ರತ್ಯೇಕವಾಗಿ ಗುಣತ್ರಯ ರಾಶಿಗಳನ್ನೂ, ಬಿಂದುಗಳನ್ನು ಹೊರಡಿಸಿ ಉಭಯ ಬಿಂದುಗಳನ್ನು ಉಸುಗು ಮಣ್ಣು ಬೆರಸಿದ ಹಾಗೆ ಹೊಂದಿಸಿ ಅನಿರುದ್ಧ ಶರೀರವು– ಸೃಷ್ಟಿಗೆ ಬಂದ ಜೀವರಿಗೆ ಲಿಂಗಶರೀರದ ಮೇಲೆ ಎರಡನೇ ಅಂಗಿಯಾಗಿ ಈ ಬ್ರಹ್ಮಕಲ್ಪದ ತನಕ ಬ್ರಹ್ಮಾದಿ ತೃಣ ಜೀವಾಂತ ಸರ್ವರಿಗೂ ಇರುತ್ತದೆ. ಲಿಂಗ ದೇಹದ ಮೇಲೆ ಅನಿರುದ್ಧದೇಹವನ್ನು ಶ್ರೀ ಹರಿಯು ಯಾಕೆ ಕೊಡಬೇಕು ? ಎಂದರೆ ಭತ್ತದ ಪೈರಿಗೋಸ್ಕರ ನೆನೆ ಹಾಕಿ ಭಾರವಿಟ್ಟು ಮೇಲೆ ಕೆಳಗೆ ಮೋಳೆ(ಕೆ) ಹೊರಡುವುದು ಹ್ಯಾಗೋ ಹಾಗೆ ಅನಿರುದ್ಧ ದೇಹವು– ಇದೇ ಅನಿರುದ್ಧನಿಂದ ಸೃಷ್ಟಿಯಾಗಿ ಸೂಕ್ಷ್ಮ ದೇಹ ಯೆಂತ ಕರಿಸಿಕೊಳ್ಳುತ್ತದೆ–

"*ಅನಿರುದ್ಧೋತ್ಪಾದ ದೇಹತ್ವಾದ್ದೇಹಸ್ತಚ್ಛಬ್ಧ ವಾಚಕಃ* ॥ ಎಂತ ಸಿದ್ಧವು.

ಇದು ಹೊರತಾಗಿ ಪಾಂಚ ಭೌತಿಕ ಸ್ಥೂಲ ದೇಹ ಬರಲಾರದು. ಪ್ರಮಾಣ:–

*ಯಥಾ ವ್ರೀಹ್ಯಾದಿ ಧಾನ್ಯಾನಾಂ ಗೃಹೀತ್ವಾ ಬೀಜಚಾಂಕುರಾನ್*
*ವಪಂತಿ ಕರ್ಷಕಾಸ್ತದ್ವದನಿರುದ್ಧೋಽಸೃಜಜ್ಜಗತ್*" ಎಂತ ವಿಷ್ಣು ರಹಸ್ಯ.

ಈ ಲಿಂಗ ಶರೀರದ ಮೇಲೆ ಅನಿರುದ್ಧ ದೇಹ ಈ ದೇಹದೊಳಗೆ ಅವ್ಯಕ್ತದೇಹ ಎಂತ ಒಂದು ಉಂಟು. (ಅವ್ಯಕ್ತ ದೇಹ ಇದು ಲಿಂಗದೇಹಕ್ಕೂ ಅನಿರುದ್ಧ ದೇಹಕ್ಕೂ ಮಧ್ಯೆ ಇದೆ). ಅದು ಜೀವಾಖ್ಯ ಸುಳಾದಿ ಮತ್ತು

ಪ್ರಕಾಶ ಸಂಹಿತಾ ಸಿದ್ಧ. ಇಂತಹ ಅನಿರುದ್ಧ ದೇಹದ ಮೇಲೆ ೮೪ ಲಕ್ಷ ಯೋನಿಗಳು ಬಂದು ಹೋಗಿ ಮತ್ತೊಂದಾಗಿ ಪ್ರವಾಹದ ರೂಪವಾಗಿ ಈ ಸ್ಥೂಲದೇಹ ಬಂದಿರುವುದರಿಂದ ಪೂರ್ವೋಕ್ತ ದುಃಖತ್ರಯಗಳು ಸ್ಥೂಲ ಮನಸ್ಸಿಗೂ ಸ್ಥೂಲ ಶರೀರಗಳಿಗೂ ವೇಧಿಸುವುದೇ (ಹಿಂಸಿಸುವುದೇ) ಹೊರತು ಸೂಕ್ಷ್ಮ ಶರೀರವನ್ನು ಲಿಂಗ ಶರೀರವನ್ನು ವೇಧಿಸಲಾರದು.

## ಜೀವಪ್ರಕಾಶವು (ಕರ್ಮ ವಿಚಾರ)

ಲಿಂಗಶರೀರ, ಅವ್ಯಕ್ತಶರೀರ, ಸೂಕ್ಷ್ಮಶರೀರ ಮತ್ತು ಭೌತಿಕಸ್ಥೂಲಶರೀರ ಈ ನಾಲ್ಕು ದೇಹಗಳಲ್ಲಿಯೂ ಒಂದೇ ವಸ್ತ್ರದಲ್ಲಿ ನೀರು ಹ್ಯಾಗೆ ವ್ಯಾಪ್ತವೋ ಹಾಗೆ ವ್ಯಾಪ್ತವಾಗಿರುವುದರಿಂದ ಬಹು ವಿಧ ಸುಖ ದುಃಖಾದಿಗಳನ್ನು ಅನಿಭವಿಸುವವನು ಜೀವನೇ ಸರಿ. ಇದರ ಸಂಗತಿ ಮುಂದೆ ವಿವರಿಸುವೆನು.

ಈ ಸ್ಥೂಲ ಶರೀರವು ಐದು ಪ್ರಕಾರವು. ಸ್ಥೂಲಶರೀರ ಇದು ಬಿಟ್ಟನಂತರ ವಾಯು ಶರೀರ. ಇದೇ ಪಿಶಾಚ ದೇಹವು. ಅನಂತರ ಹತ್ತು ದಿನದ ಕರ್ಮದಿಂದ ಹುಟ್ಟುವ ದೇಹವೇ ಪ್ರೇತ ಶರೀರವು. ಈ ದೇಹದಿಂದ ಒಂದು ವರ್ಷ ಹಾದಿ ನಡೆದು ಯಮ ಲೋಕಕ್ಕೆ ಸೇರ ಬೇಕು. ಅನಂತರ ನರಕ ದುಃಖಾನುಭವಕ್ಕೆ ಯಾತನಾ ಶರೀರವು. ಸ್ವರ್ಗ ಸುಖಾನುಭವಕ್ಕೆ ಜ್ಯೋತಿರ್ಮಯ ಶರೀರವು.

ಭೂಲೋಕದಲ್ಲಿ ಸುಖ ದುಃಖಾನುಭವಕ್ಕೆ ೮೪ ಲಕ್ಷ ಯೋನಿ ದೇಹವೇ ಸ್ಥೂಲ ದೇಹವು. ಈ ಐದು ದೇಹಗಳು ಒಂದಾದನಂತರ ಮತ್ತೊಂದು ಹೀಗೆ ನದಿಯ ಪ್ರವಾಹದಂತೆ ಕಾಲ ಭೇದದಿಂದ ಶ್ರೀನಾರಾಯಣನು ಈ ದೇಹ ಪರಂಪರೆಯನ್ನು ಕೊಡುತ್ತಾನೆ. – ಸುಳಾದಿ

*"ಪ್ರೇತ ಯಾತನಾ ದೇಹ ಸ್ವರ್ಗ ನರಕ ಜ್ಯೋತಿರ್ಮಯ ಶರೀರ ಪುನಃ ಜನನ ಮರಣ"* ಎಂದು ಜಪ ಸುಳಾದಿ.

ಶಾಶ್ವತನಾಗಿ ಚಿದಾನಂದಾತ್ಮಕನಾದ ಜೀವನಿಗೆ ಈ ದೇಹಗಳು ಯಾತಕ್ಕೆ ಬರುತ್ತವೆ? ಎಂದರೆ ಒಂದು ಲಿಂಗದೇಹವೇ ಜೀವಗೆ ಹೇಗೆ ಅನಾದಿ ಸಿದ್ಧವೋ ಹಾಗೆ ಅನಾದಿ ಕರ್ಮಗಳು ಅದೇ ಲಿಂಗದೇಹದಲ್ಲಿಯೇ ಪಾತ್ರೆಯಲ್ಲಿ ಧಾನ್ಯ ತುಂಬಿರುವಂತೆ ಅನಂತಾನಂತ ಪಾಪ ಕರ್ಮಗಳು ಮತ್ತು ಪುಣ್ಯ ಕರ್ಮಗಳ

ಸಹಿತ ಸೇರಿಕೊಂಡು ಹಿಂದಿನ ಬ್ರಹ್ಮ ಕಲ್ಪಗಳಿಂದಲೂ ಒಂದು ಕರ್ಮ ಮಾಡೋಣ ಬಿಡೋಣ ಮತ್ತೊಂದು ಮಾಡೋಣ ಹೀಗೆ ಒಂದೊಂದು ಕ್ಷಣದಲ್ಲಿ ಅಪಾರವಾಗಿ ಅನಂತ ಪುಣ್ಯ ಅನಂತ ಪಾಪ ಕರ್ಮಗಳನ್ನು ಮಾಡುತ್ತಲೇ ಇರೋಣವೇ ಜೀವ ವ್ಯಾಪಾರವು. ಇದು ಹರಿ ಸಂಕಲ್ಪದಿಂದ ಜೀವನಿಂದಲೇ ನಡೆದದ್ದು ಹೊರತು ಬೇರೆ ಇಲ್ಲ.

***"ನಹಿಕಶ್ಚಿತ್ ಕ್ಷಣಮಪಿ ಜಾತುತಿಷ್ಟತ್ಯಕರ್ಮಕೃತ್"*** ಎಂಬ ಗೀತಾ ವಾಕ್ಯವು ಪ್ರಮಾಣವು.

***"ಸ್ಥೂಲೇನ ಸೂಕ್ಷ್ಮೇಣವಾ ಪುರೇಣ ಯುಕ್ತೋ ಜೀವಃ । ಕರ್ಮ ಕರೋತಿ"*** ಎಂದು ಗೀತಾಭಾಷ್ಯವು ಸಿದ್ಧವಾಗಿದೆ.

ಅಂದರೆ ಕರ್ಮ ಮಾಡುವುದಕ್ಕೆ ಸ್ಥೂಲ ದೇಹವೇ ಬರಬೇಕೆಂಬ ನಿಬಂಧನೆ ಇಲ್ಲವು. ಅನಾದಿ ಲಿಂಗದೇಹವೇ ಸಾಕು- ಎಂತ ಅರ್ಥ. ಜೀವನು ಈ ಕರ್ಮಗಳನ್ನು ಧರ್ಮ ರೂಪವಾಗಿ ಸೂಕ್ಷ್ಮ ರೂಪವಾಗಿ ತನ್ನ ಲಿಂಗದೇಹದಲ್ಲಿಯೇ ತುಂಬಿಕೊಂಡಿದ್ದಾನೆ. ಈ ಸ್ಥೂಲ ದೇಹ ಬಂದಿರುವ ಕಾಲದಲ್ಲಿ ಆ ಸೂಕ್ಷ್ಮ ಕರ್ಮಗಳು ಕ್ಷಣಕ್ಷಣಕ್ಕೂ ಅಪಾರವಾಗಿ ನಡಿಯುತ್ತಲೇ ಇದೆ. ಆ ಅನಂತಾನಂತ ಕರ್ಮಗಳಲ್ಲಿಯೂ ಒಂದೊಂದು ಕರ್ಮವನ್ನಾದರೂ ನಾನು ಮಾಡುತ್ತೇನೆ ಎಂತ ಆ ಜಡಕ್ಕೆ ಹ್ಯಾಗೆ ಜ್ಞಾನವಿಲ್ಲವೋ ಹಾಗೆ ಜೀವನು ಜ್ಞಾನಾನಂದಾತ್ಮಕನಾದಾಗ್ಯೂ ಕೆಸರಿನೊಳಗೆ ಹೂಳಿದ ರತ್ನದೋಪಾದಿಯಲ್ಲಿ ಪ್ರಕಾಶ ಸ್ವರೂಪನಾದರೂ ಪ್ರಯೋಜನವಿಲ್ಲದೆ ನಿದ್ರೆ ಮಾಡುವ ಪುರುಷನಿಗೆ ನಿದ್ರೆಯೇ ಅಜ್ಞಾನ ಕಾರ್ಯವಾದ ಪ್ರಯುಕ್ತ ಆಗ್ಯೇ ಜ್ಞಾನ ಮರೆಯಾಗಿದ್ದಾಗ್ಯೂ ಸ್ವರೂಪ ಜ್ಞಾನವಿದ್ದಾಗ್ಯೂ ಅಜ್ಞಾನ ಮುಚ್ಚಿಕೊಂಡು ಶರೀರಾಭಿಮಾನ ಹ್ಯಾಗೆ ಇಲ್ಲವೋ ಹಾಗೆ ಹಿಂದಿನ ಅನಂತಾನಂತ ಬ್ರಹ್ಮಕಲ್ಪಗಳಿಂದಲೂ ಅಜ್ಞಾನವೂಕೂಡ ಲಿಂಗಶರೀರ ಧರ್ಮವಾದ್ದರಿಂದ ಕೆಲವು ಕಾಲ ಜಾಗ್ರತೆ ಕೆಲವು ಕಾಲ ನಿದ್ರೆ ಹೀಗೆ ಇಲ್ಲದೆ ಕ್ಷಣವೂ ಕೂಡ ಎಚ್ಚರವಿಲ್ಲದೆ ಹಿಂದಿನ ಅನಂತ ಬ್ರಹ್ಮಕಲ್ಪಗಳಿಂದಲೂ ಅಖಂಡ ನಿದ್ರೆಯಾದ ಪ್ರಯುಕ್ತ ಸ್ವರೂಪ ಜ್ಞಾನವಿದ್ದಾಗ್ಯೂ

*"ಸ್ವಾಭಿಮಾನ ಕರ್ಮ ಮಾತ್ರ ಜ್ಞಾನ ಪ್ರಯುಕ್ತಾಃ ಕರ್ಮಾತಿರಿಕ್ತ ದೇಹರಹಿತಾಃ ಲಿಂಗಶರೀರಮಾತ್ರೇಣ ಸುಪ್ತಪ್ರಾಯಾವರ್ತಂತೇ"*
ಎಂತ ಸತ್ತತ್ತ್ವರತ್ನಮಾಲಾ

ಅಂದರೆ ಹುಳಕು ಆಡಿಕೆ ಒಳಗೆ ಆ ಹುಳುವಿಗೆ ಕರ್ಮ ಮಾತ್ರ ಜ್ಞಾನವಿದ್ದ ಹಾಗೆ. ಆದು ಸ್ವರೂಪ ಜ್ಞಾನ ಹೊರತು ವೃತ್ತಿ ಜ್ಞಾನವಲ್ಲ. ನಿದ್ರೆ ಮಾಡುವವನಿಗೆ ನಾನು ಇದು ನಿದ್ರೆಯಕಾಲ ಎಂಬ ಸ್ವರೂಪ ಜ್ಞಾನವಿರುತ್ತದೆಯಷ್ಟೆ. ಆ ಜ್ಞಾನಕ್ಕೆ ಈ ಸ್ಥೂಲದೇಹ ಹೀಗೆ ಶಯನ ಮಾಡಿ ಇದೇ ಎಂಬ ಅನುಭವವಿಲ್ಲದರಿಂದ ಸ್ಥೂಲ ಬುದ್ಧಿಗಳಿಂದ ಅನುಭವಾರ್ಥ ಜಡ ದೀಪ ಕ್ರಿಯಾ ದೃಷ್ಟಾಂತವು. ಅದು ಮೂರ್ಛೆಯೇ ಸರಿ. ಸ್ವರೂಪ ಜ್ಞಾನವಿದ್ದಾಗ್ಯೂ ನಾನು ಕರ್ಮ ಮಾಡುತ್ತೇನೆ ಎಂಬ ಅಭಿಮಾನವಿಲ್ಲದೆ ಕರ್ಮಗಳು ಅನಂತಾನಂತಗಳಾಗಿ ಪ್ರವಾಹ ರೂಪವಾಗಿದೆಯುದ್ದರಿಂದ "ಅನಾದಿಮಾಯಯಾಸುಪ್ತಃ" ಇತ್ಯಾದಿಗಳಿಂದಲೇ ಅಖಂಡ ನಿದ್ರೆಯೇ ಸರಿ. ಪುಣ್ಯ ಸಾಧನ ದ್ರವ್ಯಗಳು ಇಲ್ಲವಾದುದರಿಂದ ಪುಣ್ಯ ಮಾಡುವುದು ಹ್ಯಾಗೆಂದರೆ ಆದು ಶಾಸ್ತ್ರ ಸಿದ್ಧವಾದುದರ ದೆಶೆಯಿಂದ ಜೀವ ಸ್ವರೂಪ ಒಂದು ಲಿಂಗ ಶರೀರ ಒಂದು ಜಡ ಪ್ರಕೃತಿ ಮೂಲ ಅವಿದ್ಯಾ ಮತ್ತು ಲಿಂಗ ಶರೀರ ಧರ್ಮವಾದ ಅನಾದಿ ಕರ್ಮ ಇವುಗಳು ಹೇಗೆ ಶಾಸ್ತ್ರ ಮಾತ್ರದಿಂದ ತಿಲಿಯತಕ್ಕದ್ದೋ ಹಾಗೆ ಜೀವವೇ ಪಾಪ ಪುಣ್ಯ ಸಾಧನ ದ್ರವ್ಯಗಳು ಕೂಡ ಅನಂತಾನಂತಗಳಾಗಿ ಸೂಕ್ಷ್ಮ ಜಡ ಪ್ರಕೃತಿಗಳಾಗಿವೆ. ಅಚಿಂತ್ಯ ಶಕ್ತಿಯುಳ್ಳ ಶ್ರೀಹರಿಯು ಶುದ್ಧಾಜ್ಞಾನ ಬದ್ಧರಿಂದ ಅನಂತ ಕರ್ಮಗಳನ್ನು ಮಾಡಿಸುತ್ತಾ ಆ ಕರ್ಮಗಳು ಹೇಗೋ ಹಾಗೆ ಆ ಕರ್ಮವನ್ನು ಹುಟ್ಟಿಸುವ ಇಚ್ಛೆಯೇ ಅನಾದಿ ಕಾಮವು. ಅದೂ ಲಿಂಗಶರೀರ ಧರ್ಮವಾಗಿ ಅಜ್ಞಾನ ಲಿಂಗ ದೇಹದ ಮೂರನೆ ಪದರಿನ ಧರ್ಮ ವಾದರೆ ಈ ಕಾಮವು ಪ್ರಥಮ ಪರಿಚ್ಛೆದೇದ ರೂಪವಾಗಿ ಸೂಕ್ಷ್ಮ ರೂಪವಾಗಿ ಕಂಡು ಬಂದಿದೆ. ಅನಾದಿ ಕರ್ಮ ಪ್ರತಿಪಾದಕ ಪ್ರಮಾಣಗಳು

*"ಓಂ ಕರ್ಮವಿಭಾಗದಿತಿ ಚೇನ್ನಾ ಅನಾದಿಕೃತ್ ಓಂ"* ಎಂತ ಬ್ರಹ್ಮ ಸೂತ್ರವು

***"ಅನಾದಿ ಕರ್ಮಣಾಬದ್ಧ ಜೀವಾ ನಿತ್ಯಾಹ್ಯನಂತಶಃ"***
***"ಲಿಂಗ ದೇಹಯುತಾಸ್ಸರ್ವೇ ಪತಿತಾ ಮೂರ್ಛಿತಾ ಇವ"*** ಎಂತ ವಿಷ್ಣು ರಹಸ್ಯ.

***"ವಾಸುದೇವನೇ ಅನಾದಿ ಜೀವ ದೊಳಿದ್ದು ಲೇಸು ಹೊಲ್ಲೆಗಳ ತಾವ್ಯಕ್ತ ಮಾಡಿ"*** ಎಂತ ಅನಾದಿಕರ್ಮ ಪ್ರಕರಣ ಎರಡನೆಯ ಸುಳಾದಿ ಸಿದ್ಧವು.

ಅನಾದಿಯಿಂದ ಬಂದ ಕರ್ಮ, ಪ್ರಕೃತಿರೂಪ ಎಂತ ಅನಾದಿ ಕರ್ಮ ಸುಳಾದಿಯಲ್ಲಿ ಪ್ರಾರಂಭದ ಮಾತು. ಪ್ರಕೃತಿ ರೂಪ ಎನ್ನುವುದರಿಂದ ಕರಣ ರೂಪವಾದುದರಿಂದ ಆ ಕರ್ಮಗಳನ್ನು ಮಾಡುವುದಕ್ಕೆ ಪಾಪ ಮತ್ತು ಪುಣ್ಯ ಸಾಧನ ದ್ರವ್ಯಗಳೂ ಕೊಡ ಜಡ ಪ್ರಕೃತಿ ರೂಪತ್ವೇನ ಸೂಕ್ಷ್ಮ ರೂಪವಾಗಿರುವುದೇ ಸಿದ್ಧವು. ಅದು ನಮ್ಮ ಸ್ಥೂಲ ಬುದ್ಧಿಗೆ ಅಗಮ್ಯ, ಏಕೆಂದರೆ ಕಾರ್ಯ ರೂಪವಲ್ಲ. ಸ್ಥೂಲ ಶರೀರ ಕಾರ್ಯವಾದರೆ ಸ್ಥೂಲ ಬುದ್ಧಿಗೆ ಅನುಭವವಾದೀತು. "ಸುಳಾದಿ"

***ಎಲ್ಲಿಂದ ಒಳಗೆ ಪೊಕ್ಕು ಆಂದಿನಾರಭ್ಯವಾಗಿ ನಿಲ್ಲದೆ ಕರ್ಮಗಳ ಮಾಡುತಿಪ್ಪಾನೆಂದರೆ ಸೊಲ್ಲು ಮೆಚ್ಚುವುದಲ್ಲ ಅನಾದಿಯಿಂದ ಬಂದದ್ದಲ್ಲದೆ ಇದು ಮಧ್ಯದಲ್ಲಿ ಬಂದದ್ದುಂಟೆ?!*** ಎಂತ ಬಿಂಬಕ್ರಿಯಾ ಸುಳಾದಿ. ವಿಜಯರಾಯರ ಉಕ್ತಿ ಸಿದ್ಧವು.

ಅನಾದಿಯಿಂದ ಬಂದ ಕರ್ಮ ಪ್ರಕೃತಿ ರೂಪ ನಾನಾ ಬಗೆ ಉಂಟು. ದ್ವಿವಿಧವಾಗಿ ಎಂದರೆ ಸುಕರ್ಮ ದುಷ್ಕರ್ಮ ಎಂದರ್ಥ. ಮುಂದಿನ ವಚನವು "ಏನೆಂಬೆ ಇದೇ ಇದೇವೆ ಅನಂತ ಜನ್ಮಕ್ಕೆ ಉಪಾದಾನವಾಗಿಪ್ಪೋದು." ಪಾಪ ಪುಣ್ಯ ಅಂದರೆ ೮೪ ಲಕ್ಷ ಯೋನಿಗಳಲ್ಲಿ ಸ್ವರ್ಗದಲಿ ನರಕದಲಿ ಸುಖಾನುಭವಕ್ಕೂ ದುಃಖಾನುಭವಕ್ಕೂ ಯಾವ ಅಜ್ಞಾನದಿಂದ ದುರ್ಬುದ್ಧಿಗಳನ್ನು ಕೊಟ್ಟು ದುಷ್ಕರ್ಮಗಳ ಮಾಡಿ ದುರ್ದೇಹಗಳು ಬರಬೇಕೋ ಯಾವ ಜ್ಞಾನದಿಂದ ಸುಬುದ್ಧಿಗಳನ್ನು ಹುಟ್ಟಿಸುವ ಕರ್ಮಗಳನ್ನು ಮಾಡಿ ಶುಭಕರ ದೇಹಗಳು ಬರಬೇಕೋ ಅಂತಹ ದೇಹಗಳು ಶುಭಾಶುಭಗಳಿಗೆ ಉಪಾದಾನ ಎಂದರೆ ವಸ್ತ್ರಕ್ಕೆ ದಾರಗಳೇ ಉಪಾದಾನ ದ್ರವ್ಯ– ಘಟಕ್ಕೆ ಕಪಾಲಗಳೇ ಉಪಾದಾನ– ಈ ಪ್ರಕಾರ ದೇಹಗಳನ್ನು ಹುಟ್ಟಿಸುವುದೇ ಅನಾದಿ ಕರ್ಮಗಳು.

ಅನಾದಿ ಕರ್ಮಗಳು ಹೇಗೆ ಪಾಂಗ್ತವಾಗಿರುತ್ತವೋ ಅದೇ ಪಾಂಗ್ತವಾಗಿ ಇದರ ಅನುಭವಾನಂತರ ಅದು ಮತ್ತೊಂದರ ಅನುಭವವು. ಹೀಗೆ ಅನುಭವ ಸಾಧಕ ಜನ್ಮಗಳ ಸಂಪಾದಕವಾದಂಥಾ ಕರ್ಮಾನುಕೂಲ ಸ್ಥೂಲ ಬುದ್ಧಿಗಳಿಗೂ ಬೆನ್ನು ಬಲವಾಗಿ ಇರತಕ್ಕದ್ದೇ ಅನಾದಿ ಕರ್ಮದ ಮರ್ಯಾದೆಯು. ಪ್ರಮಾಣ:-

*"ಅದೃಷ್ಟಾಜ್ಜಾಯತೇ ಯತ್ನೋ ಯತ್ನಾತ್ಕರ್ಮಕರೋತ್ಯಯಂ"*

*"ಕರ್ಮಣಾಜ್ಜಾಯತೇಽದೃಷ್ಟಂ ಪ್ರವಾಹೇನಾದಿರೇಷಹಿ"* ಎಂತ ವಿಷ್ಣು ರಹಸ್ಯ.

ಸುಳಾದಿ:- ಹಾನಿ ವೃದ್ಧಿಗೆ ಕಾರಣ ಜ್ಞಾನಾಜ್ಞಾನಗಳಿಗೆ ಮಾಣದೆ ಸಾಧನಕ್ಕೆ ಬೆಂಬಲ ಪ್ರಬಲ" ಮಾಣದೆ ಅಂದರೆ ಬಿಡದೆ ಎಂದರ್ಥ. ಮುಂದೆ

*"ಮೇಣ್ ತ್ರಿವಿಧ ಪಾಪ ತ್ರಿವಿಧ ಪುಣ್ಯಗಳಯ್ಯ*
*ಗುಣಾನುಸಾರದಿಂದಾತಿದೇಕೋ"*

ಪ್ರಾಣನಿಗೆ ಮಾತ್ರ ಕರ್ಮದಿಂದಲ್ಲ ಪ್ರಧಾನ ಸಾಧನಕಾಣಲೋ ಬಲು ವಿಚಿತ್ರ. ಇದು ಅನಾದಿ ಕರ್ಮ ಸುಳಾದಿ. -

ಈಗ ಹೇಳಿದಂಥ ಅನಾದ್ಯವಿದ್ಯಾ ಕಾಮ ಕರ್ಮಾತ್ಮಕ ಲಿಂಗದೇಹದ ರೀತಿಯು ಬ್ರಹ್ಮಪದ ಯೋಗ್ಯವಾದಂಥಾ ಋಜು ಜೀವಗಳ ರಾಶಿಯನ್ನು ಬಿಟ್ಟು ಗರುಡ ಶೇಷ ಮೊದಲಾಗಿ ಅಶೇಷ ತ್ರಿವಿಧ ಜೀವ ರಾಶಿ ಗಣಗಳಿಗೂ ಈಗ ಹೇಳಿದ ಲಕ್ಷಣವೇ ಸರಿ. ಋಜು ಋಜುಪತ್ನೀ ಜೀವ ಗಣದ ಲಿಂಗದೇಹದಲ್ಲಿ ಹಿಂದಿನ ಅನಂತಾನಂತ ಬ್ರಹ್ಮ ಕಲ್ಪಗಳಿಂದಲೂ ಅನಾದ್ಯಜ್ಞಾನವೇ ಇಲ್ಲ.

*"ವಾಸುದೇವೋ ವಿರಿಂಚಸ್ಯ ಲಿಂಗದೇಹಂ ವ್ಯಚಾಲಯತ್ ತತಸ್ತ ಲಿಂಗದೇಹಸ್ಥ ತ್ರಿಗುಣೇಭ್ಯಸ್ತ್ರಿಬಿಂದವಃ"* ಇತ್ಯಾದಿ *"ಸಮುದ್ಧೃತ್ಯ ರಜೋ ಬಿಂದೂ ಶುದ್ಧಂ ಚಕ್ರೇ ಜಗದ್ಗುರುಃ"* ಎಂತಲೂ *"ತಮೋ ವೈಷಮ್ಯಕಲಿಲಂ"* ಇತ್ಯಾದಿ *ಸಮುದ್ಧೃತ್ಯ ಪೃಥಕ್ ಸ್ಥಾಪ್ಯಕಂ ಬಿಂದುಂ ಶುದ್ಧಮಾತನೋತ್"* ಎಂದು ಪ್ರಕಾಶ ಸಂಹಿತಾ ಋಜು ಪ್ರಕರಣ ಸುಳಾದಿ

*"ದಾನವಾರಿ ಭೀತಿ ಉಭಯ ಅಜ್ಞಾನ ಶೋಕಗಳು
ಭಾನು ಮಧ್ಯಗತಮವಾಗಿ ತೋರಿದಂತೆ ಮಾನವಂಗೆ
ಕಾಣಿಸುವುದು ನೋಡಲು ವಾಣಿಯರಸಗೆ ದೋಷಲೇಶವಿಲ್ಲ"*

ಎಂದು ಆದ್ದರಿಂದ ಅವರಿಗೆ ಅನ್ಯಥಾಜ್ಞಾನವಿಲ್ಲ ಕಾರ್ಯ ಜ್ಞಾನವೂ ಇಲ್ಲ. ಆದುದರಿಂದ ಅವರ ಅನಾದಿ ಕರ್ಮ ಪರಂಪರೆಯೂ ಶುಭರೂಪಗಳಾದುದರಿಂದ ಅವರು ಸೃಷ್ಟ್ಯನಂತರದಲ್ಲಿಯೂ ಮುಕ್ತಪ್ರಾಯರಾಗಿ ಸುಕರ್ಮಗಳನ್ನೇ ಮಾಡುವವರು. ಅವರು ಸೃಷ್ಟಿಗೆ ಪೂರ್ವ ಅನಂತಕಲ್ಪದಿಂದಲೂ ಸಾಮಾನ್ಯ ಭಗವದಪರೋಕ್ಷಿಗಳು. ಸ್ವಲ್ಪಾಕಾರದಿಂದ ಪ್ರತ್ಯಕ್ಷ ಭಗವದ್ದರ್ಶನವು ಕ್ಷಣವಾದರೂ ಮರೆಯಾಗದೆ ಏಕ ಪ್ರಕಾರ ಅನಾದಿ ಸಿದ್ಧವು. ಅತಏವ ಋಜುಗಳಂತ ಕರೆಸಿಕೊಳ್ಳುತ್ತಾರೆ. ಋಜು ಅಂದರೆ ಸರ್ವ ವಿಷಯದಲ್ಲಿಯೂ ಅವಕ್ರ.

**"ಯೋಗಸ್ಯವಕ್ರತಾನಾಮ ಕಾರ್ಮ್ಯೇನ ಹರಿ ಪೂಜನಂ"** ಎಂತ ಗರುಡ ಪುರಾಣ ಬ್ರಹ್ಮ ಕಾಂಡಾ

ಸಕಾಮಾರಾಧನ ಮಾಡತಕ್ಕ ಅಜ್ಞಾನವು ಅವರ ಅನಾದಿ ಲಿಂಗದಲ್ಲೇ ಇಲ್ಲ. ಆದ್ದರಿಂದ ಅವರು ಸಂಪೂರ್ಣ ಸ್ವಾಭಾವಿಕ ಭಕ್ತಿಯೋಗಿಗಳು.

*"ಭಾವರೂಪಾಜ್ಞಾನ ಶೂನ್ಯಾ ದೈತ್ಯಾವೇಶ ವಿವರ್ಜಿತಾಃ
ಅನಾದಿತೋಪ್ಯಾಪರೋಕ್ಷಯುಕ್ತಾ ರೂಪೇಷು ಹಿ ಕ್ವಚಿತ್"* ಎಂತ ಸತ್ತತ್ವರತ್ನಮಾಲಾ.

ಏತೇನ ಅವರಿಂದ ಹಿಂದಿನ ಅನಂತಾನಂತಾ ಕಲ್ಪಗಳಿಂದ ಮಾಡಲ್ಪಟ್ಟ ಅಪರಿಮಿತ ಅನಾದಿ ಕರ್ಮಗಳು ಅವರಿಂದ ಜ್ಞಾತವೇ ಹೊರ್ತು ಅಜ್ಞಾತವಲ್ಲ. ಅಜ್ಞಾನವೇ ಇಲ್ಲದ ಪ್ರಯುಕ್ತ ಅವರಿಂದ ತಿಳಿದೇ ನಡೆದು ಬಂದಿದೆ.

*"ಅನಭಿಮತ ಕರ್ಮವು ಪ್ರವಾಹದೊಳಗನಿಮಿಷಾದಿ ಸಮಸ್ತ ಚೇ
ತನ ಗಣವಿಹದುತತ್ಫಲಗಳನುಣದೆ ಸೃಷ್ಟಿಸಿದ ಮುನ್ನ
ವನಿತೆಯಿಂದೊಡಗೂಡಿ ನಾರಾಯಣನು ಕ್ರೀಡಿಸೆ- ತಮ್ಮತಮ್ಮಯ
ಅನುಚಿತೋಚಿತ ಕರ್ಮ ಫಲಗಳನುಣುತ್"*. ಹರಿಕಥಾಮೃತಸಾರವು

ಈ ಅನಭಿಮತ ಕರ್ಮಗಳು ರುದ್ರಾದಿ ಸರ್ವ ಜೀವರ ಅನಾದಿ ಕರ್ಮ ವಿಷಯ ಎಂತ ಅರ್ಥ. ಅನಿಮಿಷಾದಿ ಸಮಸ್ತ ಚೇತನ ಗಣ ಎಂದರೆ ಸೃಷ್ಟಿಗೆಪೂರ್ವ ಅನಾದಿ ಲಿಂಗ ದೇಹ ಕರ್ಮ ಪರಂಪರೆಯಲ್ಲಿ ಅಧಮ ಜೀವನ ಕರ್ಮಾಭಿಮಾನಿಗಳ ದೇವತೆಗಳು ಎಂತ ಅದರಲ್ಲಿ ಉತ್ತಮ ಜೀವರನ್ನು ಕಲೆಸಿದ್ದಾಗೆ ಒಬ್ಬ ಜೀವನೇಅವನವನು ತನ್ನ ಮಟ್ಟಿಗೆ ತಾನಾಗಿ ಶ್ರೀ ಹರಿ ಲಕ್ಶ್ಮೀ ಈ ಇಬ್ಬರಿಂದ ಮಾತ್ರ ಕೂಡಿಕೊಂಡು ಪರಂಪರೆ ಕರ್ಮಮಾಡುತ್ತಾಇದ್ದದ್ದರಿಂದ ರುದ್ರಾದಿ ಜೀವ ಗಣದ ಮಟ್ಟಿಗೆ ರುದ್ರ ಜೀವ ಗಣ, ಇಂದ್ರ ಜೀವ ಗಣದ ಮಟ್ಟಿಗೆ ಇಂದ್ರ ಜೀವ ಗಣ . ನಾರದ ಗಣ, ವಸಿಷ್ಟ ಗಣ ಈ ಪ್ರಕಾರವು. "ಆನಂತ್ಯಮೇವಗಣಶೋಽಸ್ತಿ" ಎಂತ ತಾತ್ಪರ್ಯ ನಿರ್ಣಯ. ಇದರಿಂದ ಕಲ್ಯಂತ ಸಮಸ್ತ ಗಣ ಎಂತ ಅಭಿಪ್ರಾಯವು. "ವನಿತೆಯಿಂದಒಡಗೂಡಿ ಕ್ರೀಡಿಸೆ" ಎಂದರೆ ಆ ಅನಾದಿ ಕರ್ಮವು ಬೀಜರೂಪವಾದುದರಿಂದ ಆ ಬೀಜವೇ ವೃಕ್ಷವಾಗಿಸುಖ ದುಃಖ ಫಲಗಳನ್ನು ಕೊಡಬೇಕಾದುದರಿಂದ ಬೆಳಸಿಗೆ ಭೂಮಿ ಹೇಗೆ ಅಧಿಕರಣವೋ ಹಾಗೆ ಕರ್ಮ ಫಲ ಭೊಗಕ್ಕೆ ಸ್ಥೂಲ ದೇಹ ಪರಂಪರೆಯನ್ನು ಸೃಷ್ಟ್ಯನಂತರ ಶ್ರೀ ಹರಿಯು ಕೊಡುತ್ತನಾದುದರಿಂದ ಈ ಸರ್ವ ಜೀವರ ಸ್ಥೂಲ ಶರೀರಗಳಲ್ಲೂ ನವ ಕೋಟಿ ತತ್ವೇಶ್ವರಿಂದ ಸಹಿತ ತತ್ವಾಭಿಮಾನಿ ಕಲ್ಯಾದಿಗಳ ಸಹಿತ ಕ್ರೀಡಿಸೆ ಎಂದರ್ಥವು. ಈ ಸ್ಥೂಲ ಶರೀರವೇ ಸುಖ ದುಃಖ ಭೊಗಕ್ಕೂ ನಿಮಿತ್ತಾಧಿಕರಣ. ಮುಂದೆ ಅನಂತಾನಂತ ಜನ್ಮಗಳನ್ನು ಅನುಭವ ಕೊಡುವಂಥಾ ಅನಂತಾನಂತ ಪಾಪ ಪುಣ್ಯ ಕರ್ಮಗಳನ್ನು ಮಾಡಿಸುವುದಕ್ಕೂ ಈ ದೇಹವೇ ನಿಮಿತ್ತವಾಗಿದೆ. ಈ ಜೀವನು ಒಂದೊಂದು ಕ್ಷಣಕ್ಕೂ ಅಪರಿಮಿತ ಜನ್ಮಾದಿ ಸಾಧಕ ಕರ್ಮವನ್ನು ಮಾಡುತ್ತಾನೆ.

*"ದಶಾವರಾಣಾಂ ದೇಹಾನಂ ಕಾರಣಾನಿ ಕರೋತ್ಯಯಂ ಮುನಿಃ ಸುಕರ್ಮ ಶಿಲೋಽಪಿ"* ಎಂತ ಸೂತ್ರ ಭಾಷ್ಯವು.

*"ಸ್ತ್ರೀವಾಪ್ಯನೂನ ದಶಕಂ"* ಎಂತ ಗೀತಾ ತಾತ್ಪರ್ಯ ವಾಕ್ಯವು.

ಆದುದರಿಂದ ಸಾಧಾರಣ ಜೀವನು ಕ್ಷಣ ಕ್ಷಣದಲ್ಲಿಯೂ ಅಪಾರಕರ್ಮಗಳನ್ನು ಮಾಡುತ್ತಾನೆ. ಅದರೊಳಗಿನ ಕರ್ಮ ಅನುಭವಿಸುವುದಕ್ಕೆ ನೂರಾರು ಜನ್ಮ

ಎತ್ತಿದರೂ ಆ ಒಂದು ದೇಹದಲ್ಲೂ ಪ್ರತಿಕ್ಷಣವು ಬಹು ಜನ್ಮಾಪಾದಕ ಕರ್ಮಗಳನ್ನು ಮಾಡದೇ ಇರುವುದಿಲ್ಲ. ಕರ್ಮಗಳನ್ನು ಅನುಭವಿಸಿ ಕೊನೆ ಕಾಣತಕ್ಕದ್ದು ಕಲ್ಪಕೋಟಿ ಕಾಲಕ್ಕೂ ಇಲ್ಲ. ಸಂಪಾದಿಸುವುದು ಸಮುದ್ರೋದಕದ ತೆರೆಗಳ ಪರಂಪರೆಯ ಹಾಗೆ ಅನುಭವಿಸುವುದು ಒಂದು ಮಿಳ್ಳೀ ಪಂಚಪಾತ್ರೆ ನೀರಿನ ಪರಂಪರೆಯುಂತೆ. ಆ ಮಿಳ್ಳೀ ನೀರಿನ ಅನುಭವವೂ ಕೂಡ ಮಹಾಸಮುದ್ರದ ಪರಂಪರೆಯನ್ನು ಹುಟ್ಟಿಸುವುದಾದ ಪ್ರಯುಕ್ತ ಕರ್ಮಗಳನ್ನನುಭವಿಸಿ ಕೊನೆ ಗಾಣತಕ್ಕದ್ದು ಕೋಟಿಕಲ್ಪಕ್ಕೂ ಇಲ್ಲದೇ ಹೋಯಿತು. ಎನ್ನುವುದೇ ಸಿದ್ಧಾಂತವು. ಪ್ರಮಾಣವು:-

*ಭೋಗಾದಿನ್ನೈವ ನೋ ಕರ್ತುಂ ಶಕ್ಯೋವೈ ಕರ್ಮಣಾ ಕ್ಷಯಃ*
*ಯತ ಏಕ ಶರೀರಸ್ಥಃ ಶರೀರಿಣಂ ಸಹಸ್ರಶಃ* ॥೩॥

*ಲಕ್ಷಶಃ ಕೋಟಿಶಶ್ಚಾಪಿ ಕಾರಣಾನಿ ಕರೋತ್ಯಯಂ।*
*ಯೇಹಿ ಜೀವಾಃ ಶರೀರಸ್ಥಾಃ ಯೋಗ್ಯಾ ವಿಧಿ ನಿಷೇಧಯೋಃ* ॥೪॥

*ಬ್ರಹ್ಮವಿಟ್ ಕ್ಷತ್ರಿಯಾದ್ಯಾಶ್ಚ ಜ್ಞಾನಿನಃ ಪಾಪ ಭೀರವಃ।*
*ತೇಪಿ ಕುರ್ವಂತ್ಯಹರಹರ್ನಿಜ ಬಂಧ ಕರಣೆ ವೈ* ॥೫॥

*ಕಾರಣಾನಿಹ ಕರ್ಮಾಣಿ ದೇಹಾನಂ ದಶಕಸ್ಯ ಹಿ।*
*ವಕ್ತವ್ಯಂ ಕಿಮು ಜೀವಾನಂ ಕಾಮಾದಿಸ್ವೈರಚಾರಿಣಾಂ* ॥೬॥

*ಪ್ರಾಯೋ ವಿಕರ್ಮನಿಷ್ಠಾಹಿ ಚೇತನಾಃ ಸಾತ್ವಿಕಾ ಅಪಿ।।*
*ರಾಜಸಾಸ್ತಾಮಸಾಸ್ತತ್ರ ವಿಕರ್ಮಸ್ಥಾ ಇದಂ ಕಿಮು* ॥೭॥

ಇತಿ ಶ್ರೀ ವಿಷ್ಣು ರಹಸ್ಯೇ, ಅಧ್ಯಾಯ ೧೪.

ಶ್ವಾನ ಸೂಕರಾದಿ ನಾನಾ ಯೋನಿಗಳು ಬಂದರೂ ಮನುಷ್ಯ ಯೋನಿ ಹೊರತು ಮಿಕ್ಕ ಯೋನಿಗಳು ವಿದಿನಿಷೇಧ ಕರ್ಮಬದ್ಧವಲ್ಲ. ನರಕ ಯಾತನೆ ಹ್ಯಾಗೆ ಅನಿಭವಿಸಿ ತೀರ ಬೇಕೋ ಹಾಗೇವೇ ನಾನಾ ಯೋನಿಗಳಲ್ಲೂ ಅನುಭವಿಸತೀರ ಬೇಕು. ಆ ಯೋನಿಗಳಿಂದ ಕರ್ಮ ಸಂಪಾದನೆ ಇಲ್ಲ. ಮನುಷ್ಯ ಯೋನಿ ಮಾತ್ರಕ್ಕೆ ಯಥೋಚಿತವಾಗಿ ಶ್ರೀ ನಾರಾಯಣನ ಸ್ಮರಣೆ ಅವಕಾಶದ ಜನ್ಮವಾದುದರಿಂದ ಬ್ರಹ್ಮ ಕ್ಷತ್ರಿಯ ವೈಶ್ಯ ಈ ಮೂರು ಜಾತಿಗಳು

ವಿಧಿನಿಷೇಧ ಕರ್ಮಕ್ಕೆ ಪಾತ್ರವಾದ ಜಾತಿಗಳು– ಶ್ವಪಚರೇ ಕಡೆಯಾಗಿ ಸಕಲ ಜಾತಿಗೂ ಭಗವನ್ನಾಮೋಚ್ಚಾರಣೆಯೇ ಮುಖ್ಯ ಧರ್ಮವಾದುದರಿಂದ ಮನುಷ್ಯ ಯೋನಿ ಮಾತ್ರಕ್ಕೂ ಒಂದೊಂದು ಕ್ಷಣಕ್ಕೂ ಅಪರಿಮಿತ ಜನ್ಮ ಸಂಪಾದಕ ಕರ್ಮಗಳು ಬಿಟ್ಟದ್ದಿಲ್ಲವು.

*ಜೀವಾ ಮಾನೋಹಿ ಜೀವೋಽಯಂ ಪೂರ್ವೋಕ್ತೇನ ಪ್ರಕಾರತಃ।*
*ಯಾವತ್ಸ್ವದೇಹ ಪಾತಸ್ಸ್ಯಾತ್ತಾವತ್ಕರ್ಮ ಮಹಾಚಲಾನ್ ॥೮॥*

*ಕರೋತಿ ಏಷಃ ಭೋಗಾರ್ಥೋಽ ಬಹುಜನ್ಮಾನ್ಯವಾಪ್ನುಯಾತ್।*
*ಸ್ಥಾವರಂ ಜಂಗಮಂ ಸರ್ವಂ ಚಂದ್ರ(ಯಾವಚ್ಚಂದ್ರ) ಸೂರ್ಯಾದಿಕಂ ತಥಾ ॥೯॥* ಇತಿ ವಿಷ್ಣು ರಹಸ್ಯೇ, ಅಧ್ಯಾಯ ೧೪

ಸೂರ್ಯ ಚಂದ್ರಾದಿಗಳು ಕೊನೆಗೊಂಡು ಬ್ರಹ್ಮ ಕಲ್ಪಗಳೇ ಹೊಂದಿದಾಗ್ಯೂ ಕರ್ಮ ಶೇಷವೇ ಬಲವಾಗಿನಿಲ್ಲುತ್ತದೆ ಎಂತ ಭಾವ.

*"ಯೇನ ಬದ್ಧೋಽ ವಿಚಿತ್ರಾಣಿ ತತ್ತತ್ಕರ್ಮಾನುಸಾರಶಃ।*
*ತೃಣ ಗುಲ್ಮ ಲತಾದೀನಿ ಶರೀರಾಣಿ ಸಮಶ್ನುತೇ॥*
*ಶೀತ ವಾತಕಫಾ ವರ್ಷ ಭೇದ ಭೇಧ ವಿಮೋಹಜಂ॥*
*ಅನುಭೂಯ ಸದಾ ದುಃಖಂ ಜಂಗಮೇಷು ಪ್ರಜಾಯತೇ॥*
*ಕ್ರಿಮಿ ಕೀಟ ಮೃಗ ವ್ಯಾಳ ವೃಕ ವ್ಯಾಘ್ರಾದಿ ಜನ್ಮನಾಂ।*
*ಯಾದಸಾಂಚ ಶರೀರಾಣಿ ಗೋ ಅಶ್ವಸ್ಯ ಮಹಿಷಾದಿನಃ।*
*ಭುಕ್ತ್ವಾ ಕ್ರಮೇಣ ಮಾನುಷ್ಯಂ ಪ್ರಾಪ್ಯ ಪಾರ್ವತಿಕೋಭವೇತ್॥*
*ವಸಂತೇ ಯೇಹಿ ಪರ್ಣಾನಿ ಭಕ್ಷಂತಿ ಪಶು ಮಾಂಸಕಂ ।*
*ಕಂದ ಮೂಲ ಫಲಾದೀನಿ ಮುಕ್ತ್ವಾ ವಿಧಿನಿಷೇಧತಃ॥*
*ಔಪಸ್ಥ್ಯ ಜೈಹ್ವಾ ಮಾತ್ರಜ್ಞಾಃ ವಿಶೇಷ ಜ್ಞಾನವರ್ಜಿತಾಃ।*
*ಶೀತ ವಾತ ತಪಸಹಾಃ ಪಶು ಪ್ರಾಯಾಶು ದೇಹಿನಃ॥*
*ಕಿರಾತ ಮ್ಲೇಂಛ ಶಬರ ಪುಳಿಂದ ಬರ್ಬರಾದಯ॥*
*ದಸ್ಯವಃ ಪಾಪ ನಿರತಾಃ ಪಾರ್ವತೇಯಾಹಿ ತೇಽಖಿಲಾಃ॥*
*ತತಃ ಕಾಲೇನೇತದ್ಭೋಗಾ ಜಾಯಂತೇ ಶುಭ ಯೋನಿಷು।*
*ವಿಧೇರ್ವಾಪಿ ನಿಷೇಧಸ್ಯ ವಿಷಯಾ ಬ್ರಾಹ್ಮಣಾದಯಃ॥*

*ತತ್ರಾಪಿ ಕ್ರಮತಃ ಪ್ರಾಪ್ಯ ತ್ರೈವರ್ಣ್ಯಂ ಸಂಸೃತಾ ಭ್ರಮನ್।*
*ಯದಿ ಕುರ್ಯಾದ್ದುರಾಚಾರಂ ತತೋ ನರಕ ಮಾಪ್ನುಯಾತ್॥*
*ಭುಕ್ತ್ವಾ ಕರ್ಮಾರ್ಜಿತಂ ಲೋಕಂ ನಿರಯಾನ್ ಬಹು ವತ್ಸರಂ।*
*ಕರ್ಮ ಶೇಷೇಣ ಭೂಯಃ ಸ್ಥಾವರಾದಿಷು ಜಾಯತೇ॥*
*ಪೂರ್ವೋಕ್ತೇನ ಕರ್ಮಣಾಸೌ ಪ್ರಾಪ್ಯ ತ್ರೈವರ್ಣಾದಿಕಂ।*
*ಭ್ರಮನ್ನಾಸ್ತೇ ಸಸಂಪಾದೇ ತತ್ರ ಮೋಕ್ಷಕಥಾ ಕುತಃ॥"*

ಹೀಗೆ ವಿಷ್ಣು ರಹಸ್ಯ ೧೪ನೇ ಅಧ್ಯಾಯ (ಶ್ಲೋಕ ೧೦–೨೦)

ಕರ್ಮಾನುಸಾರವಾಗಿ ತೃಣ ಗುಲ್ಮ ಲತಾ ವೃಕ್ಷಾದಿ ಜನ್ಮಗಳಿಂದ ಬಹು ಕಾಲ ಮಂಜು ಘಾಳಿ ಬೀಸಲು ಮನುಷ್ಯರಿಂದ ಛೇದ ಭೇದಾದಿ ಯಾತನೆ ಅನುಭವಿಸಿ ಕ್ರಮೇಣ ಸ್ಥಾವರ ಜನ್ಮ ಬಿಟ್ಟು ಜಂಗಮ ಜನ್ಮ ಕ್ರಿಮಿ ಕೀಟ ಮೃಗ ಸರ್ಪ ತೋಳ ವ್ಯಾಘ್ರ ಅನಂತರ ಜಲಚರ ಅನಂತರಗೋವು ಗಜ ತುರಗಾದಿ ಕ್ರಮದಿಂದ ಯೋನಿಗಳ ಭೋಗಿಸಿ ಮನುಷ್ಯ ಯೋನಿಗಳು ಬಂದು ಗೋಮಾಂಸ ಭಕ್ಷಣಾದಿ ಮಹಾ ಪಾಪ ಶೀಲರಾಗಿ ಪಾರ್ವತೇಯಕರವಾಗಿದ್ದು ಕಿರಾತ ಮ್ಲೇಂಛಾದಿ ಜನ್ಮಾನುಭವಾನಂತರ ಬ್ರಾಹ್ಮಣಾದಿ ಶುಭ ಯೋನಿಗಳು ಬಂದು ದುರಾಚಾರದಿಂದ ನರಕಕ್ಕೆ ಬಿದ್ದು ಬಹು ಕಾಲ ಯಾತನಾನಂತರ ಪುನಶ್ಚ ಯಥಾ ಕ್ರಮದಿಂದ ತೃಣಾದಿ ಬ್ರಾಹ್ಮಣಾಂತ ೮೪ ಲಕ್ಷ ಯೋನಿಗಳಲ್ಲಿ ಬರಬೇಕು. ಇಷ್ಟರ ಮಧ್ಯೆ ಪುಣ್ಯಕರ್ಮಗಳಿಂದಲೂ ಸ್ವರ್ಗ ಉಂಟು. ಇದರಲ್ಲಿ ವಿವೇಕ ಸುಕರ್ಮಕ್ಕೆ ಸುಖಾನುಭವ ಸ್ವರ್ಗದೊಳಗೆ ಸರಿ. ದುಷ್ಕರ್ಮಕ್ಕೆ ದುಃಖಾನುಭವ ನರಕದೊಳಗೆ ಸರಿ. ಭೂಲೋಕದಲ್ಲಿಸುಖ ದುಃಖ ಮಿಶ್ರಾನುಭವ ಮಾತ್ರ ಕರ್ಮಫಲವಲ್ಲವೆ ಎಂದರೆ ಕರ್ಮ ಫಲವೇ ಹೌದು. ಆದಾಗ್ಯೂ "ಶೇಷವಾನೇವಾಯಾತಿ" ಎಂದು ಭಾಷ್ಯ ವಚನ ವಿರುವುದರಿಂದ ಒಂದೊಂದು ಕರ್ಮಾನುಭವತೀರೋ ಕಾಲ ಬರಲಾಗಿ ಕಿಂಚಿತ್ಪುಣ್ಯ ಶೇಷವಿರುವಾಗ್ಯೆ ಸ್ವರ್ಗದಿಂದಭೂಮಿಗೆ ನೂಕುತ್ತಾರೆ. ಏತೇನ ಸ್ವರ್ಗದಾಗೆ ಪುಣ್ಯಾನುಭವ ಮುಗಿಯೋದಿಲ್ಲ. ನರಕದಲ್ಲಿಯೂ ಪಾಪಾನುಭವ ಮುಗಿಯುವುದಿಲ್ಲ. ಈ ಎರಡೂ ಕಡೆಯಿಂದ ಬರುವಂತಹವರಿಗೆ ಕಿಂಚಿತ್ ಶೇಷ ಉಳಿದು ಕೊಳ್ಳುವುದು. "ಕರ್ಮ ಶೇಷೇಣ ಮನುಷ್ಯಂ" ಎಂತ ಬಹು ಪ್ರಮಾಣ ಸಿದ್ಧವು. ಭೂಮಿ ಒಳಗೆದೇಹ ಧರಿಸಿದ ಹೊರ್ತು ಕರ್ಮ ಶೇಷಾನುಭವ ಮುಗಿಯುವುದಿಲ್ಲ.

***"ಆರಬ್ಧ ಕರ್ಮನಾಶೋ ಹಿ ಪರೇ ದೇಹೋಪ್ಯಪಾಹಿನಃ।"*** ಎಂತ ತಾತ್ಪರ್ಯ ನಿರ್ಣಯ ವಾಕ್ಯವು.

ಆದುದರಿಂದ ದೇಹ ಕ್ಷಯ ಕಾಲಕ್ಕೆ ಆ ಕರ್ಮ ಶೇಷವು ಕ್ಷಯವಾಗುತ್ತದೆ. ಪುಣ್ಯ ಪಾಪ ಕರ್ಮಗಳ ಶೇಷವು ಸ್ವರ್ಗ ನರಕಗಳಲ್ಲಿಯೇ ಕಾಣ ಬಾರದು ಎಂದರೆ ಪುಣ್ಯ ಕರ್ಮ ಸುಖ ಜನಕ ಅದರ ಶೇಷ ಸುಖ ಮಿಶ್ರ ದುಃಖ ಜನಕ. ಆದ್ದರಿಂದ ಸ್ವರ್ಗ ಸುಖವನ್ನು ಅನುಭವಿಸಿ ಭೂಮಿಗೆ ಬಂದ ಜೀವರು ರಾಜ ಪದವಿಯೇ ಮೊದಲಾದ ಸೌಖ್ಯವನ್ನು ಗರ್ಭಯಾತನೆ ರೋಗಾದಿಗಳನ್ನು ಅನುಭವಿಸುತ್ತಾರೆ. ನರಕದಿಂದ ಭೂಮಿಗೆ ಬಂದವರು ಶ್ವಾನ ಸೂಕರ ಗರ್ದಭಾದಿ ಯೋನಿಗಳಿಗೆ ಬಂದು ಪಾಪರೂಪದಿಂದಾಗ್ಯೂ ನಿದ್ರಾ ಸುಖ ಆಹಾರ ಉದಕಪಾನ ಸುಖವನ್ನು ಅನುಭವಿಸಿ ಕರ್ಮ ಶೇಷಾನುಭವ ಕೊನೆಗಾಣಿಸಿ ಮತ್ತೊಂದು ಕರ್ಮಾನುಭವಕ್ಕೆ ಉಪಕ್ರಮಿಸುತ್ತಾರೆ. ಅತಏವ ಸ್ವರ್ಗ ಸುಖ ನಶ್ವರ ನಿಃಸಾರ ಎಂದು ತಿಳಿಯಬೇಕು. ಈ ಕರ್ಮರಾಶಿಗಳು ಹೇಗೆ ಕೊನೆಗಾಣಬೇಕೆಂದರೆ, "ಯಾವನ್ನ ಮದನುಗ್ರಹಃ" ಎಂತ (ಅಧ್ಯಾಯ ೧೪-೨೭) ವಿಷ್ಣುರಹಸ್ಯೋಕ್ತಿಯು. ಅದರ ಅರ್ಥ:- ವರಾಹ ದೇವರು" ಎಲೈ ಬ್ರಹ್ಮನೇ! ನಾನಾಗಿ ಭಕ್ತನನ್ನು ನೋಡಿ ಕೇವಲ ಕಷ್ಟಪಟ್ಟವನು ಎಂತ ತೀಳಿದು ಅವನ ಸ್ವರೂಪಸಿದ್ಧ ಭಕ್ತಿಗೆ ಮೆಲ್ಲಮೆಲ್ಲಗೆ ಅಭಿವೃದ್ಧಿ ಮಾರ್ಗ ತೋರಿಸಿ ನನ್ನ ಚರಣ ಕಮಲದಲ್ಲಿ ಅವನ ಮನಸ್ಸನ್ನು ಯಾವಾಗ ಎರಕ ಮಾಡುತ್ತಾನೋ ಅದೇ ನನ್ನ ಅನುಗ್ರಹವೆಂದು ತಿಳಿಯುವವನಾಗು" ಎಂದು ಹೇಳಿರುವನು. ಯಮೈವೇಷ ವೃಣತೇ ತೇನ ಲಭ್ಯಃ"ಇತ್ಯಾದಿ ಶೃತಿ ಆದುದರಿಂದ ಭಗವದನುಗ್ರಹ ಹೊರತಾಗಿ ಬ್ರಹ್ಮಾದಿಗಳೂ ತಂತಮ್ಮ ಕರ್ಮಗಳ ದೆಶೆಯಿಂದ ತಾವು ಗೆದ್ದು ಕಡೆಹಾಯಿಸಲಾರರು. ಈ ಕರ್ಮಗಳು ಬ್ರಹ್ಮಾದಿಗಳಿಗೂ ಆತ್ಯಾಶ್ಚರ್ಯಕರವಾಗಿವೆ. ಅತಿ ನೀಚ ದೈತ್ಯರಿಗೂ ಅತ್ಯುತ್ತಮ ಪದವಿಗಳನ್ನುಕೊಡೋಣ ಅತ್ಯುತ್ತಮರಾದ ರುದ್ರಾದಿ ದೇವತೆಗಳಿಗೂ ಅತ್ಯಂತ ದುಖಗಳನ್ನು ಕೊಡೋಣ ಹೀಗೆ

***"ಉತ್ತಮಾಧಮರೆಂದು ನೋಡದಲೇ ಅಸತ್ಕರ್ಮ ರೂಪದಿಗಂಟನೇಹಾರಿ"*** ಎಂತ ಅನಾದಿ ಕರ್ಮಸುಳಾದಿಯು:-

ಮಹಾಭಯಂಕರವಾಗಿದೆ ದೇಹೇಂದ್ರಿಯ ಸುಖ ದುಃಖಗಳೆಂಬ ಮಹಾಂಧಕಾರದಲಿ ಮುಳುಗಿರೋಣವೇ ಈ ಜೀವರನ್ನು ಸಂಸಾರಬದ್ಧರೆಂದು ಹೇಳಿಸಿಕೊಳ್ಳುವುದು. ನಶ್ವರವಾದ ಸ್ವರ್ಗ ಸುಖವನ್ನು ಬಹು ಕಾಲ ಅನುಭವಿಸಿದರೂ ಹರಿಭಕ್ತನಿಗೆ ಹೇಗೆ ತೋರುತ್ತದೆಂದರೆ ಅಪರಾಧಿ ನರನಿಗೆ ಸಂಹಾರಕ್ಕೆ ರಾಜನ ಆಜ್ಞೆಯು ಆದ ತರುವಾಯ ಸಂಹಾರಕ್ಕೆ ಪೂರ್ವಕ್ಷಣ ಕ್ಷೀರಾನ್ನ ಭೋಜನದಿಂದ ಎಷ್ಟು ಸುಖ ಮನಸ್ಸಿಗೆ ಹಚ್ಚಿಕೊಂಡಾನು. ಆ ಪ್ರಕಾರವೇ ಸ್ವರ್ಗ ಸುಖವನ್ನೇ ತೋರಿಕೊಂಡು ಈಗಿನ ಸ್ಥೂಲ ದೇಹೇಂದ್ರಿಯ ಭೊಗ ಸಾಧನ ವಿಷಯಗಳನ್ನು ಹಾಗೆ ಚಿಂತಿಸುವುದು ಏನಾಶ್ಚರ್ಯವು? ಮಾರಿಗೆ ಆಹುತಿಯಾಗಿ ಸಿದ್ಧವಾದ ಕುರಿಯು ತೋರಣದ ಮಾವಿನ ಸೊಪ್ಪನ್ನು ಮೆಲುವಂತೆ ತೋರುತಿದೆ ಎನಗೆ'' ಎಂತ ರಾಜರ ವಚನವು-

ಇತಿ ಸಂಸಾರ ಧರ್ಮ ನಿರೂಪಣ ಪ್ರಕರಣ ಸಂಪೂರ್ಣಂ- (೨)

# ಸಂಸಾರ ಬಂಧನ ಪ್ರಕರಣ

ಈ ಸಂಸಾರದಿಂದ ಜೀವನು ಹೇಗೆ ಬದ್ಧನಾಗಿರುತ್ತಾನೆ ಎಂದರೆ ಬಂಧನ ಪ್ರಕರಣ ನಿರೂಪಣ ಮೂರನೆಯದು ಪ್ರಾರಂಭವು.

ಜೀವರಿಗೆ ಅನಾದಿ ಸಿದ್ಧ ಲಿಂಗದೇಹವೇ ಬಾಧಕವಾದ ಪ್ರಯುಕ್ತ ಸಂಸಾರ ಎಂತ ಹೆಸರು. ಜೀವಂ ಸಮ್ಯಗನುಸರತೀತಿ ಸಂಸಾರೋ ಲಿಂಗದೇಹಃ'' ಎಂತ ವೈಶೇಷಾಧಿಕರಣ ಸುಧೆಯಲ್ಲಿ ಉಕ್ತರೀತಿಯಿಂದ, ಹಿಂದಿನ ಅನಂತಾನಂತ ಬ್ರಹ್ಮಕಲ್ಪಗಳಿಂದಲೂ ಜೀವನನ್ನು ಅನುಸರಿಸಿ ಬಂದಿದೆ. ಆದುದರಿಂದ ಲಿಂಗಶರೀರವೇ ಸಂಸಾರ ಎಂದು ಕರೆಸಿಕೊಳ್ಳುತ್ತದೆ.

''ಭೂತ ಬಂದಸ್ತು ಸಂಸಾರೋ ಮುಕ್ತಿಸ್ತೇಭ್ಯೋ ವಿಮೋಚನಂ'' ಎಂತ ಭಾಷ್ಯೋಕ್ತಿಯು.

ಕಾರ್ಯ ರೂಪ ಸಂಸಾರವು ಆದಾಗ್ಯೂ ಜೀವನು ಸಚ್ಚಿದಾನಂದಾತ್ಮಕವಾದುದರಿಂದ ಶರೀರದ ಮೇಲೆ ವಸ್ತ್ರಪ್ರಾಯವಾಗಿ ಇರುವುದು. ಆ ವಸ್ತ್ರಕ್ಕೆ ಭೇದ ಭೇದವಾದಾಗ್ಯೂ ಶರೀರಕ್ಕೆ ನೋವು ಉಂಟಾಗುವುದಿಲ್ಲ. ಹೀಗೆ ಜೀವನಿಗೆ ಸಂಸಾರವು ವಸ್ತ್ರಪ್ರಾಯವಾಗಿದೆ. ಇದು ಜೀವರಿಗೆ ಹೇಗೆ ಬಾಧಕವಾಗುವುದು? ಎಂದರೆ ಅದರ ರೀತಿಯು ಹೇಳಲ್ಪಡುವುದು.

ಸುಳಾದಿ:-

*"ಜೀವಕ್ಕೆ ಆವರಣ ಲಿಂಗಶರೀರವು ಆವಾವ ಕಾಲಕ್ಕೂ ಇದ್ದದ್ದೇಸರಿ। ಅದರ ಸೋವಿದ್ದೆಲ್ಲವೋ ಭವಿಷ್ಯೋತ್ತರದಲ್ಲಿ ತಾ ವ್ಯವಧಾನದಲ್ಲಿ ತಗಲಿಸೇರಿಪ್ಪುದು."*

ಅಂದರೆ ಜೀವರನ್ನು ಸೃಷ್ಟಿಗೆ ತರದೆ ಇರುವ ತನಕ ಆ ಲಿಂಗದೇಹದ ಸುಖಾನುಭವ ದುಃಖಾನುಭವ ಎರಡೂ ಜೀವಗೆ ಇಲ್ಲ. ವ್ಯವಧಾನದಲ್ಲಿ ದೇವರು ತಗಲಿಸುತ್ತಾನೆ. ಎಂದರೆ ಅನಾದಿ ನಿದ್ರೆ ಒಳಗೆ ಬಿದ್ದಿದ್ದ ಜೀವರಾಶಿಗಳಲ್ಲಿ ಒಂದು ರುದ್ರ ಪದಯೋಗ್ಯ. ಒಂದು ರುದ್ರ ಪದಯೋಗ್ಯ ರಾಶಿ ಒಂದು ಗುಂಪಿನಲ್ಲಿ ಒಂದು ಜೀವನನ್ನು ಸೃಷ್ಟಿಗೆ ತಂದು ರುದ್ರನನ್ನು ಮಾಡಿ ಮುಂದಿನ ಮುಂದಿನ ಕಲ್ಪಕ್ಕೆ ತರುವ ರುದ್ರ ಜೀವನನ್ನು ಅದರ ಮುಂದಿನ ಕಲ್ಪದ ರುದ್ರನನು ಕ್ಲಿಪ್ತ ಮಾಡಿಕೊಂಡಿದ್ದಾನೋ, ಶ್ರೀ ಹರಿಯು. ಇಲ್ಲವೋ ಎಂದರೆ ತೆಗಿಯುವ ಜೀವನ ಕ್ಲಿಪ್ತವಿಲ್ಲ. ಅದರಲ್ಲಿ ಅವನ ಇಚ್ಛೆಯೇ ನಿಯಾಮಕವು. ಹಾಗೆ ಸಕಲ ಸೃಜ್ಯ ಗಣದಲ್ಲಿಯೂ ಇದೇ ನಿಯಮವು. ವಿಶೇಷವೇನೆಂದರೆ ನೂತನವಾಗಿ ಸೃಷ್ಟಿಗೆ ಬರುವ ಬ್ರಹ್ಮ ಜೀವರ ಸಂಗಡಲೇ ಆದೇ ಜೀವಗೆ ಬ್ರಹ್ಮ ಪಟ್ಟ ನೂರು ಕಲ್ಪ ಆತನ ಸಂಗಡ ವಿರಜಾ ನದಿ ಸ್ನಾನ ಮಾಡುವ ದೇವತೆಗಳಿಗೂ ನೂತನ ಸೃಷ್ಟಿಯು ಕೂಡ ಇದೇ ಬ್ರಹ್ಮನ ಸಂಗಡಲೇ ಆಗಿ ಆ ಬ್ರಹ್ಮದೇವರು ಮುಕ್ತರಾಗುವುದರ ಒಳಗೆ ತೃಣ ವೃಕ್ಷ ಗುಲ್ಮಗಳಲಿ ಬಹು ಬ್ರಹ್ಮ ಕಲ್ಪ ಅನುಭವಿಸಿ ಕೊನೆಯ ಭಾಗಕ್ಕೆ ಕೊನೇ ಭಾಗ ತಂತಮ್ಮ ಸಾಧನ ಬ್ರಹ್ಮ ಕಲ್ಪಗಳಲ್ಲಿ ಸಾಧನ ಜನ್ಮಗಳು ಬರುತ್ತವೆ ಎಂದೂ ಪುರಂದರ ದಾಸರು "ಎಂದಿಗೆ ಧನ್ಯ ನಾನು" ಎನ್ನುವ ನಾಮದಲ್ಲಿ ಸ್ಪಷ್ಟವಾಗಿ ಹೇಳಿದ್ದಾರೆ. ಸುಳಾದಿ ಮುಂದಿನ ಮಾತು.

ಆ ವೇಳೆ ಜ್ಞಾನೇಚ್ಛಾ ಪ್ರಯತ್ನ ಜೀವಕೆ ಸ್ವರೂಪಭೂತವಾದರೂ ಸ್ವಭಾವಾಚರಣೆ ಮಾಡದೆ ಸುಮ್ಮನಿದ್ದೇನೋ

ಅಂದರೆ ಅನಾದಿ ಅಜ್ಞಾನ ಆವೃತವಾಗಿ ಸ್ವಭಾವ ಯೋಗ್ಯ ಸಾಧನೆಯಂತೆ ಇಲ್ಲದೆ ಸುಮ್ಮಗಿತ್ತು ಎಂತ ಕೇಳಿದರೆ ಮುಂದಿನ ವಚನ

***ದೇವದೇವೇಶನ್ನ ಉತ್ತಮ ಕ್ರೀಡೆಗೆ ಆವನನ್ನೋ ಸ್ತುತಿಸಿ ನೆಲಗೊಂಡವನು ಕೋವಿದರರಸ ಶ್ರೀ ವಿಜಯವಿಠಲರೇಯ ಜೀವರ ವಿಭಕ್ತರ ಮಾಡುವ ಬಗೆ ನೋಡೋ***

***ವಣಗಿದ ಗೆಜ್ಜಗದ ಕಾಯಿಯೊಳಗದರ ಬೀಜ ಅನುಸರಿಸಿ ಇದ್ದಂತೆ.***

ಅನಾದಿಯಿಂದ ಗುಣತ್ರಯಾತ್ಮಕವಾದ ಲಿಂಗದೊಳಗೆ ಚೇತನವೊಂದಿಪ್ಪ ಅಸಂಬದ್ಧರಲ್ಲಿ ಎಂತ ಹೇಳಿ ಅದರ ಮುಂದೆ

***ವನಜನಾಭನು ಸೃಷ್ಟಿಯ ಪ್ರಾರಂಭದಲ್ಲಿ ಜೀವರನ್ನು ಪುಟ್ಟಿಸುವ ಲಿಂಗದೇಹದಿಂದ ಘನವಾಗಿ ತೋಯಿದ ವಸನದೋಪಾದಿಯಲ್ಲಿ ಹುಟ್ಟಿಸುವ***

ಎಂತ ಪುಣ್ಯ ಪಾಪಗಳೆರಡೂ ಎಂಬ ಸುಳಾದಿಯಲ್ಲಿ ಹೇಳಿದ್ದಾರೆ. ಯಾವ ಬ್ರಹ್ಮ ಕಲ್ಪದಲ್ಲಿ ಶ್ರೀ ಹರಿಯು ಯಾವ ಜೀವನನ್ನು ಸೃಷ್ಟಿಗೆ ತೆಗೆಯುವನೋ ಆ ಬ್ರಹ್ಮಕಲ್ಪದ ಹಿಂದೆ ಬ್ರಹ್ಮಶತ ವರ್ಷ ಸಮಾನ ಕಾಲದಲ್ಲಿ ವಟಪತ್ರಶಾಯಿಯಾಗಿರುವ ರಾತ್ರಿಕಾಲದಲ್ಲಿಯೇ ಅನಾದಿಯಿಂದ ಒಣಗಿದ ಗೆಜ್ಜಗದ ಹಾಗೆ ಇದ್ದ ಲಿಂಗದೇಹಕ್ಕೆ ಶ್ರೀಹರಿಯು ಆಸನ್ನ ಮರಣಾವಸ್ಥೆಯನ್ನು ಹೊಂದಿಸಿ ಅದರ ಸತ್ವರಜಸ್ತಮ ಪರಿಭೇದಗಳಿಗೆ ಪರಸ್ಪರ ಬಿಂದುಗಳ ಕಲೆ ಹಾಕಿ ಅದರಿಂದ ಬೆವರು ಹುಟ್ಟಿಸಿ ಇದ್ದು ಅನಂತರ ನೀರಿನಲ್ಲಿ ನೆನೆ ಹಾಕಿದ ಗೆಜ್ಜಗದ ಹಾಗೆ ಮಾಡಿ ಜೀವನ ಸ್ವರೂಪಕ್ಕೂ ಗಜ್ಜಗದ ಬೀಜಕ್ಕೂ ಮೇಲಿನ ಚಿಪ್ಪಿಗೂ ಅಲುಗಾಡದ ಹಾಗೆ ಸಂಬಂಧ ಮಾಡಿಸಿ ಅನಂತರ ಸೂರ್ಯ ಬಿಂಬದಿಂದ ದಶ ದಿಕ್ಕುಗಳಲ್ಲಿ ಹರಡತಕ್ಕ ಕಿರಣದ ಹಾಗೆ ಜೀವನ ಪ್ರಕಾಶವನ್ನು ಶ್ರೀಹರಿಯು ಹೊರಡಿಸಿ ಲಿಂಗ ಶರೀರದಲ್ಲಿ ಅದರ ವ್ಯಾಪ್ತಿಯನ್ನೇ ಒದ್ದೆ ಬಟ್ಟೆಯಲ್ಲಿ ನೀರು ಹೇಗೆ ಸರ್ವತ್ರ ವ್ಯಾಪಿಸುವುದೋ ಹಾಗೆ ಕೂಡಿಸುತ್ತಾನೆ. ಹಸಿಯ ಗಜ್ಜಗದ ದೃಷ್ಟಾಂತಕ್ಕೂ ಒದ್ದೆ ಬಟ್ಟೆಯ ದೃಷ್ಟಾಂತಕ್ಕೂ ಭೇದ– ಗಜ್ಜಗದ ತಿರುಳು ಗಜ್ಜಗದ ಮೇಲಿನ ಓಟೆ ಒಳಗೆ ಪ್ರವೇಶ ಮಾಡಲಾರದು.

ಆದುದರಿಂದ ಗಜ್ಜಗದ ತಿರುಳು ಅವ್ಯಾಪ್ತಿ ವೃತ್ತಿಯಾದುದರಿಂದ ಆದೃಷ್ಟಾಂತವೇ ಸಾಕಾಗಲಿಲ್ಲ. ಒದ್ದೆ ಹಿಂಡಿಕೆಯಲ್ಲಿಯಾದರೋ ಆ ಉದಕಾಂಶವು ಸರ್ವತ್ರ ಹರವಿಕೊಳ್ಳುವುದು. ಅದೇಪ್ರಕಾರ ಲಿಂಗದೇಹದಲ್ಲಿ ಜೀವನ ಪ್ರಕಾಶವು ವ್ಯಾಪ್ತವಾಗಿ ಇದೆ. ಮೇಲಿನ ಕವಚ ತೋಯಿದು ದಪ್ಪವಾಗಿ ಜೀವನಿಗೆ ಹಿಡಿಯ ಬೇಕೇ ಹೊರತು ಜೀವನ ಪರಮಾಣವು ಗಜ್ಜಗದ ಬೀಜದ ಹಾಗೆ ನೆನೆದು ದಪ್ಪವಾಗದು. ಜೀವನ ಪ್ರಕಾಶಕ್ಕೂ ಜೀವನಿಗೂ ಸೂರ್ಯ ಬಿಂಬಕ್ಕೂ ಬಿಂಬದ ಕಾರಣಕ್ಕೂ ಹೇಗೆ ಭೇದವೋ ಹಾಗೆ ಭೇದವು.

ಆ ಲಿಂಗಶರೀರವು ಷೋಡಶ ಕಲಾತ್ಮಕವು. ಅದರ ವಿವರವು. ೧. ಮನಸ್ಸು, ೨. ಶ್ರೋತ್ರ, ೩. ತ್ವಕ್, ೪. ಚಕ್ಷು ೫. ಜಿಹ್ವೆ, ೬. ಘ್ರಾಣ ಇವುಗಳು. ಐದು ಜ್ಞಾನೇಂದ್ರಿಯಗಳು ವಾಕ್-ಪಾಣಿ- ಪಾದ-ಪಾಯು-ಉಪಸ್ಥಾಇವುಗಳು. ಐದು ಕರ್ಮೇಂದ್ರಿಯಗಳು ಶಬ್ದ ಸ್ಪರ್ಶ ರೂಪ ರಸ ಗಂಧ ಇವುಗಳು . ಐದು ತನ್ಮಾತ್ರಗಳೆಂಬ ವಿಷಯಗಳು. ಹೀಗೆ ಹದಿನಾರು ಕಲೆಗಳು ಕೂಡಿರುವುದೇ ಲಿಂಗದೇಹವು. ಸತ್ವಾದಿ ಮೂರು ಪರಿಭೇದಾತ್ಮಕ ಲಿಂಗವೆಂಬ ಪುಷ್ಪದಲ್ಲಿ ಈ ಷೋಡಶ ಕಲೆಗಳೇ ವಾಸನೆ ಹ್ಯಾಗೋ ಹಾಗೆಂದು ವಿಜಯದಾಸರು ಸುಳಾದಿಯಲ್ಲಿ

*"ಪ್ರತಿ ಪ್ರತಿ ಕಲ್ಪಕ್ಕೆ ಹೂವಿಗೆ ಪರಿಮಳ ಎಂತ ಅತ್ಯಣು ಜೀವವಿದೆ."*
*ಎಂಬ ಸುಳಾದಿಯು.*

ಪ್ರಮಾಣ:-

*ಏಕಾದಶೇಂದ್ರಿಯಾಣ್ಯೇವ ತನ್ಮಾತ್ರಾ ಪಂಚಕಂ ತಥಾ ।*
*ಷೋಡಶೈವ ಕಲಾಃ ಪ್ರೋಕ್ತಾಃ ಲಿಂಗದೇಹಸ್ತದಾತ್ಮಕಃ॥೨೬॥*

*ಸರ್ವೇಷಾಮಪಿ ಜೀವಾನಾಮಮುಕ್ತಾನಾಂ ಭವೇದಯಂ।*
*ಬ್ರಹ್ಮಾದಿತತ್ತ್ವದ್ದೇವಾನಂ ಮಹತತ್ವಾದಿ ರೂಪಕಃ॥೨೭॥*

*ಲಿಂಗದೇಹೋಸ್ತಿ ತತ್ರಾಪಿ ಕಲಾಸೂಕ್ಷ್ಮಾಸ್ತು ಷೋಡಶ ।*
*ಅನಾದಿ ಲಿಂಗದೇಹೋಯಂ ಸಾಕ್ಷಾದ್ದರ್ಶನತೋ ಮಮ॥೨೮॥*

*ಪ್ರಾರಬ್ಧಾನಾಂ ಕ್ಷಯೇ ಜಾತೇ ನಶ್ಯತ್ಯೇವ ನಸಂಶಯಃ।*
*ಸತ್ವ ಭಾಗಸ್ತು ಸತ್ವೇಸ್ಯಾಲ್ಲೀನಸ್ತಮಸಿ ತಾಮಸಃ॥೨೯॥*
*ಅತಃ ಪ್ರಾಕೃತ ಮೇತಸ್ಯಾತ್ ಸಾರಿತಂಚನಾದಿಮತ್ಸ್ಮೃತಂ॥*
ಹೀಗೆ ವಿಷ್ಣುರಹಸ್ಯ (೧೭ ನೇ ಅಧ್ಯಾಯ ೨೬–೩೦ ಶ್ಲೋಕಗಳು).

ಮಹತತ್ವಾದಿ ಚತುರ್ವಿಂಶತಿ ತತ್ವಾಭಿಮಾನಿಗಳಾದ ಬ್ರಹ್ಮಾದಿ ದೇವತೆಗಳ ಲಿಂಗಶರೀರವು, ಆ ಮಹತತ್ವ ಅಹಂಕಾರ ತತ್ವಗಳಾಗಿ ಆಯಾತತ್ವಗಳಲ್ಲಿ ಅವರವರ ದೇಹದ ಕಳೆಗಳು ಒದ್ದೇ ಬಟ್ಟೆಯ ನೀರಿನೋಪಾದಿಯಲ್ಲಿ ವ್ಯಾಪ್ತವಾಗಿ ಇದೆ. ದೇವತೆಗಳಿಗೂ ಮತ್ತು ನಮಗಳಿಗೂ ಲಿಂಗದೇಹದ ಷೋಡಶ ಕಲೆಗಳು ಕಾರಣಾತ್ಮಕವು. ಅವರವರ ಮಹದಾದಿ ತತ್ವಗಳು ಮೂಲ ಜಡ ಪ್ರಕೃತಿಗೆ ಕಾರ್ಯಾತ್ಮಕಗಳು. ಅವರಿಗೂ ಲಿಂಗಶರೀರದ ಮೇಲೆ ಅನಿರುದ್ಧ ಶರೀರಗಳು ಜಡ ಪ್ರಕೃತಿಯ ಸೂಕ್ಷ್ಮ ಕಾರ್ಯ ರೂಪಗಳು. ಅವರ ಸ್ಥೂಲ ದೇಹಗಳು ಜಡ ಪ್ರಕೃತಿಯ ಸ್ಥೂಲ ಕಾರ್ಯರೂಪಗಳು. ಸೂಕ್ಷ್ಮ ದೇಹಗಳೇ ಅಸಂಸ್ಪೃಷ್ಟ ದೇಹಗಳು. ಸ್ಥೂಲ ದೇಹಗಳೇ ಸಂಸ್ಪೃಷ್ಟ ದೇಹಗಳು. ದೃಷ್ಟಾಂತ:– ಮಂಜು ಸೂಕ್ಷ್ಮ ಮಳೆ ಹನಿ ಸ್ಥೂಲ– ಸರ್ವ ಜೀವರಿಗೂ ಲಿಂಗ ಶರೀರದಲ್ಲಿ ಪೃಥಿವ್ಯಾದಿ ಪಂಚಭೂತಗಳು ಸೇರಲಿಲ್ಲವಾದ ಪ್ರಯುಕ್ತ ಪಂಚ ಭೂತ ಕಳೆಗಳು ಅನಿರುದ್ಧ ದೇಹದಲ್ಲಿ ಸೂಕ್ಷ್ಮರೂಪವಾಗಿ ಬಂದು ಇದೆ. ಒದ್ದೆ ಬಟ್ಟೆಯಲ್ಲಿ ನೀರಿನ ವ್ಯಾಪ್ತಿಯೋಪಾದಿಯಲ್ಲಿ ಜೀವ ಪ್ರಕಾಶವು ಲಿಂಗ ಶರೀರವನ್ನು ಪ್ರವೇಶಿಸಿ ಸಪ್ತ ಧಾತುಗಳುಳ್ಳ ಸ್ಥೂಲ ಶರೀರವನ್ನು ಪ್ರವೇಶಿಸಿ ತಾನೇ ಸರ್ವ ಶರೀರದಲ್ಲಿಯೂ ನಖ ಶಿಖ ಪರ್ಯಂತ ವ್ಯಾಪ್ತವಾಗಿ ಅದೆ. ಆದುದರಿಂದ ಸ್ಥೂಲ ಶರೀರದಲ್ಲಿ ಯಾವ ಕಡೇ ಜಿಗುಟಿದರೂ ಜೀವನಿಗೆ ವೇದನೆಯುಂಟು. ಸುಳಾದಿ:– "ಭೋಗಿಸಬೇಕೊ ಜೀವ ಹರಿಯಿತ್ತ ದ್ವಿವಿಧ ಕರ್ಮ। ಚಾಗು ಮಾಡದೆ ತಿಳಿ ಪರಮಾತ್ಮ ಪಾಪ ದೂರ" ಎಂತ "ನಾನಲ್ಲ" ಎಂಬ ಸುಳಾದಿ ಸಿದ್ಧವು. ಅಂದರೆ ಪುಣ್ಯ ಪಾಪ ಲೇಪಾನುಭವವು ಜೀವನಿಗೆ ಹೊರತು ಶ್ರೀಹರಿಗೆ ಇಲ್ಲ. ಜೀವ ಪ್ರಕಾಶದ ಅನುಭವ ಹೆಗೆಂದರೆ ಸರ್ವ ದರ್ಶನ ಕಾಲದಲ್ಲಿ ಕಾಲಿಗೆ ಮುಳ್ಳು ನೆಡುವ ಕಾಲದಲ್ಲಿ ಮತ್ತು ಮನೋಭೀತಿ ಹುಟ್ಟಿದ ಕಾಲದಲ್ಲಿ ಮೈ ಜುಂ ಹುಟ್ಟುವ ಕಾಲ ಚಿಂತಿಸಿದರೆ ಆ ಪ್ರಕಾಶ ವ್ಯಾಪ್ತಿ ಕಾರಣಗಳೇ ಆದುದರಿಂದ ಜ್ಞಾನರೂಪವಾದ್ದುದರಿಂದ ಶರೀರಕ್ಕೆಯಾವ ಮೃತ್ಯು ಬಂತೋ

ಎಂತ ತೋರಿ ಆ ದೇಹವನ್ನು ಬಿಡಬೇಕುಅಂತ ಇಚ್ಚಿಸಿ ಸಮಗ್ರ ಶರೀರ ವ್ಯಾಪ್ತವಾದ ಪ್ರಕಾಶವನ್ನು ಜೀವನು ನೀರಿನಲ್ಲಿ ಹರವಿದ ಮೀನಿನ ಬಲೆಯನ್ನು ಬಲೆಗಾರನು ಕ್ಷಣಮಾತ್ರದಲ್ಲಿ ಸೆಳೆದು ಒಂದು ಮುಷ್ಟಿಯುವಳಗೆ ಅಡಗಿಸುತ್ತಾನೆಯೋ ಹಾಗೆಯೇ ಪ್ರಕಾಶವನ್ನೆಲ್ಲಾ ಅಡಗಿಸಿಕೊಂದು ಮಧ್ಯ ದೇಹದ ಒಳಗೆನಿಂತು ಆದರ ಮೇಲೆ ಬ್ರಹ್ಮ ರಂಧ್ರದ ತನಕ ಜ್ವಾಲೆಯೋಪಾದಿಯಲ್ಲಿ ಈ ಪ್ರಕಾಶವು ಮುಟ್ಟುತ್ತದೆ. ತಿರುಗಿ ಇಳಿದು ಸರ್ವಾಂಗ ವ್ಯಾಪಿಸಿಕೊಳ್ಳುತ್ತದೆ. ಇದೆ ಅನುಭವಕ್ಕೆ ಮತ್ತೊಂದು ಮಾತು ಶರೀರಕ್ಕೆ ನಿತ್ರಾಣ ಕಾಲದಲ್ಲಿ ಕೈ ಕಾಲು ಜೋಮು ಏರೋಣ ಆ ಕಾಲದಲ್ಲಿ ಪಾದವನ್ನು ಜುಗುಟಿದರೂ ನೋಯುವುದಿಲ್ಲ . ಆ ಬೆರಳುಗಳನ್ನು ಅಲಗಾಡಿಸುವುದರಲ್ಲಿಯೂ ಸ್ವಾಧೀನವಿಲ್ಲ. ನಿತ್ರಾಣ ಮೇಲೆ ಕಾಲು ನೀರಿನಲ್ಲಿ ತೋದರೆ ಆ ಶೀತವು ಆ ಕಾಲಿನಲ್ಲಿ ಒಳಗೆ ಹುಟ್ಟಿ ಪ್ರಕಾಶವನ್ನು ಮೇಲಕ್ಕೆ ನೂಕುತ್ತದೆ ಆದುದರಿಂದ ಆ ಕಾಲದಲ್ಲಿ ಆ ಪಾದವು ಶವದ ಪಾದಕ್ಕೆ ಸಮವು. ಹಾಗೆ ಹೇಳ ಬಹುದು.

***ಅಣುಮಾತ್ರೋಽಪ್ಯಯಂ ಜೀವಃ ಸದೇಹಂ ವ್ಯಾಪ್ಯತಿಷ್ಟತ್।***
***ಯಥಾ ವ್ಯಾಪ್ಯ ಶರೀರಾಣಿ ಹರಿಚಂದನ ವಿಪ್ರುಷಃ॥*** ಎಂತ ಅಧ್ಯಾತ್ಮ ಮಾಲಾ ಪ್ರಮಾಣವು.

ಚಂದನ ಬಿಂದುವಿನ ಹಾಗೆ ಜೀವನು ಹೃದಯದಲ್ಲಿ ಸೂಕ್ಷ್ಮ ರೂಪವಾಗಿ ಇದ್ದು ಆ ಚಂದನ ಬಿಂದುವಿನ ವಾಸನೆಯೋಪಾದಿಯಲ್ಲಿ ಪ್ರಕಾಶ ವ್ಯಾಪ್ತವಾಗಿದೆ. "ಅತಃ ಸ್ಥೂಲ ಶರೀರಸ್ಯಾತ್ಸುಖ ದುಃಖಾದಿ ಭೋಗವಾನ್" ಎಂತ ಅಧ್ಯಾತ್ಮ ಮಾಲಾ॥ ಅತಏವ ಜೀವ ಅಣುನಾದಾಗ್ಯೂ ಸ್ಥೂಲ ಶರೀರ ಸುಖ ಸ್ರಕ್ ಚಂದನ ವನಿತಾ ಭೋಗ ಮೊದಲಾದದ್ದು ಜೀವನ ಪ್ರಕಾಶಕ್ಕೆ ಸರಿ. ಪ್ರಕಾಶವೇ ಜೀವ ಸ್ವರೂಪವಾದುದರಿಂದ ಈ ಜೀವನು ಪರಮ ಸೂಕ್ಷ್ಮನಾದ ಪ್ರಯುಕ್ತ ಅವನ ಶಕ್ತಿಯೂ ಪರಮ ಸೂಕ್ಷ್ಮವಾದುದರಿಂದ ಗಜ ಮೊದಲಾದ ಸ್ಥೂಲ ಶರೀರ ಧಾರಣೆ ಮಾಡಿ ತನ್ನ ಅನಾದಿ ಕರ್ಮ ಪರಂಪರೆಯನ್ನು ಉಣಬೇಕಾದರೆ ಶ್ರೀ ಹರಿಯು ಈ ಜೀವನು ಸ್ಥೂಲ ಶರೀರಗಳನ್ನು ಧರಿಸಲಿ, ತನ್ನ ತನ್ನ ಕರ್ಮಗಳನ್ನು ಮಾಡ ತಕ್ಕ ಸುಖ ದುಃಖಗಳನ್ನು ಉಣಲಿ ಎಂತ ಸೃಷ್ಟಿ ಕಾಲದಲ್ಲಿ ಶಕ್ತಿ ಕೊಟ್ಟು ಇದ್ದಾನೆ. ಅದೇ ದತ್ತ ಸ್ವಾತಂತ್ರ ಶಕ್ತಿಯು. ಕರ್ಮಾನುಭವ ಶಕ್ತಿ ಈಶ್ವರ ದತ್ತವಾದದ್ದು ಎಂತ ಗೀತಾ ವಿವೃತ್ತಿ ವಚನವಿದೆ.

## ದತ್ತ ಸ್ವಾತಂತ್ರ ವಿಭಾಗ ಕ್ರಮ

ಶ್ರೀ ಹರಿಯು ತನ್ನ ಸ್ವಾಧೀನವಾದ ಜಡಪ್ರಕೃತಿ ಗುಣತ್ರಯಾಂಶಭೂತವಾದ ಸ್ವತಂತ್ರ ಶಕ್ತಿ ಅಪರಿಮಿತವಾಗಿರುವುದರಲ್ಲಿ ನಾಲ್ಕು ನೂರು (೪೦೦) ವಿಭಾಗ ಮಾಡಿ ತಾನು ಅದರಲ್ಲಿ ನೂರಮೂವತ್ತಮೂರು, (೧೩೩) ಭಾಗವನ್ನು ತನ್ನಲಿಯೇ ಇಟ್ಟುಕೊಂಡು, ಅರವತ್ತಾರೂವರೆ (೬೬. ೫) ಭಾಗವನ್ನು ಲಕ್ಷ್ಮೀದೇವಿಯರಲ್ಲಿಟ್ಟು ಬ್ರಹ್ಮದೇವರಲ್ಲಿ ಐವತ್ತೆರಡೂಕಾಲು, ವಾಯುದೇವರಲ್ಲಿ ನಲವತ್ತೆಂಟೂ ಕಾಲು, ರುದ್ರದೆವರಲ್ಲಿ ಇಪ್ಪತ್ತು ಇಂದ್ರಕಾಮರಲ್ಲಿ ಹದಿನೈದು, ಪುಷ್ಕರಾಂತ ತತ್ವೇಶರಲ್ಲಿ ಹತ್ತು ತೃಣಾಂತ ಸಕಲ ಜೀವರಲ್ಲಿ ಹತ್ತು, ಕಲ್ಯಾದಿಗಳಲ್ಲಿ ನಲವತ್ತೈದು ಹೀಗೆ ನಾಲ್ಕುನೂರು ಭಾಗ ಹರಿಕಥಾಮೃತಸಾರ ಸಿದ್ಧ. ಸ್ಥೂಲ ದೇಹದಿಂದ ಕರ್ಮ ಮಾಡುವುದಕ್ಕೂ ಫಲಾನುಭವಕ್ಕೂ ಕೊಟ್ಟ ಶಕ್ತಿಯಾದ್ದರಿಂದ ಆ ಶಕ್ತಿಯು ಜೀವನ ಸ್ವರೂಪಭೂತವಲ್ಲ. ಭಗವತ್ಸ್ವರೂಪಭೂತವಲ್ಲ. ಏಕೆ ಎಂದರೆ ಆ ಬ್ರಹ್ಮ ಕಲ್ಪದಲ್ಲಿ ವಾಯುದೇವರಿಗೆ ೪೮ ಭಾಗಒಂದು ಇದೆ. ಮುಂದಿನ ಬ್ರಹ್ಮ ಕಲ್ಪಕ್ಕೆ ಇವರಿಗೆ ಬ್ರಹ್ಮತ್ವ ಬರುವಾಗ್ಯೆ ೫೨ ಅಂಶಗಳನ್ನು ಸ್ವಾಮಿ ಕೊಡುತ್ತಾನಾದ್ದರಿಂದ ಜೀವ ಸ್ವರೂಪ ಶಕ್ತಿ ಅಂತ ಅನ್ನಕೂಡದು. ದಾನ ಕಾಲ ನಿಶ್ಚಯವಾದಾಗಲೇ ಅನಾದಿ ನಿತ್ಯಸಿದ್ಧ ಜೀವಕ್ರಿಯಾ ಶಕ್ತಿಗೆ ಭಿನ್ನವಾಗಿ ಮಧ್ಯದಲ್ಲಿ ಬಂದು ಜೀವ ಕ್ರಿಯಾಶಕ್ತಿ ಎನಿಸಿಕೊಂಡಿತು. ಈ ಪ್ರಕಾರ ಜೀವಕ್ರಿಯಾಶಕ್ತಿ ಹೇಗೆ ಎರಡು ವಿಧವೋ ಹಾಗೆ ಜಡಕ್ರಿಯಾಶಕ್ತಿಯೂ ಎರಡು ಪ್ರಕಾರವಾದುದು. ಹೇಗೆಂದರೆ ಕೇವಲ ಲಿಂಗಶರೀರ ಕ್ರಿಯಾಶಕ್ತಿ ಒಂದು ಅದು ಹೊರಗಿನ ಸೂಕ್ಷ್ಮರೂಪವಾದ ಜಡಪ್ರಕೃತಿಯು ಕಾರಣಶಕ್ತಿಗೆ ಸಮವಾದದ್ದು. ಜಡದಲ್ಲಿ ಎರಡನೆಯದು ಯಾವುದೆಂದರೆ, ಜಡ ಪ್ರಕೃತಿಕಾರ್ಯವಾದ ಅವ್ಯಕ್ತ ಮಹದಹಂಕಾರಾದಿ ಕಾರ್ಯ ಜಡತತ್ವಗಳ ಕಾರ್ಯಕ್ರಿಯಾಶಕ್ತಿಯೇ ನಾಲ್ಕನೆಯದು. ಇದೇ ಸ್ಥೂಲಕ್ರಿಯಾಶಕ್ತಿಯಿಂದ ಅನಾದಿ ಕಾಮ ಪರಂಪರೆಯು ಆದರಿಂದಲೇ ಅನಾದಿ ಕರ್ಮ ಪರಂಪರೆಯು ಜೀವನಿಂದ ಸೃಷ್ಟಿಗೆ ಪೂರ್ವ ನಡೆದು ಬಂದದ್ದೇ ಕಾರಣಾಂತಃಕರಣ ಕ್ರಿಯೆಯಿಂದ ಎಂತ ಅರ್ಥವು. ಅಹಂಕಾರ ತತ್ವವನ್ನು "ಭಾವದ್ರವ್ಯ ಕ್ರಿಯಾತ್ಮಕಃ" ಎಂತ ಶಾಸ್ತ್ರಕಾರರು ತೆಗೆದು ಕೊಂಡಿದ್ದಾದ್ದರಿಂದ ನಮ್ಮ ಸ್ಥೂಲ ಮನಸ್ಸು ಕ್ರಿಯವತ್ ಎಂತ ಸ್ಥೂಲ ಬುದ್ಧಿಗೆ ಅನುಭವ.

ಮುಂದೆ ಹೇಳುತ್ತೇನೆ. ಈ ಸ್ಥೂಲ ಕಾಮ ಪರಂಪರೆಯಿಂದ ಈ ಕರ್ಮ ಪರಂಪರೆಯನ್ನು ಮಾಡುತ್ತಾ ಉಣುತ್ತೇವೆ. ಆದುದರಿಂದ ಜೀವಕ್ರಿಯೆಗಳು ಎರಡು ಜಡಕ್ರಿಯೆಗಳು ಎರಡು. ಈ ದತ್ತ ಸ್ವಾತಂತ್ರ ಶಕ್ತಿಯು ಪರಮಾತ್ಮನ ಸ್ವರೂಪಶಕ್ತಿಯಾದರೆ ೧೩೩ ಭಾಗವನ್ನು ತಾನು ಇಟ್ಟುಕೊಂಡನು ಎಂತ ಒಂದು ಕ್ಲಿಪ್ತಿಯು. ದೂರದಲ್ಲಿ ಇದ್ದ ಪದಾರ್ಥವನ್ನು ಸಮೀಪದಲ್ಲಿ ಇಟ್ಟುಕೊಂಡಹಾಗೂ ಸಂಖ್ಯಾಪರಿಮಿತಿಯು ಕೂಡದಾದ ಪ್ರಯುಕ್ತ ಮುದ್ರೆ ಉಂಗುರ ರಾಜನ ಅಧೀನ ಎಂದಾಗ್ಯೂ ಅವನ ಶಕ್ತ್ಯಪೇಕ್ಷೆಯಾ ಹ್ಯಾಗೆ ಭಿನ್ನವೋ ಹಾಗೆ ತಿಳಿಯಬೇಕು. ರಾಜನು ಮಂತ್ರಿ ಮೊದಲಾದವರಿಗೆ ತನ್ನ ಸ್ವಾತಂತ್ರವಿಭಾಗಿಸಿ ಕೊಟ್ಟು ಒಂದು ಕಾರ್ಯದಲ್ಲಿ ಉದ್ಯುಕ್ತರನ್ನು ಮಾಡಿ ಗುಣ ದೋಷಗಳನ್ನು ಕೇಳಿ ನೆಟ್ಟಗೆ ಮಾಡಿದ್ದನ್ನು ನೋಡಿ ಸಂತುಷ್ಟನಾಗಿ ಕಾರ್ಯವನ್ನು ಕೆಡಿಸಿದಲ್ಲಿ ನಿನಗೆ ಕೊಟ್ಟಿರಲಿಕ್ಕೆ ಯಾಕೆ ಕೆಡಿಸಿದಿ ಎಂತ ಆಜ್ಞೋಲ್ಲಂಘನೆ ಅಪರಾಧಕ್ಕೆ ಕುಪಿತನಾಗಿ ಭೃತ್ಯರನ್ನು ಹ್ಯಾಗೆ ದಂಡಿಸುವನೋ ಹಾಗೆ ಶ್ರೀಹರಿಯು ಕ್ರೀಡಿಸುತ್ತಾನೆ. ಪ್ರಮಾಣ:-"

*ಯಥಾ ರಾಜಾ ನಿಜಾ ಮಾರ್ತ್ಯಾ ದತ್ತ ಸ್ವಾತಂತ್ರ್ಯಮಾತ್ಮನಃ।*
*ಕಾರ್ಯೇ ನಿಯೋಜ್ಯ ತತ್ರತ್ಯಾನ್ ಗುಣ ದೋಷಾಂಶ್ಚ ಪೃಚ್ಛತಿ॥೨೯॥*

*ಸತ್ಯಾಂಶಕ್ತಾ ಕಾರ್ಯ ನಾಶೇ ಸ್ವಾಜ್ಞಾಮುಲ್ಲಂಘ್ಯವರ್ತತೆ।*
*ತತ್ತತ್ಕಾರ್ಯ ಕೃತಿಶಕ್ತಿಃ ಸ್ವಾತಂತ್ರ್ಯಂ ಹಿ ಪರಂ ಸ್ಮೃತಂ ॥೩೦॥*

*ಕುಪಿತ್ವಾ ದಂಡಯೇದೇನಂ ತಥಾಕ್ರೀಡತ್ಯಯಾ ಹರಿಃ।*
*ನಿಯಂತೃತ್ವೇನ ಸರ್ವತ್ರ ತಿಷ್ಠನ್ ಜೀವೇಷು ಸರ್ವದಾ॥೩೧॥*

ಪರಂ ಹಿ ಎಂದರೆ- ಭಿನ್ನ ಶಕ್ತಿ ಎಂತ ಅರ್ಥವು. ಭಗವತ್ಸ್ವರೂಪವು ಅಲ್ಲ. ಲಕ್ಷ್ಮೀ ಸ್ವರೂಪವೂ ಅಲ್ಲ. ಜೀವ ಸ್ವರೂಪವೂ ಅಲ್ಲ.

*ಸ್ವಸ್ಮಿನ್ನರ್ಥಂ ಸ್ವತಂತ್ರತ್ವಂ ಸಮಾಧಾಯ ತದಿದರ್ಥಕಂ।*
*ವಿಭಜ್ಯ ಶತದಾ ಭೂಯೋಽಷ್ಟ ಚತ್ವಾರಿಂಶದಂಶಕಾನ್॥೩೨॥*

*ಪ್ರಾಣೇ ಸ್ವಾತಂತ್ರ್ಯಮಾದಾಯ ದ್ವಿಪಂಚಾಶತ್ತು ವೇದಸಿ।*
*ಪಾದಂ ಚತುರ್ಥಂಶ ತಥಾ ವಿಭಜ್ಯ ದಶ ಭಾಗಕಾನ್॥೩೩॥*

*ಜೀವೇ ಸ್ವಾತಂತ್ರ್ಯಮಾಧಾಯ ತತೋ ವಿಂಶತಿ ಭಾಗಕಾನ್।*
*ಅಹಂಕಾರಾತ್ಮಕೇ ರುದ್ರೇ ತಥಾ ಬುದ್ಧೌ ನಿಧಾಯಚ॥೩॥*

*ಮನೋದೇವೇ ತಥಾ ಶಕ್ರೇ ಭಾಗಾನ್ ಪಂಚದಶೈವತು।*
*ತತ್ತ್ವದೇವೇ ದಶಾಂಶಾಂಶ್ಚ ಸ್ವಾತಂತ್ರಂ ನಿದಧೇ ಹರಿಃ ॥೩೫॥*

*ಪಂಚ ಚತ್ವಾಂಶ ದಶಾನ್ ಕಲಿ ಮುಖ್ಯೇಷ್ವಧಾತ್ಸ್ವಯಂ।*
*ಈಶ ಸ್ವಾತಂತ್ರ್ಯ ಭಾಗೇಷು ಮಾಯಾ ಭಾಗಸ್ತ್ವತೀಯತಃ।*

ಹೀಗೆ ವಿಷ್ಣುರಹಸ್ಯ-೨೧ನೇ ಅಧ್ಯಾಯದಲ್ಲಿ ಹೇಳಿದ್ದಾರೆ.

ಇಲ್ಲಿ ಆಕ್ಷೇಪವು- ಅನಾದಿ ಸಲಿಂಗ ಜೀವರು ಹಿಂದಿನ ಅನಂತಾನಂತ ಬ್ರಹ್ಮಕಲ್ಪಗಳಿಂದಲೂ, ಸ್ವರೂಪ ಕ್ರಿಯಾಶಕ್ತಿಯಿಂದಲೇ ಅನಾದಿ ಕರ್ಮಗಳನ್ನು ಮಾಡುತ್ತಾ ಅಜ್ಞಾನ ಬದ್ಧರಾಗಿ ಇರುವಂತಹವರನ್ನು ಉದ್ಧಾರ ಮಾಡ ಬೇಕೆಂಬ ಭಗವದ್ಕೃಪೆ ಇದ್ದರೆ ಆ ಕ್ಷಣವೇ ಜೀವರನ್ನು ಶ್ರೀ ಹರಿಯು ವೈಕುಂಠದಲ್ಲಿ ಏಕೆ ಇಡಬಾರದು ? ಶ್ರೀ ಹರಿಯು ತನ್ನ ಇಚ್ಛೆಗೆ ಬಂದ ಬ್ರಹ್ಮ ಕಲ್ಪದ ಆದಿಯಲ್ಲಿ ಜೀವರಿಂದ ಕೇಳಿಸಿಕೊಳ್ಳದೇ ನೂತನ ಹೇಗೆ ತೆಗೆಯುತ್ತಾನೋ ಹಾಗೆ ಪರಮ ಸ್ವತಂತ್ರನು ತನ್ನ ಇಚ್ಛೆಯಿಂದಲೇ ಮೋಕ್ಷ ಕೊಡಬೇಕೇ ಹೊರತು ತನ್ನ ಮೊರೆ ಹೋಗದೇ ಇದ್ದ ಜೀವರಿಗೆ ಬಲಾತ್ಕಾರವಾಗಿ ಕರ್ಮ ಫಲಾನುಭವಾರ್ಥವಾಗಿ ಸ್ವಾತಂತ್ರ್ಯ ಶಕ್ತಿಯನ್ನಾದರೂ ಕೊಟ್ಟು ಅಲ್ಪ ಜೀವರುಗಳಿಂದ ದುಷ್ಕರ್ಮಗಳು ನಡಿಯಿತು ಎನಿಸಿ ಅಪರಿಮಿತವಾಗಿ ನರಕಾದಿಗಳಲ್ಲಿ ಸುತ್ತಿಸಿ ಬಹು ಕಾಲ ಕ್ಲೇಶ ಪಡಿಸಿ ಅನಂತರ ತಾನಾಗಿ ಒಲಿಯೋಣ ಇದು ಯಾವ ಯೋಚನೆಗೆ ಸೇರಿದ್ದು ಎಂದರೆ ಸಿದ್ಧಾಂತವು- ತಂದೆಯಾದವನು ಸುಪುತ್ರನನ್ನು ತಾನೇ ಸಾಕ್ಷಾತ್ತಾಗಿ ಶಿಕ್ಷಿಸುವುದು ಬಿಟ್ಟು ಉಪಾಧ್ಯಾಯರಿಂದ ಶಿಕ್ಷೆ ಮಾಡಿಸಿ ಬುದ್ಧಿವಂತನಾದ ಬಳಿಕ ತನ್ನ ಸಮೀಪಕ್ಕೆ ಹೇಗೆ ಕರಿಯುವನೋ ಹಾಗೆ ಇವನನ್ನು ಆದಿ ಭಾಗದಲ್ಲಿ ಸಂಸಾರವಸ್ಥೆಯನ್ನು ಅನುಭವಿಸಲಿ. ಅನಂತರ ಸಾಧನ ಚತುಷ್ಟಯಗಳನ್ನು ಸಂಪಾದಿಸಿ ಸಂಸಾರಾವಸ್ಥೆಯಲ್ಲಿಯೇ ಯೋಗ್ಯಾಪರೋಕ್ಷ ಕೊಟ್ಟು ಅವನ ಭಕ್ತಿಯನ್ನು ಅನಂತರ ಪೂರ್ಣಾಭಿವೃದ್ಧಿ ಮಾಡಿದ ಹೊರತು ಜಡ ಬುದ್ಧಿಗೆ ಸಮನಾದವನನ್ನು ತನ್ನ ಲೋಕಕ್ಕೆ ಸಮೀಪಕ್ಕೆ ಕರಿಯಬಾರದು, ಎಂತ ಇದು ಒಂದು. ಆತನ ಸತ್ಯಸಂಕಲ್ಪವು. ಇನ್ನೊಂದು ಪ್ರಮಾಣ:-

***ಯದಿತೇ ಸ್ಥೂಲದೇಹೇನಯುತಾ ನಸ್ಯಾರಿಮೇಽಖಿಲಾಃ ।।೧೦।।***
***ಕಥಂಕರ್ಮಾಣಿ ಕುರ್ವೀರನ್ ವಿಷ್ಣು ಭಕ್ತಿ ಪರಾಯಣಾಃ।।***
***ಅಪೂರ್ಣ ಭಕ್ತಯಸ್ತೇ ಚ ಕಥಂ ಮೋಕ್ಷಮವಾಪ್ನುಯುಃ।।೧೧।। ಅತಃ***
***"ಸೃಷ್ಟ್ಯಾದಿ ಕುರುತೇ"*** ಎಂತ ವಿಷ್ಣುರಹಸ್ಯ ೫ನೇ ಅಧ್ಯಾಯವು.

ಆದುದರಿಂದ ಸ್ವಾತಂತ್ರ್ಯದಾನಕ್ಕೂ ಸೃಷ್ಟಿಗೆ ನೂತನವಾಗಿತರುವುದಕ್ಕೂ ಜಗತ್ಸೃಷ್ಟಿಗೂ ಕೂಡ ಉಪಯೋಗ ಹೇಳಿದ್ದಾಯಿತು. ಏತೇನ ಈ ಪ್ರಕಾರ ಪೂರ್ವೋತ್ತರ ರೀತಿಯಿಂದ ಜೀವ ಪ್ರಕಾಶಕ್ಕೆ ಲಿಂಗ ಶರೀರವ್ಯಾಪ್ತಿ ಅದರ ಮೇಲಿನ ಅನಿರುದ್ಧ ದೇಹಕ್ಕೂ ವ್ಯಾಪ್ತಿ ಅದರ ಮೇಲಿನ ಸ್ಥೂಲ ದೇಹ ಪರಿಯಂತ ವ್ಯಾಪ್ತಿಯನ್ನು ಹೇಳಿರುವುದರ ವಿವರವು.

ಲಿಂಗ ದೇಹವು ಜೀವನೋಪಾದಿಯಲ್ಲಿ ಜೀವರಿಗೆ ಸಮಾನಾಕಾರವಷ್ಟೆ! ಅದರ ಮೇಲಿನ ಅವ್ಯಕ್ತ ದೇಹವು ಮತ್ತು ಅನಿರುದ್ಧ ದೇಹವು ಅದೇ ಆಕಾರ ಕವಚದಂತಿರುವುದು ಅವ್ಯಕ್ತ ದೇಹವನ್ನು ಜೀವಾಕಾರ ಸುಳಾದಿಯಲ್ಲಿ ಹೇಳಿದ್ದಾರೆ "ನೆರೆದವು ಶತ ತ್ರಯೋದಶ ಬಿಂದುಗಳೇಕವಾಗಿ ಕರೆಸಿಕೊಂಡಿತು. ಅವ್ಯಕ್ತವೆಂದು" ವಿಜಯದಾಸರ ಉಕ್ತಿ. ಲಿಂಗ ಶರೀರದ ಷೋಡಶ ಕಲೆಗಳು ಲಿಂಗ ಅವ್ಯಕ್ತ ಅನಿರುದ್ಧ ಈ ಮೂರೂ ದೇಹದ ತನಕ ಕಾರ್ಯ ಕಾರಣಗಳಾಗಿ ಹೊಂದಿಕೊಂಡು ಇದೆ. ಸುಳಾದಿ:- "ಈ ಲಿಂಗೋಪಾದಾನ ಅನಿರುದ್ಧಾದ ತನಕ ಆಲೈಸಿ ಅಲ್ಲಿಂದಿತ್ತಲು ಪ್ರತ್ಯೇಕ" ಎಂತ ಜೀವಾಖ್ಯ ಸುಳಾದಿ. ಅನಿರುದ್ಧ ದೇಹದಲ್ಲಿ ಪಂಚಭೂತದ ಕಲೆಗಳು ಕೂಡಸೇರಿ ೨೧ ಕಲೆ ಉಳ್ಳದ್ದಾಗಿ ಸ್ಥೂಲ ದೇಹವನ್ನು ಹುಟ್ಟಿಸಿ ಕೊಡುತ್ತದೆ. ಪಂಚಭೂತದ ಕಾರ್ಯ ಗಳೇ ಅನ್ನ ವಿಕಾರ ಶುಕ್ಲ ಶೋಣಿತಗಳೇ ಮಾತೃ ಗರ್ಭದಲ್ಲಿ ದೇಹಾಕಾರವಾಗಿ, ಅನ್ನದಿಂದ ಉಪಚಯ ಮಾಡಿಕೊಂಡು ಪುನಶ್ಚ ಪುತ್ರ ದೇಹೋಪಾದಾನವಾಗುತ್ತದೆಯಾದ್ದರಿಂದ ಈ ಸ್ಥೂಲ ದೇಹಕ್ಕೆ ಅನಿರುದ್ಧ ದೇಹದ ಪಂಚಭೂತ ಕಲೆಗಳೇ ಕಾರಣಾತ್ಮನಾ ಉಪಾದಾನ ಹೊರತಾಗಿ ಸರ್ವಥಾ ಲಿಂಗ ದೇಹದ ಷೋಡಶ ಕಲೆಗಳು ಅಕ್ಷತೆಗೆ ಸುಣ್ಣದೋಪಾದಿಯಲ್ಲಿ ವಿಕಾರವಾಗಿ ಕೂಡಿ ಬರುವುದಿಲ್ಲ ಎಂತ ಅರ್ಥವು. ಜೀವನ ಸ್ವರೂಪ ಸಹಿತ ಇವುಗಳು ಕೂಡಿ ನಾಲ್ಕು ಆಕಾರಗಳು ಸಿಂಹಗಳು. ಆದರೆ ಈ ಸ್ಥೂಲ ಶರೀರ ಶ್ವಾನವಾದರೆ ಹೊರಗಿನ ಸ್ಥೂಲ ಶರೀರ ಮಾತ್ರ ಬೇರೇ ಯೋನಿ ಹೀಗೆಯೇ ಸರಿ. ಏಕೆಂದರೆ –ದುಷ್ಕರ್ಮ

ಪರಂಪರೆಗೆ ನೀಚಯೋನಿ ಪರಂಪರೆ, ಶುಭ ಕರ್ಮ ಪರಂಪರೆಗೆ ಉತ್ತಮ ಯೋನಿ ಪರಂಪರೆ. ಆದುದರಿಂದ ಬಿಂಬಾಪರೋಕ್ಷ ಹೊರತಾಗಿ ಒಳಗಿನ ನಾಲ್ಕು ಶರೀರಗಳು ಕಾಣಲಿಕ್ಕಿಲ್ಲ. ಸ್ಥೂಲ ಶರೀರ ಶುಕ್ಲ ಶೋಣಿತ ಜನ್ಯ ಸಪ್ತ ಧಾತು ವಿಶಿಷ್ಟವು. ಅದರಲ್ಲಿ ಪಿತೃ ಶುಕ್ಲದಿಂದ ಅಸ್ಥಿ ನಾಡಿ ರೋಮಗಳು, ರೋಮಗಳು ಒಳಗೆ ಹುಟ್ಟಿದ ನಾಡಿಗಳನ್ನೇ ಬೇರು ಮಾಡಿಕೊಂಡು ಮೇಲೆ ತೃಣಗಳೋಪಾದಿಯಲ್ಲಿ ಬಂದು ಅದೆ. ಉಳಿದ ಧಾತುಗಳು ಸರ್ವವೂ ಮಾತೃ ಶೋಣಿತ ಜನ್ಯವಾದವುಗಳು. ಜೀವ ಪ್ರಕಾಶ ವ್ಯಾಪ್ತಿ ಒಳಗೆ ಸ್ವರೂಪ ಚಕ್ಷುಸ್ಸಿನ ಪ್ರಕಾರ ಲಿಂಗ ಚಕ್ಷಸ್ಸು. ಅಲ್ಲಿಂದ ಅವ್ಯಕ್ತ ಚಕ್ಷಸ್ಸು, ಅಲ್ಲಿಂದ ಅನಿರುದ್ಧ ಚಕ್ಷಸ್ಸು ಸ್ಥೂಲ ಶರೀರದ ಚಕ್ಷಸ್ಸಿನ ತನಕ ಸ್ವರೂಪ ಚಕ್ಷಸ್ಸಿನ ವ್ಯಾಪ್ತಿಯು. ಇದೇ ಪ್ರಕಾರ ಜೀವ ಶ್ರೋತ್ರಾದಿ ಇಂದ್ರಿಯಗಳು ಲಿಂಗ ಅವ್ಯಕ್ತ ಅನಿರುದ್ಧ ಸ್ಥೂಲ ದೇಹ ತನಕ ಮಿಶ್ರವಾಗಿದೆ. ಪ್ರಕಾಶ ಎಂದರೂ ಜೀವ ಸ್ವರೂಪ ಎಂದರೂ ಒಂದೇ ವ್ಯವಹಾರವು. ಆದುದರಿಂದ ಜೀವ ಸ್ವರೂಪಾವಯವ ಪರಮ ಸೂಕ್ಷ್ಮವಾದರೂ ಬಾಧೆ ಇಲ್ಲ. ಸ್ವರೂಪೇಂದ್ರಿಯಗಳಿಗೆ ಮಿಶ್ರ ಭಾವ ವಿರಜಾ ನದಿ ಸ್ನಾನದ ತನಕ ಯಂತ ಹೇಳಿದ್ದಾರೆ. –

*ಸ್ವರೂಪೇಂದ್ರಿಯ ಸಂಮಿಶ್ರೈಃ ಜಡೈರೇವೇಂದ್ರಿಯೈಃ ಸದಾ।*
*ಆಪೋಕ್ಷಂಚ ಪ್ರವರ್ತಂತೆ*

ಎಂತ ಸತ್ತತ್ವರತ್ನಮಾಲಾ॥ ಮುಕ್ತಿ ಯೋಗ್ಯ ಪ್ರಕರಣ ಸಿದ್ಧ.

ಏತೇನ ಲಿಂಗ ದೇಹದ ಕಲೆಗಳು ೧೬ ಕಾರಣ ರೂಪಗಳು. ಅನಿರುದ್ಧ ದೇಹಗತ ೨೧ ಕಲೆಗಳು ಸೂಕ್ಷ್ಮ ಕಾರ್ಯ ರೂಪಗಳು. ಸ್ಥೂಲೇಂದ್ರಿಯ ಕಲೆಗಳು ಸ್ಥೂಲ ಕಾರ್ಯ ರೂಪಗಳು. ಲಿಂಗ ಶರೀರದಲ್ಲಿ ಸತ್ವ ಪರಿಚ್ಛೇದ ಒಂದು, ರಜಃ ಪರಿಚ್ಛೇದ ಒಂದು, ತಮಃ ಪರಿಚ್ಛೇದ ಒಂದು – ಇವು ಮೂರೂ ಒಂದರ ಮೇಲೆ ಒಂದು ಸುತ್ತಿಕೊಂಡು ಬಿಳಿಯ ವಸ್ತ್ರದ ಮೇಲೆ ಕರಿಯ ವಸ್ತ್ರ ಈ ಪ್ರಕಾರ ಗುಣತ್ರಯಾತ್ಮಕ ಲಿಂಗ ದೇಹವಿದೆ.

ಪ್ರಥಮತಃ ಸತ್ವ ಪರಿಚ್ಛೇದದಲ್ಲಿ ಮನಸ್ಸು ಕೂತು ಇದೆ. ರಜಃ ಪರಿಚ್ಛೇದದಲ್ಲಿ ಜ್ಞಾನೇಂದ್ರಿಯಗಳು ಐದು–ಕರ್ಮೇಂದ್ರಿಯಗಳೈದು ಸಹಿತ ಕೂತಿದೆ. ತಮಃ ಪರಿಚ್ಛೇದದಲ್ಲಿ ಶಬ್ದಾದಿಗಳೈದು ಅಜ್ಞಾನ ಪಂಚಕವು ಕೂತಿದೆ.

ಈ ಅಜ್ಞಾನ ಪಂಚಕವನ್ನು ಮನೋವೃತ್ತಿ ಪಂಚಕವನ್ನೂ ಮುಂದೆ ವಿಸ್ತರಿಸುವೆನು. ಈಗಿನ ಪ್ರಕರಣ ಜೀವನ ಮೇಲೆ ಮೂರು ದೇಹದಲ್ಲೂ ಸತ್ವ ರಜಃ ತಮೋ ಭಾಗಗಳು ಅವೆ. . ಆದಾಗ್ಯೂ ಲಿಂಗದೇಹದಲ್ಲಿ ಮಾತ್ರ ಅನಂತಾನಂತ ಸಾತ್ವಿಕ ರಾಜಸ ತಾಮಸ ಕರ್ಮಗಳು ಮೂರು ಪರಿಚ್ಛೇದಗಳಲ್ಲಿಯೇ ತುಂಬಿಕೊಂಡು ಇವೆ. ಆದರೆ ನನಗೆ ಜಾಗ್ರತಾವಸ್ಥೆಯಲ್ಲಿ ಇರುವ ಜ್ಞಾನವೇ ವೃತ್ತಿ ಜ್ಞಾನ ಕಾರ್ಯರೂಪ. ಈ ಜ್ಞಾನದ ಕಾರ್ಯವೇ ಜಾಗ್ರತೆ. ಲಿಂಗದೇಹದ ಜ್ಞಾನವೇ ಕಾರಣರೂಪ. ನಮಗೆ ಮರುವು ಬರುವುದೇ ಅಜ್ಞಾನ–ಆದರ ಕಾರ್ಯವೇ ನಿದ್ರಾವಸ್ಥೆ. ಈ ಜ್ಞಾನಾಜ್ಞಾನಗಳು ಎರಡೂ ಕಾರ್ಯರೂಪವಾದುದರಿಂದ ಬ್ರಹ್ಮ ದೇವರು ಸೃಷ್ಟಿ ಮಾಡಿದಂಥಾದ್ದು ಈ ಕಾರ್ಯ ಜ್ಞಾನದಲ್ಲಿಯೂ, ಲಿಂಗದೇಹದ ಅಜ್ಞಾನ, ಈ ಕಾರ್ಯರೂಪ ವೃತ್ತಿಜ್ಞಾನ ಪ್ರವಾಹದಲ್ಲಿ ಯಾವ ಯಾವ ಕಲೆಗಳು ಅವೆಯೋ ಅವುಗಳನ್ನೇ ಬ್ರಹ್ಮದೇವರು ತೆಗೆದುಕೊಂಡು ಆ ಬೀಜರೂಪವಾದ ಕಲೆಗಳೇವೆ ಭೂಮಿ ಜಲ ಸಂಬಂಧದಿಂದ ವೃಕ್ಷಾದಿಗಳಾಗುವಂತೆ ಜಡಪ್ರಕೃತಿಕಾರ್ಯರೂಪವಾದ ತತ್ವಗಳನ್ನು ಸೇರಿಸಿ ಈ ಸ್ಥೂಲ ದೇಹದಲ್ಲಿ ಜೀವನಿಗೆ ಅನುಭವ ಸಾಧಕವಾದ ಜ್ಞಾನಾಜ್ಞಾನ ಮನಸ್ಸು ಬುದ್ಧಿ ಚಿತ್ತ ಅಹಂಕಾರ ಜ್ಞಾನೇಂದ್ರಿಯಗಳು ಕರ್ಮೇಂದ್ರಿಯಗಳು ಶಬ್ದಾದಿ ವಿಷಯಗಳು ಮೊದಲಾದದ್ದು ಬ್ರಹ್ಮದೇವರು ನಿರ್ಮಿಸಿದ್ದಾರೆ. ಈ ಲಿಂಗ ಶರೀರವು ಷೋಡಶ ಕಲಾತ್ಮಕವಾದ್ದರಿಂದ ಮನಸ್ಸು ಮೊದಲಾದ ಷೋಡಶ ಕಲೆಗಳು ಗುಣತ್ರಯ ಕಾರ್ಯವಾದುದರಿಂದ ಗುಣತ್ರಯವೇ ಜಡಪ್ರಕೃತಿ ಜನ್ಯವಾದುದರಿಂದ ಗುಣತ್ರಯಗಳೇ ಕಾರ್ಯವಾದ ಪ್ರಯುಕ್ತ ಜನ್ಯವಾದ ಷೋಡಶ ಕಲಾಮಿಶ್ರ ಲಿಂಗದೇಹವನ್ನು ಕಾರ್ಯರೂಪವೆಂತ ತಿಳಿಯತಕ್ಕದ್ದೇನು? ಕಾರ್ಯಕ್ಕೂ ಕಾರ್ಯವಾಯಿತೆಂದ ಕಾರಣ ಇದು ಹೇಗೆ ಕಾರಣ ದೇಹವಾಯಿತು? ಆದ ಪ್ರಯುಕ್ತ ಸೃಷ್ಟಿಗೆ ತಾರದೆ ಇರತಕ್ಕ ಅನಂತಾನಂತ ಜೀವರಾಶಿಗಳೂ ಕೂಡ ಷೋಡಶ ಕಲಾತ್ಮಕ ಅನಾದಿ ಲಿಂಗದೇಹಗಳಿಂದ ಬದ್ಧರಾಗಿ ಇದ್ದಾರೆ. ಎಂಬ ಮಾತು ಕೂಡದು ಎಂಬ ಆಕ್ಷೇಪಕ್ಕೆ ಸಮಾಧಾನ. ಜಗತ್ತಿಗೆ ಕಾರಣಭೂತವಾದ ನಿತ್ಯವಾದ ಜಡ ಪ್ರಕೃತಿಯಿಂದ ಗುಣತ್ರಯ ಮಹದಹಂಕಾರಾದಿ ಪೃಥಿವ್ಯಂತವಾದ ತತ್ವಗಳು ಕಾರ್ಯ ರೂಪಗಳಾಗಿರುವುದರಿಂದ ಅನಿತ್ಯಗಳೇ ಸರಿ. ಅದಾಗ್ಯೂ ೨೪ ತತ್ವಗಳು ಸೂಕ್ಷ್ಮಗಳ ಸಮುದಾಯವೇ ಜಡ ಪ್ರಕೃತಿಯೆಂದು ಕರೆಸಿಕೊಳ್ಳುತ್ತದೆ. ಪ್ರಮಾಣ–

*"ಅವ್ಯಕ್ತಾದ್ಯಾಃ ಪೃಥಿವ್ಯಂತಾಃ ಸರ್ವಾಃ ಪ್ರಕೃತಯಃ ಸ್ಮೃತಾಃ"*
ಎಂದು ಭಾಗವತ ತೃತೀಯ ಸ್ಕಂಧ ತಾತ್ಪರ್ಯೋಕ್ತಿಯು.

**"ಅಜಾಮೇಕಾ ಲೋಹಿತ ಕೃಷ್ಣ ಶುಕ್ಲಾಂ" ಎಂತ ಶೃತಿ ಪ್ರಮಾಣ.**

ಗುಣತ್ರಯ ಸೃಷ್ಟಿಗೆ ಪೂರ್ವದಲ್ಲಿಯೇ ಜಡಪ್ರಕೃತಿಯೇವೇ ರಜೋಗುಣ ತಮೋಗುಣ ಸತ್ವ ಗುಣ ಎಂತ ಕರೆಸಿಕೊಳ್ಳುತ್ತದೆ. ಎಂತ ಶೃತಿಯ ಅರ್ಥ. ತೃತೀಯ ತಾತ್ಪರ್ಯದಿಂದ ಮಹತ್ಪ್ರಕೃತಿ ಅಹಂಕಾರ ಪ್ರಕಾರ ಪ್ರಕೃತಿ ಮನಃ ಪ್ರಕೃತಿ ಬುದ್ಧಿ ಪ್ರಕೃತಿ ಈ ಪ್ರಕಾರ ಪೃಥಿವೀ ಪ್ರಕೃತಿ ತನಕ ಕಾರಣಾತ್ಮನಾ ನಿತ್ಯವಾಗಿ ವಿಂಗಡಿಸಲಿಕ್ಕೆ ಅಶಕ್ಯವಾಗಿ ಕಲಿಸಿಕೊಂಡು ವ್ಯಾಪ್ತವಾಗಿ ಅಪರಿಛಿನ್ನವಾಗಿರುವುದರಿಂದ ಒಂದು ಸೂಕ್ಷ್ಮ ಜಡಪ್ರಕೃತಿಯೇ ಸರ್ವ ತತ್ವಾತ್ಮಕವಾಗಿ ಹ್ಯಾಗೆ ಇದೆಯೋ ಹಾಗೆ ಜೀವರ ಲಿಂಗಶರೀರವೂ ಕೂಡ ಸತ್ವ ರಜಸ್ತಮ ಪರಿಚ್ಛೇದಗಳು ಉಳ್ಳದ್ದಾಗಿ ಒಂದು ಲಿಂಗಶರೀರವೇ ಜಡಪ್ರಕೃತಿಂಯೋಪಾದಿಂಯಲ್ಲಿ ಸರ್ವ ತತ್ವಾತ್ಮಕವೇ ಆಗಿ ಕಾರಣಭೂತವಾಗಿರೋಣವೇ ಅದರ ಸ್ವಭಾವವು. ಆದುದರಿಂದ ಜಡಪ್ರಕೃತಿಯ ಕಾರ್ಯವಾದ ಗುಣತ್ರಯದಲ್ಲಿ ವೈಷಮ್ಯ ಬಂದು ತತ್ವ ಸೃಷ್ಟಿಯಾಗೋಣ– ಸಾಮ್ಯಾವಸ್ಥೆಯಲ್ಲಿ ತತ್ವಗಳು ಮಹಾಪ್ರಲಯದಲ್ಲಿ ಮೂಲ ಜಡ ಪ್ರಕೃತಿಯಲ್ಲಿ ಲಯ ಹೊಂದೋಣ ಹ್ಯಾಗೋ ಹಾಗೆ ಈ ಅನಾದಿ ಲಿಂಗ ಶರೀರದಲ್ಲಿಯೂ ಪ್ರತಿ ಪ್ರತಿ ಬ್ರಹ್ಮ ಕಲ್ಪಗಳಲ್ಲಿಯೂ ಶ್ರೀ ಹರಿಯಿಂದ ಜೀವರು ಸೃಷ್ಟಿಗೆ ಬಂದ ತರುವಾಯ ಜೀವರ ಯೋಗ್ಯತಾನುಸಾರ ಶತ ಕಲ್ಪ ಸಾಧನದವರ ಮೊದಲು ಮಾಡಿ ಯಥಾ ಯೋಗ್ಯಾಧಿಕಾರಿ ಜೀವರುಗಳ ಲಿಂಗದೇಹದಲ್ಲಿ ಇರುವ ಸತ್ವ ರಜಸ್ತಮ ಪರಿಚ್ಛೇದಗಳಲ್ಲಿ ಬಹು ವಿಧ ಬಿಂದುಗಳು, ಈ ಬಿಂದುಗಳು ಆ ಪರಿಚ್ಛೇದಕ್ಕೆ ಕೊಡೋಣ, ಆ ಪರಿಚ್ಛೇದದ ಬಿಂದುಗಳು ಈ ಪರಿಚ್ಛೇದಕ್ಕೆ ಕೊಡೋಣ. ಇದರಲ್ಲಿ ಒಂದೊಂದು ಪರಿಚ್ಛೇದದಲ್ಲಿ ಅನಂತ ಪರಿಮಾಣುಗಳು ಕೂತು ಇವೆ. ಆದ ಪ್ರಯುಕ್ತ ಅದರಿಂದ ಬಹು ಬಿಂದುಗಳು ಉದುರಿ ಅದರಿಂದ ಅವ್ಯಕ್ತ ದೇಹ ಅದರಿಂದ ಅನಿರುದ್ಧ ದೇಹ ಇಂತಹ ಮೂರು ದೇಹದಲ್ಲಿಯೂ ಷೋಡಶಕಲೆಗಳು ವೈಷಮ್ಯವಾಗಿ ಸ್ಥಿತಿಕಾಲದಲಿ ಜೀವರ ಸಕಲ ಭೋಗಕ್ಕೂ ನಿಮಿತ್ತ ಕಾರಣವಾಗಿದ್ದು ಮಹಾಪ್ರಲಯದಲ್ಲಿ ಮೂರು ಪರಿಚ್ಛೇದದಲ್ಲಿಯೂ ಬಿಂದುಗಳ ವೈಷಮ್ಯ ಬಿಟ್ಟು ಸಾಮ್ಯಾವಸ್ಥೆ ಬಿಂದು ವಿರಜಾ ಸ್ನಾನಕ್ಕೆ ಪೂರ್ವ

ಕಲ್ಪಗಳಲ್ಲಿ ಜೀವರ ಸಹಿತವಾಗಿ ಭಗವದುದರ ಪ್ರವೇಶ ಮಾಡಿಕೊಂಡು ಇದ್ದು ಪುನಃ ಸೃಷ್ಟಿಯಲ್ಲಿ ಯಥಾಪ್ರಕಾರ ಬಿಂದು ವೈಷಮ್ಯಗಳಿಗೂ ಸೃಷ್ಟಿಗೂ ಕಾರಣವಾದ ಪ್ರಯುಕ್ತ ಇದೂನೂ ಕಾರ್ಯರೂಪವಾದ ತತ್ವಗಳಿಗೆ ಜನ್ಯವಾದುದರಿಂದ ಮೂಲ ಜಡಪ್ರಕೃತಿಗೆ ಸಮವಾದ ಮಹಾಮಹಿಮೆಯುಳ್ಳಂಥಾದುದರಿಂದ ಇಂತಹ ಅನಾದಿ ಲಿಂಗ ಬದ್ಧ ಜೀವರುಗಳೇ ಅನಂತಗಳಾಗಿ ಬದ್ಧರಾಗಿರುವುದೇ ಸಿದ್ಧ.

*ಲಯೋ ರಜೋ ಭಾಗ ಮಧ್ಯಗತೋ ಅಣುರಾಜ ಪಶ್ಚಯಃ।*
*ರಜೋ ಮಧ್ಯೇ ವ್ಯಕ್ತಿಮೇತಿ ಸೃಷ್ಟಿ ಕಾಲ ಉಪಾಗತೆ ॥*

ಇದರ ಅರ್ಥ ಮುಂದೆ ತಿಳಿಯ ಹೇಳುತ್ತೇನೆ.

*ಪ್ರಕೃತೌ ಲಿಂಗದೇಹೇಪಿಹ್ಯೇನಂ ಯದ್ ಗುಣಸ್ಥಿತಿಃ।*
*ಸಾಮ್ಯಾವಸ್ಥಾಂ ಜಗುಃ ಪ್ರಾಜ್ಞಾಸ್ತಥಾ ಸೃಷ್ಟಿರ್ಭವಿಷ್ಯತಿ ॥*

ಹೀಗೆ ಪ್ರಕಾಶ ಸಂಹಿತಾ ಸಪ್ತಮೋಧ್ಯಾಯ ಸಿದ್ಧ.

*ಜಡಾಯಂ ಪ್ರಕೃತಾಚಾಪಿ ಲಿಂಗದೇಹೇ ತಥೈವಚ।*
*ಸಂತ್ಯನಂತಾಣವಸ್ತೇಷು ಪೂರ್ವೋಕ್ತಾಃ ಕಾರ್ಯಸಾಧಕಾಃ ॥*
*ಏಕೈಕಸ್ಮಿನ್ಪರಿಚ್ಛೇದೇಪ್ಯನಂತಾಃ ಪರಮಾಣವಃ।*
*ಸತ್ವಸಂಗತಾನ್ ರಾಜಸಾಂಶಾನ್ ಲಯೇ ರಾಜಸ ಸಾತ್ವಿಕಾನ್ ॥*
*ವದಂತಿ ತಾಮಸಗತಂ ರಜೋರಾಜಸ ತಾಮಸಂ ।*
*ವದಂತ್ಯೇವಂ ಲಯೇ ಯೋಗೋ ಭವತಿ ಶ್ರೀಹರಿಚ್ಛೆಯಾ ॥*
*ಸಾಮ್ಯಾವಸ್ಥಾಂ ಬುಧಾಃ ಪ್ರಾಹುಃ ಏತಾಂ ಪ್ರಕೃತಿ ಲಿಂಗಯೋಃ ॥*

ಎಂದು ಪ್ರಕಾಶ ಸಂಹಿತಾ ೫ನೇ ಅಧ್ಯಾಯವು.

ಇದರಿಂದ ಲಿಂಗಶರೀರವು ಮೂಲ ಜಡಪ್ರಕೃತಿಗೆ ಸಮ ಮಹತ್ವ ಉಳ್ಳದ್ದು ಎಂತ ತಿಳಿಯಬೇಕು. ಮೂರು ಪರಿಚ್ಛೇದ ಉಳ್ಳಂಥಾ ಲೀಂಗದೇಹದಲ್ಲಿ ಜೀವನಿಗೆ ಸೇರಿದಹಾಗೆ ಇರುವ ಸತ್ವ ಪರಿಚ್ಛೇದ ಎರಡನೇ ರಜಃ ಪರಿಚ್ಛೇದ ಮೂರನೇ ತಮಃ ಪರಿಚ್ಛೆದ– ಪ್ರಥಮ ಸತ್ವ ಪರಿಚ್ಛೇದದಲ್ಲಿ ಸಾತ್ವಿಕ ಮನಸ್ಸು, ೨ನೇ ಪರಿಚ್ಛೇದದಲ್ಲಿ ರಾಜಸ ಮನಸ್ಸು ಅಲ್ಲಿ ಶ್ರೋತ್ರಾದಿ ಪಂಚ ಜ್ಞಾನೇಂದ್ರಿಯಗಳು

ವಾಕ್ಪಾಣ್ಯಾತ್ಯಾದಿ ಪಂಚ ಕರ್ಮೇಂದ್ರಿಯಗಳು ಅಂತು ಹತ್ತು. ಇಷ್ಟರಲಿಯೂ ರಾಜಸ ಮನಸ್ಸು ಅದೆ. ಮೂರನೇ ತಾಮಸ ಪರಿಚ್ಛೇದದಲ್ಲಿ ತಾಮಸ ಮನಸ್ಸು– ಅಲ್ಲಿ ಶಬ್ದ ಸ್ಪರ್ಶ ರಸ ಗಂಧ ಈ ಐದು ವಿಷಯಗಳು ಅಜ್ಞಾನ ಮೋಹ ಮಹಾಮೋಹ ತಾಮಿಸ್ರ ಅಂಧತಾಮಿಸ್ರ ಈ ಐದು ಪ್ರಕಾರ ಅಜ್ಞಾನಗಳು. ಅಂತು ಹತ್ತು ಇಷ್ಟರಲ್ಲಿಯೂ ತಾಮಸ ಮನಸ್ಸು ಅದೆ. ಇಂತಹ ಲಿಂಗ ದೇಹದ ಮಧ್ಯದಲ್ಲಿ ಸಚ್ಚಿದಾನಂದಾತ್ಮಕ ಜೀವಗೆ ಸ್ವರೂಪಭೂತವಾದ ಸಾಕ್ಷೀಂದ್ರಿಯಗಳು ಪ್ರಥಮ ಸತ್ವಪರಿಚ್ಛೇದಗತ ಸಾತ್ವಿಕ ಮನಸ್ಸಿನಿಂದ ಕೂಡಿದ ಪಕ್ಷದಲ್ಲಿ ಜೀವಗೆ ಬಾಹ್ಯ ಜ್ಞಾನವು ಹುಟ್ಟುತ್ತದೆ. ಅದೇ ವೃತ್ತಿ ಜ್ಞಾನ. ಶಾಸ್ತ್ರಜನ್ಯ ಜ್ಞಾನವು ಅದೇಸರಿ– ಎರಡನೇ ಪರಿಚ್ಛೇದಗತ ರಾಜಸ ಮನಸ್ಸಿನಿಂದ ಸಂಯುಕ್ತವಾದರೆ ಕಾಮ ಕ್ರೋಧ ಲೋಭ ಮೋಹ ಮದ ಮಾತ್ಸರ್ಯ ಈ ಅರಿಷಡ್ವರ್ಗಗಳು ಹುಟ್ಟುತ್ತವೆ. ಅವುಗಳು ಬಾಹ್ಯಗಳು. ಜೀವರ ಸೃಷ್ಟಿಗೆ ಪೂರ್ವದಲ್ಲಿ ಅಖಂಡ ನಿದ್ರೆಯಾದ ಪ್ರಯುಕ್ತ ಆ ನಿದ್ರೆಯಲ್ಲಿ ಅನಾದಿ ಕಾಮವೇ ಹಿಂದಾಗಿ ಶಕ್ತವಾಗಿತ್ತು. ಈಗಲಾದರೂ ಈ ಅರಿಷಡ್ವರ್ಗಗಳಿಗೆ ಕಾಮವೇ ಮುಖ್ಯವಾದುದರಿಂದ ಕ್ರೋಧ ಅದರಿಂದ ಲೋಭ ಅದರಿಂದ ಮೋಹ ಅದರಿಂದ ಮತ್ಸರ ಹುಟ್ಟುವುದು. ಇದಕ್ಕೆ ಮೊದಲು ಯಜಮಾನನೋಪಾದಿಯಲ್ಲಿ ಅನಾದಿ ಶಕ್ತ ಕಾಮವೇ ವ್ಯಕ್ತವಾಗಿ ಈಗ ಕಾರ್ಯರೂಪವಾಗಿ ಪ್ರವಾಹರೂಪವಾಗಿ ಅದೆ. ಸೃಷ್ಟಿಗೆ ಪೂರ್ವ ಅನಾದಿ ಕಾಮವು ಶಕ್ತವಾದರೂ ಕಾರಣರೂಪವಾಗಿ ಪ್ರವಾಹರೂಪವಾಗಿಯೇ ಇತ್ತು. ಇನ್ನು ಇದೇ ಪರಿಚ್ಛೇದಗತ (೨ನೇ ಪರಿಚ್ಛೇದ) ಶ್ರೋತ್ರ – ತ್ವಕ್ – ಚಕ್ಷು – ಜಿಹ್ವೆ –ಘ್ರಾಣ ಈ ಐದು ಜ್ಞಾನೇಂದ್ರಿಯ ಕಲೆಗಳಿಂದ ಸಾಕ್ಷೀಂದ್ರಿಯಕ್ಕೂ ಇದರ ಬಾಹ್ಯಗಳಾದ ಶಬ್ದ ಕೇಳೇನು ಸ್ಪರ್ಶ ಮಾಡೇನು–ರೂಪನೋಡೇನು –ರಸ ಸ್ವೀಕರಿಸೇನು ಗಂಧ ಆಘ್ರಾಣ ಮಾಡೇನು ಎಂದು ಇಚ್ಛೆಗಳು ಹುಟ್ಟುತ್ತವೆ. ಇದು ಅನಾದಿ ಕಾಮವೇಸರಿ.

ವಾಕ್ ಪಾಣಿ ಪಾದ ಪಾಂಯು ಉಪಸ್ಥ ಎಂಬ ಐದು ಕರ್ಮೇಂದ್ರಿಯಗಳಾದ ಸಾಕ್ಷೀಂದ್ರಿಯಗತ ಪ್ರಕಾಶ ಮಿಶ್ರ ವೆಂದರೆ ಅನಾದಿ ಕರ್ಮಗಳನ್ನು ಸೃಷ್ಟಿಸುತ್ತದೆ– ಹ್ಯಾಗೆಂದರೆ ಅನಾದಿ ಅಖಂಡ ನಿದ್ರೆಒಳಗೆ ಇದ್ದ ಜೀವನಿಂದಲೇ ಶಕ್ತವಾಗಿ ಪ್ರವಾಹರೂಪವಾಗಿಯೂ ಮಾಡುತ್ತಾ ಬಂದ ಕರ್ಮಗಳನ್ನೇ ಮನೆಯಲ್ಲಿದ್ದ ಪದಾರ್ಥಗಳಂತೆ ತೆಗೆದು ಪಾಕಮಾಡುವಂತೆ

ವ್ಯಕ್ತವಾಗೋಣವೇ ಕರ್ಮ ಮಾಡೋಣ ಎಂತ ವ್ಯವಹಾರ ಸಾತ್ವಿಕ ಜೀವರಿಗೆ ಸತ್ವ ಬುದ್ಧಿ ಹೆಚ್ಚು ಸಾತ್ವಿಕ ಕರ್ಮ ಹೆಚ್ಚು ರಾಜಸ ತಾಮಸ ಬುದ್ಧಿಗಳು ಹಾಗೆ ಕರ್ಮಗಳು ಸ್ವಲ್ಪ ಸ್ವಲ್ಪವು.

ರಾಜಸ ಜೀವರಿಗೆ ರಾಜಸ ಬುದ್ಧಿ ರಾಜಸ ಕರ್ಮಗಳು ಹೆಚ್ಚು. ತಾಮಸ ಜೀವರಿಗೆ ತಾಮಸ ಬುದ್ಧಿ ತಾಮಸ ಕರ್ಮಗಳು ಹೆಚ್ಚು. ಮಿಕ್ಕ ಎರಡು ಗುಣ ಧರ್ಮಗಳು ಕಡಿಮೆ. ಏತೇನ ತ್ರಿವಿಧ ಜೀವರಾಶಿಗೂ ಅವರವರ ಸ್ವಭಾವ ಬುದ್ಧಿಗಳು ಪ್ರತ್ಯೇಕವಾಗಿ ಇರುತ್ತವೆ. ಅನಂತರ ಒನೇ ಪರಿಚ್ಛೇದಗತ ಪಂಚಪರ್ವ ಅಜ್ಞಾನಗಳಲ್ಲಿ ಸಾಕ್ಷೀಂದ್ರಿಯ ಮಿಶ್ರವಾದರೆ ಮರುವು ಹುಟ್ಟುತ್ತದೆ. ಹುಟ್ಟೋಣ ಎಂದರೆ ಕಾರಣಾತ್ಮನಾ ಇದ್ದುದ್ದಕ್ಕೆ ಅಭಿವ್ಯಕ್ತಿಯು. ಕಾರಣ ಸೃಷ್ಟಿಯೂ ಉಂಟು ಎಂತ ಅನಾದಿ ಕರ್ಮದೋಪಾದಿಯಲ್ಲಿ ಹೇಳತಕ್ಕದ್ದು.

ಪ್ರಮಾಣ :-

*ಸೃಷ್ಟಿಕಾಲೇ ತ್ರಿಧಾಭಿನ್ನಾ ಜೀವಾನಂ ಬುದ್ಧಿರಿಷ್ಯತೆ।*
*ಸಾತ್ವಿಕ ರಾಜಸೀಚೇತಿ ತಾಮಸೀತಿಸಮಸ್ತಶಃ ॥*
*ಯೋಗ್ಯಾನಂ ಸಾತ್ವಿಕೀ ಬುದ್ಧೀರ್ಬಹುಲಾನ್ಯೇ ಅಲ್ಪಕೀಮತೇ।*
*ರಾಜಸೀಮಧ್ಯಮಾವಾಂತು ನೀಚಾನಾಂ ತಾಮಸೀ ಮತಿಃ ॥*
*ಕ್ರಮಾತ್ ಬಹುತರೋ ಅನ್ಯೇತು ಸ್ವಲ್ಪ ಮಾತ್ರೇ ಭವಿಷ್ಯತಃ*
*ಪಂಚ ಮಾತ್ರ ಗತಾ ಜ್ಞಾನಂ ಪಂಚಕಂ ಲಿಂಗದೇಹಗಂ ॥*
*ಅನಾದ್ಯಜ್ಞಾನಮುದ್ದಿಶ್ಟಂ ಬಾಹ್ಯ ಸ್ವರೂಪಕಂವರ್ತತೆ ।*
*ಸಾಕ್ಷೀಂದ್ರಿಯಾ ಶಶ್ವಸ್ಥ ಮನಸಾ ಪಾಗವೋಯದಿ ।*
*ಬಾಹ್ಯ ಸ್ವರೂಪಕಂ ಜ್ಞಾನಂ ತ್ರಿವಿಧಾನಾಂ ಭವಿಷ್ಯತಿ ।*
*ಸಾಕ್ಷೀಂದ್ರಿಯಾಣಾಂ ರಜಸಾ ಮನಸಾ ಸಂಗವೋಯದಿ ।*
*ಬಾಹ್ಯ ಸ್ವರೂಪಕಂಚ ಕಾಮ ಕ್ರೋಧಾದಿಕಂಚಯತ್ ।*
*ಅನಾದಿ ಕಾಮೊ ಜೀವಾನಾಂ ತ್ರಿವಿಧಾನಾಂ ಭವಿಷ್ಯತಿ ।*
*ರಜಃ ಪರಿಚ್ಛೇದಗತಾ ಜ್ಞಾನೇಂದ್ರಿಯ ಕಲಾಯದಿ ।*
*ಸಾಕ್ಷೀಂದ್ರಿಯಯಂತಾ ಬಾಹ್ಯ ಶಬ್ದಾದೀಚ್ಛಾ ಭವಿಷ್ಯತಿ ।*
*ಅನಾದಿ ಕಾಮ ಸಾ ಪ್ರೋಕ್ತಾ ತ್ರಿವಿಧಾನಾಂ ಚ ತಾಮಿಹ ।*

***ರಜಃಪರಿಚ್ಛೇದಗತಾ ಕರ್ಮೇಂದ್ರಿಯ ಕಲಾಯದಿ ॥***
***ಸಾಕ್ಷೀಂದ್ರಿಯ ಯುತಾ ಕರ್ಮ ಜನಯತ್ಯಪ್ಯನಾದಿಕಂ ॥***

ಇತಿ ಪ್ರಕಾಶ ಸಂಹಿತಾ ೭ನೇ ಅಧ್ಯಾಯ.
ಈ ಪ್ರಕಾರ ಜೀವರ ಕರ್ಮಾಚರಣೆಯ ರೀತಿಯು.

ಈಗ ಜೀವರಿಗೆ ಪ್ರತಿಬಂಧಕವಾಗಿ ಇರುವುದರ ವಿವರ-

ಶ್ರೀಹರಿಯ ಇಚ್ಛಾ ೧. ಪ್ರಕೃತ್ಯಭಿಮಾನಿಯಾದ ಲಕ್ಷ್ಮೀದೇವಿಯ ಇಚ್ಛಾ೨- ಲಿಂಗಶರೀರ ೩- ಅನಾದಿ ಕರ್ಮ ಸಮೂಹ ೪- ಗುಣತ್ರಯಗಳೂಕೂಡಿ ೫. ಇದಕ್ಕೆ ವಿವರ ಜ್ಞಾನ ಆನಂದ ಇದು ಸತ್ವ ಗುಣ. ದಶೇಂದ್ರಿಯಗಳು ರಜೋಗುಣ ಅಜ್ಞಾನಗಳು ತಮೋಗುಣ ಇವು ಮೂರೂ ಗುಣತ್ರಯಗಳು ಜೀವಾಚ್ಛಾದಿಕರೂಪವಾದ ಅನಾದ್ಯವಿದ್ಯಾ(೬). ಇದು ಲಿಂಗ ಪರಿಚ್ಛೇದದಲ್ಲಿ ಒಂದೊಂದುರೂಪದಿಂದ ಸೇರಿಕೊಂಡು ಮತ್ತೊಂದುರೂಪದಿಂದ ಆಚ್ಛಾದಿತ ಅಂದರೆ ಅಂತರ್ಪಟರೂಪವಾಗಿಯೂ ಇದೆ. ಬಿಂಬಾಪರೋಕ್ಷಕ ಪ್ರತಿಬಂಧಕ(೭). ಇದರಲ್ಲಿ ಅನಾದಿ ಕಾಮ ಎಂಬುದು ತದಭಿಮಾನಿ ಲಕ್ಷ್ಮೀ ಇಚ್ಛೆಯು ಒಳಗೆ ಸೇರಿಯಿದೆ. ಈ ಪ್ರಕಾರ ಏಳು ಆವರಣಗಳಿಂದ ಸರ್ವದಾ ಅನಾದಿಯಾದ ಜೀವನು ಬದ್ಧನಾಗಿ ಇರೋಣಾದ್ದರಿಂದ ಸರ್ವಪ್ರಕಾರದಿಂದಲೂ ಸಂಪೂರ್ಣ ಶಾಸ್ತ್ರ ಶ್ರವಣ ಮಾಡಿದ ಕಾಲಕ್ಕೂ ತನ್ನ ಸ್ವರೂಪಾಕಾರವನ್ನು ತನ್ನ ಅಂತರ್ಗತ ಸ್ವಾಮಿಯು ನಮ್ಮ ಸ್ಥೂಲ ದೇಹಗತನಿಂದ ಬಿಂಬರೂಪವನ್ನು ಜೀವಾಂತರ್ಯಾಮಿಯಾದ ರೂಪವನ್ನೂ ಅರಿಯದೆ ಜೀವರು ಅಜ್ಞಾನ ಮೋಹಿತರಾಗಿ ಇರುತ್ತಾರೆ. ಅತಏವ ದೇಹೇಂದ್ರಿಯಗಳು ನನ್ನದು ಎಂಬ ಅಭಿಮಾನದಿಂದ ಅಂತರದಲ್ಲೂ ಬಾಹ್ಯದಲ್ಲೂ ಅನಂತಾನಂತ ರೂಪಧಾರಿಯಾದ ಸ್ವಾಮಿಯ ಅಧೀನವಾದ ತಾನು ಅವನ ವಶವೆಂದು ಅರಿಯದೆ ಸರ್ವವೂ ತನ್ನ ವಶವೆಂದು ತಿಳಿದ ಪ್ರಯುಕ್ತ ಈ ಸ್ವರ್ಗ ನರಕಾದಿಗಳಲ್ಲಿ ಬಹು ದಿನ ಸುಖ ದುಃಖಪಡುತ್ತಾರೆ. ಮುಕ್ತಿ ಯೋಗ್ಯರು ಚಿದಾನಂದಾತ್ಮಕ ಜೀವರಿಗೆ ಇಂತಹ ಸಂಸಾರಾನುಭವ ಯೋಗ್ಯವಲ್ಲ. ತಮ್ಮ ಸ್ವರೂಪಾನಂದಾನುಭವಕ್ಕೆ ಪ್ರತಿಬಂಧಕ ಸಂಸಾರಾನುಭವ ಸುಖ ದುಃಖಗಳ ಅನುಭವ ಹ್ಯಾಗೆಂದರೆ ಮನಸ್ಸಿನ ವಿಕಾರವೇ- ಸುಖ ದುಃಖಗಳ ಯಾಥಾರ್ಥ್ಯರೂಪವಾದದ್ದು. ಮನಸ್ಸಿನ ಧರ್ಮಗಳು ಒಂದು ವೃಕ್ಷ ಭೂಮಿಯಲ್ಲಿ ಹುಟ್ಟಿ ಆಕಾಶದಲ್ಲಿ ಹ್ಯಾಗೆ ಫಲ ಸೃಷ್ಟಿಸುವುದೋ ಹಾಗೆ

ಸುಖ ದುಃಖಗಳೆರಡೂ ಮನೋಧರ್ಮಗಳು. ಸ್ಥೂಲ ದೇಹದಲ್ಲಿ ವ್ಯಾಪ್ತಪ್ರಕಾಶ ಜೀವನಲ್ಲಿ ಹುಟ್ಟುತ್ತವೆ. ಆ ಪ್ರಕಾಶವೇ ಜೀವನಾಗಿ ಅನುಭವಿಸುತ್ತಾನೆ. ಅದು ಎರಡು ಜೀವ ಧರ್ಮಗಳು ಅಲ್ಲ. ಸುಖ ದುಃಖದ ಅನುಭವ ಮಾತ್ರ ಜೀವ ಧರ್ಮ– ಆ ಅನುಭವ ಜ್ಞಾನ ಸ್ವರೂಪವು ಎಂತ ಗೀತಾಭಾಷ್ಯ ಪ್ರಮೇಯ ದೀಪಿಕಾ ಸಿದ್ಧ. ಅನುಭವವೆಂದರೆ ಭೊಗವು. "ನೀಚೋಚ್ಚತ್ಯೈವ ದುಃಖಾದೇಃ ಭೊಗ್ಯೈತ್ಯಭಿಧೀಯತೆ" ಹಾಗಾದರೆ ಎರಡು ಭೊಗವು ಜೀವ ಧರ್ಮವಾದಲ್ಲಿ ಸರ್ವದಾ ಆ ಭೊಗವೇ ಇರಲಿ ಎಂದರೆ ಅದು ಭಿನ್ನಾಭಿನ್ನ– ಹ್ಯಾಗೆಂದರೆ ಸುಖಾನುಭವ ಕಾಲದಲ್ಲಿ ಆ ಅನುಭವ ಜೀವ ಧರ್ಮವಾದುದರಿಂದ ಆಕಾಲಕ್ಕೆ ದುಃಖದ ಅನುಭವವು ಜೀವನ ಧರ್ಮವಲ್ಲವು. ಭಿನ್ನವೇ ಸರಿ. ದುಃಖದ ಅನುಭವಕಾಲದಲ್ಲಿ ಆ ಭೋಗವೇ ಜೀವಧರ್ಮವಾದುದರಿಂದ ಆ ಕಾಲಕ್ಕೆ ಸುಖದ ಅನುಭವವು ಜೀವನ ಧರ್ಮವಲ್ಲ. ಅದೂ ಭಿನ್ನವೇಸರಿ. – ಹೀಗೆ ಆ ಎರಡು ಅನುಭವಕ್ಕೂ ಆಯಾ ಕಾಲಕ್ಕೆ ಜೀವಸ್ವರೂಪ ಧರ್ಮಗಳಾದುದರಿಂದ ಭಿನ್ನಾಭಿನ್ನ ಎಂದು ಕರೆಸಿಕೊಳ್ಳುತ್ತದೆ. ಇಂತಹ ಬಂಧಕ ಶಕ್ತಿ ಹರೀಚ್ಛಾದಿಂದಲೇ ಪ್ರಾಪ್ತ. ಹರಿಯೇ ಬಂಧಪ್ರದನೆಂದು ಕರೆಸಿಕೊಳುತ್ತಾನೆ. ಅತ ಏವ ಜೀವರ ಸಂಸಾರ ಬಂಧಕ್ಕೆ ಪ್ರಥಮಾವರಣವೇ ಶ್ರೀಹರಿಯ ಆವರಣವು.

*ಸ್ಮೃತಿ ಸಂಸ್ಥಾ ಶ್ರೀಹರೀಚ್ಛೆಯಾ ಮಾಯಾಖ್ಯಯಾ।*
*ಮಹಾಲಕ್ಷ್ಮ್ಯಾ ಪ್ರಕೃತ್ಯಾದ್ಯಭಿಮಾನಯಾ ।*
*ಲಿಂಗ ತನ್ವಾಕರ್ಮಭಿಶ್ಚ ಗುಣೈಃ ಸತ್ವಾದಿಕೈರಪಿ ।*
*ಅವಿದ್ಯಯಾ ಪ್ರಕೃತ್ಯಾಚ ಜೀವಾಚ್ಛಾದಿಕ ಸಂಜ್ಞಯಾ ॥*
*ಸ್ವಾತ್ಮಾನಂ ಹರಿಂಚಾಪಿ ಸಮ್ಯಕ್ ಜಾನಂತಿ ಮೋಹಿತಾಃ ।*
*ತತಏವಾಭಿಮಾನಾಚ್ಚ ದೇಹಾದೀಶ ವಶೇಸ್ಥಿತಾ ॥*
*ಭ್ರಮಂತಿ ಸ್ವವಶತ್ವೇನ ತೇನೈಷಾಂ ಸಂಸೃತಿರ್ಮತಾ ॥*
*ಮನೋವಿಕಾರಾದೀನ್ ಸತ್ಯಾನನುಭವಂತಿಚ. ॥*
*ನೀಚೋಚ್ಚ ತಾದಿಕಂತೇನ ಸ್ವರೂಪೋಪಿ ಹಿ ಜಾಯತೇ ।*
*ಭಿನ್ನಾಭಿನ್ನ ಮತೋಪೀಶೋ ಬಂಧದಃ ಪರಿಕೀರ್ತಿತಃ ।*

ಎಂತ ಸತ್ತತ್ವರತ್ನಮಾಲಾ – ಮುಕ್ತಿ ಯೋಗ್ಯ ಪ್ರಕರಣವು.

ಇಲ್ಲಿ ಆಕ್ಷೇಪ :- ಪರಮಾತ್ಮನು ಜ್ಞಾನಾನಂದಾತ್ಮಕ ವಿಗ್ರಹನು- ಜೀವರ ಸ್ವರೂಪವು ಜ್ಞಾನಾನಂದಾತ್ಮಕ- ವಾದುದರಿಂದ ಜೀವ ಭಿನ್ನವಾದ ಮನೋಧರ್ಮವಾದ ಸುಖ ದುಃಖಗಳು ಜೀವನಲ್ಲಿರುವುದಕ್ಕೆ ಕೆಲಸವಿಲ್ಲ, ಜೀವನಲ್ಲಿರುವುದಾದರಲ್ಲಿ ಪರಮಾತ್ಮನಲ್ಲಿ ಏಕೆ ಹುಟ್ಟಬಾರದು?. ಎಂದರೆ ಪರಮಾತ್ಮನು ನಿರ್ಲೇಪಾಭಿಮಾನಿಯು. ಜೀವನು ಲೇಪಾಭಿಮಾನಿಯು. ಲೇಪವೆಂದರೆ - ಪುಣ್ಯ ಪಾಪ ಸಂಬಂಧವು- ಸಂಬಂಧವೆಂದರೆ ಪೂರ್ವದಲ್ಲಿ ಹೇಳಿದ ಭಿನ್ನಾಭಿನ್ನವೆಂಬ ಅನುಭವಗಳು. ಆದುದರಿಂದ ವಿರಜಾನದಿ ಸ್ನಾನದ ತನಕ ಜೀವ ಸ್ವರೂಪಾನಂದಕ್ಕೆ ಸಾಕಲ್ಯೇನ ಅಭಿವ್ಯಕ್ತಿ ಇಲ್ಲ. ಅಭಿವ್ಯಕ್ತಿ ಎಂದರೂ ಉದ್ರೇಕ ಎಂದರೂ ಒಂದೇ ಅರ್ಥವು. ಹಾಗದರೆ ನಿದ್ರೆ ಒಳಗೆ ಜೀವಗೆ ಸ್ವರೂಪ ಸುಖೋದ್ರೇಕ ಉಂಟು ಎಂಬ ಪ್ರಮಾಣ :-

*ಪ್ರಾಜ್ಞಾಲಿಂಗನ ಮಾಹಾತ್ಮ್ಯಾತ್ಸ್ವರೂಪಾವಯವೇಂದ್ರಿಯೈಃ ।*
*ವಿಹಾರಂಶ್ಚ ಸ್ವರೂಪಾಣಿ ಸುಖಾನುಭವತ್ಯಲಂ ॥* ಎಂತ ಆಧ್ಯಾತ್ಮಮಾಲಾ.

ನಿದ್ರಾ ಕಾಲದಲ್ಲಿ ಸ್ವರೂಪಾನಂದಕ್ಕೆ ಸ್ವಲ್ಪ ವೃದ್ಧಿಯು ಉಂಟು. ಹಾಲು ಸ್ವಲ್ಪಮಾತ್ರ ಉಕ್ಕಿದ ರೀತಿ. ಸಾಕಲ್ಯೇನ ಸುಷುಪ್ತಿಯಲ್ಲಿ ಅಭಿವೃದ್ಧಿಯಿಲ್ಲಎಂತ ಐ ಜೀ ಆಚಾರ್ಯರು ತಮ್ಮ ಮಾನಸ ಸ್ಮೃತಿಯಲ್ಲಿ ಹೇಳಿದ್ದಾರೆ. - ಅಷ್ಟುಮಾತ್ರವೇ ಅಲ್ಲ

*"ಅಹರಹದೇನಮನುಪ್ರವಿಶತಿ ನತತ್ರ ಮೋದತೇ- ನಪ್ರಮೋದತೆ- ಬದ್ಧೋಹ್ಯೇಷ ಸಂಭವತಿ""* ಎಂತ ಈ ಶ್ರುತಿಯಲ್ಲಿ ಸುಷುಪ್ತಿಯಲ್ಲಿ ಸ್ವರೂಪ ಸುಖೋದ್ರೇಕ ಸಾಕಲ್ಯೇನ ಇಲ್ಲ ಎಂತಲೂ

*"ಅಥೈನ ಮುಕ್ತೋಪ್ರವಿಶತಿ ಮೋದತೇಚ ಪ್ರಮೋದತೇಚ"*
*ಎಂತಸೂತ್ರ ಭಾಷ್ಯ ಸಿದ್ಧ.*

*ಇದಕ್ಕೆ ಬೃಹದ್ಭಾಷ್ಯ ಪ್ರಮಾಣ: -*

*ಲೇಪಾಭಿಮಾನೀ ಜೀವಸ್ತು ಸ್ವರೂಪಾನಭವೀನ ಚ ।*
*ಮುಕ್ತ: ಪ್ರಾಕ್ತೇನಮಾನ್ಯುಕ್ತೋ ನ ಮಾನೀ ವಿಷ್ಣುರುಚ್ಯತೇ ।*
ಎಂತ ಸರ್ವಜ್ಞರ ಉಕ್ತಿ

ಅತ ಏವ ನಿತ್ಯ ಸಂಸಾರಿಗಳಿಗೆ ಮುಕ್ತಿಯಿಲ್ಲದಿದ್ದರೆ ಅವರ ಸ್ವರೂಪಾನುಭವವೇ ಅವರಿಗೆ ಇಲ್ಲವಾಗುತ್ತದೆ. ಹರಿ ಸಂಕಲ್ಪವೇ ಅಂತಹದಾದರೂ ಆಗಬಹುದು. ಆದುದರಿಂದ ಜೀವಗೆ ಲೇಪಾಭಿಮಾನದ ಮಹಿಮೆಯಿಂದಲೇ ಮನೋಧರ್ಮಗಳಿಂದ ಸುಖ ದುಃಖಗಳು ಜೀವನಲ್ಲಿಯೇ ಹುಟ್ಟುವುದು ಸಿದ್ಧವು. ಜೀವಗೆ ಇದೇ ಬಂಧನ ಕ್ರಮವು. ದೃಷ್ಟಾಂತ:– ಜೀವನಿಗೆ ಅನಾದಿ ಕರ್ಮಗಳು ಹ್ಯಾಗೆ ಪ್ರವಾಹರೂಪವೋ ಹಾಗೆ ಅನಾದಿ ಕಾಮವೂ ಪ್ರವಾಹರೂಪವು. ಏಕೆಂದರೆ ಒಂದು ಕ್ಷಣ ಇಚ್ಛೆ ಹುಟ್ಟಿದ ಹಾಗೆ ಮತ್ತೊಂದು ಕ್ಷಣ ಹುಟ್ಟದೆ ಭಿನ್ನವಾಗಿ ಹೇಗೆ ಪ್ರವಾಹ ಈ ಕಾಮಕರ್ಮಗಳೋಪಾದಿಯಲ್ಲಿ ಅನಾದಿ ಅಜ್ಞಾನ ಒಂದು ಪ್ರಕಾರ ಕತ್ತಲೆಯಾದುದರಿಂದ ಸ್ವರೂಪತಃ ಅನಾದಿಯೇ ಹೊರತು ಪ್ರವಾಹರೂಪವಲ್ಲ. ಆದ್ದರಿಂದ ಇಚ್ಛೆಗೂ ಇಚ್ಛಾನುಸಾರ ಕರ್ಮಕ್ಕೂ ಗಂಟು. ಆದುದರಿಂದ ಈ ಅನಾದಿ ಕಾಮ ಸಹಿತ ಅನಾದಿ ಕರ್ಮಗಳೇ ಅರಗಿನ ಹಾಗೆ. ಆ ಅರಗು ಅಗ್ನಿಜ್ವಾಲೆಯಿಂದ ಹ್ಯಾಗೆ ಕರಗುವುದೋ ಹಾಗೆ ಅನಾದಿಯಿಂದ ಬಂದ ಅಜ್ಞಾನವೆಂಬ ಅಗ್ನಿಜ್ವಾಲೆಯಿಂದ ಕಾಮ ಕರ್ಮಗಳೆಂಬ ಅರಗು ಕರಗಿ ಬಂಗಾರಕ್ಕೆ ಹ್ಯಾಗೆ ಕಚ್ಚಿಕೊಳ್ಳುವುದೋ ಹಾಗೆ ಜೀವರು ವಿರಜಾನದಿ ಸ್ನಾನ ಮಾಡಿ ಮುಕ್ತರಾಗುವ ತನಕ ಪೂರ್ವೋಕ್ತವಾದ ಲೇಪಾಭಿಮಾನವೇ ಕೇವಲ ಬಲವಾಗಿ ಕಚ್ಚಿಕೊಂಡಿರುತ್ತದೆ. ಅನಾದ್ಯವಿದ್ಯಾ ಎಂಬ ಜ್ವಾಲೆಯಿಂದ ಅರಗಿನ ಹಾಗೆ ತಮ್ಮ ಕರ್ಮಗಳು ಕರಗುತ್ತದೆ ಎಂದರೆ ಆ ಅರಗು ಕರಗೋಣ ಯಥಾರ್ಥ ಕಾಮಕರ್ಮಗಳು ಕರಗೋಣಕ್ಕೆ ಭಾವ. ಜೀವನು ಬಲವಾದ ಅಜ್ಞಾನದಿಂದ ಕೆಟ್ಟು ಅತ್ಯಂತ ನೀಚ ನೀಚ ವಿಷಯಗಳನ್ನೇ ಕಾಮಿಸುತ್ತಾ ಬಂದು ಮುಂದಕ್ಕೂ ಅದೇ ಇಚ್ಛೆಯನ್ನೇ ಬೆಳಿಸೋಣ ವಿಷಯಭೋಗಾರ್ಥವಾಗಿ, ಹೇಳಲಿಕ್ಕೆ ಪರಮ ಅಸಹ್ಯವಾದ ನೀಚ ಕರ್ಮಗಳನ್ನು ಮಾಡಿ ಕೆಡೋಣವೇ ಕರಗೋಣ ಎಂತ ಭಾವ. ಪ್ರಮಾಣ:–

*ಯಥಾನಿಬಾಯಾ ದಗ್ಧ ಚಿತುನಾ ಹೇಮಲಿಪ್ಯತೇ।*
*ತಥಾ ಮಹಾವಿದ್ಯಯಾಚ ಕ್ಷೋಭಿತಾತ್ಕಾಮ ಕರ್ಮಭಿಃ ॥*
*ಪ್ರದಾನಾದ್ಪೃಥ್ಯತೇ ಜೀವಾಃ ತಸ್ಮಾದ್ದುಃಖಾನಿವಿಂದತೇ ।*
ಎಂತ ವಾಯು ಪುರಾಣ ಶಾಂಡಿಲ್ಯ ತತ್ವ.

ಪ್ರಧಾನ ಎಂದರೆ ಜಡಪ್ರಕೃತಿ. ಅದೇ ಲಿಂಗ ಶರೀರ ಸ್ವರೂಪವಾದುದರಿಂದ ಲಿಂಗಬದ್ಧರು ಎಂದರ್ಥ. ಆ ಲಿಂಗದ ಕಾರ್ಯ ಕಲೆಗಳಿಂದಲೂ ಹೊರಗಿನ

ಜಡಪ್ರಕೃತಿ ಕಾರ್ಯ ತತ್ವಗಳಿಂದಲೂ ಕಲೆಸಿ ನಿರ್ಮಿಸಿದ ಸ್ಥೂಲ ದೇಹ ಪರಂಪರೆಯಿಂದಲೂ ಬದ್ಧರು ಎಂತ ಅಭಿಪ್ರಾಯವು. ಸುಳಾದಿ:

*"ಜೀವಗೆ ಎಂದೆಂದಿಗೂ ತೊಲಗದ ಭಾವ ಜ್ಞಾನ ಕೇವಲ ಸ್ವರೂಪಭೂತವೆನ್ನಿ"*

ಅಂದರೆ ಜೀವ ಸ್ವಾರೂಪಜ್ಞಾನ ಎಂದೆಂದಿಗೂ ನಿತ್ಯವೇ ಹೊರತು ಲಿಂಗಶರೀರದ ಜ್ಞಾನದ ಹಾಗೆ ವಿರಜಾಸ್ನಾನ ಕಾಲದಲ್ಲಿ ಹೋಗತಕ್ಕದ್ದು ಅಲ್ಲ ಎಂದರ್ಥ. : ಸುಳಾದಿ ಮುಂದಿನ ವಚನ :-

ಪಾವಕ ಮಧ್ಯದಲಿ ದ್ರವ್ಯ ಒಂದಿಡಲು ಅದಕ್ಕೆ ಕಾವಾಗದೇ ಬಿಡದೋ ಇದ್ದಾನಿತು ಜೀವಕೆ ಲಿಂಗದೇಹ ಈ ಪರಿ ಇದ್ದರಾಗೇ ನೋವಾನೋವಾಗದಲೆ ಸುಮ್ಮನಿಡದು. ಈ ವಾದ ಈ ಪರಿ ಸುಖ ದುಃಖ ಲಿಂಗದೇಹ ಜೀವಸ್ವರೂಪವಲ್ಲ ಭಿನ್ನಾಹೌದು

ಸಾವು ಪುಟ್ಟುವುದಕೆ ಕಾರಣವಾಗಿಪ್ಪೋದು ಯಾವತ್ತೂ ಕರ್ಮವಾ ಉಣಿಸಿಕೊಳ್ಳುತ್ತಾ ಈ ರೀತಿ ಜ್ಞಾನವನ್ನು ಪ್ಪೋಗಾಡದಲೆ ನಿಜ ಜ್ಞಾನದಲ್ಲಿ ನಿಲ್ಲದು ನಿದಾನಕೆ। ಜೀವ ಪ್ರಕಾಶ ಬಂದು ಲಿಂಗ ಮಿಶ್ರಿತವಾಗಿ ಅವಾವಕಾಯವ ಹಿಂದೆ ಕಳೆದು ಆ ವಿರಂಚಿಗೆ ಮಾತ್ರ ದಗ್ಧಪಟವೋ- ಆವಿಷ್ಟನಾಗಿ ಅಲ್ಲಿಲ್ಲ ಆತನೊಬ್ಬ ಪ್ರವಿಕ್ತ ಕಾಣೋ ಸದಾ ವಾಯು ಸಹಿತಾ ಅಂದರೆ ಋಜು ಜೀವರಿಗೆ ಅನಾದ್ಯವಿದ್ಯೆಯೇಯಿಲ್ಲ. ಅತಏವ ಅನಾದಿ ಸಾಮಾನ್ಯಾಪರೋಕ್ಷಿಗಳು. ಆದಕಾರಣ ಅನಾದಿಕರ್ಮಪರಂಪರೆಗಳಲ್ಲಿಯೂ ಕೂಡ ತಿಲಮಾತ್ರ ದುಷ್ಕರ್ಮನಡೆದದ್ದಿಲ್ಲ. ಆದುದರಿಂದ ಕಲಿಗೆ ಶತ್ರುಗಳಲ್ಲಿ ಕಲಿಯು ಯಾವರೀತಿಯಿಂದ ಪ್ರವೇಶಮಾಡಿಯಾನು?. ಆದುದರಿಂದ ಅಖಂಡವಾಗಿ ಅನಾದಿ ಕಾಮ ಪರಂಪರೆಯೇ ಶ್ರೀ ಹರಿಯಲ್ಲಿ ಶೃಂಗಾರ ರೂಪ ದರ್ಶನಾದಿ ವಿಷಯಕವಾಗಿ ಇದೆ. ಆನಾದಿ ಕಾಮ ಪರಂಪರೆಯೇ ಶ್ರೀ ಹರಿಯ ಪೂರ್ಣಪ್ರೀತಿಗೆ ಸಾಧಕವಾಗಿ ಇದೆ. ಸುಳಾದಿ ಮುಂದಿನ ವಚನ:-

*"ಭಾವಜ ವೈರಿವಿಡಿದು ಮಿಗಿಲಾದ ಚೇತನಕೆ ಕೈವಲ್ಯ ಯೋಗ್ಯರಿಗೆ ಸ್ವರೂಪ ಕ್ಲೇಶ ಪುಶಿ ನೋವಾದರೂ ಭಿನ್ನಾಭಿನ್ನಕಣೋ।"*

ಅಂದರೆ ರುದ್ರಾದಿಗಳಿಗೂ ನಮಗೂ ಸಂಸಾರ ಬಂಧ ವಿಷಯದಲ್ಲಿ ಭೇದ ಹ್ಯಾಗೆಂದರೆ ಅವರ ಕರ್ಮ ಪರಂಪರೆಯಲ್ಲಿ ದುಷ್ಕರ್ಮಗಳು ಕೇವಲ ಸ್ವಲ್ಪಗಳಾದುದರಿಂದ ಕಲ್ಯಾವೇಶವು ಕೇವಲ ಸ್ವಲ್ಪ. ನಮ್ಮ ಕರ್ಮ ಪರಂಪರೆಯಲ್ಲಿ ಸುಕರ್ಮ ಕೇವಲ ಸ್ವಲ್ಪವಾದುದರಿಂದ ಪ್ರಾಣದೇವರ ಆವೇಶವೂ ಸ್ವಲ್ಪ. ಆದುದರಿಂದ ಪ್ರಾಣದೇವರು ನಮಗೆ ಪೂರ್ಣ ಮೋಕ್ಷ ಸಾಧಕ ಕರ್ಮಗಳನ್ನು ರುದ್ರಾದಿಗಳ ಕರ್ಮ ಪರಾಂಪರೆಯಲ್ಲಿ ಕುಳಿತು ಸಾಧಿಸುತ್ತಾರೆ. ಅಸ್ಮದಾದಿಗಳ ಕರ್ಮ ಪರಂಪರೆಯಲಿ ಕಲಿಯು ತನಗೆ ಸಂಪೂರ್ಣ ದುಃಖ ವೃದ್ಧಿಸಾಧಕವಾದ ಸಂಪೂರ್ಣ ಹರಿ ಗುರು ದ್ವೇಷ ಸಾಧಕವಾದ ಅಪರಿಮಿತ ದುಷ್ಕರ್ಮ ಸಾಧನಗಳನ್ನು ಕರ್ಮ ಪರಂಪರೆಯಲ್ಲಿ ಕುಳಿತು ಸಾಧಿಸಿಕೊಳ್ಳುತ್ತಾನೆ. ಏತೇನ ನಾವು ಮಾಡುವ ವಿಷ್ಣು ಪ್ರೀತಿಕರ ಕರ್ಮಕ್ಕೂ ರುದ್ರಾದಿಗಳು ಮಾಡುವ ವಿಷ್ಣು ಪ್ರೀತಿಕರ ಕರ್ಮಕ್ಕೂ ಇಷ್ಟು ಭೇದವನ್ನು ತಿಳಿಯತಕ್ಕದ್ದು. ಸುಳಾದಿ ಮುಂದಿನ ಮಾತು:-

"ಕಾವಾಳ ಯೋಗ್ಯರಿಗೆ ಚಿದ್ರೂಪಗಳಂತೆ ಪಾವನವಾದ ನಿಜ ಸುಖವೇ ಇಲ್ಲ" ಅಂದರೆ ಕಾವಾಳ ಅದರೆ ಅಂಧಕಾರ ತಮೋಯೋಗ್ಯರು ಎಂಥ ಅರ್ಥವು. ಸರ್ವ ಜೀವರೂ ಚಿದಾನಂದ ಸ್ವರೂಪವಲ್ಲವಾದ್ದರಿಂದ ಇವರು ದುಃಖ ದ್ವೇಷಾತ್ಮಕರು ಎಂತ ಅರ್ಥವು. ಅವರಿಗೆ ಸುಖಗಳು ಕರ್ಮ ಫಲರೂಪ ಲಿಂಗದೇಹ ಧರ್ಮಗಳೇ ಹೊರತು ಬೇರೆ ಅಲ್ಲ. ಸುಳಾದಿ ಮುಂದಿನ ಮಾತು:-

*"ಆವರ್ತಿಸುಖವೇ ಉಂಟು ಲಿಂಗ ಭಂಗಾಂತರದಲ್ಲಿ*
*ಬೇವದು ಶತ ಸಿದ್ಧ ನಿಜ ದುಃಖದಿ।*
*ಸೇವಕರೊಡೆಯ ಶ್ರೀ ವಿಜಯವಿಠಲರೇಯ*
*ಪಾವಮಾನಿಯಿಂದ ಎಲ್ಲರಾ ಕಾವುತಿಪ್ಪ."*

ಬೇವದು ಅಂದರೆ ಕಷ್ಟಪಡೋಣ- ಶತ ಸಿದ್ಧ ಎಂದರೆ ಹೀಗೆ ಅನಂತ ವೇದಗಳು ಹೇಳುತ್ತವೆ ಎಂತ ಅರ್ಥವು

ಇತಿ ಜೀವ ಸಂಸಾರ ಬಂಧನ ಕ್ರಮ ನಿರೂಪಣ ಪ್ರಕರಣ
ಸಂಪೂರ್ಣಮ್ (೩)

*ಶ್ರೀ ಗುರುಭ್ಯೋನಮಃ ಹರಿಃ ಓಂ*

# ಅಥ ಸಂಸಾರ ನಿವೃತ್ತ್ಯೋಪಾಯ ಪ್ರಕರಣ ಪ್ರಾರಂಭವು

ಸಂಸಾರ ನಿವೃತ್ತಿಗೆ ಉಪಾಯವೇನೆಂದರೆ :– ಪೂರ್ವೋಕ್ತ ಕ್ರಮದಿಂದ ನಮಗೆ ಇಂತಹ ಸಂಸಾರದಿಂದ ನಿವೃತ್ತಿ ಆಗ ಬೇಕಾದರೆ ಮಹಾಸಮುದ್ರ ಮಧ್ಯ ಅತ್ಯಂತ ಕಷ್ಟಪಡುವ ಪುರುಷನಿಗೆ ಹಡಗನ್ನು ನಡೆಸುವ ಯಜಮಾನನು ಅವನಿಂದ ಕೇಳಿಸಿಕೊಳ್ಳದೆ ಸ್ವತ ಏವ ಅವನ ಕಷ್ಟವನ್ನು ನೋಡಿ ಕರುಣೆಯಿಂದ ಅವನನ್ನು ತೆಗೆದು ಹಡಗಿನ ಒಳಗೆ ತನ್ನ ಸಮೀಪದಲ್ಲಿ ಇಟ್ಟು ಕೊಂಬುವದೋಪಾದಿಯಲ್ಲಿ ಪರಮ ಕೃಪಾಳು ಸ್ವಾಮಿಯು ತಾನಾಗಿ ಒಳಿದು ಸಾಕಲ್ಯೇನ ಇವನ ಕರ್ಮ ಬಂಧನಗಳ ಬಿಡಿಸಿ ವೈಕುಂಠಾದಿ ತನ್ನ ಲೋಕಗಳಲ್ಲಿ ಇಟ್ಟು ರಕ್ಷಿಸುವುದೇ ಸಿದ್ಧ. ಸುಳಾದಿ:– ಅನಾದಿ ಕರ್ಮದ್ದು ಎಣಿಸಿ ಕರ್ಮದಿಂದ ಕಡೆಬಿದ್ದವರುಂಟೆ?

*ಅನಂತ ಜನುಮಕೆ ನೋಡಿದರೊ ತಾನಾಗಿ ಒಲಿದು*
*ಶ್ರೀಹರಿ ಸಂದರ್ಶನವಿತ್ತು,*
*ಪ್ರಾಣನಾಗಿದ್ದು ಅನಾವಸ್ಥೆ ಕರ್ಮ ಏನೇನು ಉಳಿಯದಂತೆ,*
*ಅನುಭವಗೊಳಿಸಿ ಜ್ಞಾನ ಕೊಟ್ಟು ಪ್ರಾರಬ್ಧ ಉಣಿಸಿ*
*ಭಾನು ಪ್ರಕಾಶದಂತೆ ಪೊಳೆದು ನಿಃಶೇಷ ದೋಷರಹಿತನಾ*
*ಮಾಡಿ ಪೊಂದಿಸುವ ಮಾನಿಗಳರಸ ಶ್ರೀ ವಿಜಯ ವಿಠಲರೇಯ ॥*
*ನಿನಗೆ ಸ್ವಾತಂತ್ರ್ಯವೆನ್ನೆ ಕರ್ಮದಿಂ ಕಡೆಮಾಳ್ಪಾ ।*

ಅಂದರೆ ತಾನಾಗಿ ಒಲಿದು ಸಂದರ್ಶನವಿತ್ತು ಅಪರೋಕ್ಷ ಜ್ಞಾನವನ್ನೆ ಕೊಟ್ಟು ಅಂದರೆ ದೇವತೆಗಳನ್ನು ಮೊದಲು ಮಾಡಿ ಇಷ್ಟು ಇಷ್ಟು ಬ್ರಹ್ಮ ಕಲ್ಪಕ್ಕೆ ಇವರಿಗೆ ತಕ್ಕ ತಕ್ಕ ಮೋಚಕಾಪರೋಕ್ಷ ಕೊಡುತ್ತಾನೆ ಎಂತಲೂ ತೃಣ ಜೀವಗೂ ತಕ್ಕ ಸಾಧನದಿಂದ ದರ್ಶನ ಕೊಟ್ಟು ಪ್ರಾರಬ್ಧಕ್ಕೂ ಭೋಗಕೊಟ್ಟು ಉಣಿಸಿ

ಉದ್ಧರಿಸುತ್ತಾನೆ ಎಂತಲೂ ತನ್ನ ಸಂಕಲ್ಪಾನುಕೂಲವಾಗಿ ಇವನನ್ನು ಕಡೆಹಾಕುತ್ತಾನೆ ಎಂತ ಅರ್ಥವು. ಹಾಗಾದರೆ ತಾನಾಗಿ ಅನುಗ್ರಹ ಮಾಡತಕ್ಕ ಮಹಾಮಹಿಮನು ಇವನನ್ನು ಉದ್ಧರಿಸುತ್ತೇನೆಂಬ ಇಚ್ಛೆ ಹುಟ್ಟಿದ ಕ್ಷಣವೇ ವೈಕುಂಠವನ್ನು ಯಾಕೆ ಕೊಡಬಾರದು? ಜೀವರನ್ನು ಸೃಷ್ಟಿಗೆ ತಾರದೆ ಹಾಗೇ ಮೋಕ್ಷ ಏಕೆ ಕೊಡಬಾರದು? ಎಂದರೆ ಈ ಎರಡು ಆಕ್ಷೇಪವು ಜಗತ್ಸೃಷ್ಟಿಯು ವ್ಯರ್ಥವಾಗಲಿ ಎನ್ನುವುದರಲ್ಲಿ ಸೇರುತ್ತದೆಯಾದುದರಿಂದ ವಿಷ್ಣುರಹಸ್ಯ ಪ್ರಮಾಣದಿಂದ ಇದಕ್ಕೆ ಕೃತ್ಯ ಹೇಳಲ್ಪಟ್ಟಿತು. ಶ್ರೀಹರಿಯು ತಾನು ದರ್ಶನ ಕೊಡುವಂತಹ ಕಾಲ ಕ್ಲಿಪ್ತಿಗೆ ಬಹುಕಾಲ ನಿಷ್ಕಾಮ ಕರ್ಮಾನುಷ್ಠಾನ ಮಾಡಿಸಿ ಕೊಳ್ಳಬೇಕು. ಆದಕ್ಕೆ ಗುರೂಪದೇಶ ಬಲದಿಂದ ಶ್ರವಣ ಮನನಾದಿಗಳು ಒದಗದೆ ಆ ಅನುಷ್ಠಾನವೇ ಅಸಾಧ್ಯವಾದುದರಿಂದ ಈ ಸಂಸಾರದಲ್ಲಿ ನನ್ನ ಬಂಧ ಶಕ್ತಿ ಇಂತಹದು ಎಂತ ಈ ಅಧಿಕಾರಿಗೆ ಅನುಭವ ಬರಲಿ, ಅನಂತ ಗುರುಗಳಿಂದ ನನ್ನ ಮೋಚಕ ಶಕ್ತಿಯನ್ನು ಅನುಭವಿಸಲಿ ಎಂತ ಏತದರ್ಥವಾಗಿ ಜೀವನನ್ನು ಸೃಷ್ಟಿಗೆ ತಂದು ಇದ್ದಾನೆ. ಪೂರ್ವೋಕ್ತವಾದ ಸಪ್ತಾವರಣವೇ ಜೀವಗೆ, ಶ್ರೀಹರಿಯ ಬಂಧಕೇಚ್ಛಾ ಮೊದಲಾದದ್ದು ಸುತ್ತುಕೊಂಡಿದೆ. ಆದರಿಂದ ಅಜ್ಞಾನ ಮೋಹಿತನಾಗಿ ಶ್ರೀಹರಿಯೇ ಸುಳ್ಳು, ವೇದಗಳೇ, ವ್ಯರ್ಥ ಪುಣ್ಯ ಪಾಪ ಕರ್ಮಗಳೇ ಸುಳ್ಳು, ದಾನ ಧರ್ಮಾದಿಗಳು ಅರಿಯದೆ ನಿಂದಿಸುತ, ವೈಕುಂಠಾದಿ ಸುಖಗಳ ಮಾತೇ ಸುಳ್ಳು ಎಂಬ ಇತ್ಯಾದಿ ದುರ್ಬುದ್ಧಿ ದುಷ್ಕರ್ಮ ಪರಂಪರೆಗೆ ಕಾರಣವಾದ ಸ್ವಾಮಿಯು ಬಂಧಕೇಚ್ಛಾ ಶಕ್ತಿಯಿಂದಲೇ ಅಧೀನನಾದ ಜೀವನು ಕರ್ಮ ಮಹಾಸಮುದ್ರದಲ್ಲಿ ಮುಳುಗಿ ಅನುಭವಿಸಲಾರದೆ ಬಳಲಿ ಅತಿ ಭೀತನಾಗಿರುವವನಿಗೆ ಶ್ರೀ ಹರಿ ಬಂಧಕೇಚ್ಛೆಗೆ ಸಮವಾದ ಮೋಚ್ಛಕೇಚ್ಛೆಯನ್ನು ಶ್ರೀ ಹರಿ ತಾನಾಗಿ ಒಲಿದು ಯಾವಾಗ ತಂದು ಇಡುತ್ತಾನೋ ಆ ಮೋಚ್ಛಕೇಚ್ಛೆಯು ಇವನಿಗೆ ವಿರಜಾ ಸ್ನಾನ ಮಾಡಿಸಿ ಆ ಮುಂದಿನ ಬ್ರಹ್ಮ ಕಲ್ಪ ಸೃಷ್ಟಿಕಾಲದಲ್ಲಿ ಶ್ವೇತ ದ್ವೀಪಗತ ವಾಸುದೇವ ಶಿಂಶುಮಾರ ಇವರಿಬ್ಬರ ಸಂದರ್ಶನದ ಕಾಲದ ವರೆವಿಗೂ ಈ ಬಂಧಕೇಚ್ಛಾ ಕಡಿಮೆಯಾಗುತ್ತಾ ಆ ಕಾಲದಲ್ಲಿ ಒಂದು ಇಚ್ಛಾ ಸಂಪೂರ್ಣವಾಗಲು ಸ್ವಾಮಿ ತನ್ನ ಬಂಧಕೇಚ್ಛಾ ಹಿಂದಕ್ಕೆ ಸೆಳೆದುಕೊಳ್ಳುತ್ತಾನೆ. ಈ ಮೋಚ್ಛಕೇಚ್ಛಾ ಅಭಿವೃದ್ಧಿ ಕಾಲದಲ್ಲಿಯೇ ದೇವತೆಗಳ ಸಾಧನೆ ಬ್ರಹ್ಮ ಕಲ್ಪಗಳೆಲ್ಲವೂ ತಗಲಿಕೊಂಡು ಅವರವರ ಯೋಗ್ಯತಾನುಸಾರವಾಗಿ ತೃಣಾಂತ ಜೀವರ ಸಾಧನ ಕಾಲ ವ್ಯವಧಾನ ಎಂತ

ಹೇಳಿಸಿ ಕೊಳ್ಳುತ್ತದೆ. ಯೋಗ್ಯತಾನುಸಾರ ವ್ಯವಧಾನ ಕಾಲದಲ್ಲಿ ಆಗುವ ವ್ಯಾಪಾರ ತೃಣಾದಿ ರುದ್ರ ದೇವರವರೆವಿಗೂ, ನಿಷ್ಕಾಮ ಸಾಧನೆಯು ಮಧ್ಯೆ ಮಧ್ಯೆ ಛಿನ್ನವಾಗಿ ಪ್ರತಿದಿನ ಪ್ರತಿಮಾಸ ಪ್ರತಿ ವರ್ಷ ಪ್ರತಿ ಜನ್ಮ ಪ್ರತಿ ಬ್ರಹ್ಮ ದಿನ ಪ್ರತಿ ಬ್ರಹ್ಮ ಕಲ್ಪಗಳಿಂದ ಪಾಂಗ್ತವಾಗಿ ಆಗುತ್ತದೆ. ಆಕ್ಷೇಪ:– ಹಾಗಾದರೆ ಈ ಅಧಿಕಾರಿಯು ಈ ಪ್ರಕಾರ ಬಹುಕಾಲ ಭಕ್ತಿ ಪೂರ್ವಕ ಕರ್ಮ ದೀಕ್ಷೆಯಿಂದ ಕಷ್ಟಪಡಬೇಕಾದರೆ ಈ ಭಾಗ್ಯಕ್ಕೆ ಮೋಚ್ಛಕೇಚ್ಛಾ ಇವನಲ್ಲಿ ಬಂತು ಎಂತಲೂ ನಾನಾಗಿ ಒಲಿಯುತ್ತೇನೆಂತಲೂ ಈ ಮಾತು ಏಕೆ ಎಂದರೆ, ಋಜುಗಳು ನೂರು ಬ್ರಹ್ಮ ಕಲ್ಪಪರಿಯಂತ ಮಧ್ಯೆ ಮಧ್ಯೆ ಛಿದ್ರವಿಲ್ಲದೆ ಸಂಪೂರ್ಣ ಭಕ್ತ್ಯುದ್ರೇಕದಿಂದ ಅಖಂಡ ದೀಕ್ಷಾ ಪೂರ್ವಕ ನಿಷ್ಕಾಮೋಪಾಸನೆಯಿಂದಲೇವೇ, ಶ್ರೀಹರಿಯನ್ನು ಒಲಿಸಿಕೊಂಡರು. ಆದಾಗ್ಯೂ ಅಂತಹ ಋಜುಗಳಲ್ಲಿಯೂ ಕೂಡ ಶ್ರೀ ಹರಿಯು ತಾನಾಗಿಯೇ ಒಲಿದನು ಎಂದು ಹೇಳಬೇಕಾದುದರಿಂದ ರುದ್ರಾದಿ ತೃಣಾಂತ ಸರ್ವ ಜೀವರ ಯೋಗ್ಯತಾನುಸಾರ ನಿಷ್ಕಾಮಾರಾಧನೆಯಿಂದ ಅವರವರಿಗೆ ಸಂಪೂರ್ಣ ಭಕ್ತ್ಯುದ್ರೇಕ ಮಾಡಿಸದೆ ಶ್ರೀ ಹರಿಯು ಮುಕ್ತಿಯನ್ನು ಕೊಡುವನೆಂಬ ಸಂಕಲ್ಪಾನುಕೂಲವಾಗಿ ಸ್ವಾತಂತ್ರ್ಯದಾನಕ್ಕೂ ಸ್ಥೂಲ ಶರೀರ ಕೊಡುವುದಕ್ಕೂ ವಿಷ್ಣುರಹಸ್ಯವನ್ನು ಪೂರ್ವದಲ್ಲಿ ಹೇಳಿಯದೆ. ಸರ್ವಾಧಿಕಾರಿಗಳಿಂದಲೂ ಪ್ರತ್ಯಪ್ರತ್ಯೇಕವಾಗಿ ಸರ್ವ ಸಾಧನ ಸಾಧ್ಯ ಹೊಗಳಿಕೊಂಡು ಕ್ರಮದಿಂದ ಅಪರೋಕ್ಷ ಅತ್ಯರ್ಥ ಪ್ರಸಾದಗಳ ಕೊಟ್ಟು ಕ್ರಮದಿಂದ ಉದ್ಧರಿಸುವುದೇ ಶ್ರೀಹರಿಯ ಸಂಕಲ್ಪವು. ಪ್ರಮಾಣ:–

*ಪೂರ್ವ ಸಾಧನ ಸಂಪನ್ನಾನ್ ವಿಲಿಂಗಾನಪರೋಕ್ಷಿಣಃ ।*
*ಕರ್ಮತ್ರಯ ವಿನಿರ್ಮುಕ್ತಾನ್ ವಾಸುದೇವೋದರೆ ಅಕರೋತ್।*

ಇತ್ಯಾದಿ ಪ್ರಮಾಣಗಳಿಂದ ವಿರಜಾ ಸ್ನಾನ ಮಾಡಿದವರನ್ನು ವಾಸುದೇವನ ಉದರದಲ್ಲಿಯೂ, ಇದರ ಮುಂದಿನ ಕಲ್ಪದಲ್ಲಿ ವಿರಜಾ ಸ್ನಾನ ಮಾಡತಕ್ಕವರನ್ನು ಸಂಕರ್ಷಣನ ಉದರದಲ್ಲಿಯೂ ಅರ್ಧ ಸಾಧನವಾದವರನ್ನು ಕಲ್ಪಾಂತದಲ್ಲಿ ಪ್ರದ್ಯುಮ್ನನ ಉದರವನ್ನು ಸೇರಿಸತಕ್ಕ ಮರ್ಯಾದೆಯನ್ನು ವಿಷ್ಣುರಹಸ್ಯದಲ್ಲಿ ಹೇಳಿದ ಪ್ರಕಾರ ಶ್ರೀ ಹರಿಯು ಮಾಡಿದ ಶಾಸನೆಗೆ ಅನ್ಯಥಾ ಹೇಳಕೂಡದು. ಹಾಗಾದರೆ "ಯಮ್ಮೈವೈಷವೃಣುತೆ" ಎಂಬ ದಯಾಳುತೆಯು ಹೇಗೆಂದರೆ, ಶ್ರೀ ಹರಿಯು ತಾನಾಗಿ ಒಲಿದು ಪರಮ ಕೃಪೆಯಿಂದ ಉದ್ಧಾರ ಮಾಡುವುದೇ ಸಿದ್ಧವು.

***"ಭಕ್ತಿಸ್ಥಃ ಪರಮೋ ವಿಷ್ಣುಃ ತಯ್ಯೈವೇನಂ ವಶಂ ನಯತ್"!"***

ಎಂತ ಭಾಷ್ಯವು ಸಿದ್ಧ.

ಭಕ್ತಿ ಒಳಗೆ ತಾನೇ ಕೂತು ಅದನ್ನು ಅಭಿವೃದ್ಧಿ ಮಾಡ ಬೇಕು. ಸಕಲ ನಿಷ್ಕಾಮಾರಾಧನೆಗೂ ಪ್ರತಿಬಂಧಗಳನ್ನು ತಂದು ಬಿಡದೆ ತಾನೇ ಕುಳಿತು ನಿಷ್ಕಾಮ ಭಜನೆಯೈದಿಸಿಕೊಳ್ಳಬೇಕು. ಆವರವರ ಗುರುಗಳ ಅಂತರ್ಗತನಾಗಿ ಜ್ಞಾನಕ್ಕೆ ಸೊಟ್ಟು ಹೋಗದೆ ಬೋಧಕನು ತಾನಾಗಿ ಬಿಂಬಾಪರೋಕ್ಷ ಕೊಡತಕ್ಕ ಗುರುಗಳ ಅಂತರ್ಗತನಾಗಿ ಅಪರೋಕ್ಷ ಕೊಟ್ಟು ಸರ್ವಾಂತರ್ಬಹಿ ನಿಯಾಮಕ ಪ್ರೇರಕ ರೂಪಗಳಿಂದ ಸರ್ವ ನಿರ್ವಾಹಶಾಲಿಯಾಗಿ ಸರ್ವ ಸತ್ತಾಪ್ರದ ಎಂತ ಕರೆಸಿಕೊಳ್ಳುವನಾದುದರಿಂದ ತಾನಾಗಿ ಒಲಿದು ಉದ್ಧಾರ ಮಾಡೋಣವೇ ಸಿದ್ಧ.

***"ವಿಕಳವಿಲ್ಲದೆ ಬಂದು ಮುಕುತಿಗೆ ಸಾಧನ ಭಕುತಿಗೆ ತಂದುಕೊಟ್ಟು ಅಕಲಂಕ ಮಾಳ್ಪನ ವಂದಿಸು"*** ಎಂತ ವಿಜಯರಾಯರ ಉಕ್ತಿಯು.

ಆದುದರಿಂದ ಸಕಲ ಭಕ್ತರಿಂದಲೂ ಸರ್ವ ಸಾಧನ ಸಾಧ್ಯ ಎಂತಲೂ ಹೋಗಳಿಸಿಕೊಂಡು ಹಾಗೆ ಬ್ರಹ್ಮಾದಿಗಳಿಂದಲೂ ಪ್ರತ್ಯ್ರತ್ಯೇಕ ಹೇ! ಸ್ವಾಮಿಯೇ ನೀನಾಗಿ ನಿನ್ನ ಪೂರ್ಣ ಕಟಾಕ್ಷದಿಂದ ದಯಮಾಡಿ ಉದ್ಧರಿಸು. ನನ್ನ ಭಕ್ತಿ ಅಕಾರ್ಯಕಾರಿ ನನ್ನ ಜ್ಞಾನ ಕರ್ಮಗಳು, ಸ್ವರೂಪ ಪ್ರಯತ್ನ ಬಾಹ್ಯ ಪ್ರಯತ್ನಗಳೂ ಅಕಾರ್ಯಕಾರಿಗಳು. ಸ್ವರೂಪ- ಲಿಂಗ ಅವ್ಯಕ್ತ ಅನಿರುದ್ಧ ಸ್ಥೂಲಗಳೆಂಬ ಈ ಐದು ದೇಹೇಂದ್ರಿಯಾಂತಃಕರಣಗಳು ಸರ್ವವೂ ಇದ್ದರೂ ವ್ಯರ್ಥವೆ- ಮಹಾನುಭಾವ ನಿನಗೆ ನೀನೇ ಅನುಗ್ರಹ ಮಾಡು ಎಂತ ಬ್ರಹ್ಮಾದಿ ತೃಣಾಂತಾಧಿಕಾರಿಗಳಿಂದಲೂ ಶ್ರೀ ಹರಿ ಸ್ತೋತ್ರ ಮಾಡಿಕೊಂಬೋಣವೇ ಸಿದ್ಧವು. ಈ ಸ್ತೋತ್ರವೇ ಸರ್ವಾಧಿಕಾರಿಗಳಿಗೂ ಮುಖ್ಯೋಪಾಸನೆ ಆದಾಗ್ಯೂ ಈ ಸ್ತೋತ್ರ ಭಕ್ತರಿಂದ ಮಾಡಿಸಿಕೊಂಡೇ ವಲಿಯುತ್ತಾನಾದುದರಿಂದ ಈ ಸ್ತೋತ್ರದಲ್ಲಿಯೂ ತಾನೇ ಅಂತಃ ಪ್ರವಿಷ್ಟನಾಗಿ ತನ್ನ ಸ್ತೋತ್ರವನ್ನು ತಾನೇ ನಿರ್ವಹಿಸಿಕೊಳ್ಳುತ್ತಾನೆ. ಆದುದರಿಂದ "ನಿನಗೆ ನೀನೇ ಕೃಷ್ಣ, ದಯಮಾಡಿ ಸಲಹೋ" ಎಂತ ವ್ಯಾಸರಾಯರ ಉಕ್ತಿಯು. ಈ ವಿಷಯದಲ್ಲಿ ವಿಚಾರ ಬಹಳವಾದುದರಿಂದ ಮುಂದಿನ ಪ್ರಕರಣದಲ್ಲಿ ನಿರೂಪಿಸುತ್ತೇನೆ. ಇದರ ಮೇಲೆ ಇನ್ನೊಂದು ಆಕ್ಷೇಪವು. ಶ್ರೀ ಹರಿಗೆ ಬಂಧಕೇಚ್ಛಾ ಮೋಚಕೇಚ್ಛಾ ಎರಡೂ

ಸ್ವರೂಪಭೂತವಾದರೆ ತಾನು ಈ ಜೀವರುಗಳ ಸಂಗಡ ಏಕೆ ಅನೇಕ ರೂಪಗಳಿಂದ ನಿರ್ವಹಿಸಿ ಪ್ರೇರಕರೂಪ ಮೊದಲಾಗಿ ವಿಷಯ ಪ್ರಾಪಕ ಸ್ಥಾಪಕ ವ್ಯಾಪಕ ನಿಯಾಮಕ ರೂಪಗಳೆಂಬ ಹರಿಕಥಾಮೃತ ಸಾರೋಕ್ತಿ ಪ್ರಕಾರ ಅಪರಿಮಿತ ರೂಪಗಳ ಧರಿಸಿಕೊಂಡು ಕಲ ಕಾಲವೂ ಈ ಅಧಿಕಾರಿಗಳೊಡನೆ ತನ್ನ ಮೋಕ್ಷೇಚ್ಛೆಯನ್ನು ಇಟ್ಟು ತರುವಾಯದಲ್ಲಿಯೂ ಒಂದು ಕಲ್ಪದವರನ್ನು ಮೊದಲು ಮಾಡಿ ನೂರು ಬ್ರಹ್ಮಕಲ್ಪದ ತನಕ ಬಹು ಪ್ರಕಾರದಿಂದ ಅಧಿಕಾರಿಗಳನ್ನು ಸುತ್ತಿಸಿ ಅವರ ಒಂದು ರೂಪಕ್ಕೆ ತನ್ನ ಅನಂತ ರೂಪಗಳಿಂದ ಸುತ್ತಿಯಾಡಿಸುವುದಕ್ಕಿಂತಲೂ ಮೋಚಕೇಚ್ಛೆಯನ್ನು ಇವನಲ್ಲಿ ಇಟ್ಟು ಕ್ಷಣವೇ ಆ ಹಡಗಿನವನೋಪಾದಿಯಲ್ಲಿ ಇವನನ್ನು ವೈಕುಂಠಕ್ಕೆ ಏಕೆ ಸೇರಿಸ ಬಾರದೆಂದರೆ, ಶ್ರೀ ಹರಿಯು ಕಾಲತ್ರಯದಲ್ಲಿಯೂ ಸತ್ಯ ಸಂಕಲ್ಪನಾದುದರಿಂದ ಜೀವರ ಸ್ವಭಾವ ಸಿದ್ಧ ಭಕ್ತಿಗೆ ಸಂಪೂರ್ಣ ಅಭಿವೃದ್ಧಿ ಅವರವರಿಗೆ ವಿರಜಾ ಸ್ನಾನದ ತನಕ ಆಗಬೇಕೆಂಬ ಆತನ ಸಂಕಲ್ಪವು. ಭಂಗಾರ ಪುಟ ಪುಟಕ್ಕೂ ಅದರ ಸ್ವರೂಪ ಹೆಚ್ಚಾಗುವಂತೆ ಜೀವರ ಭಕ್ತಿಯು ಶ್ರವಣ ಮನನ ಮತ್ತು ಧ್ಯಾನದಿಂದ ನಿಷ್ಕಾಮಾರಾಧನೆಯಿಂದಲೂ ಆರಾಧನ ಕಾಲ ದೀಕ್ಷಾನಿಯಮದಿಂದಲೂ ಅಪರೋಕ್ಷದಿಂದ ಅತ್ಯರ್ಥ ಪ್ರಸಾದದಿಂದಲೂ ಅಧಿಕ ಅಧಿಕವಾಗಿ ವಿರಜಾ ಸ್ನಾನೋತ್ತರ ಸರ್ವಾಧಿಕಾರಿಗಳಿಗೂ ಸಾಕ್ಷಾತ್ ಚತುರ್ಮುಖೋಪದೇಶದಿಂದ ಸ್ವಯೋಗ್ಯ ಸಂಪೂರ್ಣ ಭಕ್ತ್ಯುದ್ರೇಕವು ಈ ಪ್ರಕಾರ ವೃದ್ಧಿ ಮಾಡಿಸತಕ್ಕದ್ದು ಶ್ರೀಹರಿಗೆ ಮುಖ್ಯೋದ್ದೇಶವು. ನಿರವಧಿಕ ಪರಮೈಶ್ವರ್ಯ ಗುಣ ಪೂರ್ಣ ಉಳ್ಳ ಪರಮಾತ್ಮನು ಒಬ್ಬ ಅಧಿಕಾರಿಯಲ್ಲಿ ಅನಂತಾನಂತ ರೂಪ ಧರಿಸಿ ಕ್ರೀಡಿಸಿದ ಕಾಲಕ್ಕೂ ಜೀವರಲ್ಲಿ ಕೃಪೆಯನ್ನು ಮಾಡುವುದಕ್ಕೋಸ್ಕರವೇ ಹೊರತು ಅಸಹ್ಯಾಯಾಸಾದಿಗಳು ಇಲ್ಲವು. ಆತನ ಕ್ರೀಡಾಪೂರ್ಣಾನಂದ ರೂಪವೇಸರಿ. ದೋಷರಹಿತ. ಅದು ಸ್ವರೂಪ ಕ್ರೀಡೆಯಾಗಿದೆ. ಪ್ರಮಾಣಃ-

*ಸುಖೋದ್ರೇಕಾದನಾಯಾಸ ಕೃಪಯಾಚ ಪ್ರವರ್ತತೆ ।*
*ಸೃಷ್ಟ್ಯಾದೌ ನ ಸ್ವಭಾವಾದ್ವಾ ಫಲಂ ಕಿಂಚಿದಪೇಕ್ಷತೆ ।*

ಎಂತ ಸತ್ತತ್ವಮಾಲಾ ನಾರಾಯಣ ಪ್ರಕರಣ ಸಿದ್ಧ.

ಇದರಲ್ಲಿ ಹರಿ ಸಂಕಲ್ಪವು ಇನ್ನೊಂದು ರೀತಿ ಇರುವುದು. ಜೀವರಿಗೆ ನಿಶ್ಕಾಮಾರಾಧನೆ ರುಚಿ ತೋರಿಸೋಣ. ಅವರವರ ಕರ್ಮಗಳನ್ನು ಮುಂದಿಟ್ಟು

ನಿಷ್ಕಾಮೋಪಾಸನೆಗಳ ದೀಕ್ಷೆಯನ್ನು ಹೆಚ್ಚಿಸಿ ತೀವ್ರೋಪಾಸನೆಯಿಂದ ಅಪರೋಕ್ಷ ಸಮೀಪ. ಮಾಡೋಣ, ದೀಕ್ಷೆಗಳ ತಗ್ಗಿಸಿ ಅಪರೋಕ್ಷ ದೂರ ಮಾಡೋಣ–ಋಜುಗಳ ಹೊರತು ದೇವತೆಗಳಿಗೆ ಸಹಿತ ಸ್ವೋತ್ತಮ ದ್ರೋಹಗಳನ್ನು ಬಲಾತ್ಕಾರದಿಂದ ಘಟನೆ ಮಾಡೋಣ ಇದರಿಂದ "ಏಧಮಾನದ್ವಿಟ್" ಎಂತ ಸ್ವಾಮಿಯ ಹೆಸರು. "ಸ್ವೇಚ್ಛಾಪರಾಧಾನ್ನನ್ಯ ದೋಷಸ್ಯ ಲೇಪಸ್ತೇ ಜೀಯಸಾಂ ನಿರ್ಣಯೋಯಾಹಿಶಾಸ್ತ್ರೇ" ಎಂತ ತಾತ್ಪರ್ಯ ನಿರ್ಣಯ ೨ನೇ ಅಧ್ಯಾಯವು. ಉತ್ಕ್ರಾಂತಿ ಸುಳಾಧಿ ಸಿದ್ಧವು "ಹ್ರಾಸಃ ಶ್ರೇಷ್ಠಾಪರಾಧಾತ್ಸ್ಯಾತ್ಸ್ವರೂಪೇ ಕಾರ್ಮಿಕಾದಿನಾಮ್" ಎಂತ ಸತ್ತತ್ವರತ್ನಮಾಲಾ. ಅಂದರೆ ಸ್ವೋತ್ತಮ ದ್ರೋಹವು ಅಪರೋಕ್ಷೋತ್ತರದಲ್ಲಿಯೂ ನಡೆಯುವುದಕ್ಕೆ ನವ ಕೋಟಿ ತತ್ವೇಶ್ವರನ್ನು ಬಿಟ್ಟು ಉಳಿದ ಸರ್ವ ಕರ್ಮಜ ದೇವತೆಗಳಿಗೂ ಕೂಡ ಅಪರೋಕ್ಷ ತಿರೋಧಾನವಾಗಿ ಕರ್ಮವ್ಯಂಗ್ಯ ಕ್ಲುಪ್ತಾನಂದಕ್ಕೆ ಹ್ರಾಸ ತಪ್ಪದು. ಆದುದರಿಂದ ತೃಣ ಜೀವನ ಪಾಡು ಹೇಳಲೇ ಕೆಲಸವಿಲ್ಲ. ಹಾಗಾದರೆ ಸ್ವಾಮಿ ಮೋಸದಿಂದ ಅಪರೋಕ್ಷಿಗಳಿಗೂ ಕೂಡ ಇಂತಹ ಸ್ವೋತ್ತಮ ದ್ರೋಹವನ್ನು ಘಟನೆ ಹಾಕಿ ಅಪರೋಕ್ಷ ತಿರೋಧಾನ ತಂದು ಬಿಟ್ಟು "ಏಧಮಾನದ್ವಿಟ್" ಎಂತ ಏಕೆ ಅನಿಸಿಕೊಳ್ಳಬೇಕು. ? ಎಂದರೆ ಯೋಗ್ಯತೆಯನ್ನು ಅತಿಕ್ರಮಿಸಿ ಕೂಡ ಸಾಧನೆಯನ್ನು ಒಂದು ಮೆಟ್ಟಲು ಹೆಚ್ಚಿಸೋಣ – ಎರಡು ಮೆಟ್ಟಲು ತಗ್ಗಿಸೋಣ ಪೂರ್ವ ಕರ್ಮ ನಿಮಿತ್ತೀಕರಿಸಿ ಸಾಧನ ಮಾಡಿ ಕೊಂಬುವ ಮುಕ್ತಿಯೋಗ್ಯರ ಕರ್ಮಗಳಲ್ಲಿ ಕಲ್ಯಾದಿಗಳಿಗೆ ಪ್ರವೇಶಮಾಡಿಸಿ ಮಾಡಿ ಜನಗಳಿಗೆ ಶ್ವಾನ ಸ್ಪರ್ಶ ಮಾಡಿಸುವ ಹಾಗೆ ಈ ಕಲ್ಯಾದಿಗಳ ತಮಸ್ಸಾಧನ ಅಭಿವೃದ್ಧಿಗೋಸ್ಕರ "ಏಧಮಾನದ್ವಿಟ್" ಎಂತ ಅನಿಸಿಕೊಳ್ಳಬೇಕಾಯಿತು. ಹೀಗೆ ಕಲ್ಯಾದಿಗಳನ್ನು ಇಲ್ಲಿ ಕಲೆ ಹಾಕಿ ಕಲ್ಯಾದಿಗಳ ಗುಂಪಿನಲ್ಲಿಯೂ ಬ್ರಹ್ಮಾದಿ ತತ್ವೇಶರನ್ನು ಕಲೆ ಹಾಕಿ ಅವರ ಸ್ವರೂಪ ದೇಹ ವ್ಯತಿರಿಕ್ತ ಲಿಂಗದೇಹಾದಿ ಸ್ಥೂಲ ದೇಹದ ಸುಖದ ಅನುಭವಕ್ಕೂ ಮುಖ್ಯ ಬಾಧ್ಯರನ್ನು ಮಾಡಿ ದೈತ್ಯರಿಗೂ ನಶ್ವರ ಸುಖ ದೇವತೆಗಳಿಗೂ ನಶ್ವರ ದುಃಖ ಬಡಿಸಿ ಈ ಎರಡು ಗುಂಪಿನಲ್ಲಿಯೂ ಬಹು ವಿಧರೂಪಗಳಿಂದ ಹೊರಗೆ ಪ್ರೇರಿಸಿ ಕೂತು ವಿನೋದ ನೋಡಿ ಒಳಗೆ ಕೂತು ತಾನೇ ಮಾಡಿ ಬ್ರಹ್ಮಾದಿಗಳಿಂದಲೂ ರಮಾರೂಪಗಳಿಂದಲೂ ಪುನಶ್ಚ ಅವರಲ್ಲಿಯೂ ತನ್ನ ರೂಪಗಳಿಂದ ವಿಚಿತ್ರ ಕ್ರೀಡೆ ಮಾಡುತ್ತಾನೆ. ಆದುದರಿಂದ ಇದೂ ಕೂಡ

ಅವನ ಸಂಕಲ್ಪದ ರೀತಿ ಎಂದು – ಈ ಪ್ರಕಾರ ನಿಶ್ಚಯ ಸಿದ್ಧಾಂತವನ್ನು ತಿಳಿದು ಶ್ರೀಹರಿ ಇಂತಹ ಶಾಸನೆ ಉಳ್ಳ ಮಹಾಪುರುಷನೆಂದು ತಿಳಿದು ಕೊನೆಯನ್ನು ಕಾಣಲಿಕ್ಕೆ ಅಪಾರವಾದ ಸಂಸಾರ ರೋಗಕ್ಕೆ ಈತನಂತಹ ಘನವೈದ್ಯ ಮತ್ತೊಬ್ಬನು ಇಲ್ಲವೆಂದು ತಿಳಿದು ನಮಗಿಂತ ಉತ್ತಮರಿಗೂ ನಮ್ಮ ಸಮಾನ ಎಷ್ಟೋ ತೃಣ ಜೀವರಿಗೂ ಮುಕ್ತಿ ಕೊಟ್ಟಂತಹ ಮಹಾನುಭವನು ಹೇಳಿದ ಪಥ್ಯದ ಪ್ರಕಾರ ಇರದೆ ಹೋದರೆ–ನರಕಾದಿ ಯಾತನೆಗಳು ಬಿಡದು ಎಂತ ನಿಶ್ಚಯಿಸಿ ಪರಮಾತ್ಮನ ಪಾದಕಮಲಗಳಿಗೆರಗಿ ನಂಬಿ ಉದ್ಧಾರ ಮಾಡು ನೀನೇ ಗತಿ ನನ್ನ ಯತ್ನವಿಲ್ಲ ನಿನ್ನ ಚಿತ್ತಕ್ಕೆ ಬಂದ ಹಾಗೆ ಮಾಡು ನಿನ್ನ ಬಿಡುವುದಿಲ್ಲ ಎಂತ ಶರಣಾಗತನಾಗೋಣವೇ – ಇದೇ ಸಂಸಾರ ನಿವೃತ್ತಿಗೆ ಉಪಾಯವು. ಈ ಜೀವನು ಶರಣಾಗತನಾದನೆಂಬುದಕ್ಕೆ ಅರ್ಥವೇನಂದರೆ ಶುದ್ಧ ಮೂಢಭಕ್ತಿಯಿಂದ ಮನಸ್ಸಿನಲ್ಲಿ ಶ್ರೀ ಹರಿಯನ್ನೇ ನಂಬಿ, ಪೂರ್ವದ ಬಂಧಕೇಚ್ಛೆ ಇವನಲ್ಲಿ ಇದ್ದಾಗ ನಡೆದ ತನ್ನ ಸಕಲ ಅಕೃತ್ಯಗಳನ್ನು ಭಯದಿಂದ ಬಾಯಿನಲ್ಲಿ ಹೇಳಿಕೊಳ್ಳೋಣ ಅಂಪರೆ ನಾನು ನಿನ್ನ ದ್ರೋಹದಿಂದ ನೀನೇ ಸುಳ್ಳು ನಿನ್ನ ಭಕರೇ ಶತ್ರುಗಳು ಅವರನ್ನು ಸಂಹಾರ ಮಾಡಿ ನಿನ್ನ ದ್ರೋಹವನ್ನೇ ಬೆಳೇಸಿಕೊಂಡೆನು. ನೀನು ಇನ್ನು ಮುಂದೆಯಾದರೂ ಹ್ಯಾಗೆ ತಪ್ಪಿಸಿ ಉದ್ಧಾರ ಮಾಡುವಿಯೋ ಪರಮ ಕೃಪಾಳೋ ನಿನ್ನ ಇಚ್ಛಾಶಕ್ತಿವಿನಾ ನಿನ್ನ ತಿಳಿಯಕೊಡು ಎಂದು ದೃಢಭಕುತಿಯಿಂದ ನೀನು ನಿತ್ಯ ನಾನು ನಿತ್ಯ ಎಂಬ ನಿಶ್ಚಯ ಬುದ್ಧಿಯಿಂದ ಯಾವ ಭಯಕ್ಕೂ ಅಂಜದೇ ಹೃದಯದಲ್ಲಿದ್ದ ಭಗವಚ್ಚರಣಾರವಿಂದವನ್ನು ಘಟ್ಟಿಯಾಗಿ ಹಿಡಿದುಕೊಂಡೆನು ಎಂತ ಅರ್ಥವು. ಇದೇ ಸಂಸಾರನಿವೃತ್ತಿಗೆ ಉಪಾಯವು.

ಇಲ್ಲಿಗೆ ನಾಲ್ಕನೇ ಸಂಸಾರ ನಿವೃತ್ತಿ ಪ್ರಕರಣವು ಆಯಿತು ॥೪॥

ಶ್ರೀ ಗುರುಭ್ಯೋನಮಃ ಶ್ರೀ ವೇದವ್ಯಾಸಾಯ ನಮಃ

# ಐದನೇ ಮೋಕ್ಷಾಧಿಕಾರಿ ಪ್ರಕರಣವು ಪ್ರಾರಂಭವು

*ಶ್ರೀ ಗುರುಭ್ಯೋನಮಃ ಶ್ರೀ ವೇದವ್ಯಾಸಾಯ ನಮಃ*

## ೧ ಅಧಿಕಾರಿಯ ಶ್ರವಣಾ ಮನನಾದಿಗಳಿಗೆ ಶ್ರೀ ಹರಿವಾಯುಗಳ ಇಚ್ಛಾ

ಈ ಅಧಿಕಾರಿಗೆ ಇನ್ನೂ ಉಪಾಸನೆಯ ಯೋಗ್ಯತೆಯು ಒದಗಲಿಲ್ಲ. ಶುದ್ಧ ಮೂಢ ಭಕ್ತಿಯಿಂದ ನಂಬಿಕೊಂಡವನಾದುದರಿಂದ ಕಣ್ಣು ಕಟ್ಟಿ ಅಡವಿಯಲ್ಲಿ ಬಿಟ್ಟ ಹಾಗೆ ನನಗೆ ಶ್ರೀ ಹರಿಯ ಅನುಗ್ರಹವಾಗೋಣವೇಂದರೇನು? ಎಂಬ ಆತಿಭಯಂಕರವಾದ ಧಿಗಲಿನಿಂದ ಘಟ್ಟಿಯಾಗಿ ಧೈರ್ಯದಿಂದ ನಾರಾಯಣ ಎಂತ ಕೂಗಲಿಕ್ಕೂನೂ ಪ್ರಾಣದೇವರು ಇವನಿಗೆ ಅಧಿಕಾರ ಹುಟ್ಟಿಸ ಬೇಕಾದುದರಿಂದ ಅಧಿಕಾರ ನಿರೂಪಣ ಪ್ರಕರಣ ಪ್ರಾರಂಭವು.

ಸುಳಾದಿ:-

*ಪ್ರಾರಬ್ಧಾಗಾಮಿ ಸಂಚಿತ ಕರ್ಮಗಳು ಮೂರು ಪರಿ ಉಂಟು*
*ಸರ್ವ ದೇವರುಗಳಿಗೆ, ಬ್ಯಾರೆ ಬ್ಯಾರೆ ಅವರವರ*
*ಯೋಗ್ಯತಾನುಸಾರವಾಗಿ ಉಂಟು. ಅನುಭವಿಸಿ*
*ಈ ಕರ್ಮಗಳ ತೀರಿಸಬೇಕಲ್ಲದೆ ಸುಮ್ಮನಿರೆ ಪೋಪುದೆ?*
*ಆರಿಗಾದರು ಸಿಕ್ಕ ಸಾಧನದಿಂದಲಿ ಆರೊಂದಾವರಣದ*
*ಬೊಮ್ಮಾಂಡದೊಳು ಪುಟ್ಟಿದಾರಭ್ಯವಾಗಿ ದೇಹದ ನೆತ್ತವ ಮಾಡಿ*
*ಕರ್ತವ್ಯ ಸಾರಿಸಾರಿಗೆ ಉಂಟು*

ಅಂದರೆ ಕರ್ತವ್ಯವೆಂದರೆ ನಾನು ಎಂಬ ಸ್ವಾಮಿದ್ರೋಹ ಲಕ್ಷಣ-ಕರ್ತೃತ್ವಾಭಿಮಾನವನ್ನು ಇಟ್ಟುಕೊಂಡನು ಎಂದರ್ಥ. ಸುಳಾದಿ ಮುಂದಿನ ವಚನ:-

*ನೀಚೋಚ್ಛ್ರಯೋನಿಗೆ ಸೇರಿ ಸಂತೋಷವನೆ ಪಟ್ಟು ನಾರಕ।*
*ಬಾಧೆ ಭವಣೆಯಿಂದಲಿ ತಂತಮ್ಮ ಸುಖ ದುಃಖ ಪೂರೈಸಿ।*
*ಸಾಧನ ಮಾಳ್ಪ ಜನ್ಮ ತೋರಿಕೊಡುವನು - ಹರಿ ಮನಸ್ಸು ।*
*ಕಾರ್ಯೋನ್ಮುಖ ಕಾರುಣ್ಯದಿ ಒಲಿದು ಲೀಲೆಯಿಂದ।*
*ಓರ್ವನಾ ಜನನವಾಗೆ, ಪ್ರತಿಕ್ಷಣಕಪಾರ।*
*ಕರ್ಮಗಳ ಮಾಡಿದಕ್ಕೆ ಕರ್ಮ ವಿಚಾರವಾಗೆ।*
*ಸಪ್ತಋಷಿಗಳಾಜ್ಞಾದಿಂದವಾಗ ನೂರು*

ಅಂದರೆ ಇವನು ಸಮುದ್ರ ತೆರೆಯಂತೆ ಪೂರ್ವೋಕ್ತ ಕರ್ಮ ಫಲವನ್ನು ನರಕಾದಿಗಳಲ್ಲಿ ಅನುಭವಿಸುವುದರನ್ನು ಶ್ರೀ ಹರಿಯು ನೋಡಿ ಸ್ವರ್ಗ ಸುಖ ಸಾಧನ ಧರ್ಮ ಬುದ್ಧಿಯು ಕೂಡಾ ಇಲ್ಲ- ಇನ್ನಾದರೂ ಹುಟ್ಟಿಸಿ ಎಂತ ಸಪ್ತ ಋಷಿಗಳಿಗೆ ಆಜ್ಞಾಪಿಸಿ, ಆ ಋಷಿಗಳ ಪ್ರೇರಣೆಯಿಂದ ಧರ್ಮ ಮಾಡತಕ್ಕ ದೇಹ ಬಂದು ಇವನ ಮನಸ್ಸು ಅಗ್ನಿಹೋತ್ರಾದಿ ಮಹಾಧರ್ಮಗಳಲ್ಲಿ ಉದ್ಯುಕ್ತವಾಗಿ ಧರ್ಮಿಷ್ಠನಾಗುತ್ತಾನೆ- ಸುಳಾದಿ ಮುಂದಿನ ವಚನ :- "ಸಪ್ತ ಋಷಿಗಳಾಜ್ಞಾಯಿಂದಾವಾಗ ನೂರು-ಇನ್ನೂರು-ಮುನ್ನೂರು-ನಾನ್ನೂರು - ಐನೂರು ಸಾವಿರ ಲಕ್ಷ ಕೋಟಿ ಜನುಮಗಳ ವಿಸ್ತಾರವಾಗಿ ಕಟ್ಟಿ ಉಳುಹಿ ಅದರೊಳು ಕೆಲವು ತೀರಿಹೋಗುವಂತೆ ಸುಖ ದುಃಖಾನೆಪಡಿಸಿ" ಹಾರೈಸು। ಅಲ್ಲಿಂದತ್ತಾಹಕ ಶೇಷ ಕರ್ಮಗಳು ಮೇರೆ ಇಲ್ಲದಿರೆ ಅದರೋಳಗೊಂದೊಂದು ಧಾರಾಳವಾಗಿದೆ, ನೋಡಿ ಜನ್ಮಂಗಳ ನಾನೂರು ತುಷ್ಟಿ ಉಣಲೆಂದು ತೀವ್ರ ಕರ್ಮಾಚರಣೆಯೊಳು ಹಾಕಿ, ಅವನು ಪುನರಪಿ ಪುಟ್ಟಿ ಚಾರುಮತಿಯಿಂದ ಮಾಡಲು ಈ ತೆರದಿ ಇರೆ ಜನರು ಒಂದು ಸಾಧನ ದೇಹವ ಧರಿಸಿ, ಅಂದರೆ ಅವನು ಮಹಾ ಧರ್ಮಿಷ್ಠನಾದ ತರುವಾಯದಲ್ಲಿ ಬಹು ಕಾಲ ಸ್ವರ್ಗ ಸುಖಗಳನ್ನು ಭೂಮಿಯಲ್ಲಿ ಏಕಚಕ್ರಾಧಿಪತ್ಯವನ್ನು ಪ್ರವಾಹರೂಪವಾಗಿ ಅನುಭವಿಸಿದಾಗ್ಯೂ ಒಂದೊಂದು ಕ್ಷಣಕ್ಕೆ ಸೃಷ್ಟಿಗೆ ಪೂರ್ವ ಅನಾದಿಯಿಂದಲೂ ಬಂದ ಧರ್ಮ ಈಗಲೂ ಕೂಡ ನಮ್ಮ ಸ್ಥೂಲಬುದ್ಧಿಗೆ ತಿಳಿಯದೆ ನಡೆಯುತ್ತದೆ. ಆದುದರಿಂದ

ಆದು ಫಲ ಕೊಡದೆ ಇರಲಾರದು. ಆದುದರಿಂದ ಮಹಾಭೋಗಾನುಭವ ಜನ್ಮಗಳು ಹಿಂದೆಯೇ ಮುಂದೆಯೂ ನೂರು ಮೊದಲು ಕೋಟೀ ಎರಡೂ ಕೋಟಿ ಈ ಪ್ರಕಾರ ಗೊತ್ತು ಇಲ್ಲದ ನೀಚ ಉತ್ತಮ ಜನ್ಮಗಳು ಅನುಭವಿಸಿದ ತರುವಾಯ ಅದರಲ್ಲಿಯೂ ಕರ್ಮ ಶೇಷಾನುಭವಾರ್ಥ ಭಗವದನುಗ್ರಹದಿಂದ ನೂರಾರು ಬ್ರಾಹ್ಮಣ ಯೋನಿ ಅನುಭವಿಸುವ ಪುಣ್ಯದ ಆದಿ ಮಧ್ಯ ಜನ್ಮಗಳಲ್ಲಿ ಯಾವುದಾದರೊಂದು ಬ್ರಾಹ್ಮಣ ಯೋನಿ ಬಂದಾಗ ಶ್ರೀ ಹರಿಯು ಪೂರ್ವೋಕ್ತ ರೀತಿಯಿಂದ ತಾನಾಗಿ ವಲಿದು ಪ್ರಾಣದೇವರ ಕೈಯಲ್ಲಿ ಇವನನ್ನು ಕೊಡುತ್ತಾನೆ ಹಿಂದಕ್ಕೆ ತಾನಾಗಿ ವಲಿದು ಧರ್ಮಕ್ಕೆ ಬುದ್ಧಿ ಪ್ರೇರಿಸಿ ಮಾಡಿಸಿದಾಗಲೇ ಅವನಿಗೆ ಮೋಕ್ಷ ಸಾಧನೆ ಏಕೆ ಆಗಬಾರದೆಂದರೆ– ಪ್ರಾಣದೇವರಿಗೆ ಆಜ್ಞಾಪಿಸದೆ ಸಪ್ತ ಋಷಿಗಳಿಗೆ ಆಜ್ಞಾಪಿಸಿದ ಪ್ರಯುಕ್ತವೇ ಇವನಲ್ಲಿ ಸ್ವಾಮಿಯು ತನ್ನ ಮೋಚಕೇಚ್ಛೆ ಇಡಲಿಲ್ಲ. ಆದುದರಿಂದ ಆ ಪುರುಷ ನಿಷ್ಕಾಮ ಸಾಧನೆಯನ್ನು ಮಾಡುತ್ತಾನೆಂದಾಗ್ಯೂ ಶ್ರೀ ರಾಮದೇವರ ಮಹಿಮೆಯನ್ನರಿಯದೆ ಗಿಣಿಯು ರಾಮ ರಾಮ ಎಂಬಂತೆ ಆ ಸಕಲ ಕರ್ಮವು ಸಕಾಮ ಪರಂಪರೆಯಾಗುತ್ತದೆ. ಆದುದರಿಂದ ಪುನಃ ಅನೇಕ ಜನ್ಮಗಳು ನರಕಾದಿಗಳು ಆಗುತ್ತವೆ. ಈಗ ಇವನಲ್ಲಿ ಮೋಕ್ಷೇಚ್ಛೆಯ ಇಟ್ಟು ಪ್ರಾಣದೇವರಿಗೆ ಆಜ್ಞಾಪಿಸಲು ಪ್ರಾಣದೇವರು ತಾವೇ ಇವನಲ್ಲಿ ಹೊಕ್ಕು ನಿಷ್ಕಾಮಾರಾಧನೆಯಲ್ಲಿ ಕುಳಿತು ಸಾಕ್ಷಾತ್ ಭಗವದಾರಾಧಕರಾಗಿ ಹೊರಗೂ ಇವನ ಗುರುಗಳಲ್ಲಿ ನಿಂತು ಶಿಕ್ಷಿಸುವವರಾಗುತ್ತಾರೆ. ಬ್ರಾಹ್ಮಣ ಯೋನಿ ಹೊರತಾಗಿ ಪ್ರಾಣ ದೇವರ ಅನುಗ್ರಹವೂ – ಸಚ್ಛಾಸ್ತ್ರ ಶ್ರವಣವೂ ಆಗಲಾರದು. ಪೂರ್ವದಲ್ಲಿ ಧರ್ಮಿಷ್ಠನಾಗದೇ ಬ್ರಾಹ್ಮಣ ಯೋನಿ ಬರಲಾರದು ಎಂತ ಭಾವವು . ಸುಳಾದಿ ಮುಂದಿನ ಮಾತು– "ಈ ಜನರು ಒಂದು ಸಾಧನ ದೇಹ ಧರಿಸಿ ಮೂರುಗುಣದಿಂದ ಕೂಡೆ ಕರ್ಮಗಳು ಗುಣಿತ ಮಾಡೆ ಮೀರಿತು ಅನವಸ್ಥೆ ಎಂದೆನಲು ಶ್ರೀ ಹರಿ ಕಾರುಣ್ಯದಿಂದಲೇ ಉಪರಮ ಉಪಾಯ ಆರಿಗಾದರು ಉಂಟೆ. ಅಖಿಲ ಜೀವರ ನಡುವೆ ಕಾರಣ ಅಂತಃಕರಣಕ್ಕೆ ಶುದ್ಧಿ ಶುಭಕಾಮಿಸರಿದ ಹೃದಯರ ಸಂಗತಿಗೆ ಕರಣ ಶುದ್ಧಿ ಕಾರಣವಾಗುವುದು. ಸುಜನ ಸಂಗತಿಯಿಂದ ವೀರವೈಷ್ಣವ ಸಚ್ಛಾಸ್ತ್ರಕ್ಕೆ ಹಾದಿಯಾಗುವುದೈಯ್ಯ, ಆಮೇಲೆ ಮನನ ವಿಚಾರ ನಿಧಿ ಧ್ಯಾಸನ ನಿಶ್ಚಯ ತತ್ವ ತಾರತಮ್ಯದಿಂದ ಹರಿ ಗುಣೋಪಾಸನೆ ಮೂರೊಂದು

ವಿಡಿದು, ಕ್ರಮಾನುಸಾರದಲ್ಲಿ, ಪ್ರಾರಂಭದಲ್ಲಿ ಸಾಂಖ್ಯ ಯೋಗ ತರುವಾಯ ಈ ರೀತಿಯನೆ ತಿಳಿದು ದೃಡವಾಸನಾಮಯ ಪರೋಕ್ಷ ಧ್ಯಾನ ಅಪರೋಕ್ಷದಿಂದಲಿ ಜಡಾಕಾರ ಮೂರುತಿಯನ್ನು ನೋಡಿ ಅಲ್ಲಿಂದಾತ ಪ್ರಾಜ್ಞ ಮೂರುತಿಯನ್ನೇ ಕಾಣಬೇಕು'' ಎಂತ ಅನಾದಿ ಕರ್ಮ ಸುಳಾದಿ ಸಿದ್ಧವು. ಅಂದರೆ ಅನವಸ್ಥೆ ಉಳ್ಳಂಥ ಈ ಕರ್ಮಾನುಭವವು ಇವನ ಯೋಗ್ಯತೆಗೆ ಮೀರಿ ಹೋಯಿತು ಎಂತ ತಿಳಿದು ತಾನಾಗಿ ಕರುಣವಿಟ್ಟು ಇಂತಹ ಪರಮೋಪಾಯವನ್ನು ತಿಳಿಸುತ್ತಾನೆ ಎಂತ ಹೇಳಿದರು. ಆ ಉಪಾಯ ಯಾವುದು ಅಂದರೆ:– ಅಂತಃಕರಣ ಶುದ್ಧಿ ದ್ವಾರಾ ಮೋಕ್ಷೋಪಾಯ ಜ್ಞಾನ ಪ್ರಾಪ್ತ್ಯರ್ಥ ವಾಗಿ ಸಾರ ಹೃದಯರ ಸಂಗತಿಯನ್ನು ತತ್ಪೂರ್ವಕ್ಕೂ ಸಜ್ಜನ ಸಂಗತಿಯಿಂದಲೇ ಘಟನೆ ಮಾಡಿಸಿ ಸಚ್ಛಾಸ್ತ್ರ ಶ್ರವಣ ಮಾಡಿಸಿ ತರುವಾಯ ಹರಿ ಪ್ರೀತಿ, ತತ್ವೇಶರ ಪ್ರೀತಿ, ಸ್ವೋತ್ತಮರ ಪ್ರೀತಿ ಸ್ವವಿಹಿತ ಧರ್ಮ ಮಾಡುವ ವಿಷಯದಲ್ಲಿ ಸುಳಾದಿ:– ''ಕೋಮಲನಾಗಿ ಮಾಡಿ ಸ್ವಧರ್ಮವ ಬಿಡದಲೆ'' ಎಂತ ಸಾಮಾನ್ಯ ಧ್ಯಾನ ಪ್ರಕರಣ ಸುಳಾದಿಯ ರೀತಿಯಿಂದ ವೀರವೈಷ್ಣವರ ದೀಕ್ಷೆ ವದಗಿದ ತರುವಾಯ ''ಅಜ್ಞಸ್ಯ ಶ್ರವಣಂ ಶ್ರೇಷ್ಠಮಯುಕ್ತೋರ್ಮನನಂ ತಥಾ ಧ್ಯಾನಂ ನಿಶ್ಚಿತ ತತ್ವಸ್ಯ'' ಎಂಬ ತಂತ್ರಸಾರೋಕ್ತ ಪ್ರಕಾರವಾಗಿ ಪಶು ಬುದ್ಧಿಯುಳ್ಳ ಜೀವನಿಗೆ ಶ್ರೀಹರಿಯು ಇಂತಹವನು ಎಂಬ ಜ್ಞಾನ, ರಮಾದೇವಿಯವರು ಇಂತಹವರು, ಪೃಥಿವಿಯ ಪರಿಮಾಣುಗಳೋಪಾದಿಯಲ್ಲಿ ನವಕೋಟಿ ತತ್ವೇಶರು ಒಬ್ಬೊಬ್ಬರೇ ರೂಪಾನಂತ್ಯ ಉಳ್ಳವರು, ಜಡಗಳು ಜಡ ಪ್ರಕೃತಿ ಇಂಥಾದ್ದು ವೇದಗಳು ನಿತ್ಯ ಜಡಗಳು ೫೧ ವರ್ಣಗಳು, ಯಾವುದವ್ಯಾಕೃತಾಕಾಶ ವ್ಯಾಪ್ತಗಳು– ಅವ್ಯಾಕೃತಾಕಾಶ ನಿತ್ಯ ಜಡ. ಮಾಹಾಕಾಲ ನಿತ್ಯ ಜಡ ''ಆಕಾಶಾಪ್ಯನಂತಾಶ್ಚ ವಿಭಿನ್ನಾ ಅಪ್ ಕಣಾದಿವತ್'' ಎಂದು ಛಾಂದೋಗ್ಯ ಭಾಷ್ಯೋಕ್ತಿಯು. ಭೂತಾಕಾಶ ಅನಿತ್ಯ ಕ್ಷಣ ಲವಾದಿ ಬ್ರಹ್ಮ ಕಲ್ಪಗಳೆಲ್ಲವೂ ಅನಿತ್ಯ–ತ್ರಿವಿಧ ಜೀವ ಗಣ ಇದು ಮೊದಲಾಗಿ ತಿಳಿಯೋಣವೇ ಶ್ರವಣವು. ಇದರಲ್ಲಿ ಯುಕ್ತಾಯುಕ್ತ ವಿಷಯಕ ಮನನ ಮಾಡಿ ನಿಶ್ಚಯಿಸಿದ ಹೊರತು ಧ್ಯಾನಾಧಿಕಾರ ಹುಟ್ಟಲಾರದು. ಏಕೆಂದರೆ – ಲೋಕದಲ್ಲಿ ದುರ್ಬುದ್ಧಿ ದುಶ್ಶಾಸ್ತ್ರಗಳು ಬಹು ಪ್ರಬಲಗಳಾದುದರಿಂದ, ಗುರುಗಳ ಪೂರ್ಣಾನುಗ್ರಹ ಹೊರತಾಗಿ ಇವನ ಅನಾದಿ ನಿತ್ಯ ಭಕ್ತ್ಯುದ್ರೇಕವಾದ ಧ್ಯಾನೋಪಾಸನ ವದಗದಾದ ಪ್ರಯುಕ್ತ ತದಪೇಕ್ಷಯಾ

ಪ್ರವಚನೋಪಾಸನೆಯು ಅಧಿಕವಾಯಿತು "ಸೋಪಾಸನಾಚ ದ್ವಿವಿಧಾ ಶಾಸ್ತ್ರಭ್ಯಾಸ ಸ್ವರೂಪಿಣೀ । ಧ್ಯಾನರೂಪಾಸನಂಚ್ಯೈವ ತದಂಗಂ ಧಾರಣಾದಿಕಮ್" ಎಂಬ ಈ ಎರಡು ವಿಧೋಪಾಸನೆಗಳೊಳಗೆ ಧ್ಯಾನೋಪಾಸನೆಯು ಚಿತ್ತ ನಿಗ್ರಹ ಸಾಧ್ಯವಾದ ಪ್ರಯುಕ್ತ ತೀವ್ರೋಪಾಸನೆ ಎನಿಸಿ ಅಸಂಪ್ರಜ್ಞಾತ ಸಮಾಧಿಯಿಂದ ಬಿಂಬಾಪರೋಕ್ಷ ಸುಲಭವೆಂತ "ಅಪ್ರಯತ್ನಾತ್ಸಮಾಧಿಃ ಸ್ಯಾದ್ದರ್ಶನಂ ಚಿರಯಾನಯ(ತಯಾ)" ಎಂದು ಹೇಳಿ ಅಥವಾ "ಸತತಂ ಶಾಸ್ತ್ರ ವಿಮರ್ಶೇನ ಭವಿಷ್ಯತಿ" ಎಂತ ತಂತ್ರಸಾರದಲ್ಲಿ ಫಲಾರಿಯವರ ವಚನವು. "ಅಧಿಕಾರಿ ವಿಶೇಷ ಪರಮಿದಂ" ಎಂದು ಧ್ಯಾನೋಪಾಸನೆಯಿಂದಲೇ ಸರ್ವಾಧಿಕಾರಿಗಳಿಗೂ ಬಿಂಬಾಪರೋಕ್ಷವಾಗುವುದೆಂದು ನಿಶ್ಚಿ ್ಯಸಿದ್ದಾರೆ. ಏಕೆಂದರೆ :- ಪ್ರವಚನೋಪಾಸನೆಯು ಚಿತ್ತ ಪ್ರಸಾರಣರೂಪವೇ ಹೊರತು ಚಿತ್ತನಿಗ್ರಹರೂಪ ತೀವ್ರೋಪಾಸನೆಯಾಗಲಾರದು. ಅಧಮ ಜೀವರಿಗೆ ಚತುಸ್ತಂತ್ರಗಳಲ್ಲಿ ವ್ಯವಹಾರ ಸಾಮರ್ಥ್ಯದಿಂದ ಸತ್ಸಿದ್ಧಾಂತ ಪ್ರವಚನ ಮಾಡುವುದಕ್ಕೆ ಹಿಂದಿನ ಬಹು ಜನ್ಮ ಪುಣ್ಯ ಸಾಧ್ಯವಾದುದುದರಿಂದ ಈ ಅಧಿಕಾರಿಯು ಕತ್ತಲೆ ಮನೆಗೆ ದೀಪ ಮುಟ್ಟಿಸುವಂತೆ ಧ್ಯಾನೋಪಾಸನೆಯಲ್ಲಿ ದೀಕ್ಷೆಯನ್ನು ಪ್ರಥಮತಃ ಭಕ್ತಿಗೆ ಸುಲಭೋಪಾಯದಿಂದ ಸಂಪಾದಿಸಿಟ್ಟುಕೊಂಡು, ಅದೇ ದೀಪಕ್ಕೆ ತೈಲವನ್ನು ಪದೇಪದೇ ಹೇಗೆ ಹಾಕುತ್ತಾ ಬರುವರೋ ಹಾಗೆ, ಮುಂದಿನ ಜನ್ಮಗಳಿಂದಲೂ ವಿರಜಾಸ್ನಾನದ ತನಕ, ಅಂಗಾಂಗಿಭಾವದಿಂದ ಈ ಎರಡೂ ಉಪಾಸನೆಗಳನ್ನು ಹಿರಿಯರ ಚರಣಾನುಗ್ರಹದಿಂದ ಇವನಿಗೆ ಶ್ರೀಹರಿಯು ವದಗಿಸಬೇಕು. ಪ್ರಮಾಣ:-

*ಅನಾದಿ ಜನ್ಮ ಸಂಬಂದಂ ನಿರ್ಭೇಕ್ತುಂ ಪಾಪ ಪುಂಜರಂ।*
*ಯಾವದ್ದೂರ ಸ್ಥಿತೋಗಮ್ಯಾ ತಾವದ್ಗಂತವ್ಯ ಮೇವಹಿ ।*
*ಇಹ ಜನ್ಮಾಂತರೇವಾಪಿ ತಾವತ್ಯೇವತು ದರ್ಶನಂ ॥*
*ಶ್ರವಣಂ ಮನನಂ ಚ್ಯೆವ ನಿಧಿಧ್ಯಾಸನಮೇವಚ ।*
*ಪರೇ ಗುರೌ ಚ ಯಾಭಕ್ತಿಃ ಪರಿಚರ್ಯಾದಿಕಂ ಹರೇಃ ।*
*ಏಷಾಸೇವೇತಿ ಸಂಪ್ರೋಕ್ತಾ ಯಯಾತದ್ದರ್ಶನಂ ಭಾವೇತ್ ॥*

ಎಂತ ಭಾಷ್ಯ ಸಿದ್ಧವು.

ಅಂದರೆ ಧ್ಯಾನೋಪಾಸನ ದೀಕ್ಷಿತನಾಗಿ ಗುರು ಸೇವಾದಿಗಳಿಂದ ಭಕ್ತ್ಯುದ್ರೇಕದಿಂದ ಪಂಚಯಜ್ಞಾದಿಗಳನ್ನು ಬಿಡದೆ, ಶ್ರವಣವೇ ಜ್ಞಾನ ಯಜ್ಞವಾದುದರಿಂದ ಅದನ್ನು ಅಭಿವೃದ್ಧಿ ಮಾಡತಕ್ಕದ್ದು- ಪ್ರಮಾಣ –

*ಯ ಇದಂ ಮಮ ಮಾಹಾತ್ಮ್ಯಂ ಭಕ್ತ್ಯಾಪರಮಯಾ ಯುತಃ ।*
*ಶೃಣುಯಾಚ್ಛ್ರಾವಯೇಚ್ಚಾಪಿ ಮಯಿ ಭಕ್ತಿಂ ಸ ವಿಂದತಿ ।*
*ಜ್ಞಾನಯಜ್ಞೋ ಅಯಮೇವೋಕ್ತೋ । ಮತ್ಕಥಾ ಶ್ರವಣಮ್ ಹಿ ಯತ್।*
*ಮದ್ಭಕ್ತಾನಾಂ ತಥಾ ಬ್ರಹ್ಮನ್ ಯೇನಸ್ಯಾದ್ಬ್ರಹ್ಮ ದರ್ಶನಂ ।*
*ಯಮಾಶ್ಚ ನಿಯಮಾಶ್ಚಾಪಿ ಋತ್ವಿಜಃ ಪ್ರಾಪ ಯತ್ನತಃ॥*
*ಕಾಮ ಕ್ರೋಧಾದಿಕಾನ್ ಹಿತ್ವಾ ವಿರಕ್ತ್ಯಾ ವಜ್ರಕಲ್ಪಯಾ ।*
*ಮಯ್ಯಗ್ನೌ ಜುಹುಯಾದಿಂದೌ ಮನಃ ಸೋಮಂ ತತಃ ಪರಂ ।*
*ಬುಧ್ಯಾಖ್ಯಾದ್ವಯುರ್ಣಾ ಭಕ್ತಿ ಸುನದ್ಯಾಂ ತದ್ವಿಚಕ್ಷಣಃ ।*
*ವಿವೇಕೋಪಲ ಸಂಘುಷ್ಟಂ ತತಸ್ತ್ರಿಕ್ಷವಣಾ ಮನಃ ।*
*ರಸಂ ಮುಂಚಂತಿ ಸಂಶುದ್ಧಂ ಮದ್ಭಕ್ತ್ಯಾಖ್ಯ ಮನುತ್ತಮಂ॥*
*ಬಹುಯಾನ್ಮತ್ಪದೇ ಅಗ್ನೌ ತಂಶೇಷಂ ಪೀತ್ವಾವಗಾಹ್ಯತಿ ।*
*ಆನಂದಾತ್ಮಾಮಗಾನಾಹಿ ಕೃತ್ವಾ ಕೃತ್ವಾಚ ಮೋದತೆ ।*
*ಅನುಭೂಯ ತದಾನಂದಂ ಹೃದ್ಯಾಲಿಂಗಿತಮತ್ತನುಃ ಬಾಹ್ಯಂ*
*ಕಿಂಚಿನ್ನ ಜಾನಾತಿ ಸ್ವದೇಹಸ್ಯಾಪಿ ಚೇಷ್ಟತಂ ।*
*ಆಯಾತೋಯಾಂ ಕದಾ ದೇಹೋಗತೋವಾಪಿ ಕಥಂ ಪುನಃ।*
*ಇತ್ಯೇವ ಮತಿನೋವೇತ್ತಿ ಕಿಂಪುನಃ ಕ್ಷುದ್ರ ಚೇಷ್ಟಿತಂ ।*
*ಏವಮಂತಃ ಸುಪಕ್ವೋ ಹಿ ಸರ್ವತ್ರಾಪಿ ಬಹಿಸ್ಸದಾ ।*
*ಸರ್ವ ವಸ್ತುಷು ಮಾಮೇವ ಪಶ್ಯತ್ಯೇವ ನ ಚಾನ್ಯಥಾ ॥*
*ಜೀವನ್ಮುಕ್ತಃ ಸ ಏವಾತ್ರ ಯಾವತ್ಪ್ರಾರಬ್ಧ ಸಂಕ್ಷಯಃ।*
*ನಿವೃತ್ತಾ ಶೇಷ ಪಾಪ್ಮಾ ಅಸೋ ಕ್ರಿಯಮಾಣೈರಲೇಪ ಭಾಕ್ ।*
*ಮುಕ್ತ ಕರ್ಮಾಲ್ಲಭೇನ್ಮುಕ್ತಿಂ ತತೋನಾ ವರ್ತತೇ ಪುನಃ ॥*
*ಆಯಾಹಿ ಪರಮೋ ಲಾಭೋ ಯನ್ಮದ್ಭಕ್ತಸ್ಯ ದರ್ಶನಂ॥*
*ತತ್ರಾಪಿ ಮತ್ಕಥಾಲಾಪೋ ಯತೋ ಮುಕ್ತಿರವಾಪ್ಯತೇ ।*
*ಶ್ರೂಯಮಾಣಂ ಹರೇತ್ಪುಪಂ ಮನಸೋ ನಿರ್ವೃತಿಂ ಪುನಃ ॥*

*ವಿತನೋತ್ಯಖಿಲಾನ್ ಭಾವಾನ್ ಪ್ರಕಾಶಯತಿ ಯತ್ಪರಂ ।*
*ಮತ್ಕಥಾ ಶ್ರವಣಾ ಬ್ರಹ್ಮನ್ ತಸ್ಮಾತ್ಕೋ ವಿರಜೇತ್ಪುಮಾನ್॥*
*ಶ್ರೇಯಸಾಂ ಯನ್ನಪಾತ್ರಂಸ್ಯಾತ್ಪಾತ್ರಂ ದುಃಖಸ್ಯ ಯೋಭವೇತ್ ।*
*ಸ ಏವ ವಿರಜೇನ್ಮೂಢೋ ಮತ್ಕಥಾ ಶ್ರವಣಾನ್ನರಃ ॥*
*ಅಥೋಹಿ ಪೌರುಷೇ ದೇಹೇ ಸ್ಥಿತಃ ಸ್ವೋದ್ಧರಣೇರತಃ ॥*
*ಸನಿತ್ಯಂ ಶೃಣುಯಾದ್ಭಕ್ತ್ಯಾ ಮದ್ಭಕ್ತೋ ಮತ್ಕಥಾ ಶುಭಾಂ ॥*
*ಜಹಿ ಕಾಮುಷ್ಮಿಕಂ ಸರ್ವಂ ತೇನೈವ ಸಕಲಂ ಭವೇತ್ ।*
*ದಿವಸಂ ಷಷ್ಠಿ ನಾಡೀಕೇ ಮುಹೂರ್ತ ಮಪಿ ನಿತ್ಯಶಃ ॥*
*ಸಂಕೋಚ್ಯ ಸರ್ವ ಕರ್ಮಾಣಿ ಮಮ ಶ್ರವಣಮಾಚರೇತ್ ।*
*ತೇನ ಸಾರ್ಥಕತಾಂ ಯಾತಿ ಅನ್ಯಥಾ ದುರ್ದಿನಂ ಸದಾ ॥"*

ಎಂತ ವಿಷ್ಣುರಹಸ್ಯ. ಅಧ್ಯಾಯ. . . . .

ಆದುದರಿಂದ ಈ ಜ್ಞಾನ ಯೋಗವು ಜ್ಞಾನೋಪಾಸನೆಯ ಅಂಗಭೂತವೆಂದು ನಿರೂಪಿಸಿದೆನು. ತಂತ್ರಸಾರದಲ್ಲಿ

*ಧ್ಯಾನಂ ನಿಶ್ಚಿತ ತತ್ತ್ವಸ್ಯ ತಸ್ಮಾಚ್ಛಾಸ್ತ್ರವಮರ್ಶನಂ ।*
*ವರಂ ದಶ ಗುಣಾಖ್ಯೈ ತಸ್ಮಾದ್ವಾಕ್ಯೇಕಸ್ಯ ಶತೋತ್ತರಾ ॥*
*ಅಪರೋಕ್ಷ ದಿಶಾಹ್ಯೇವ್ಯೇಕ್ಷಾ ಕರ್ತವ್ಯಾ ವಿಷ್ಣು ತುಷ್ಟಿದಾ ।"*

ಎಂದು ಪ್ರವಚನೋಪಾಸನೆಗೆ ಮಹಾಮಹಿಮಯನ್ನು ನಿರೂಪಿಸಿದ್ದದರಿಂದ – "*ಧ್ಯಾನ ಪ್ರವಚನಾಭ್ಯಾಂ ಯಥಾ ಯೋಗ್ಯಮುಪಾಸನಂ ।*" ಎಂಬ ಸದಾಚಾರ ಸ್ಮೃತ್ಯುಕ್ತಿಯಿಂದಲೂ ಉಭಯೋಪಾಸನೆಯಿಂದಲೂ ಗುರುಗಳ ಪೂರ್ಣಾನುಗ್ರಹಕ್ಕೆ ಪಾತ್ರನಾಗಿ ದೀಕ್ಷಿತರಾಗತಕ್ಕದ್ದು. ಈ ಅಧಿಕಾರಿಯು ೨೧ ದುರ್ಮತಗಳನ್ನು ಸಿದ್ಧಾಂತ ನ್ಯಾಯಗಳಿಂದ ಬೇರಿನಿಂದ ಸಹಿತವಾಗಿ ಕಿತ್ತು ಖಂಡಿಸಿ ವೀರ ವೈಷ್ಣವ ದೀಕ್ಷಾ ಪೂರ್ವಕ ಕರತಲಾಮಲಕದೋಪಾದಿಯಲ್ಲಿ ಬೆಣ್ಣೆಯಲ್ಲಿ ಕೂದಲು ತೆಗೆದೋಪಾದಿಯಲ್ಲೂ ಸಕಲ ಶ್ರುತ್ಯರ್ಥಗಳೂ, ಅಪರೋಕ್ಷೋತ್ತರದಲ್ಲಿ ಯಥಾಯೋಗ್ಯವಾಗಿ ಜ್ಞಾನವು ವದಗತಕ್ಕದ್ದಕ್ಕೆ ಪ್ರಾಣದೇವರು ಇವನಲ್ಲಿ ಪೂರ್ಣಾನುಗ್ರಹ ಮಾಡಿ ಬಡಗಿಯು ಅತ್ಯಂತ ವಕ್ರವಾದ ಮರವನ್ನು ಹೇಗೆ ಕೆತ್ತಿ ಪರಮ ಸುಂದರವಾದ ಪ್ರತಿಮೆಯನ್ನು ಮಾಡುವನೋ ಹಾಗೆ ಇವನ

ಅಜ್ಞಾನಾಭಿಮಾನಿ ಕಲಿಗೆ ಈ ಮುಖ್ಯಪ್ರಾಣದೇವರೇ ಮಾರಕರಾದುದರಿಂದ ಈ ಗತಿಗೆ ತಾನೆ ಅಜ್ಞಾನ ಹ್ರಾಸವನ್ನು ಜ್ಞಾನಾಭಿವೃದ್ಧಿಯನ್ನು ಮಾಡಿಕೊಂಡು, ಇವನಲ್ಲಿ ಬ್ರಹ್ಮಕಲ್ಪಾಂತದವರೆಗೆ ಪ್ರಾಣದೇವರು ಕೂತಿರುತ್ತಾರೆ. ಪರಮಾತ್ಮನು ಭಕ್ತಿಗೆ ಹೇಗೆ ಮೋಕ್ಷಪ್ರದನೋ ಹಾಗೆ ಪ್ರಾಣದೇವರೂ ಕೂಡ ಭಗವದಾಜ್ಞೆಯಿಂದ ಭಕ್ತರಿಗೆ ಮೋಕ್ಷಪ್ರದರು. ಪ್ರಮಾಣ:– ವಿಷ್ಣುರ್ಹಿದಾತಾ ಮೋಕ್ಷಸ್ಯ ವಾಯುಶ್ಚತದನುಜ್ಞಯಾ "ಮೋಕ್ಷೋ ಜ್ಞಾನಂ ಚ ಕ್ರಮಶಃ" ಎಂತ ತಾತ್ಪರ್ಯ ನಿರ್ಣಯವು. ಇಂತಹ ಸಚ್ಛಾಸ್ತ್ರ ಮಹಾಸಮುದ್ರದಲ್ಲಿ "ಧ್ಯಾನಂ ನಿಶ್ಚಿತ ತತ್ವಸ್ಯ" ಎಂತ ತಂತ್ರಸಾರೊಕ್ತ ಪ್ರಮಾಣನುಕೂಲವಾಗಿ ಯಾವ ಮನನವನ್ನು ಹೊರತು ನಿಶ್ಚಯ ಪರೋಕ್ಷ ಜ್ಞಾನವೆಂಬ ನಿಧಿ ಧ್ಯಾನವೇ ಒದಗುವುದಿಲ್ಲವೋ ಅಂತಹ ಮನನವನ್ನು ಹೊರತು ಇವನಿಗೆ ಧ್ಯಾನಾಧಿಕಾರ ಸಿದ್ಧಿಸಿದಾದ ಕಾರಣ ಈ ಪ್ರಕರಣದಲ್ಲಿ ಹೇಳಿದ ಅನಾದಿ ಕರ್ಮ ಸುಳಾದಿಯಲ್ಲಿ "ದೇಹಗಳನೆತ್ತಿ ಒಡನೆ ಕ್ರೂರ ಕರ್ಮಕ್ಕೆ ತೊಡಕಿ ಬಿಡದೆ ಉದಾರ ತನದಿಂದ ಮಾಡಿದ ಕರ್ತವ್ಯ ಸಾರಿಸಾರಿಗೆ ಉಂಟು" ಎಂದರೆ ನಾನು ಎಂಬ ಸ್ವಾಮಿದ್ರೋಹ ಲಕ್ಷಣ ಕರ್ತೃತ್ವಾಭಿಮಾನ ಇಟ್ಟುಕೊಂಡು ಎಂದು ಹೇಳಿದ್ದೇನಷ್ಟೇ–ಈಗ ಅದರ ವಿವರಣ:–

*ಚಿದ್ರೂಪೀ ನಿರ್ಗೂಣೋಜೀವಃ ತಯೋರ್ಜೀವ ಪ್ರಧಾನಯೋಃ ।*
*ಅಹಂಕಾರ ನಿದಾನೇನ ಕರ್ಮಣಾ ಸಂಗತಿರ್ಭವೇತ್ ॥*
*ಪ್ರಕೃತ್ಯಾಚ್ಛನ್ನರೂಪಸ್ತು ಜಾತೋಜಾತೋಮೃತೋಮೃತಃ।*
*ಭ್ರಮತ್ಯಯಂ ಮಹಾಘೋರೇ ಸಂಸಾರಾಚ್ಛ ಪುನಃ ಪುನಃ॥*

ಎಂದು ಶಾಂಡಿಲ್ಯ ತತ್ವ ೧೫ನೇ ಅಧ್ಯಾಯದಲ್ಲಿ ಹೇಳಿದ್ದಾರೆ. ಅಂದರೆ ಜೀವನು ಶುದ್ಧ ಚಿದಾತ್ಮಕನಾದರೂ ಅನಾದಿ ಕಾರಣಭೂತಗಳಿಂದ ಅಜ್ಞಾನಕಾರ್ಯವಾದ ನಾನು ಎಂಬ ಅಹಂಕಾರವು. ಈ ಅಹಂಕಾರದಿಂದ ಜನ್ಯವಾದ ಅನಾದಿ ಕಾಮ ಪರಂಪರೆಗೆ ಕಾರ್ಯವಾದ ಸುಕರ್ಮೇಚ್ಛಾ ದುಷ್ಕರ್ಮೇಚ್ಛಾ ಪರಂಪರೆ ಇಂತಹ ಇಚ್ಛೆಯಿಂದ ಹುಟ್ಟಿರುವ ಅನಾದಿ ಕರ್ಮಕ್ಕೆ ಕಾರ್ಯರೂಪಗಳಾಗಿ ಇವನಿಂದ ಮಾಡಲ್ಪಟ್ಟ ಸುಕರ್ಮ ದುಷ್ಕರ್ಮ ರಾಶಿಗಳ ಪರಂಪರೆಯಿದ ಕರ್ತೃತ್ವ ಭೋಕ್ತೃತ್ವ ಅಭಿಮಾನದಿಂದ ಜನ್ಮವಿಲ್ಲದ ಜೀವನಿಗೆ, ಜನ್ಮ ವ್ಯವಹಾರವೂ ಮೃತಿ ಇಲ್ಲವಾದರೂ ಮೃತಿ ವ್ಯವಹಾರವೂ ಇವುಗಳ ಸಂಗತಿಗೆ ಮುಖ್ಯ

ಕಾರಣ 'ನಾನು' ಎಂಬ ಸ್ವಾಮಿದ್ರೋಹ ಲಕ್ಷಣ ಕರ್ತೃತ್ವಾಭಿಮಾನದಿಂದ ಎಂದು ವಾಯು ಪುರಾಣ ಶಾಂಡಿಲ್ಯತತ್ವದ ಅರ್ಥವು. ಈ ಪ್ರಕರಣದಲ್ಲಿ ಜೀವನ ಸ್ವರೂಪ ಧರ್ಮ ಕರ್ತೃತ್ವ ಒಂದು. ಈಶ ದತ್ತ ಒಂದು. ಈ ಉಭಯ ವಿಧ ಕರ್ತೃತ್ವದಲ್ಲಿಯೂ ವಿಸ್ತಾರವಾಗಿ ಅಜ್ಞಾನ ಪರಿಹಾರ ಕ್ರಮ ನಿರೂಪಣೆಯಿಂದ ಮುಕ್ತಿಯೋಗ್ಯ ಜೀವರಿಗೆ ಮೋಕ್ಷಾಧಿಕಾರ ಬುದ್ಧಿಸ ಬೇಕೆಂಬುದೇ ಈ ಅಧಿಕರಣಕ್ಕೆ ಮುಖ್ಯ ತಾತ್ಪರ್ಯವು. ಈ ಅಜ್ಞಾನ ನಿವೃತ್ತವಾಗದೇ ಅಪರೋಕ್ಷಸಾಧನ ನಿಷ್ಕಾಮ ಕರ್ಮಾಧಿಕಾರವೂ ಈ ಅಧಿಕಾರಿಗೆ ತಿಲಮಾತ್ರವೂ ಒದಗಲಾರದುದರಿಂದ ನಿರೂಪಿಸುತ್ತೇನೆ. –

*ನಾನು ನನ್ನದು ಎಂಬ ಜಡಮತಿ। ಮಾನವರು ಪ್ರತಿದಿನ ಮಾಡುವ।*
*ಸ್ನಾನ ಜಪ ದೇವಾರ್ಚನೆಯೋ ಮೊದಲಾದಖಿಲ ಕರ್ಮಗಳೂ।*
*ದಾನವರು ಶೆಳೆದೊಯ್ಯರಲ್ಲದೆ। ಶ್ರೀನಿವಾಸನು ಸ್ವೀಕರಿಸ ಮ।*
*ದ್ದಾನೆ ಕಪಿತ್ಥ ಫಲ ಭಕ್ಷಿಸಿದವೋಲಹುದೋ ॥೧॥*

ಸರ್ವಪ್ರತೀಕ ಸಂಧಿ ಹ ಕ ಸಾ

*ದೇವ ಗಂಗೆಯೊಳುಳ್ಳವಗೆ ದುರಿತಾವಳಿಗಳುಂಟೇ ವಿಚಾರಿಸೆ ।*
*ಪಾವುಗಳಭಯವುಂಟೆ ವಿಹಗಾಧಿಪನ ಮಂದಿರದಿ॥*
*ಜೀವ ಕರ್ತೃತ್ವವನು ಮರೆದು ಪರಾವರೇಶನೆಕರ್ತನೆಂದರಿ।*
*ದಾವಕರ್ಮವ ಮಾಡಿದರು ಲೇಪಿಸದು ಕರ್ಮಗಳು॥೨॥*

*ಏನು ಮಾಡುವ ಪಾಪ ಪುಣ್ಯಗಳಾನೆ ಮಾಡುವನೆಂಬವಧಮನು ।*
*ಹೀನ ಕರ್ಮಕೆ ಪಾತ್ರನಾ ಪುಣ್ಯಕ್ಕೆ ಹರಿಯೆಂಬ।*
*ಮಾನವನು ಮಧ್ಯಮವನು ದ್ವಂದ್ವಕ್ಕೆ। ಶ್ರೀನಿವಾಸನೆ ಕರ್ತನೆಂದು ಸ ।*
*ದಾನುರಾಗದಿ ನೆನೆದು ಚಿಂತಿಸುವರೆ ನರೋತ್ತಮರು ॥೩॥*

ಹ. ಕ. ಸಾ. ನಾಮ ಸ್ಮರಣ ಸಂ ೭೬೮

*ಪಾದುಕೆಯು ಕಂಟಕ ಸಿಕತ ಮೊದಲಾದವನು ದಿನಬಾಧಿಸುವವೇ।*
*ಕಾದಶೇಂದ್ರಿಯಗಳಲಿ ಬಿಡದೆ ಹೃಷೀಕಪನ ಮೂರ್ತಿ॥*

*ಸಾದರದಿ ನೆನೆವೆನೆಪ। ರಾಧಗಳ ಮಾಡಿದರು ಸರಿಯೆ ನಿ ।*
*ರೋಧಗೈಸವು ಮೋಕ್ಷ ಮಾರ್ಗ ದುರಿತ ರಾಶಿಗಳು ॥೪॥*

ಎಂದು ಹ. ಕ. ಸಾ. ಧ್ಯಾನ ಪ್ರಕರಣ ಸಂಧಿ ೧.

*ಪ್ರಮಾಣ :-*

*॥ ಪಿಪೀಲಿಕಾ ಬ್ರಹ್ಮಾಂತಾ ಜೀವಾ ಯೇಚಾಂಡಗೋಚರಾಃ।*
*ತೇಷು ಕೋಪಿ ಕ್ವಚಿತ್ಕ್ವಾಪಿ ನ ಕರ್ಮಂ ಕ್ಷಮತೇ ನರಃ।*
*ಯದಾಶ್ನಾತಿ ತದಶ್ನಾತಿ ಯದಾವಕ್ತಿ ತಥೈವಸ ॥*
*ಯದಾಚ ಫ್ರತಿವೈದೇವಃ ಸ ಚ ಫ್ರತಿ ಪರಾನುಗಃ ॥*
*ಯದಾಗಚ್ಛತಿ ವೈ ದೇವಃ ತದಾಗಚ್ಛತಿ ಚೇತನಃ ॥*
*ಶೃಣೋತಿ ಚ ಯದಾಬ್ರಹ್ಮ ತದಾ ಜೀವಃ ಶೃಣೋತಿ ।*
*ಚ ಯದ್ಯೈವ ಸ್ಪೃಶತಿ ಕಿಂಚಿತ್ತದ್ಯೈವ ಸ್ಪೃಶಸೆ ಜನಃ ॥*
*ಕಿಮತ್ರ ಬಹುನೋಕ್ತೇನ ನಾಕೃತಂ ಕ್ರಿಯತೇ ಜನೈಃ ॥*
*ಏವಂ ಕರ್ತರಿ ದೇವೇಶ ಕರ್ತಾರಮಿತಿ ಮನ್ಯತೇ ॥*
*ತೇನ ಸಂಸರತೇ ಜೀವೋ ದುಃಖೀ ಜನ್ಮ ಸುಜನ್ಮಸು ॥*
*ಏವಂ ವಿದ್ವಾನ್ ವಿನೀತಃ ಸ್ವಾತಂತ್ರ್ಯಂ ಸರ್ವ ಕರ್ತೃತಾಂ ॥*
*ಫಲದತ್ತಂ ತದೀಶತ್ವಂ ಕಾರ್ಯಾತ್ಕರ್ಮ ವಿಚಕ್ಷಣಾಃ ॥*

ಇತಿ ಶಾಂಡಿಲ್ಯ ತತ್ವ ಸಿದ್ಧವು.

ಈ ಜ್ಞಾನವು ಹುಟ್ಟೋಣವೂ ವಿಷ್ಣು ಪ್ರೀತಿಕರ ನಿಷ್ಕಾಮ ಕರಣ ಯೋಗ್ಯತೆಯು ಈ ಕಾಲದಲ್ಲಿ ನೂತನವಾಗಿ ಹುಟ್ಟಿದುದರಿಂದ ಆಚಾರ ಆಶ್ರಮ ಕರ್ಮ ಬಿಟ್ಟವನಿಗೆ ಮೋಕ್ಷ ಮಾರ್ಗವಿಲ್ಲ ಎಂದು ಭಾವಾರ್ಥವು. ಪರಮಾತ್ಮನ ಮೋಚಕೇಚ್ಛೆಯು ಈ ಜ್ಞಾನ ಒದಗಿದಾಗಲೇ ಇವನಲ್ಲಿ ನೂತನವಾಗಿ ಕೂತಿತ್ತು ಎಂದು ತಿಳಿಯಬೇಕು. ಈ ಜ್ಞಾನ ಹುಟ್ಟುವುದಕ್ಕೆ ಪೂರ್ವದಲ್ಲಿ ಶುದ್ಧ ಮೂಡ ಭಕ್ತ ಎಂತ ಈತನು ಕರೆಸಿಕೊಳ್ಳುತ್ತಾನೆ. ಆದುದರಿಂದ ಈ ಜ್ಞಾನವು ಹರಿವಾಯುಗಳ ಪ್ರಸಾದ ಲಬ್ಧವು. ಈ ಜ್ಞಾನದಲ್ಲಿ ಇಷ್ಟು ಮಹಿಮೆಗೆ ಕಾರಣವೇನೆಂದರೆ:- ಅನಾದ್ಯವಿದ್ಯಜನ್ಯ ಸ್ವಾಮಿದ್ರೋಹವು ನಿವೃತ್ತವಾಗುತ್ತೆಂದುದರಿಂದ ಪರಮಾತ್ಮನ ಬಂಧಕೇಚ್ಛೆಯೂ ನಿವೃತ್ತವಾಗುತ್ತಾ ಬರುವುದಕ್ಕೆ ಇದೇ ಕಾಲ ಪ್ರಾರಂಭವು. ಸಾಕಲ್ಯೇನ ನಿವೃತ್ತಿ ಕಾಲವು

ವಿರಜಾಸ್ನಾನೋತ್ತರ ಕಲ್ಪ ಶ್ವೇತದ್ವೀಪಗತ ಶ್ರೀ ವಾಸುದೇವನ ಸಂದರ್ಶನ ಕಾಲವೇ ಸರಿ. ಈ ಸ್ವಾಮಿದ್ರೋಹತ್ವ ವಿವರಣೆಯು :- "ಚೋರಾಟ ಬಿಡು ಬಿಡು ನಾನೆಂಬೋದು" ಎನ್ನುವ ವಿರಾಟ ಧ್ಯಾನ ಸುಳಾದಿಯಿಂದ ಇದೇ ಮುಖ್ಯ ದ್ರೋಹ. ಅನುಭವ ಹೇಗೆಂದರೆ- ಅನಂತಾನಂತ ಭಗವದ್ರೂಪಗಳಲ್ಲಿ ಜೀವಾಂತರ್ಯಾಮಿ ಜೀವಾಕಾರ ಮೂರ್ತಿ ಚೇಷ್ಟಾ ಪ್ರಾರಂಭ ಮಾಡಿ ಸ್ಥೂಲದೇಹ ಕಾರ್ಯಾಂತರ್ಗತ ವಿಶ್ವಮೂರ್ತಿಯ ಚೇಷ್ಟಾ ಪರ್ಯಂತ ಅಪರಿಮಿತ ಭಗವದ್ರೂಪಗಳು ಅಲುಗಾಡದೇ ಇವನ ಸ್ವರೂಪ ಬಾಹ್ಯ ದೇಹಗಳಲ್ಲಿ ಅಲುಗಾಡುವುದು ಇಲ್ಲವಷ್ಟೆ. "ಯಥೈಷಾ ಪುರುಷೇಚ್ಛಾಯ ಏಕಸ್ಮಿನ್ನೇತದಾತಕಂ । ಎಂತ ಸತ್ತತ್ವರತ್ನಮಾಲಾ" ತನುವಿನ ನೆಳಲಂತೆ ಹರಿಯಾಡಲು, ಜೀವನು ಪ್ರವರ್ತಿಸುವನು ವಿವಿಧ ಕರ್ಮ ಎಂತ ಸ್ವತಂತ್ರ ಸುಳಾದಿ. ಬ್ರಹ್ಮಾದಿ ಸಕಲ ಮುಕ್ತಾಮುಕ್ತ ಕಲ್ಯಂತ ಜೀವ ಜಡ ಚೇಷ್ಟೆಗಳು- ಜಡ ಸೂಕ್ಷ್ಮ- ಜಡಸ್ಥೂಲ. ಜೀವ ಸೂಕ್ಷ್ಮ ಜೀವಸ್ಥೂಲಗಲೆಂಬ ಚತುರ್ವಿಧ ಪೂರ್ವೋಕ್ತ ಚೇಷ್ಟೆಗಳು ಅಂಗಾರವ್ಯಾಪ್ತ ಅಗ್ನಿಂಯೋಪಾದಿಂಯಲ್ಲಿ ಜಗದ್ಗುಣರೂಪಗಳಲ್ಲಿಯೂ- ಭಗವದ್ಗುಣರೂಪಗಳು ಸಪ್ತದ್ರವೀಭೂತ ಕಾಂಚನೋದಕ ಸ್ರವಣ ಚೇಷ್ಟಾಂತರ್ಗತ ಅಗ್ನಿ ಚೇಷ್ಟಾ ಸದೃಶ ಜಗಚ್ಚೇಷ್ಟಾ ಎಂದು ಜಗದ್ವಿಲಕ್ಷಣ ಗುಣ ಪೂರ್ಣ ಚೇಷ್ಟೆಯನ್ನು ಚಿಂತಿಸತಕ್ಕದ್ದು. . ಪುರಂದರ ದಾಸರ ಸುಳಾದಿಯಲ್ಲಿ

*ಹರಿನಡೆಯದಿರೆ ನಡೆಯದಿರದೀಜಗ ।*
*ಹರಿ ಅಲ್ಲಾಡಿದರೆ ಅಲ್ಲಾಡದೀ ಜಗ ॥*
*ಹರಿ ಮಾತಾಡದಿರೆ ಮಾತನಾಡದೀ ಜನ ।*
*ಹರಿಎವೆ ಇಕ್ಕದಿರೆ ಇಕ್ಕದೀ ಜಗವು॥*

ಎಂತ ಹೇಳಿದ್ದಾರೆ. ಹುಲ್ಲು ಮೊದಲಾದ ಅಣು ಮಹತ್ತುಗಳಷ್ಟು ಅಲ್ಲಾಡವುದು ನಮ್ಮ ಹರಿಯ ವ್ಯಾಪಾರವೆನ್ನಿ. ಎಂತ ಬಿಂಬ ಕ್ರಿಯಾ ಸುಳಾದಿ. ಈ ಜ್ಞಾನದಿಂದ ಕರ್ಮಾಧಿಕಾರ ಹುಟ್ಟಿತು ಎಂದರೆ "ಭಕ್ತಿಸ್ಥಂ ಪರಮೋ ವಿಷ್ಣುಃ" ಎಂಬ ಭಾಷ್ಯೋಕ್ತಿಯಿಂದ ತೃಣ ಜೀವಾದಿ ಬ್ರಹ್ಮಾಂಡ ಸರ್ವ ಮುಕ್ತಾಮುಕ್ತರಲಿಯೂ ಶ್ರೀಹರಿಗೆ ಶ್ರೀಹರಿಯೇ ಅರ್ಚಕನಾಗಿ ಅನಾದಿ ಸಿದ್ಧ ಪರಮ ಭೃತ್ಯ ಬಿಂಬನು

ಸ್ನಾನ ಸಂಧ್ಯಾದಿ ಜ್ಯೋತಿಷ್ಟೋಮಾಂತ ಕರ್ಮಗಳನ್ನು ಧ್ಯಾನೋಪಾಸನೆ ಮೊದಲಾದುದನ್ನೂ ಈ ತೃಣ ಜೀವರನ್ನು ನಿಮಿತ್ತೀಕರಿಸಿಕೊಂಡು ಇವನ ಜನ್ಮ ಪರಂಪರೆಯಲ್ಲಿ ತಾನಾಗಿ ಮಾಡುವ ಕರ್ಮಗಳಿಂದ ಹೊರತಾಗಿ ಬಿಂಬಾಪರೋಕ್ಷವು ಸುಲಭವಲ್ಲ. ಈ ಜೀವನಿಗೆ ಬಿಂಬಾಪರೋಕ್ಷವಾಗೋಣವೇ ಇವನ ನಿಷ್ಕಾಮ ಕರ್ಮಕ್ಕೆ ಇಷ್ಟ ಫಲವು.

*ಜೀವ ಸತ್ತಾಪ್ರದತ್ವಾತ್ತು ಸದೃಶತ್ವಾಚ್ಚ ಕೇಶವಃ ।*
*ತಥ್ಯಶತದಭೇದೇನ ನ ತು ಜೀವ ಸ್ವರೂಪತಃ ॥*

ಎಂತ ಸಪ್ತಮ ಸ್ಕಂಧ ತಾತ್ಪರ್ಯ ವಚನವು. ಅಂದರೆ ಅರುಣೋದಯ ಪೂರ್ವದ ಕತ್ತಲೆಯಲ್ಲಿ ಖದ್ಯೋತ ಕ್ರಿಯೆಯು (ದೀಪದ ಹುಳ) ಪದ್ಮ ಪುಷ್ಪ ಮುಕುಳಿತಕಾಲದಲ್ಲಿ ತತ್ಸಮೀಪದಲ್ಲಿ ಮೇಲೆ ಸಂಚಾರ ಮಾಡುತ್ತಾ ಇರುವಾಗ ಸೂರ್ಯೋದಯದಿಂದ ಕಮಲ ಅರಳಲು ತನ್ನ ದೇಹದ ಕಾಂತಿಯಿಂದ ಅದು ಅರಳಿತೆಂದು ತಿಳಿಯುವುದು ಹೇಗೆ ಭ್ರಮೆಯೋ ಹಾಗೆ ಅಂತ "ಅರವಿಂದದ ಬಿಳಿಯ" ಎಂಬ ಸುಳಾದಿಯು. "ಪರಾಶ ಶಕ್ತಿರ್ವಿವಿಧೈವ ಶ್ರೂಯತೇ" ಎಂಬ ಶ್ರುತಿಯಿಂದಲೂ ಪೂರ್ವೋಕ್ತ ಚತುರ್ವಿಧ ಜಗಚ್ಚೇಷ್ಟೆಗಳು ಇದ್ದರೂ ಇಲ್ಲವೆಂದು ಮರೆತು ಇರತಕ್ಕದ್ದು ಜ್ಞಾನಿಯ ಲಕ್ಷಣವು. ಅಂಗಾರವ್ಯಾಪ್ತ ಅನಲ ದರ್ಶನ ಕಾಲಕ್ಕೆ ಆ ಅಂಗಾರದ ಮರವು ಹ್ಯಾಗೆಯೇ ಸರಿ –

*ಕನ್ನಡಿಯ ಕೈಪಿಡಿದು ನೋಳ್ಪನ ಕಣ್ಣುಗಳು ಕಂಡಲ್ಲಿ ಎರಗದೆ*
*ತನ್ನವೋಲ್ ಪ್ರತಿಬಿಂಬ ಕಾಣುವ ದರ್ಪಣವ ಬಿಟ್ಟು*
*ಧನ್ಯರಿಳೆಯೊಳಗೆಲ್ಲ ಕಡೆಯಲ್ಲಿ ನಿನ್ನ ಮೂರ್ತಿಯ*
*ನೋಡಿ ಸುಖಿಸುತಸನ್ನವೆಸಿ ಆನಂದವಾರಿಧಿ ಒಳಗೆ ಮುಳುಗಿಹರು*

ಎಂತ ಅಮೃತಸಾರವು– ಹಾಗಾದರೆ ಶ್ರೀಹರಿಗೆ ಹರಿಯೇ ಭಕ್ತನಾದರೆ ಈ ಜೀವನು ಏತಕ್ಕೆ ಆತನಿಗೆ ನಮ್ರರಾಗಿ ನಮಸ್ಕರಿಸ ಬೇಕೆಂದರೆ, ಸ್ವಾಮಿಯು ಭಕ್ತರ ಭಕ್ತ್ಯಂತರ್ಗತನಾದುದರಿಂದ ಈ ಭಕ್ತಿಯೇ ಅನಾದಿ ಜೀವ ಧರ್ಮ ವಾಗಿ ನಿತ್ಯವಾದ ಪ್ರಯುಕ್ತ ತೃಣ ಜೀವಾದಿ ಬ್ರಹ್ಮಾಂತ ಮುಕ್ತಾಮುಕ್ತ ಭೃತ್ಯ ವರ್ಗಗಳೂ ಮತ್ತು ರಮಾದೇವಿಯರೂ ಕೂಡ, ಪಂಜೆಗಳ ಹಾಗೆ ಜೀವರು

ಅಂಜಲೀಬದ್ಧರಾಗಿ ಹಲ್ಲು ಬಿಟ್ಟು ಕೊಂಡು ಕಣ್ಣು ಮುಚ್ಚಿ ಬಿಡುತ್ತಾ ಸ್ವಾಮಿಯ ಕಟಾಕ್ಷ ವೀಕ್ಷಣೆಗೆ ಎದುರಿನಲ್ಲಿ ನಿಂತು ಮಹಾಮಹಿಮನ ಯತ್ಕಿಂಚಿತ್ಪ್ರಸಾದ ಪಾತ್ರರಾಗಿ ಕಾದಿರೋಣವೇ ಭಕ್ತರಿಗೆ ನಿತ್ಯ ಧರ್ಮವಾಯಿತು. ಪ್ರಮಾಣ :-

*ಅನಾದಿ ನಿತ್ಯ ಭಕ್ತಿರ್ಹಿ ಕ್ರಮಾತ್ ವೃದ್ಧಿಂ ಗತ್ಯೇವಸಾ।*
*ಅಪರೋಕ್ಷದಿಶೋರ್ಹೇತುರ್ಮುಕ್ತಿ ಹೇತುಶ್ಚ ಸಾ ಪುನಃ॥*
*ಸೈವಾನಂದ ಸ್ವರೂಪೇಣ ನಿತ್ಯಾ ಮುಕ್ತೇಷು ತಿಷ್ಠತಿ*

ಎಂತ ಸತ್ತತ್ವರತ್ನಮಾಲಾ – ಏತೇನ ನಾನು ಎಂಬ ಸ್ವಾಮಿದ್ರೋಹಕ್ಕೆ ಅರ್ಥ ಪಾಚಕನ ಹಸ್ತಗತ ದರ್ವಿಯು ನಾನೇ ಕಾರ್ಯ ನಿರ್ವಹಿಸುತ್ತೇನೆಂತ ತಿಳಿದುಕೊಂಡರೆ ಹಾಗೆ ಪಾಚಕ ಸದೃಶ ಯತ್ನಾಂತರ್ಯಾಮಿಗೆ ಇವನು ಭೃತ್ಯನಾಗದೆ – ನಾನು ಎಂತ ಅವನೇ ನಾನು ಎಂಬ ಅದ್ವೈತವಾದಿಗೆ ಸಮನಾದುದರಿಂದ ಇವನೇ ದ್ರೋಹಿ ಎಂತ ಅರ್ಥವು. ಪ್ರಮಾಣ ಸಪ್ತಮ ಸ್ಕಂಧ ಸಪ್ತಮಾಧ್ಯಾಯ ೨೬ನೆಯ ಶ್ಲೋಕ "ಸ್ವರೂಪಮಾತಿನೋದತ್ತೇ ಗಂಧೈರ್ವಾಯುರಿವಾನ್ವಯತ್ । ಎಂಬಲ್ಲಿ ಸ್ವರೂಪ ಎಂಬುವುದಕ್ಕೆ ತಾತ್ಪರ್ಯ:- ಜೀವೇನ ಸಹ ಸಂಸ್ಥಾನಾತ್ ತತ್ಸ್ವರೂಪಃ ಪ್ರಸ್ಪೃಶ್ಯತೇ" ಇದು ತಾತ್ಪರ್ಯ ಶ್ಲೋಕ. "ಜೀವೇನ ಸಹ ಸರ್ವ ಕರ್ಮ ಕರೋತಿ" ಎಂತ ವಿಜಯಧ್ವಜೀಯ. "ಆಧೀಯ ಯತ್ನಾಧಿಕರಣ ರೂಪಾತ್" ಎಂತ ಗರುಡ ಪುರಾಣ ಬ್ರಹ್ಮ ಕಾಂಡ. ಘಟಾದಿರೂಪ ದರ್ಶನ ಕಾಲದಲ್ಲಿ ದ್ರಷ್ಟೃ (ನೋಡುವವನು) ಶ್ರೀಹರಿಯಿಂದ ಮೇಲೆ ಜೀವೇಶ್ವರೈಕ್ಯವನ್ನು ಏಕೆ ಹೇಳಬಾರದೆಂದರೆ- ಸುಗಂಧ ದುರ್ಗಂಧ ಸ್ನಾವಲಿತ ವಾಯುವು ಘ್ರಾಣ ಸಮೀಪಕ್ಕೆ ಬಂದು ಗಂಧ ಜ್ಞಾನ ಕಾಲದಲ್ಲಿ ವಾಯು ಗಂಧ ಗಳಿಗೆ ಐಕ್ಯ ಜ್ಞಾನ ಬರಲಿ. "ದುರ್ಗಂಧದ ಹಾಗೆ ಕಲ್ಯಾದಿಗಳ ಚೇಷ್ಟೆ" – ಯಥಾ ಗಂಧಯಂತೋ ಅನಿಲಃ ಎಂತ ತಾತ್ಪರ್ಯ ವಚನವು. ತದುತ್ತರ ಶ್ಲೋಕಃ- "ಏತದ್ದ್ವಾರೋಹಿ ಸಂಸಾರೋ ಗುಣ ಕರ್ಮ ನಿಬಂಧಿನಃ। ಅಜ್ಞಾನ ಮೂಲೋ ಅಪಾರ್ಥೋಽಪಿ ಪುಂಸಃ ಸ್ವಪ್ನ ಇವಾಪ್ಯತೇ" ಇದು ಬಾಲಕರಿಗೆ ಪ್ರಹ್ಲಾದೋಪದೇಶ ಶ್ಲೋಕ. ಅಂದರೆ "ಏತದ್ದ್ವಾರಃ ಏತದಭೇದೇನ ದರ್ಶನಂ ದ್ವಾರಂ ಯಸ್ಯ ಸಂಸರಸ್ಯ ಸತಥಾ" ಎಂತ ವಿಜಯಧ್ವಜೀಯ. ಅತಏವ ಇದೇ ದ್ರೋಹರೂಪ. ಏಕಾದಶ ಸ್ಕಂಧ ಏಳನೆಯ

ಅಧ್ಯಾಯ ತಾತ್ಪರ್ಯಸ್ಥ ವಚನಂ:- "ಇದಂ ಮಯಾ ಕ್ರಿಯತೇ ಇದಂ ಮಯಾ ನಕ್ರಿಯತೇ ಇದಂ ಮಯಾ ವಿಪರೀತಂ ಕ್ರಿಯತೇ ಇತಿ ಯಃ ಬುದ್ಧಿ ಭೇಧಃ। ಸತ್ವರಜಸ್ತಮೋಗುಣ ನಿಮಿತ್ತ ಭ್ರಮಃ ॥ ಸರ್ವಂ ಹಿ ಸರ್ವೇಶ್ವರಃ ಕರೋತಿ।"

*ಕರ್ತೃತ್ವಮಾತ್ಮನೋ ಯಸ್ಮಾತ್ ಜ್ಞಾನ ನಿಷ್ಠೋ ನಮನ್ಯತೇ।*
*ಅತಃ ಕುರ್ವನ್ನಪಿ ಸದಾ ದೋಷ ಬುಧ್ಯಾ ನ ನಿಂದಿತಂ ।*
*ಗುಣ ಬುಧ್ಯಾ ನ ವಿಹಿತಂ ಕಿಂತು ಈಶ್ವರ ಪ್ರೇರಿತೋಸ್ಮ್ಯಹಂ ।*
*ಸ ಏವ ಚ ಮಯಿ ಸ್ಥಿತ್ವಾ ನಿಂದ್ಯಾನಿಂದ್ಯೇ ಕರೋತ್ಯಜಃ।*
*ನಮೇ ದೋಷೋ ನ ಚ ಗುಣಃ ಕರ್ತೃತ್ವಾಭಾವತಃ ಸ್ಫುಟಂ।*
*ಸ್ವತಂತ್ರತ್ವಾನ್ನಚೇಶಸ್ಯ ಯೋ ಅಜ್ಞಾಸ್ತೇಷು ಭವೇದಪಿ ।*

ಅಂದರೆ ಸ್ವತಂತ್ರನಾದ ಶ್ರೀ ಹರಿಗೆ ಹ್ಯಾಗೆ ಪುಣ್ಯ ಪಾಪ ಲೇಪವಿಲ್ಲವೋ ಹಾಗೆ- ಹೀಗೆ ತಿಳಿದ ಜ್ಞಾನಿಗೂ ಗುಣ ದೋಷಗಳಿಲ್ಲ. ಅಂದರೆ ಈ ಜ್ಞಾನಿಕೃತ ಪುಣ್ಯ ಪಾಪಗಳು ಜೀವನ ಸಂಗಡ ಅಪರೋಕ್ಷದರ್ಶನದ ತನಕ ಸಂಚಿತವಾಗಿಕೊಂಡಿದ್ದು ಅನಂತರ ಭಸ್ಮವಾಗುತ್ತಾದ ಪ್ರಯುಕ್ತ ಆ ಪುಣ್ಯ ಪಾಪಲೇಪವೂ ಅಜ್ಞಾನಿಗಳಿಗೇಸರಿ. ಎಂತ ನಿರ್ಣಯಿಸಿದ ಪ್ರಯುಕ್ತ ಈಗ ತಿಳಿದುಕೊಂಡು ಜ್ಞಾನಿಯು ಶ್ರೀಹರಿಯೇ ಮಾಡುತ್ತಾನೆಂದು ತಿಳಿದು ಮನಸ್ಸಿನಲ್ಲಿ ಬಂದ ಹಾಗೆ ಪಾಪಗಳನ್ನು ಆಚರಿಸಬಹುದಷ್ಟೇ ಅಂದರೆ ಅದರ ಮುಂದಿನ ಸರ್ವಜ್ಞರ ಉಕ್ತಿ "ಇತಿ ಮತ್ವಾನಿವರ್ತೇತಿ ನಿಂದ್ಯಾತ್ಕುರ್ಯಾದ್ಗುಣಾನಪೀತಿ" ಷಾಡ್ಗುಣ್ಯೈಃ- ಅನಿಷ್ಟ ಪುಣ್ಯ ಪಾಪಲೇಪವೂ, ಇವನಿಗೆ ಇಲ್ಲದ ಪ್ರಯುಕ್ತ, ವಿಧ್ಯನುಷ್ಠಾನ ನಿಷೇಧ ಪರಿತ್ಯಾಗಗಳು ಎರಡು ವಿಧಗಳಾದುದರಿಂದ ಅಜ್ಞಾನಿಗಳಿಗೆ ಅನಿಷ್ಟ ಪಾಪ ಪುಣ್ಯ ಲೇಪದಾಯಕಗಳು ಈ ವಿಧಿ ನಿಷೇಧ ಪರಿತ್ಯಾಗವು ಜ್ಞಾನಿಗಳ ಸಂಕಲ್ಪ ಮಾತ್ರ ಭೇದದಿಂದ ನಶ್ವರ ಸಂಕಲ್ಪ ಪರಿತ್ಯಾಗವೇ ಹೊರತು ಕರ್ಮಸ್ವರೂಪ ಪರಿತ್ಯಾಗವು ನಮ್ಮ ಸಿದ್ಧಾಂತವಿರುದ್ಧವೇ ಸರಿ. ಆ ಮುಂದಿನ ಸರ್ವಜ್ಞರ ವಚನ:-

*ಅನಿತ್ಯಾ ಮೇ ಗುಣಾನಸ್ಯಾಃ ದೋಷೋನೈವ ಕಥಂಚನ।*
*ಇತಿ ಮತ್ವಾ ಶುಭಂ ಕುರ್ಯಾನ್ನಿವರ್ತಿತಾಶುಭಾದಪಿ ।*
*ಜ್ಞಾನಿತ್ವಂ ಕರ್ತೃತಾಭಾವಾದೀಶ ಕರ್ತೃತ್ವ ನಿಶ್ಚಯಾತ್ ।*

*ಕಿಂತು ಪೂರ್ಣಗುಣಾಯೈವ ನ ತು ದೋಷಾಪನುತ್ತಯೇ।*
*ನಚಾಲ್ಪ ಗುಣ ಸಿಧ್ಯರ್ಥಂ ಬಲವತ್ಕೃತ ನಿಶ್ಚಯಃ॥* ಇತಿ ವೈಶಾರದೆ

ಎಂತ ಏಕಾದಶ ಸ್ಕಂಧ ಸಪ್ತಮಧ್ಯಾಯ ತಾತ್ಪರ್ಯ ವಚನವು. ಅಂದರೆ:- "ಪೂರ್ಣ ಗುಣಾಯೈವ" ಅಂದರೆ ಜೀವ ಸ್ವರೂಪ ಯೋಗ್ಯಾನಂದಾದಿ ಪೂರ್ಣರೂಪ ಮೋಕ್ಷಾರ್ಥವಾಗಿಂರ್ಯೋನೇ ಎಂತ ಏತದ್ವ್ಯಾಖ್ಯಾನ ತಾಮ್ರಪರ್ಣಿಯೋಕ್ತಿಯು. ಶ್ರೀಹರಿ ಪ್ರೀತಿ ಸಂಕಲ್ಪದಲ್ಲಿ ಪುಣ್ಯ ಪ್ರಾಪ್ತವಾಗಲಿ ದೋಷ ಪರಿಹಾರವಾಗಲಿ ಎಂತ ಈ ಎರಡು ಮನಸ್ಸಿನಲ್ಲಿ ಮಾತ್ರ ಇರೋಣ- ಹೊರಗೆ "ವಿಷ್ಣು ಪ್ರೀತ್ಯರ್ಥಂ" ಎಂತ ಅರಗಿಣಿಯೋಪಾದಿಯಲ್ಲಿ ರಾಮ ರಾಮ ಎನ್ನೋಣ ಇಂತಹ ಕಾಮ ಸಂಕಲ್ಪವನ್ನು ಕಲಿಸಿದ ಪ್ರಯುಕ್ತ ಇದು ಸರ್ವಥಾ ನಿಷ್ಕಾಮವಲ್ಲ. ಎಂದು ಅರ್ಥವು. ಧ್ಯಾನ ಪ್ರಕರಣ ಸುಳಾದಿಯಲ್ಲಿ "ಜ್ಞಾನ ವೈರಾಗ್ಯ ಭಕುತಿ ಎರಡು ವಿಧವೋ" ಎಂತ ಹೇಳಿ ಇದ್ದಾರೆ ಮತ್ತೊಂದು ಸುಳಾದಿ

*ಸೇರು ಸಕ್ಕರೆ ತಂದು ಕೊಟ್ಟ್ಯಾನು ಕೋಟಿ ಜನಕೆ ।*
*ತಾರತಮ್ಯದಿಂದ ಹಂಚಿದೋಪಾದಿಯಲ್ಲಿ*
*ವಾರವಾರಕ್ಕೆ ಪಾಪ ಪುಣ್ಯಗಳೆರಡು*
*ಆರಾರ ಭಾಗಂಗಳು ಅವರಿಗೆ ಪೋಗಲಾಗಿ*
*ಭಾರವೆನ್ನ ಪಾಲಿಗೆ ಪ್ರಾಪ್ತವಾಗೋದೆಷ್ಟೋ*
*ಕಾರ್ಯಕಾರಣನೆ ಪೊಂದಿಪ್ಪನೇಪೇಳೋ ॥*
*ಈ ರೀತಿ ಉಳ್ಳದ್ದಕ್ಕೆ ಬಲು ಜನ್ಮಗಳು ಕೊಟ್ಟು*
*ಗಾರುಗೊಳಿಸುವುದೇನೋ ಘೋರ ಮಾರ್ಗದೊಳಿಟ್ಟು*
*ನಾರದ ಮುನಿ ವಂದ್ಯ ವಿಜಯ ವಿಠಲ*

ಎಂತ ವಿಜಯದಾಸರ ಸುಳಾದಿ - ಅಂದರೆ ನಾನು ಪ್ರಾರಬ್ಧ ಮಾತ್ರಕ್ಕೆ ನರಕಾದಿಗಳಿಗೋ ಭಾಗಿಯೇ ಹೊರತು ಸಂಚಿತಾಪರಿಮಿತ ಪುಣ್ಯ ಪಾಪ ಕರ್ಮ ರಾಶಿಗಳಿಗೆ ನಾನು ಭಾಗಿಯಲ್ಲ- ಏಕೆಂದರೆ:- "ಕರ್ಮಜ್ಞ- ಕರ್ಮೇಶ- ಕರ್ಮಪ್ರವರ್ತಕನೆ ಕರ್ಮಫಲದಾತ, ಕರ್ಮಸ್ಥ" ಎಂತ ಜಗನ್ನಥ ದಾಸರ ವಚನವು. ಭಕ್ತಿಪೂರ್ವಕ ಈ ಚಿಂತನೆಯಿಂದಲೇನೇ ನಾನು ಎಂಬ ದಾಸ

ಭಗವದ್ರೂಪಕ್ಕೆ ದಾಸ್ಯ ಇವನಿಗೆ ಸಿದ್ಧಿಸಿದಾಗಲೇ ಈ ಜ್ಞಾನ ಯೋಗದ ಮಹಿಮೆಯನ್ನು ಶಾಂಡಿಲ್ಯ ತತ್ವದಿಂದ ಮುಂದೆ ನಿರೂಪಿಸುತ್ತೇನೆ. ಇದರಿಂದ ಸಕಲ ಸಂಚಿತ ಕರ್ಮಗಳೂ ಭಸ್ಮವಾಯಿತೆಂಬುವುದೇ ಸಿದ್ಧಾಂತ. ಈಗ ಅನುಭವ್ಯ ಪ್ರಾರಬ್ಧ ಕರ್ಮ ಫಲರೂಪ ನಿಶ್ಚಯ ಜ್ಞಾನವೇ ನಿಷ್ಕಮಾರಾಧನೆಯನ್ನು ಸತತವಾಗಿಹುಟ್ಟಿಸಿ ಯೋಗ್ಯಾಪರೋಕ್ಷ ಕೊಟ್ಟು ವಿರಜಾಸ್ನಾನದ ತನಕ ಅನಾದಿ ನಿತ್ಯ ಸಿದ್ಧ ಸ್ವರೂಪ ಜ್ಞಾನವೆಂಬ ದೀಪಕ್ಕೆ ಎಣ್ಣೆಯೋಪಾದಿಯಲ್ಲಿ ಬೆನ್ನು ಬಲವಾಗಿ ಸಾಧಕವಾಗಿ ಯೋಗ್ಯತಾನುಸಾರವಾಗಿ ಇರುತ್ತದೆ. ಈ ಜ್ಞಾನಿಗಳು ಪಾಪ ಮಾಡುತ್ತಾರೋ ಇಲ್ಲವೋ ಎಂದರೆ ಋಜುಗಳ ವ್ಯತಿರಿಕ್ತ ರುದ್ರಾಂತ ದೇವತೆಗಳಿಂದ ಉಪಚಾರಣೆ ಉಂಟು:- ಸುಳಾದಿ:-

*ತಪಶ್ಶೀಲನಾದರೂ ಪಾಪಕ್ಕೆರಗದೆ ಬಿಡನೋ ।*
*ಗುಪಿತವಿದು ಮಹಾಗುಪಿತ ಗಹನ ಕರ್ಮ।*
*ಅಪರಿಹಾರವಯ್ಯಾ ಒಂದಾರಂಬಿಸಿ ಬಂದಿ೦।"*

ಎಂದು ಅನಾದಿ ಕರ್ಮ ಸುಳಾದಿ ಸಿದ್ಧ.

ಆದುದರಿಂದ ಇವನ ಯೋಗ್ಯತಾನುಕೂಲವಾಗಿ ನಿಷ್ಕಾಮ ಕರ್ಮಗಳು ದಕ್ಕುತ್ತವೆ. ಎಂದು ಅರ್ಥವು.

*ಮೋಡಕ್ಕೆ ಬಿಚ್ಚಣಿಕೆಯಿಂದಲಿ। ಓಡಿಸುವೆಂಬುವನ ಪ್ರಯತ್ನವು।*
*ಕೂಡುವುದೇ ಕಲ್ಪಾಂತಕಾದರೂ ಲಕ್ಷ್ಮೀವಲ್ಲಭನು॥*
*ಜೋಡು ಕರ್ಮವ ಜೀವರೊಳು ತಾ। ಮಾಡಿ ಮಾಡಿಸಿ ಫಲಗಳುಣಿಸುವ।*
*ಪ್ರೌಢರಾದವರಿವನ ಭಜಿಸಿ ಭವಾಬ್ಧಿ ದಾಟುವರು ॥*

ಹ. ಕ. ಸಾ. ನೈ. ಸ ಸಂ ೧೧

ಅಂದರೆ ಬಲವಾದ ಕರೀಯ ಮೇಘಗಳು ಮುಚ್ಚಿಕೊಂಡರೆ ಅದಕ್ಕೆ ತಕ್ಕ ಮಹಾವಾಯುವಿನಿಂದ ಅವು ನಿವೃತ್ತವಾಗತಕ್ಕದಕ್ಕೆ ಬೀಸಣಿಗೆಯ ಗಾಳಿಯಿಂದ ಓಡಿಸುವೆನೆಂಬ ಇಚ್ಛೆಯಂತೆ- ಪಾಪ ಕರ್ಮವ ಮಾಡುವುದಿಲ್ಲ ಎಂಬುವನ ಸಂಕಲ್ಪ ವ್ಯರ್ಥವಾಗುಇವುದೇ ನಿಶ್ಚಯವು. "ವಿಧಿ ನಿಷೇಧ ತನ ಮನ ಬದಂತೆ ಉಣುಪ" ಎಂದು ವಿಜಯದಾಸರ ಉಕ್ತಿಯು. ಸುಳಾದಿ:-

*ಸುಜನರ ಕೈಯಿಂದ ಪಾಪವ ಮಾಡಿಸಿ*
*ನಿಜಬುದ್ಧಿಯನೆ ಕೊಟ್ಟು ಸದ್ಗತಿ ಪಾಲಿಪ।*
*ಕುಜನರ ಕೈಯಿಂದ ಸತ್ಪುಣ್ಯ ಮಾಡಿಸಿ*
*ಭಜಕನ ಕಂಗೆಡಸಿಯ್ಕೆದಿಸುವ ಪಾಪ ಮರ್ಗ* ಎಂದು ಹೇಳಿ ಮುಂದೆ
*ಅಜಾಮಿಳನ ನೋಡು ಕೆಟ್ಟು ಹೋಗಿದ್ದರೂ*
*ರಜ ದೂರನ ಮಾಡಿ ಹರಿ ಕಾಯಿದ।*
*ಕುಜನ ಬೌದ್ಧರು ಸನ್ಮಾರ್ಗ ಹೇಳಿದ್ದರೂ*
*ದನುಜರಿಪು ಬದ್ಧನಾಗಿ ಕಂಗೆಡಿಸಿದ*
*ಗಜವರದ ಇಂತ್ಯಾಕೆ ಮಾಡಿದೆನಗೆ*
*ಅಜನಪಿತನ ಇಚ್ಛೆ ಅಂಥಾದ್ದೇ ಅಂಥಾದ್ದೇ.*

ಅಂದರೆ ಪಾಪ ಕರ್ಮದಲ್ಲಿ ಪಶ್ಚಾತ್ತಾಪವು ಭಕ್ತಿಯ ಸ್ವರೂಪ ವಾದುದರಿಂದ ಶ್ರೀ ಹರಿಯು ಉದ್ಧರಿಸಿದನು. ಪುಣ್ಯ ಕರ್ಮದಿಂದ ಮೋಸ ಹೋದೆನೆಂಬ ಪಶ್ಚಾತ್ತಪದ ತಮೋಯೋಗ್ಯ ಭಾವಕ್ಕೆ ದುರ್ಗತಿಯು.

*"ಕೃತೇ ಪಾಪೇ ಅನುತಾಪೋವೈ ಯಸ್ಯ ಪುಂಸಃ ಪ್ರಜಾಯತೇ ।*
*ಪ್ರಾಯಶ್ಚಿತ್ತಂತು ತಸ್ಯೋದಕಂ ಹರಿ ಸಂಸ್ಮರಣಂಪರಂ"*
ಎಂತ ಕೃಷಾಮೃತ ಮಹಾರ್ಣವ

*"ಸರ್ವ ಪಾಪಾನಿ ಯತ್ಸಂಸ್ಮೃತೇಃ ಸಂಕ್ಷಯಂ*
*ಸರ್ವದಾಯಾಂತಿ ಭಕ್ತ್ಯಾ ವಿಶುದ್ಧಾತ್ಮನಾಂ ॥*
*ಯತತೋಪಿ ಹರೇಃ ಪದ ಸಂಸ್ಮರಣೇ ಸಕಲಂ*
*ಹ್ಯಘಮಾಶು ಲಯಂ ವ್ರಜತಿ॥"* ಎಂದು ದ್ವಾದಶ ಸ್ತೋತ್ರ

*"ವಿಧಿ ನಿಷೇಧ ನಿನ್ನವರಿಗೆಂತು ಹರಿಯೇ।*
*ವಿಧಿ ನಿನ್ನ ಸ್ಮರಣೆ ನಿಷೇಧ ವಿಸ್ಮೃತಿ ಎಂಬೋ*
*ವಿಧಿಯನೊಂದೇ ಬಲರಲ್ಲದೆ ಮತ್ತೊಂದು*
*ವಿಧಿ ನಿಷೇಧ ನಿನ್ನವರಿಗೆಂತು ಹರಿಯೇ॥"*
ಎಂದು ಪುರಂದರ ದಾಸರ ನಾಮ

*"ಸ್ಮರ್ತವ್ಯಸ್ಸತತಂ ವಿಷ್ಣುಃ ವಿಸ್ಮರ್ತವ್ಯೋ ನಜಾತುಚಿತ್॥*
*ಸರ್ವೇ ವಿಧಿ ನಿಷೇಧಾಸ್ಯುಃ ಏತಯೋರೇವ ಕಿಂಕರಾಃ ॥"*

ಎಂದು ಸದಾಚಾರಸ್ಮೃತಿ.

*ನದ ನದಿಗಳೆಳೆವಳಗೆ ಪಂವುವು*
*ಉದಧಿ ಪರಿಯಂತರದಿ ತರುವಾಯದಲಿ ರಮಿಸು*
*ವುದಲ್ಲದೆ ತನ್ಮಯವಾಗಿ ತೋರದಲೆ*
*ವಿಧಿ ನಿಷೇಧಗಳಾಚರಿಸುವರು ಬುಧರು.*
*ಭಗವದ್ರೂಪ ಸರ್ವತ್ರದಲಿ ಚಿಂತನ ಬರಲು ತ್ಯಜಿಸುವರಖಿಲ ಕರ್ಮಗಳ॥*

ಅಂದರೆ ಕರ್ಮ ಸ್ವರೂಪ ತ್ಯಾಗಗಳೇ ಅರ್ಥವಲ್ಲ- ಸಕಾಮ ವಿಧಿ ನಿಷೇಧ ತ್ಯಾಗವು, ನಿಷ್ಕಾಮ ವಿಧಿ ನಿಷೇಧಾರಂಭವು- ಈ ಎರಡು ಇದರ ಅಭಿಪ್ರಾಯವು. ಸುಳಾದಿ:-

ಎಲೆ ಮನವೆ ನಿತ್ಯ ಮಲವ ತೊಳೆಯದಲೆ ಹಲವು ಕರ್ಮಗಳು ಒಲಿದು ಮಾಡಿದರೇನು? ಎಂತ ವೈಕುಂಠ ಸುಳಾದಿ.

ಅಂದರೆ ಗುದ ಪ್ರಕ್ಷಾಲನೆ ಇಲ್ಲದೆ ಕರ್ಮಗಳೋಪಾದಿಯಲ್ಲಿ, ಉಪನಯನವಿಲ್ಲದೆ ವೇದಾಧಿಕಾರದೋಪಾದಿಯಲ್ಲಿ – ನಾನು ಎಂಬ ಅಜ್ಞಾನ ಹೋಗದೆ ಕರ್ಮಾಧಿಕಾರ ಸಿದ್ಧಿಸುವುದಿಲ್ಲ. ಪ್ರಮಾಣ:-

*"ಮೌನ ವ್ರತ ಶ್ರುತ ತಪೋಧ್ಯಯನ ಸ್ವಧರ್ಮವ್ಯಾಖ್ಯಾರಹೋ ಜಪ*
*ಸಮಾಧಯ ಆಪವರ್ಗ್ಯಾಃ ।*
*ಪ್ರಾಯಃ ಪರಂ ಪುರುಷ ತತ್ವ ಜಿತೇಂದ್ರಿಯಾಣಾಂ ವಾರ್ತಾ*
*ಭವಂತ್ಯುತ ನವಾ ಕ್ರತು ಡಾಂಭಿಕಾನಾಂ"*

ಎಂತ ಸಪ್ತಮ ಸ್ಕಂಧ ನೃಸಿಂಹ ಸ್ತುತಿ ಶ್ಲೋಕವು.

ಮೋಕ್ಷ ಸಾಧಕಗಳಾದ ಅಸಂಪ್ರಜ್ಞಾತ ಸಮಾಧಿ ಮೊದಲಾಗಿ ಜಪ-ಹೋಮ ಅತಿಥಿಪೂಜಾ ವ್ಯಾಖ್ಯಾನ ಅಗ್ನಿಹೋತ್ರಾದಿ ಕಾಲತ್ರಯ ದೀಕ್ಷಾ ಪೂರ್ವಕ ಭಗವತ್ಪೂಜೆಗಳು ಕೂಡಾ ನಾನು ಎಂಬ ಸ್ವಾಮಿದ್ರೋಹಿಗೆ "ವಾರ್ತಾಃ ತತ್ತ್ರಿಧಾಃ

ಭವಂತಿ ವಾನವಾ ॥ ಎಂತ ವಿಜಯಧ್ವಜೀಯಾ॥" ಅಂದರೆ ಮಧ್ಯಾಹ್ನ ಉದರಗ್ರಾಸವನ್ನಾದರೂ ಕೂಡತ್ತದೋ ಅಥವಾ ಕೂಡದೋ ಎಂತ ಹೇಳಿದ್ದಾರೆ.

*ಅದೃಷ್ಟೇರ್ಜೀವಪರಯೋರ್ಭೇದಸ್ಯಾಪ್ನೋತಿ ಸಂಸ್ರುತಿಂ।*
*ಅಭೇದೇ ನಿಶ್ಚಯಾದ್ಯಾತಿ ತಮೋನಾಸ್ತ್ಯತ್ರ ಸಂಶಯಃ ॥*

ಎಂತ ಸಪ್ತಮ ಸ್ಕಂಧ ಸಪ್ತಮೋಧ್ಯಾಯ ತಾತ್ಪರ್ಯ ಈ ಜ್ಞಾನಿಗಳಿಗೆ "ಆಕಿಂಚಿತ್ಕರಮಲ್ಪಂಸ್ಯಾತ್" ಮಹಚ್ಛೇದ್ದುಃಖ ಸೂಚಕಂ" ಎಂತ ಸತ್ತತ್ವರತ್ನಮಾಲಾ. ಅಲ್ಪ ಅಂದರೆ ಪ್ರಮಾದಾಜ್ಞಾನ ಕೃತವಾಗಿ ನಾನು ಎಂಬ ದ್ರೋಹ ಪೂರ್ವಕ ಪಾಪಗಳು ಇವಗೆ ಅನುಭವಾರ್ಹವಾಗುವುದಿಲ್ಲ. ಎಂತ ಹೇಳಿ ಬುದ್ಧಿ ಪೂರ್ವಕವಾದವುಗಳು ಅಪರೋಕ್ಷ ಪರಿಯಂತ ದುಃಖ ಸೂಚಕವಾಗಿ ಸಂಚಿತ ಶೇಷ ಎಂತ ಕರೆಸಿಕೊಳ್ಳುತ್ತಾನೆ. ಸುಳಾದಿ

*"ಸ್ವೋತ್ತಮರು ಜ್ಞಾನ ಪೂರ್ವಕದಿಂದಲಿ ಪಾ।*
*ತಕ ಪುಣ್ಯಗಳ ಮಾಡಿದರಾಗೆ ಭೀತಿಕಾಂಬ।*
*ದುಃಖ ಇಷ್ಟವೆನಿಸಿ ದು ಕಾಣೋ ಪ್ರ।*
*ಖ್ಯಾತ ಪುಣ್ಯ ದ್ವಿವಿಧ ಇಷ್ಟಾನಿಷ್ಟ।*
*ಭೀತಿಯಿಂದಲಿಬಹು ದೇಹಗಳ ತಂದಿತ್ತು ।*
*ಪ್ರೀತಿಯಿಂದಲಿ ಜ್ಞಾನೋತ್ತರ ಕಾಲಕ್ಕೆ।*
*ಯಾತನೆ ಜನರಿಗೆ ಈ ಪಾಪ ಪೋಗುವುದು ಅ*
*ದ್ವೈತಕ್ಕೆ ಬಲವಾಗಿ ದುರ್ಮತಿ ಕುಚಿಂತ।"* ಎಂತಲೂ

"ಅಪರೋಕ್ಷದಲ್ಲಿ ಮತ್ತೆ ಮಾಡಿದ ಕರ್ಮ ಜನನೀ ಗರ್ಭವಾಸದಲಿ ಬಿದ್ದು ಅನುಭವಿಸಲಾಗಿ ಉಳಿದ ಕರ್ಮವೇ ಸಂಚಿತ ಎನಿಸುವುದು. ಸಾಧನಮಾಳ್ಪಾಗಲೀ ಅನಿತರೊಳುಪ್ರಾಜ್ಞನ ಸಂದರ್ಶನವಾಗೆ ಘನವಾದ ಸಂಚಿತ ನಾಶವಹುದು" ಎಂತ ಅನಾದಿ ಕರ್ಮ ಸುಳಾದಿ. ಬುದ್ಧಿ ಪೂರ್ವಕ ದುಷ್ಕರ್ಮ ಮಾಡಿದ ಮಾತ್ರದಿಂದ ನಮ್ಮನ್ನು ಏನು ಮಾಡೀತೆಂಬ ಅಜ್ಞಾನಿಗೆ ದುಃಖಾನುಭವ ಬಿಡದು ಎಂತ ಅರ್ಥವು. ಅದು ಪಶ್ಚಾತ್ ಧೈರ್ಯರೂಪವೇ ಹೊರತು ಪಶ್ಚಾತ್ತಾಪರೂಪವಲ್ಲವು. ಸ್ವಾಮಿಯು ಇದನ್ನು ಸರ್ವಥಾ ಅನುಭವ ಹೊರತಾಗಿ ಪರಿಹಾರ ಮಾಡಿಸುವುದಿಲ್ಲ. "ನಿಷ್ಕಕ್ಕೆ ದೇಹವ ಮಾರಿಕೊಂಡಂತೆ ನೀ

ನಿಷ್ಕರ್ಮಗಳಿಗೊಳಗಾದಿರೋ" ಎಂತ "ನೆಚ್ಚದಿರು ಸಂಸಾರ" ಎಂಬ ನಾಮದಲ್ಲಿ ವಿಜಯರಾಯರ ಉಕ್ತಿ. "ಹರಿಮಂದಿರ ಮರ್ಯಾದೆ ಅನುಭವಿಸಿದಲ್ಲದೆ ಸರಸಿಜ ಭವಾದ್ಯರಿಗೆ ಬಿಡದೋ" ಎಂಬ ನಾಮವು ಹೊರಟಿದೆ. ಪ್ರಮಾಣ:-

*"ಪಶ್ಚಾತ್ತಾಪೇನ ಯತ್ತಪ್ತಂ ತತ್ಪಾತಂ(ತತ್ಪಾಪಂ) ಸಾತ್ವಿಕಂ ಭವೇತ್॥*
*ಕಿಂ ಭವಿಷತ್ಯನ್ಯೇನೇತಿ ಸೋತ್ಸಾಹೋ ಪುನಃ ಪುನಃ ।*
*ಪಾಪೋತ್ಸಾಹಃ ಸವಿಜ್ಞೇಯೋ ವೃದ್ಧಿ ಪಾಪಫಲೇ ತತಃ॥*

ಎಂತ ವಿಷ್ಣುರಹಸ್ಯ- ಹಾಗಾದರೆ :- ಘನ್ನ ದುರಿತ ಮೋಚುನ್ನವಾದುದಕೆ ಎನ್ನ ಪುಣ್ಯವಲ್ಲ ಎನ್ನ ಸಾಧನವಲ್ಲ." ಎಂತ ಸುಳಾದಿಯಲ್ಲಿ ವಿಜಯದಾಸರು ಹೇಳಿದ್ದಾರೆ. ಆದು ಬ್ರಹ್ಮ ಕಲ್ಪನುಭವ್ಯ ಸಂಚಿತ ಕರ್ಮ ರಾಶಿಗಳು ಭಸ್ಮವಾಯಿತು ಎಂತ ಅರ್ಥವು. ಸಂಚಿತವನ್ನು "ಯಚ್ಛಾಸೀಷು ಭವೇದಪಿ" ಎಂತ ಏಕಾದಶ ತಾತ್ಪರ್ಯದಿಂದ ಪೂರ್ವದಲ್ಲಿ ನಿರೂಪಿಸಲ್ಪಟ್ಟಿದೆ.

*"ತಾದೃಗ್ಬಂಧ ಮಹಾಗುಲ್ಮಮೂಲಂ ಸತ್ಕರ್ಮ ಸಂತತಿಃ।*
*ಅನಿರ್ಮೂಲಂ ದಹತ್ಯೇಷಾ ವೇಣುಗುಲ್ಮವಿವಾನಲಃ॥""*

ಎಂತ ಶಾಂಡಿಲ್ಯ ತತ್ವ.

ಅಂದರೆ ನಾನು ಎಂಬ ದ್ರೋಹ ಇಟ್ಟುಕೊಂಡು ಮಾಡುತ್ತಾ ಬರುವ ವಿದ್ಧ್ಯನುಷ್ಠಾನ ನಿಷೇಧ ವರ್ಜನಪರಿ ಎಂತ ಸತ್ಕರ್ಮ ಪರಂಪರೆಗಳು ಪೂರ್ವ ದುಷ್ಕರ್ಮ ಪರ್ವತಗಳನ್ನು ದಹಿಸಿ ಬಿಡುತ್ತವೆ. ಆದಾಗ್ಯೂ ಮಹಾಬಿದರು ಮೊಳೆಗಳನ್ನು ಅಗ್ನಿಯೋಪಾದಿಯಲ್ಲಿ ಭಸ್ಮ ಮಾಡಿದರೂ ಆ ಬಿದರು ವೃಕ್ಷಗಳ ಬೇರುಗಳು ಮಾತ್ರ ಬಹು ಗಟ್ಟಿಯಾಗಿ ಭೂಮಿಯ ಒಳಗೆ ಇದ್ದು ಪುನಃ ಪುನಃ ಯಥಾ ಪ್ರಕಾರ ಹೇಗೆ ಚಿಗುರತ್ತವೆಯೋ ಹಾಗೆ ಆಗುತ್ತವೆ. ಏಕೆಂದರೆ- ನಾನು ಕರ್ತೃ ಎಂಬ ಸ್ವಾಮಿದ್ರೋಹವು ಬಹು ಘಟ್ಟಿ ಆದುದರಿಂದ ಆ ದ್ರೋಹ ಹೋದರೆ ಸಂಚಿತ ಕರ್ಮಗಳ ಬೇರು ಕೂಡ ಹೋಗುತ್ತವೆ. ಭಕ್ತಿ ಪೂರ್ವಕ ಜ್ಞಾನಾಧಿಕಾರ ಹುಟ್ಟುತ್ತಾದುದರಿಂದ ಚೈತ್ರ ಮಾಸದ ಸೂರ್ಯ ರಶ್ಮಿಯು ಕೆಸರನ್ನು ಹೇಗೆ ನಿಶ್ಶೇಷವಾಗಿ ಶೋಷಿಸಿ ಭೂಮಿಯನ್ನು ತಪ್ತ ಮಡುವುದೋ ಹಾಗೆ ಮಾಡತಕ್ಕದ್ದೇ ನಿಷ್ಕಾಮ ಕರ್ಮಗಳು ಎಂದು ಶಾಂಡಿಲ್ಯರು ಹೇಳಿದ್ದಾರೆ.

*"ಕರ್ಮಣಃ ಕರ್ಮಣೋ ಜಾತಾನ್ನಹ್ಯಾಂತಿಕ ನಿಷ್ಕೃತಿಃ।*
*ಪ್ರಾಯಶ್ಚಿತ್ತಾನಿಚೋತ್ತಾನಿ ಮುನಿಭಿರ್ಭಾವಿತಾತ್ಮಭಿಃ॥*
*ತಾನಿ ಲೋಕೇಚ ಜಂತೂನಾಮಜ್ಞಾನಾಂಚ ಜಡಾತ್ಮನಾಂ।*
*ಜ್ಞಾನಯೋಗೋದಹತ್ಯಾಶು ಬಂಧ ಗುಲ್ಮಂ ಸಮೂಲಕಂ॥*
*ಗ್ರೀಷ್ಮೇ ಘರ್ಮೋ ಪಂಕಮಿವ ನೀಹಾರಮಿವ ಭಾಸ್ಕರಃ ।*
*ತದ್ಜ್ಞಾನಂ ಕರ್ಮಣಾಸಾಧ್ಯಂ"*

ಎಂದರೆ ಈಶನೇ ಕರ್ತಾ ಎಂದು ತಿಳಿದು ಮಾಡಿದ ಕರ್ಮಗಳಿಂದಲೇ ಸಂಚಿತಗಳೂ ಬೇರು ಸಹಿತ ಹೋಗುತ್ತವೆ ಎಂದು ಅರ್ಥವು. ಅದರ ಅನುಭವ ಸುಳಾದಿ

*"ಉಂಡರೆ ಉಣಲಿಲ್ಲ ಉಟ್ಟರೆ ಉಡಲಿಲ್ಲ*
*ಕೊಂಡರೆ ಕೊಳಲಿಲ್ಲ ಕೊಟ್ಟರೆ ಕೊಡಲಿಲ್ಲ*
*ಕಂಡರೆ ಕಾಣಲಿಲ್ಲ ಕರೆದರೆ ಕರಿಯಲಿಲ್ಲ.*
*ಹೆಂಡತಿ ಎನಗೇನೋ ಆಳು ಆವಳಿಗಾರೋ ಗಂಫ್ರಿ ಘಳೆಯಾರೋ"*

ಅಂದರೆ ದ್ರವ್ಯ ಸಂಪಾದಕನು ನನ್ನ ಅಂತರ್ಗತನೇ ಸರಿ ಎಂದು ಅರ್ಥವು. ಮುಂದಿನ ಮಾತು "ಗತಿನೆಡುವನ್ಯಾರೋ ಧುರಂಧರದ ಮಾತು ಕೇಳಿ ಕೊಂಬವನ್ಯಾರೋ" ಎಂದು ವೈರಾಗ್ಯ ಸುಳಾದಿ. ಅಂದರೆ ಜಗತ್ತಿನಲ್ಲಿ ಯಾವ ಕಾರ್ಯ ಮಾಡಿದರೂ ಮಾಡದೇ ಇದ್ದ ಪ್ರಾಯವು ಎಂದರ್ಥ. ಅತಏವ :- ಎನಗೆ ಆವ ಸ್ವತಂತ್ರ ಇದ್ದರಾದರೂ ಪ್ರಯೋಜನಕ್ಕೆ ಬಾರದಿದ್ದರೆ ಇದ್ದರೂ ಇಲ್ಲವೆನ್ನಿ ಎಂದು ಸ್ವತಂತ್ರ ಸುಳಾದಿ. ಜೀವ ಜಡಗಳ ಪೂರ್ವೋಕ್ತ ನಾಲ್ಕು ಕ್ರಿಯೆಗಳು ಇದ್ದರೂ ಅಕಾರ್ಯಕಾರಿಯೇ ಸರಿ. "ಹುಲ್ಲು ಜೀವಗಳ ಶಕ್ತಿ ಎಣಿಸಿದರಲ್ಲೇನು ಫಲವಿಲ್ಲವೋ ಕಣೋ ಕಂಡ ಮಾತು" ಎಂದು ಹೇಳಿದ್ದಾರೆ. "ಪ್ರತಿಮಾವಿದ್ದರೇ ರೂಪಂ ತಿರ್ಯಜ ಚ ನರ ಸುರಾದಯಃ॥ ಸಾಕ್ಷಾದ್ರೂಪಾಣಿ ಮತ್ಸ್ಯಾದೀನ್ಯೇವಂ ಜ್ಞಾನೀ ವಿಮುಚ್ಯತೇ" ಎಂದು ಏಕಾದಶ ತಾತ್ಪರ್ಯ. ಹೀಗೆ ತಿಳಿದು ಕರ್ಮಾನುಷ್ಠಾನ ಮಾಡಬೇಕೆಂದು ಅರ್ಥವು. ಮುಂದಿನ ಶಾಂಡಿಲ್ಯ ತತ್ವ ವಾಕ್ಯಗಳು "ತದ್ಜ್ಞಾನಂ ಕರ್ಮಣಾ ಸಾಧ್ಯಂ ಕರ್ಮ ಸಮ್ಯಕ್ಪ್ರಯೋಜಿತಂ ॥ ಉತ್ಪಾದಯಂತಿ ತದ್ಜ್ಞಾನಂ ತಸ್ಮಾತ್ಕರ್ಮ ಸಮಾಚರೇತ್ ॥" ಅಂದರೆ

ನಿರ್ಗುಣ ಭಕ್ತನಿಂದ ಅನುಷ್ಠಿತ ಕರ್ಮಗಳೂ ಶ್ರೀಹರಿ ಚರಣದಲ್ಲಿ ಶಾಶ್ವತವಾಗಿ ಬೆಳೆದು ಅಪರೋಕ್ಷಾದಿಗಳನ್ನು ಕೊಡುತ್ತವೆ ಎಂದು ಅರ್ಥ. ಸುಳಾದಿ:-

"ತಾನೇ ಸರ್ವ ಕರ್ತಾ ಎಂಬವ ತಾಮಸೀ ಅಂದರೆ ಇದೇ ತಮೋಯೋಗ ಜ್ಞಾನ ವಿವರ. ಪರಕೀಯನು ಶುದ್ಧ ಚೈತನ್ಯವಾದಿಯಾಗಿ, ಕರ್ತೃತ್ವ ಭೋಕ್ತೃತ್ವಾದಿಗಳು ಮಿಥ್ಯಾ ಎಂತಲೂ ಅಲ್ಪಜ್ಞತ್ವ ಸರ್ವಜ್ಞತ್ವಾದಿಗಳು ಮಿಥ್ಯಾಭೂತ ಎಂತ ಹೇಳಿಕೊಂಡಾಗ್ಯೂ ಜೀವ ಜಡ ಚೇಷ್ಟೆಗಳು ಶಶವಿಷಾಣ ಸಮವಲ್ಲ ವಾದುದರಿಂದ ಇವನೇ ತಮೋಯೋಗ್ಯನು ಮುಂದೆ". ನಾನೇ ಹರಿಯೊಡನೆ ಮಾಲ್ಪನೆಂಬುವವ ಬದ್ಧ ಅಂದರೆ ನಿತ್ಯ ಸಂಸಾರಿ ಸ್ವರೂಪ ಜ್ಞಾನವೇ 'ನಾನು' ಎಂಬ ಸ್ವಾಮಿದ್ರೋಹವನ್ನು ಬಿಡದೆ ಮುಂದಿನ ಅನಂತ ಬ್ರಹ್ಮ ಕಲ್ಪಕ್ಕೂ ಶಾಶ್ವತವಾಗಿ ಇರತಕ್ಕದ್ದು- ಸುಳಾದಿ ಮುಂದಿನ ಮಾತು-

"ನಾನೇ ಪಾಪಕ್ಕೆ ಕರ್ತಾ ಹರಿ ಪುಣ್ಯಕ್ಕೆ ಎಂದು ಈ ನುಡಿ ನುಡಿವವನು ಸತ್ವ ಗುಣದವನು."

ಅಂದರೆ ಹರಿ ಭಕ್ತರಲ್ಲಿ ಸಾತ್ವಿಕ ಭಕ್ತ ನೊಬ್ಬ ನಿರ್ಗುಣ ಭಕ್ತನೊಬ್ಬ-ಸಾತ್ವಿಕ ಭಕ್ತನ ಲಕ್ಷಣವು ಭಗವತ್ಪ್ರೀತಿಕರ ಕರ್ಮಗಳಲ್ಲಿ ಮುಖ್ಯ ಪೂಜಾ ಕರ್ತೃ ಪರಮಾತ್ಮಾ ಎಂತಲೂ, ಹರಿಗೆ ಆ ಪ್ರೀತಿ ಕರ್ಮಗಳಲ್ಲಿ ನಮ್ಮ ಯೋಗ್ಯತೆ ಕಡಿಮೆ ಮಾಡುವುದಕ್ಕೋಸ್ಕರ ಅನಾದಿ ಪ್ರಾರಬ್ಧ ದುಷ್ಕರ್ಮಾಂತರ್ಗತ ಶ್ರೀ ಹರಿಯು ಕರ್ಮಾಭಿಮಾನಿ ಕಲಿಗೆ ತಮ್ಮ ಸಾಧನಾರ್ಥವಾಗಿ ಶ್ರೀಹರಿಯೇ ಕರ್ತೃ ಎಂತ ತಿಳಿಯದೆ. ನಾನೇ ಪಾಪಕರ್ತಾ ಎಂತಲೂ ಒಂದಕ್ಕೆ ಸ್ವಾಮಿ ಕರ್ತಾ ಎಂಬ ಜ್ಞಾನ ವೃತ್ತಿ ಜ್ಞಾನ ಮೂಲಕ- ಮತ್ತೊಂದು ವೃತ್ತಿ ಜ್ಞಾನ ಹೊರತು ಇದು ನಿಸ್ಸಂಶಯ. ಜೀವ ಸ್ವರೂಪ ಜ್ಞಾನವಲ್ಲವು. ಇದೇ ಸಾತ್ವಿಕ ಭಕ್ತನ ಲಕ್ಷಣವು. ನಿರ್ಗುಣ ಭಕ್ತನ ಲಕ್ಷಣವೇನೆಂದರೆ ಮುಂದಿನ ಮಾತು:- "ನಾನ್ಯಾತಕ್ಕೆ ಸಲ್ಲೆ ಹರಿ ಎನ್ನಿಂದಲೇ ನಾನಾರೂಪವ ತಾಳಿ ಬಗೆಬಗೆ ವೈಷಯಕ ಏನೇನು ಮಾಡಿಸುವ ಮಾಡುವ ಅದರಂತೆ ಹೀನ ಲೇಸುಗಳಲ್ಲಿ ಹಿತ ಅಹಿತಗಳಲ್ಲಿ ಮಾಣದೆ ಮರಿಯದಲೆ ಎಂದವ ನಿರ್ಗುಣನೋ ।" ಎಂದರೆ ಕರ್ಮಾನುಕೂಲ ಬುದ್ಧಿ ಪ್ರೇರಕ ಅಷ್ಟದಳ ಸಂಚಾರಿ ಲಕ್ಷ್ಮೀನಾರಾಯಣನೇ ಪ್ರೇರಕನಾಗಿ ಕರ್ಮ ಮಾಡಿಸುವನು ಎಂತ ಅರ್ಥವು. ಮಾಡುವ ಅಂದರೆ ಆ

ಬುದ್ಧ್ಯನುಕೂಲವಾಗಿ ಜೀವರ ದತ್ತ ಯತ್ನಾಂತರ್ಯಾಮಿ ವಿಶ್ವರೂಪನಿಂದ "ಅಧೀನ ಯತ್ನಾಧಿಕರಣ ರೂಪಾತ್" ಎಂತ ಬ್ರಹ್ಮ ಕಾಂಡ ಗರುಡ ಪುರಾಣ ರೀತಿಯಿಂದ ಸುಕರ್ಮ ದುಷ್ಕರ್ಮ ಪರಂಪರೆಯಲ್ಲಿ ತಿಲ ಮಾತ್ರವನ್ನೂ ಬಿಡದೆ ಮಾಡುತ್ತಾನೆ ಎಂಬುವನು ನಿರ್ಗುಣನು ಎಂತ ಅರ್ಥ- ಮುಂದಿನ ವಚನ:-

*"ಹೀನ ಲೇಸುಗಳಲ್ಲಿ ಹಿತಾಹಿತಗಳಲ್ಲಿ ಮಾಣದೆ*
*ಮರಿಯದಲೆ ಎಂದವ ನಿರ್ಗುಣನೋ।*
*ಜ್ಞಾನವಂತನಾಗಿ ಸರ್ವಸಮರ್ಪಣೆ ಸ್ವಾನುಭವಕ್ಕೆ ನಿತ್ಯ*
*ತಂದು ಕೊಡುವ ಮನಕೆ*
*ಚಿಚಿಅನೇಕ ರವಿ ತೇಜ ವಿಜಯ ವಿಠಲನ್ನ ಕಾಣುತಾ*
*ತಿರುಗು ನಿರ್ದೋಷ ಎನುತಾ"*

ಪ್ರಮಾಣ:-

*"ಶೃತ ಶಾಸ್ತ್ರಾನುಸಾರೇಣ ಯಾ ಶ್ರದ್ಧಾ ಪರಮಾತ್ಮನಿ।*
*ಸಾ ಸಾತ್ವಿಕೀ। ತದನಸ್ಯಾಪ್ಯನುಸಾರೇಣ ನಿರ್ಗುಣಾ:॥*
*ಅಶ್ರುತ್ವಾಪಿ ಪ್ರಮಾಣಾನಾಂ ಯೋ ವಾಸುದೇವೈಕ ಸಂಶ್ರಯ:॥*
*ಸನಿರ್ಗುಣೋ ಭಾಗವತ: ಸಮುದ್ಧಿಷ್ಟೋಮನೀಷಿಭಿ:॥*
*ಪರೋಕ್ಷ ಜ್ಞಾನ ಮಾತ್ಮೋತ್ಥಂ ಅಪರೋಕ್ಷೇಣ ದರ್ಶನಂ।*
*ವಿಷ್ಣ್ವಾಶ್ರಯಂ ಸುಖಂ ನಿತ್ಯಂ ಗಮಯೇತ್ತತ್ಪ್ರಸಾದತ:॥*
*ನತು ವಿಷ್ಣೋ: ಸ್ವರೂಪಂತು ಸುಖಂ ತೇನ ಚ ವಾಪ್ಯತೇ।*
*ತಸ್ಯೈವ ವಿಷಯತ್ವಾತ್ತು ತತ್ಸುಖಂ ಚೇತಿ ಭಣ್ಯತೇ।*
*ಅಪರೋಕ್ಷ ಜ್ಞಾನ ಯೋಗ: ಸ್ಯಾದ್ವಿಷಯ: ಸಮನೋನುಗ:॥*
*ಅತ ಆತ್ಮತ್ಥಮಿತ್ಯೇವ ಸುಖಮಾಹುರ್ವಿಪಶ್ಚಿತ:॥"* ಇತಿಚ

*"ಸತ್ವಾದ್ಗುಣಜಾತಮಪಿ ವ್ಯವಧಾನಂ ವಿನೈವತು*
*ಮುಕ್ತಿದಂ ನಿರ್ಗುಣಂ ಪ್ರೋಕ್ತಂ ವ್ಯವಧಾನೇನ ಸಾಧಿಕಾಮಿತಿ*
*ಬ್ರಾಹ್ಮೆ"*

ಇತ್ಯೇಕಾದಶ ಸ್ಕಂಧ ಷಡ್ವಿಂಶೋಧ್ಯಾಯ ತಾತ್ಪರ್ಯ

ಅಂದರೆ ಸಾತ್ವಿಕ ಭಕ್ತನ ಉಪಸನೆಯು ತನ್ನ ಶರೀರಕ್ಕೆ ಭಿನ್ನನಾದ ಹಲಿಗಾರ್ತಿಯನ್ನು ಘಟ್ಟಿಯಾಗಿ ಕೈ ಒಳಗೆ ಹಿಡಕೊಂಡು ದೇವರಿಗೆ ನೀರಾಜನ ಮಾಡೋಹಾಗೆ ಜಡಜ್ಞಾನ ವಿಶೇಷರೂಪ ಶಾಸ್ತ್ರವನ್ನೇ ಆಧಾರವಾಗಿ ತಿಳಿಯೋಣವೇ ನಿರ್ಗುಣೋಪಾಸಕನು. ಅನಿತ್ಯವಾದ ಜಡ ಜ್ಞಾನವನ್ನು ಲಕ್ಷ್ಯ ಮಾಡದೆ ಯತ್ಕಿಂಚಿಚ್ಛ್ರವಣದಿಂದಲೇ ಸ್ವರೂಪ ಜ್ಞಾನವನ್ನುಉದ್ರೇಕ ಮಾಡಿಕೊಂಡು ಹ್ಯಾಂಗೆ ಸ್ವರೂಪ ಜ್ಞಾನದಿಂದ ಉಪಾಸನೆ ಮಾಡುವನೋ ಹಾಗೆ ಇಲ್ಲಿ ಕವಚದಂತೆ ಇದ್ದ ಸತ್ವಗುಣ ಕಾರ್ಯ ಜ್ಞಾನವನ್ನು ಉಪೇಕ್ಷಿ ಮಾಡಿ ಸ್ವರೂಪಂತಃಕರಣವನ್ನೇ ಮುಖ್ಯ ಮಾಡಿಕೊಂಡು ತದಂತರ್ಬಹಿಗಳಾದ ಅನೇಕ ಭಗವದ್ರೂಪಗಳನ್ನು ಸ್ಮರಿಸಿಕೊಂಡು ಸಕಲ ಕರ್ಮಗಳಲ್ಲಿಯೂ ದೀಕ್ಷಿತನಾಗುವವನೇ ನಿರ್ಗುಣ ಭಕ್ತನು– ತಾತ್ಪರ್ಯಭಾವ ವೆಂದರೆ:– ಪರೋಕ್ಷರೂಪವಾದ ಆತ್ಮೋತ್ಥ ಜ್ಞಾನವು ಅಪರೋಕ್ಷ–ಭಗವದಾಶ್ರಯ ಸುಖವನ್ನು ಹುಟ್ಟಿಸುತ್ತದೆ. ಎಂಬ ಭಾವವು.

*ಇತ್ಥಂ ಸಪರಿವಾರಸ್ಯ ಯದೋಪಾಸ್ತಿ ದೃಥಾ ಭವೇತ್ ತದಾ*
*ಲಕ್ಷ್ಮೀಪತಿಃ ದೇವೋ ದೃಷ್ಯತೇ ನಿಖಿಲೈರಪಿ॥* ಎಂತಲೂ–

*ಬಿಂಬರೂಪಂ ಹರಿಂ ದೃಷ್ಟಂ ಹರಿ ಪಾದಾಬ್ಜ ಸಂಸ್ಥಿತಂ ।*
*ಸ್ವಂ ಚ ಪಶ್ಯತ್ಯಾಪರೋಕ್ಷಾನ್ನಿವೃತ್ತಾಖಿಲ ಬಂಧನಂ ॥*

ಎಂತ ಸತ್ತತ್ವರತ್ನಮಾಲಾ

"ಕಾಣು ಶ್ರೀಹರಿ ಪಾದ ತಾತ್ವಿಕರೊಡನೆ" ಎಂತಲೂ "ಶುದ್ಧ ಮೂರ್ತಾ ಚಮಾಂಪಾ" ಎಂತಲೂ ವಿಜಯರಾಯರ ಮಾತು.

*"ಅನಂತೊದ್ಯುತ್ ಸಹಸ್ರಾಂಶು ಗುಣಾಧಿಕ ಸುಕಾಂತಿಮಾನ್ ।*
*ಜ್ಞಾನಾನಂದಾದ್ಯ ಸಂಜ್ಞೇಯ ಕಲ್ಯಾಣ ಗುಣ ವಿಗ್ರಹಃ॥*
*ಶಂಖ ಚಕ್ರ ಗದಾ ಪದ್ಮ ಧರಃ ಪರಮ ಸುಂದರಃ।*
*ದಿವ್ಯ ರತ್ನೋಜ್ವಲಚ್ಚಿತ್ರ ಸರ್ವ ಭೂಷಣಃ।*
*ಪೀತಾಂಬರ ಧರೋ ದಿವ್ಯ ವನಮಾಲಾ ವಿರಾಜಿತಃ।*
*ಅನಂತಾನಂತ ಚಂದ್ರಾಫಲ ಸತ್ಸಂನ್ಮುಖ ಪಂಕಜಃ ।*

*ರಮಾ ಧರಾ ಬಾಹುಲತ ಸಮಾಶ್ಲಿಷ್ಟ ಪರಂ ಪ್ರಭುಃ।*
*ಸ್ವಮೂರ್ತಿಭಿಃ ಪರಿವೃತೋ ಬ್ರಹ್ಮ ವಾಯ್ವಾದಿಭಿಸ್ತಥಾ॥*
*ಪರಿವಾರ್ಯೈಃ ಸೇವ್ಯಮಾನಃ ಸರ್ವ ದೋಷ ವಿವರ್ಜಿತಃ।*
*ಪೂರ್ಣಾತ್ಪೂರ್ಣತಮೋ ಚಿಂತ್ಯಃ ಸರ್ವ ಸ್ವಾಮೀ ರಮಾಪತಿಃ ॥*
*ವಿಷ್ಣುರ್ಮೇ ಹೃದಯಾಂಭೋಜೆ ಸುಷುಮ್ನಾ ನಾಡಿ ಮಧ್ಯಗೆ ।*
*ದಿವ್ಯ ದೇವ ಮಯೇ ಪೀಠೇ ವೈಕುಂಠ ಇವ ಮೋದತೇ ।*
*ಇತಿ ಧ್ಯಾಯೇತ್ಸದಾ ವಿಷ್ಣುಂ ಜಾತು ಚಿನ್ನೈವ ವಿಸ್ಮರೇತ್ ॥*

ಎಂತ ಸತ್ತತ್ವರತ್ನಮಾಲಾ.

ಇದೇ ಧೃಢ ವಾಸನಾಮಯ ಪರೋಕ್ಷ ಧ್ಯಾನವೆನಿಸಿಕೊಳ್ಳುತ್ತದೆ. ಸುಳಾದಿ:-

ದಳಾಷ್ಟವುಳ್ಳ ರಕ್ತಾಂಬುಜದ ಮಧ್ಯೆ ಪೊಳೆವ ಕರ್ಣಿಕೆ ಮೇಲೆ ಮಂಡಲತ್ರಯವೊಪ್ಪೆ ನಿಲವರ ಹೇಮ ಗದ್ದಿಗೆಯಲ್ಲಿ ಸುರತರು ಕೆಳಗೆ ಫಣಿಮಂಚ ಹಾಸಿಗೆ ಮನೋಹರ ಲಲನೆಯರಿಬ್ಬರು. ಎಡ ಬಲದಿ ಒಪ್ಪೆ ಕುಳಿತು ಮೆರೆವ ಮನ್ಮಥ ಕೋಟಿ ಲಾವಣ್ಯ ಜಲಧರ ವರ್ಣ ಚತುರ್ಭುಜ ನನಾಕ ಅಳವಡಿಸುವ ಭೂಷಾವಳಿಗಳು ರಂಜಿಸೆ ಕಿಲ ಕಿಲ ನಗುವ ಶ್ರೀ ವಿಜಯ ವಿಠಲರೇಯನ ವಲಿಸಿದವರ ಅರಘಳಿಗೆ ಬಿಟ್ಟಗಲನೋ ಎಂದು ಗುಪ್ತಾರ್ಚನೆ ಸುಳಾದಿ.

ಸರ್ವತ್ರ ಸುಳಾದಿ ವಚನಗಳಲ್ಲೂ ಬಿಂಬಮೂರ್ತಿ ಲಕ್ಷಣ ಹೇಳುವುದಕ್ಕೆ

*ಶ್ರೀಹರಿರ್ಮಮ ಹೃತ್ಪದ್ಮಕರ್ಣಿಕಾ ಸ್ಥೋತಿ ಸುಂದರಃ ।*

ಎಂದು ಆದಿತ್ಯ ಪುರಾಣ ವೆಂಕಟೇಶ ಮಾಹಾತ್ಮ್ಯೆ ಹೊರತಾಗಿ ವಿಸ್ತಾರವಾಗಿ ಸ್ಪಷ್ಟವಾಗಿ ಇದ್ದ ಹಾಗೆ ಅನ್ಯತ್ರವ್ಯಾಸೋಕ್ತಿ ಸಿಗಲಿಲ್ಲ. "ಅನಿತರೊಳು ಪ್ರಾಜ್ಞನ ಸಂದರುಶವಾಗೆ ಘನವಾದ ಸಂಚಿತ ನಾಶವಹುದು" ಎಂದು ಅನಾದಿ ಕರ್ಮ ಸುಳಾದಿಯು.

ದರ್ಶನ ಅನವಸ್ಥಾಪ್ರೇರಕ ಪ್ರಾಜ್ಞನ ನಿರೀಕ್ಷಿಸುವ ಭಾಗ್ಯ ಅಲ್ಲಿದ್ದ ವಿಚಾರ ಹೊರಗೆ ಈ ಪರಿ ತತ್ವ ಸ್ಮರಣೆ ಸಮಾಧಿ ನಿಲಿಸು ಸುರರ ಸವೇತದಿ ಅನುಭವಿ ಸಿದ್ದಿಸೆ। ಮಿರಿಮಿರಿ ಮಿಂಚುವ ಬಿಂಬನ ಲಿಂಗದ ಹೊರಗೆ ಕಾಣಲಿಬೇಕು ಧ್ಯಾನಂಗತನಾಗಿ ಎಂದು ಅನಾದಿ ಕರ್ಮ ಸುಳಾದಿಯು.

ಇಂತಹ ನಿಶ್ಚಯ ಧ್ಯಾನ ರೂಪದ ಮನಸ್ಸಿನ ಸುಖವೇ ಮುಂದಿನ ಅಪರೋಕ್ಷ ಸುಖವನ್ನು ಹುಟ್ಟಿಸುತ್ತದೆ ಎಂದು ಪೂರ್ವೋಕ್ತ ಏಕಾದಶ ತಾತ್ಪರ್ಯ ಶ್ಲೋಕದ ಭಾವವು. ನಾನು ಎಂಬ ಸ್ವಾಮಿದ್ರೋಹವನು ಬಿಟ್ಟು ಶುದ್ಧ ಸತ್ವ ದಾಸ್ಯ ಎಂದರೂ ನಿರ್ಗುಣ ದಾಸ್ಯ ಎಂದರೂ ನೈಜ ದಾಸ್ಯ ಎಂದು ಹೆಸರಾದುದರಿಂದ ಇಂತಹ ದಾಸ್ಯ ಹೊರತು ಮೋಕ್ಷದಾಸಯೇ ದುರಾಶೆ ಎಂದು ಹೇಳುತ್ತಾರೆ. ಸುಳಾದಿ:–

*"ಹಿಟ್ಟು ಗಾಳಿಗೆ ತೂರಿ ಮರಳಿ ಕೂಡಿಸಿಕೊಂಡು ರೊಟ್ಟಿ*
*ಸುಟ್ಟುಕೊಂಡು ಉಂಬೆನೆಂದು ಅಟ್ಟಹಾಸವ ಮಾಡಿ ದಿನ*
*ಪ್ರತಿದಿನದಲ್ಲಿ ಕಷ್ಟಪಟ್ಟದ್ದರಿಂದ ಫಲವಾಹದೆ ।*
*ಸೃಷ್ಟಿವಳಗೆ ಮನುಜ ಸರ್ವ ಬಗೆಯಿಂದ ।*
*ಶಿಷ್ಯನಾಗಿ ಇದ್ದು ಆಚಾರವ ಎಷ್ಟು ಮಾಡಿದರೇನೋ ನಿರ್*
*ದೋಷನಾಗಿ ಮನಮುಟ್ಟಿ ಸರ್ವಾರ್ಪಿತ ಎನ್ನದ ತನಕ ।*
*ಕೃಷ್ಣ ಮೆಚ್ಚನುಕಾಣೋ ಗತಿಗೆ ಸಾಧನವಲ್ಲ।*
*ಇಷ್ಟರೊಳಗೆ ಅವ ಸುತ್ತುತಿಪ್ಪ ಕಟ್ಟಕಡೆಗೆ ಇದೆ*
*ಮುಕ್ತಿ ಯೋಗ್ಯಗೆ ಜ್ಞಾನ ಪುಟ್ಟದಲ್ಲದೆ ಬಿಂಬ ದರ್ಶನವಾಗದು. ।*
*ಎಟ್ಟಿ ಮಾನವರಿಗೆ ವರೆದೊರೆದು ಕೇವಲ ಗುಟ್ಟು*
*ತಿಳಿವುದರಿಂದ ಏನಾಹುದೋದ್ವಿಷ್ಟದೈವಗಳರಸ*
*ವಿಜಯ ವಿಠಲ ಜಗಜಟ್ಟಿಗೆ ಪಾಪ ಪುಣ್ಯದ ಲೇಪವೇನೋ"*

ಅಂದರೆ

"ದುರ್ವಿಷಯಗಳು ನಿನಗೆ ಎತ್ತಲೋ ಮನವೇ । ದರ್ವಿಯಂದದಿ ಕಾಣೋ ನಿನ್ನಾಟವು" ಎಂತ ಚಿಂತೆ ಮಾಡುವುದಲ್ಲ. ಎಂಬ ಸುಳಾದಿಯಲ್ಲಿ ಪ್ರಾರಬ್ಧ ಕರ್ಮ ವ್ಯತಿರಿಕ್ತ ಕರ್ಮ ಲೇಪವಿಲ್ಲವೆಂಬುದಕ್ಕೆ ಬಹು ಸ್ಥಲಗಳಲ್ಲಿ ಹೇಳಿದ್ದಾರೆ. "ದರ್ವಿಯಂದದಿ ಸಕಲ ವಿಷಯಂಗಳೊಳಗಿದ್ದು ನಿರ್ವಾಹ ಕರ್ತನಾಗೋ ಮನವೊಪ್ಪಿಸಿ।" ಎಂತಲೂ "ನಿರ್ವ್ಯಾಜ ಗುಣದಿಂದ ತಿರುಗುವುದು" ಇದೇ ಸರ್ವ ಸಮರ್ಪಣ ಸುಳಾದಿ. ನಿರೀಕ್ಷಿಸಿದರೆ ದೋಷ ಎಂದಿಗೂ ನಿನಗಿಲ್ಲ. ಕರುಣಾಳುವೇ ನಿನ್ನ ಭಕ್ತರಿಗಿಲ್ಲ॥ ಎಂದು ಕರುಣಾಮೃತ

ಸುಳಾದಿ. "ಘನ್ನ ದುರಿತ ಮೋಚನ್ನವಾದುದಕ್ಕೆ ಎನ್ನ ಪುಣ್ಯವಲ್ಲ- ಎನ್ನ ಸಾಧನವಲ್ಲ- ಮುನ್ನಿನ ಪರಿಯೊಳು ಮಾಡಿದ ಸಾಧನ" ಎಂದು ಮತ್ತೊಂದು ಸುಳಾದಿಯು- ಇವುಗಳು "ಯೇಽ ಜ್ಞಾನ್ತೇಷು ಭವೇದಪಿ ಎಂಬ ಪೂರ್ವೋಕ್ತ ಏಕಾದಶ ತಾತ್ಪರ್ಯೋಕ್ತಿಗೆ ಪೂರ್ವೋಕ್ತ ಶಾಂಡಿಲ್ಯತತ್ತ್ವಕ್ಕೂ ಅನುಕೂಲಿಸುತ್ತದೆ- ಸುಳಾದಿಯ ಮುಂದಿನ ಮಾತು" ಮೂಜ್ಜಗದೊಳು ಹರಿ ನಿಬಿಡೀಕೃತನಾಗಿ ತಜ್ಜೀವಿಗಳಂತೆ ವ್ಯಾಪಾರ ಮಾಡುವ-ನಿರ್ಜರವಿಡಿದು ತೃಣಾಂತ ನೋಡಲು ಪೂಜ್ಯ ಭಾವವೇ ಪ್ರತ್ಯೇಕವಾಗಿಪ್ಪುದು. ಎಂದು ಸರ್ವ ಸಮರ್ಪಣೆ ಸುಳಾದಿಯು. ಅಂದರೆ ಸರ್ವತ್ರ ಪೂಜ್ಯ ಪೂಜಕ ರೂಪಗಳ ಧರಿಸಿ ಮಾಡತಕ್ಕ ಕ್ರೀಡೆಯೇ ತನ್ನ ಸ್ವರೂಪಭೊತ""ಸಾಚ ಕ್ರೀಡಾಸ್ವಭಾವೋಸ್ಯ" "ಲೀಲಾ ಸ್ವಾಭಾವಿಕೀ ಚ ಸಾ" ಇತ್ಯಾದಿ ಪ್ರಮಾಣ ಸಿದ್ಧವಾಗಿದೆ. ಶ್ರೀ ಹರಿಯು ಪೂರ್ಣ ಜ್ಞಾನಿಯಾದರೂ ಈ ಜೀವ ತಿಳಿವಾಗಲೇ ಮುಂಚೆ ತಿಳಿಯೋಣ ಅವನು ಇಚ್ಛಿಸೋಣ ಇವನು ಇಚ್ಛಿಸೋಣ "ಯದೇವೇಚ್ಛತಿ ತದೇವೇತಿ" ಎಂದು ಶಾಂಡಿಲ್ಯ ತತ್ತ್ವ ಸಿದ್ಧವು. ಈ ನೀತಿಯನ್ನು ತಿಳಿದು ತಿಳಿಸಿ ಕೊಟ್ಟದ್ದರಿಂದ "ನಾನೆಂಬೋ ಸೊಲ್ಲು ಹರಿ ಇತ್ತದ್ದೆಂದು ಹೇಳಿ" ಜ್ಞಾನಿಯಾದವ ಇನಿತು ಇದ್ದರೆ ಅವನಿಗೆ ಹಾನಿ ಎಂಬೋದು ಎಲ್ಲಿಯದೋ ಗುಣಿಸಿದರು ಎಂಬ ಜ್ಞಾನ ಸುಳಾದಿ.

ಇಲ್ಲಿ ಆಕ್ಷೇಪ:- "ಜ್ಞಾನಿತ್ವಂ ಕರ್ತೃತಾ ಭಾವಾತ್ ಈಶ ಕರ್ತೃತ್ವ ನಿಶ್ಚಯಾತ್ ।" ಎಂದು ಪೂರ್ವೋಕ್ತ ಏಕಾದಶ ತಾತ್ಪರ್ಯದಿಂದಲೂ ಮತ್ತು ಶಾಂಡಿಲ್ಯತತ್ತ್ವ ಸುಳಾದಿಗಳಿಂದಲೂ ಜೀವ ಕರ್ತೃತ್ವಾಭಾವ ಸಿದ್ಧವಾದ ಬಳಿಕ "ಪ್ರತ್ಯಕ್ಷೇ ಕರ್ತೃತಾ ಜೀವ ಸಂಸ್ಥಾ" ಎಂಬ ತಾತ್ಪರ್ಯ ನಿರ್ಣಯ ಹತವಾದಕ್ಕೂ "ಓಂ ಕರ್ತಾ ಶಾಸ್ತ್ರಾರ್ಥವತ್ವಾತ್ ಓಂ" ಎಂಬ ಸೂತ್ರಾರ್ಥ ಮೊದಲಾದುದಕ್ಕೂ ಪರಮ ವಿರೋಧ ಬರುತ್ತದಲ್ಲವೇ ? ಎಂದರೆ ಸಿದ್ಧಾಂತವು. ಜೀವನು ಕರ್ತೃ ಅಲ್ಲ ಎಂದರೆ "ಮೂಕೋಹಂ" ಎಂದು ಸ್ವವ್ಯಾಹತಿ ಬರುವುದೇ ನಿಶ್ಚಯವು. ಕರ್ತೃವಲ್ಲ ಎಂಬುವನು ಅದ್ವೈತಿಯೋಪಾದಿಯಲ್ಲಿ ಕೆಡುವುದೇ ನಿಶ್ಚಯವು.

ಪ್ರಮಾಣ :-

"ಅಜ್ಞ ಪ್ರತ್ಯಕ್ಷಮಪಹಾಯ್ಯೈವ ದೈವಂ ಮತ್ವಾ ಹಿತ್ವಾ ಸ್ವಕಂ ಕರ್ಮಗತಿಂ

ಚ ತಾಮಸೀಂ॥ ಪ್ರಯಾತಿ ತಸ್ಮಾತ್ ಕಾರ್ಯಮೇವ ಸ್ವಕರ್ಮ'' ಎಂದು ಹಠವಾದಸಿದ್ಧವು.

ಅಂದರೆ ಭೋಜನಾದಿ ಕರ್ಮಗಳನ್ನು ಮಾಡೋಣ ನಿತ್ಯ ನೈಮಿತ್ತಿಕ ಕರ್ಮಗಳನ್ನು ಬಿಡೋಣ– ಕರ್ಮಾಧಿಕಾರವೇ ನೂತನವಾಗಿ ಹುಟ್ಟಿತು ಎಂಬ ಜ್ಞಾನವಿಲ್ಲದೆ ಅನಾದಿ ಕರ್ಮ ಸುಳಾದಿ ಪ್ರಕಾರ ದೈಹಿಕ ಎಂದರೆ ಗರ್ಭಾಧಾನ ಸೀಮಂತಾದಿ ವಿವಹಾಂತ ಷೋಡಶ ಕರ್ಮಗಳು, ಲೌಕಿಕ ಕರ್ಮವಾದರೆ ಶಾಸ್ತ್ರಾಭ್ಯಾಸ ದೈಶಿಕ ಅಂದರೆ ತೀರ್ಥಯಾತ್ರೆಗಳು ಕಾಲಿಕ ಎಂದರೆ ಷಣ್ಣವತಿ ಮೊದಲಾದ ಕರ್ಮಗಳು ಸ್ವಾಭಾವಿಕವೆಂದರೆ ಹರಿಗುರು ಭಕ್ತಿ ದ್ವೇಷೋದಾಸೀನರೂಪ ತ್ರಿವಿಧ ಜೀವರ ಸ್ವರೂಪಿಕ ಕರ್ಮಗಳು ಇವುಗಳನ್ನು ಬಿಟ್ಟು ಅಮಂಗಳ ಜನಗಳು ತಮಸ್ಸನ್ನು ಹೊಂದುತ್ತಾರೆ, ಎಂದು ಹಠವಾದ ಶ್ಲೋಕದ ಅರ್ಥವು. ನಿರ್ಗುಣ ಭಕ್ತನೇ ಕರ್ಮಾಧಿಕಾರಿ ಎಂಬುದಕ್ಕೆ ಎಲ್ಲಿ ಹೇಳಿದ್ದಾರೆ ಎಂದರೆ "ಯಮನಿಯಮ ತಪೋಧ್ಯಾನ ಧರ್ಮ ದೇವಸೇವೆ ಸುಮನಸರ ಭಜಸೆ, ತಥಾ ಯಾತ್ರಾಗಮದಿಂದ– ನಾನಾ ಪುಣ್ಯಗಳ ಮಾಲ್ಪನ ಮಮಕಾರ ಅಹಂಕಾರ ಈರ್ಷ್ಯಾಸೂಯಾ ಸಂಗಮದಿಂದ ಆಚರಿಸಿದರೆ ಇದೇ ಪಾಪ ಬೀಜ ಪುಣ್ಯ ಶಮದಮೆಯುಳ್ಳ ಮಹಾತ್ಮರಿಗಾದರೂ ಬಿಡದು. ಕುಮತಿಗಳ ಪಾಡೇನು।'' ಇದು ಸಿದ್ಧ ಸಿದ್ಧ ಎಂದು ಅನಾದಿಕರ್ಮ ಸುಳಾದಿಯಲ್ಲಿ "ಅಹಂ ಮಮ'' ಎಂಬ ಪಾಪ ಬೀಜಗಳ ಕಳೆದು ಸಬೀಜ ಇಷ್ಟ ಪುಣ್ಯ ಕರ್ಮಾನುಷ್ಠಾನ ಹೊರತು ಅಪರೋಕ್ಷವಾಗುವುದಿಲ್ಲ ಎನ್ನುವುದಕ್ಕೆ "ವಾರಿಜಭವ ಭವಮುಖ್ಯ ತತ್ತ್ವೇಶರಿಗೆ ಮೀರಲ್ಕೋಶವಲ್ಲ ಕರ್ಮ ಕಾರಣಗಳಾಚಾರವಂತರಾಗಿ ನಡೆದುಕೊಂಡು ತಂತಮ್ಮ ಸ್ವರೂಪ ಸುಖದಿಂದ ದುಃಖಿಸುತ್ತಿಪ್ಪರು ಕೇಳಿ'' ಎಂತಲೂ ಈ ಪರಿ ಚರಾಚರದಿ ಕರ್ಮದ್ವಾರವಲ್ಲದೆ ಮರಳಿ ಮತ್ತೊಂದುಪಾಯವೇಪುಶಿ ಎಂದು ಅನಾದಿ ಕರ್ಮ ಸುಳಾದಿ ಸಿದ್ಧವು. ಎಲ್ಲ ಮೂಢ ಜ್ಞಾನಿಗಳ ಕಳಂಕ ಹೋಗುವುದಕ್ಕೆ ಸಬೀಜ ನಿಷ್ಕಾಮ ಕರ್ಮ ಎಂಬುವುದಕ್ಕೆ ಶ್ರೀ ಹರಿಯೇ ಕರ್ತಾ ಎಂಬ ನಿಶ್ಚಯ ಜ್ಞಾನ ಪೂರ್ವಕವಾದ ನಿಷ್ಕಳಂಕ ಭಕ್ತಿಯ ಅಭಿವೃದ್ಧಿಯನ್ನು ಆಜ್ಯವೆಂಬ ಕರ್ಮದಿಂದ ಅಗ್ನಿ ಎಂಬ ಜೀವನ ಜ್ವಾಲೆಯೆಂಬ ಭಕ್ತ್ಯಭಿವೃದ್ಧಿಯು, ಭಗವದನುಗ್ರಹವೂ ಅಭಿವೃದ್ಧಿಯಾಗುವುದಕ್ಕೆ ಸಂಧ್ಯಾ ಭಾಷ್ಯಾದಿಗಳನ್ನು ನೋಡಿ ಸಂಧ್ಯಾವಂದನಾದಿ

ಜ್ಯೋತಿಷ್ಟೋಮಾಂತ ಕರ್ಮಗಳನ್ನು ಶ್ರೀಹರಿಯು ಮಾಡಿಸಬೇಕಾದರೆ ಜೀವರ ಯೋಗ್ಯತಾನುಸಾರವಾಗಿ ತಕ್ಕ ತಕ್ಕ ಜನ್ಮಗಳ ಘಟನೆ ಹಾಕಿ ದ್ರವ್ಯೋಪಪರೀ ಪೂರ್ವಕವಾಗಿ ಮೀಮಾಂಸಾದಿ ಶಾಸ್ತ್ರಾಧಿಕಾರವನ್ನು ಕೊಟ್ಟು "ಅಗ್ನೌ ಕ್ರಿಯಾಂ ವತಾಂ ವಿಷ್ಣುಃ" ಎಂಬ ಭಾಷ್ಯ ಸಿದ್ಧವಾದ ಬಿಂಬೋಪಾಸನೆಯೇ ಈ ಸಕಲ ಕರ್ಮಾನುಷ್ಠಾನರೂಪವಾಗಿ ಈ ಜ್ಞಾನಿಗೆ ಒಂದು ಕರ್ಮವು ಹೆಚ್ಚು, ಮತ್ತೊಂದು ಕರ್ಮ ಕಡಿಮೆ ಎಂಬ ಭ್ರಾಂತಿಯೇ ಇಲ್ಲವಾದ್ದರಿಂದ ಪಂಚಯಜ್ಞಗಳೇ ಮೊದಲಾದ ಕರ್ಮಗಳು ಅಸಂಪ್ರಜ್ಞಾತ ಸಮಾಧಿಗೆ ಸಮಫಲದಾಯಕಗಳು. ಶ್ರೀಹರಿಯೇ ಫಲ. ಶ್ರೀಹರಿ ಚರ್ಯವೇ ಕರ್ಮಾನುಷ್ಠಾನ ಮಹಾತ್ಮರ ಚರಣ ದರ್ಶನವೇ ಬಿಂಬಾಪರೋಕ್ಷ ಸಮ, ಎಂದು ಅಜ್ಞಾನಿ ತಿಳಿಯುವುದಿಲ್ಲವಾದ ಪ್ರಯುಕ್ತ ಸ್ವಾಮಿಯ ಆಜ್ಞಾ ಕರ್ಮೋಲ್ಲಂಘನ ಮಾಡಿದರೆ, ಭೃತ್ಯತ್ವ ಉಳಿಯದು. ಎಂದು ತಿಳಿಯದೆ ಕರ್ಮದಲ್ಲಿ ಅಭಿರುಚಿ ಇಲ್ಲದೆ, ವಿಧಿ ನಿಷೇಧ ಕರ್ಮತ್ಯಾಗ ಮಾಡಿ, ಯತ್ಕಿಂಚಿತ್ ಪರಮಾತ್ಮನಲ್ಲಿ ಮೂಢ ಭಕ್ತಿಯನ್ನು ಸಂಪಾದಿಸಿ, ಪ್ರಾಣದೇವರ ದ್ರೋಹಕ್ಕೆ ಮುಖ್ಯಪಾತ್ರನಾಗಿ ಪ್ರಾಣದೇವರ ಶಾಪದಿಂದ ಮುಂದಿನ ಜನ್ಮಗಳಲ್ಲಿ "ನಾನು" ಎಂಬ ಸ್ವಾಮಿದ್ರೋಹ ಘಟನೆ ಬಿದ್ದು ಸ್ವೋತ್ತಮರ ಮಹಿಮೆ ಅರಿಯದೆ ಚಂಡಾಲಾದಿ ಯೋನಿಗಳಲ್ಲಿ ನೆರಳತಕ್ಕದ್ದೇ ಹೊರತಾಗಿ "ಕರ್ಮಣಾ ಜ್ಞಾನ ಮಾತನೋತಿ" ಎಂಬ ಅಪರೋಕ್ಷ ಸಾಧಕ ಶೃತಿ ಸಾಧಕನಿಗೆ ಹೃದಯದಲ್ಲಿ ಶ್ರೀ ಹರಿಯು ಮಾತನಾಡುತ್ತ ಇದ್ದಾಗ್ಯೂ ಶರೀರ ಮಾತ್ರ ಚಂಡಾಲಾದಿ ನೀಚ ಯೋನಿ ಜನ್ಯಗಳಾಗಿ ಬ್ರಾಹ್ಮಣ ಜನ್ಮ ದುರ್ಲಭವಾಗುವುದೇ ಸಿದ್ಧವು. ನೀಚ ಯೋನಿಯ ಭಾಗ್ಯವೇನೆಂದರೆ, ಧಾರಣ ಧ್ಯಾನ ಸುಳಾದಿ ಉಕ್ತ ಪ್ರಕಾರ "ಎಲ್ಲೆಲ್ಲಿ ತತ್ತತ್ತನು ಧರಿಸಿದ ದೇವಾಂಶಗಳಲ್ಲಿ ಗಲ್ಲಿಗೆ ಚಿಂತಿಸಿ" ಎಂದು ಅಂಗತೋಪಾಸನೆಯಿಂದ ಹೊರತಾಗಿ ಪೀಠಾವರಣ ದೇವತೆಗಳಿಂದಲೂ ಸ್ವಮೂರ್ತಿ ಗಣದಿಂದಲೂ ಉಕ್ತ ಬಿಂಬಾರೋಕ್ಷದ ಆಶೆಯೇ ದುರಾಶೆ- ಎಂದು ಸಿದ್ಧಾಂತವು –""ಭೂ ವಿಬುಧ ಜನ್ಮಗಳು ಬಂದಹವಲ್ಲದೆ ಸಾಧನೆ ಆವ ಜೀವನಿಗಾದರೂ ಪೂರ್ತವಾಗುವುದೇ!" ಎಂದು ಅನಾದಿ ಕರ್ಮ ಸುಳಾದಿ. ಅಂದರೆ "ಕರ್ಮನ್ಯಾಸೋ ಹರಿರೇವ" ಎಂಬ ಪದ್ಮಮಾಲೆ, ಮೊದಲಾದ ಪ್ರಮಾಣದಿಂದಲೂ, ಪಾವಿತ್ರ್ಯ ದೇಹದಿಂದಲ್ಲಿ ಪರಿ ಪರಿ ಕರ್ಮಗಳು ನೊಂದು ಕೆಂದದಂತೆ ಆಗೋವು ಪುಣ್ಯ ಬೀಜ ಎಂದು ಅನಾದಿ ಕರ್ಮ ಸುಳಾದಿ. ಅಂದರೆ ಸರ್ವ ಸಮರ್ಪಣೆ ಮಾಡಿದಂಥಾ ಪರಮ ಪರಿಶುದ್ಧ ನಿಶ್ಕಾಮ

ಕರ್ಮ ರಾಶಿಗಳು, ಶಾಶ್ವತಗಳಾಗಿ ಶ್ರೀ ಹರಿ ಚರಣದಲ್ಲಿ ಬೆಳೆಯುವುದರಿಂದ ಕರ್ಮಗಳು ನಶ್ವರವಾಗಿ ಬ್ರಹ್ಮ ಕಲ್ಪಗಳು ನಶ್ವರವಾದಾಗ್ಯೂ ಮುಂದಿನ ಅನಂತಾನಂತ ಬ್ರಹ್ಮಕಲ್ಪಕ್ಕೂ ಮುಕ್ತರ ಸುಖಗಳು ಕೊನೆಗೊಂಡು ಹೋಗದೆ ಸುಖಾನುಭವವು ಶಾಶ್ವತರೂಪವಾಗಿರುತ್ತವೆ, ಎಂದು ಇದೇ ನಿಷ್ಕಾಮ ಕರ್ಮಗಳ ಮಹಾಮಹಿಮೆ ಎಂದರ್ಥವು. ಶಾಶ್ವತ ಎಂದರೆ ಯೋಗ್ಯತಾನುಸಾರವಾಗಿ ಭಗವದ್ರೂಪ ಗುಣ ಸ್ಪಷ್ಟ ದರ್ಶನವೆಂಬ ಜ್ಞಾನ ವ್ಯಂಗ್ಯಾನಂದವು – ಹ್ರಾಸ ತಿರೋಧಾನರಹಿತವಾಗಿ ಶಾಶ್ವತವೇ ಸರಿ. ಇಂತಹ ಸ್ವರೂಪಾನಂದದಲ್ಲಿ ಹಾಲು ಉಕ್ಕು ಬಂದ ರೀತಿಯಿಂದ ಆನಂದೋನ್ನಾಹ ಲಕ್ಷಣವಾದಂತಹ ಸ್ತ್ರೀ ಭೊಗ ಮೊದಲಾದ ಕರ್ಮವ್ಯಂಗ್ಯಾನಂದಕ್ಕೆ ತಕ್ಕ ಹಾಗೂ ಮುಂದಿನ ಅನಂತ ಬ್ರಹ್ಮಕಲ್ಪಗಳಲ್ಲಿ ವೃದ್ಧಿಹ್ರಾಸಗಳು, ಅಪರೋಕ್ಷೋತ್ತರ ಕರ್ಮ ಮಾಡುವುದಕ್ಕೆ ವೃದ್ಧಿ ಹ್ರಾಸಗಳು ಉಂಟಾಗಿ ಹೀಗೆ ಶಾಶ್ವತಗಳು ಎಂದರ್ಥವು. "ಜ್ಞಾನ ವ್ಯಂಗ್ಯಸ್ಯ ಹ್ರಾಸಃ ಸುಖಸ್ಯತು ಕಥಂಚನ। ಎಂದು ಸತ್ತತ್ತ್ವರತ್ನಮಾಲಾ। ತೆತ್ತಗಾರಾನಂದಕ್ಕೆ ವೃದ್ಧಿ ಹ್ರಾಸಗಳುಂಟು" ಎಂದು ಮುಕ್ತ ಪ್ರಕರಣ ಸುಳಾದಿ–

"ಸ್ತ್ರೀಭಿರ್ವಾಯಾನ್ಯೈರ್ವಾ" ಇತ್ಯಾದಿ ಶೃತಿಗಳಿಂದ ಭಾಷ್ಯ ಸಿದ್ಧಾಂತವು.

ಪಂಚಮ ಜನ್ಮಗಳಿಂದಲೂ ಮಾನಸೋಪಾಸನೆ ಕೂಡಬಹುದಾದುದರಿಂದ ಅಂಗದೇವತೆಗಳ ಉಪಾಸನೆ ಮಾತ್ರ ಯಾಕೆ ಕೂಡದೆಂದರೆ ಬ್ರಾಹ್ಮಣನಾದಾಗ್ಯೂ ಅಶುಚಿ ಕಾಲಗಳಲ್ಲಿ ದೇವತೆಗಳ ಸ್ತೋತ್ರ ಮಾಡಕೂಡದು. ಪ್ರಮಾಣ:–

"ಹರೇರ್ದಿವ್ಯಾನಿ ನಾಮೋ ನಾಽಶುಚಿಃ ಪರಿಕೀರ್ತಯೇತ್" ಎಂದು ವಿಷ್ಣುರಹಸ್ಯ.

ಆಕ್ಷೇಪಃ :– ಬ್ರಹ್ಮಸೂತ್ರ ಹಠವಾದಗಳಿಂದ ಜೀವಕರ್ತೃತ್ವ ಸಾಧಿಸಿದ ಬಳಿಕ ಶ್ರೀ ಹರಿಯೇ ಕರ್ತನೆಂದು ಹೇಗೆ ಹೇಳುತ್ತೀರಿ – ಎಂದರೆ ತನುವಿನಭಾಯೋಪಾದಿಯಲ್ಲಿ ಜಗತ್ತಿನ ಕರ್ತೃತ್ವವು ಪ್ರತ್ಯಕ್ಷ ಸಿದ್ಧ. ಶ್ರೀ ಹರಿ ಕರ್ತೃತ್ವವು ಶಾಸ್ತ್ರ ಸಿದ್ಧ. ಅದು ಗುಣ ಪೂರ್ಣ ಕ್ರಿಯಾಶಕ್ತಿ. ಜೀವನ ಕ್ರಿಯಾ ಅಲ್ಪ ಶಕ್ತಿಯೇ ಎನಿಸಿಕೊಂಡುತು. "ಓಂ ಯಥಾ ತಕ್ಷಕೋಽಭಯತಾ ಓಂ" ಎಂಬ ಸೂತ್ರದಲ್ಲಿ ಜೀವನಿಗೆ ಬುದ್ಧಿ ಪ್ರೇರಿಸಿ ಮಾಡಿಸುವನೂಕೂಡ ಸ್ವಾಮಿಯೇ

ಸರಿಯೆಂದು ನಿಶ್ಚಯಿಸಿದ್ದಾರೆ. ಹಾಗಾದರೆ ಹಿಂದೆ ಹೇಳಿದ ಸೂತ್ರಾರ್ಥ ಘಟನೆ ಹೇಗೆ? ಎಂದರೆ ಆ ಸೂತ್ರವು ಶ್ರೀಹರಿಯನ್ನು ಹೇಳದೇ ಅಲ್ಪ ಕ್ರಿಯೆಯುಳ್ಳ ಜೀವನನ್ನು ಹೇಳಿದುದು. ಈ ಸೂತ್ರವು ಗುಣ ಪೂರ್ಣ ಶಕ್ತಿಯುಳ್ಳಂಥಾ ಅಂತರ್ಗತ ಶ್ರೀ ಹರಿಯನ್ನು ಹೇಳುತ್ತದೆ. ಹಾಗಾದರೆ ಶ್ರೀ ಹರಿಯು ಮಾಡಿದ ಬಳಿಕ ಜೀವನು ಸುಮ್ಮನೆ ಇರಬಹುದಲ್ಲ ಎಂದರೆ– ಗದ್ದೆ ಬೆಳಸು ಮಾಡತಕ್ಕ ಯಜಮಾನ ಕರ್ತೃ ಅಂದರೆ ಆ ಪೈರಿಗೆ ಛೇದನ ಕರ್ತೃಗಳೂ ತಾಡನ ಕರ್ತೃಗಳೂ, ರಕ್ಷಣ ಕರ್ತೃಗಳೂ ಬಹುಜನಗಳು ಆಗುತ್ತಾರೆ. ಆದಾಗ್ಯೂ ಆದಕ್ಕೆ ಮುಖ್ಯ ಭೋಕ್ತೃ ಹ್ಯಾಗೆ ಪೂರ್ಣಾಧಿಕಾರಿಯೋ ಹಾಗೆ ನವಕೋಟಿ ಸುರರೂ, ಒಂದೇ ಜೀವನ ಕ್ರಿಯೆಯೊಳಗೆ ಕರ್ತೃಗಳಾದಾಗ್ಯೂ ಕರ್ಮ ಕ್ಷಯ ಉತ್ಕ್ರಾಂತಿ ಮಾರ್ಗ ಭೋಗಗಳೆಂಬ ಚತುಷ್ಟಯ ಫಲವೇ ಪೂರ್ಣ ಮೋಕ್ಷವೆನಿಸಿಕೊಳ್ಳುತ್ತದೆ. ಆದುದರಿಂದ ಆ ಮೋಕ್ಷವು ನಿತ್ಯ ಮುಕ್ತನಾದ ಸ್ವಾಮಿಗೆ ಹೇಳಿದ್ದಲ್ಲವೆಂದು ಸತ್ತತ್ತ್ವರತ್ನಮಾಲಾ ವಾಕ್ಯವಾದುದರಿಂದ ಈ ನಾಲ್ಕು ನಾನೇ ಅನುಭವಿಸಬೇಕೆಂದು ತಿಳಿಯತಕ್ಕ ವಿವೇಕ ಜ್ಞಾನವು ತದನುಕೂಲ ಇಚ್ಛೆಯು, ಗುರು ಚರಣಕ್ಕೆ ಸೇವಾದಿ ಪ್ರಯತ್ನವೂ ಭಗವತ್ಸ್ವರೂಪವಲ್ಲದ ಪ್ರಯುಕ ಮಹಾಮಹಿಮನಾದ ಶ್ರೀಹರಿಯು ಗುಣಪೂರ್ಣಗಳಾದ ಜ್ಞಾನೇಚ್ಛಾ ಪ್ರಯತ್ನಗಳಿಗೆ ಭಿನ್ನವಾದ ತುಚ್ಛ ಕ್ರಿಯಾವಂತ ಜೀವನೇ ಅಜ್ಞಾನಿ ಅವಿವೇಕಿ ಎಂದು ಚಿಂತಿಸತಕ್ಕ ತನ್ನ ಅನುಭವದಿಂದಲೇ ತಾನು ಕರ್ತೃ ಎಂದು ಅರ್ಥವು. ಹಾಗಾದರೆ ಶ್ರೀಹರಿಯ ಸ್ವಾತಂತ್ರ್ಯಕ್ಕೆ ಸ್ವಲ್ಪ ಹಾನಿ ಬಂತು ಎಂದರೆ ಜೀವರಿಗಳಿಗೂ ಜಡಗಳಿಗೂ ಚಲ ಕ್ರಿಯಾ ಶಕ್ತಿ ಮಾತ್ರ ಸ್ವರೂಪಭೂತವಾದ ಪ್ರಯುಕ್ತ ಕರ್ತೃತ್ವ ಮಾತ್ರ ಉಂಟೇ ಹೊರತು ಸ್ವಾತಂತ್ರ್ಯ ಮಾತ್ರ ಇಲ್ಲವೆಂದು ಸಿದ್ಧಾಂತವು. ಹಾಗಾದರೆ ಜೀವರಿಗೆ ಸ್ವಾತಂತ್ರ ದಾನ ವ್ಯರ್ಥವಾಗಲಿ ಎಂದರೆ ದಾನ ಮಾಡಿದ ಕ್ಷಣದಲ್ಲಿಯೇ ಸ್ವಾತಂತ್ರ ಶಕ್ತಿ ಅಂತರ್ಗತನಾಗಿ ಶ್ರೀಹರಿಯೇ ಅಪರೋಕ್ಷದ ತನಕ ತೈಜಸನಾಗಿಯೂ ವಿರಜಾಸ್ನಾನದ ತನಕ ವಿಶ್ವರೂಪನಾಗಿಯೂ ಕೂತು ಕೊಂಡಿರುವುದರಿಂದಲೇ ಇದ್ದರೂ ಇಲ್ಲದ ಪ್ರಾಯವಾಗಿ ನನ್ನ ಯತ್ನವೇ ನನಗೆ ದುಃಖ ಸುಖಾನುಭವಗಳನ್ನು ಕೊಟ್ಟಿತು ಎಂಬ ಭ್ರಾಂತಿಯಿಂದ ಅಜ್ಞಾನಿಯಾಗೋಣ ಆಯತ್ನಾಂತರ್ಯಮಿಯಾದ ಶ್ರೀ ಹರಿಯಿಂದ ಪಾಚಕನಾದ ದರ್ವಿಯು, ಅಗ್ನಿಯಲ್ಲಿಯೂ ಸುರಸಗಳಲ್ಲಿಯೂ ಹೇಗೆ ಇಡಿಸಿಕೊಳ್ಳಲ್ಪಡುವುದೋ ಹಾಗೆ ಎಂದು ತಿಳಿದು ಜ್ಞಾನಿಯಾಗೋಣ

*"ಈಶಾವ ಸೃಷ್ಟಂ ಹ್ಯವಿರುದ್ಧ ದುಃಖಂ ಸುಖಂ ವಾ*
*ಗುಣ ಕರ್ಮ ಸಂಗಾತ್।"*

ಆಸ್ಥಾಯ ತತ್ತದ್ಯ ಯುಕ್ತ ನಾಥಃ ಚಕ್ಷುಷ್ಮತಾಂಧಾ ಇವ ನೀಯಮಾನಾಃ॥ ಎಂಬ ಭಾಗವತ ಶ್ಲೋಕದಲ್ಲಿ "ಚಕ್ಷುಷ್ಮತಾಂಧಾ ಇವನೀಯಮಾನಾಃ" ಮುಳ್ಳುಗಳ ಮೇಲೆ ಕುರುಡರನ್ನು ಸೆಳೆಯುವ ಹಾಗೆ ಎಂದು ಆ ಯತ್ನವೇ ಶ್ರೀ ಹರಿಯ ಯತ್ನವೆಂದು ಹೇಳಿದ್ದಾರೆ.

*"ಬ್ರಹ್ಮನ್ಯಾಧಾಯ ಕರ್ಮಾಣಿ ಸಂಗತ್ಯತ್ವಾ ಕರೋತಿಯಃ ।*
*ಲಿಪ್ಯತೇನ ಸ ಪಾಪೇನ ಪದ್ಮ ಪತ್ರಮಿವಾಂಬಸಾ॥*
*ಕಾಯೇನ ಮನಸಾ ಬುಧ್ಯಾ ಕೇವಲೈರಿಂದ್ರಿಯೈರಪಿ*
*ಯೋಗಿನಃ ಕರ್ಮ ಕುರ್ವಂತಿ ಸಂಗಂತ್ಯಕ್ತ್ವಾತ್ಮ ಶುದ್ಧಯೇ ।*
ಎಂದು ಗೀತಾ ಪಂಚಮಾಧ್ಯಾಯ.

*"ಬ್ರಹ್ಮಣೀತಿ ತತ್ಪೂಜಾತ್ಮಕಾನಿ ತ್ಯಕ್ತ್ವತಾನಿ ಮಮ*
*ಶುಭಾರ್ಥಮಿತಿ ಬ್ರಹ್ಮಣ್ಯಾಧಾನಂ।*

*ಸ್ವಾತಂತ್ರ್ಯಾಭಾವ ಅಪೇಕ್ಷೈವ ಜೀವಸ್ಯ ಕರ್ತೃತ್ವಂ ಸ್ವವಂದನಂ*
*ಯಥಾ ಪಿತ್ರಾ ಕಾರಿತಂ ಶಿಶು ಕರ್ತೃಕಂ। ಏವಂ ಪೂಜಾ*
*ವಿಷ್ಣ್ವಧೀನಾ ಭವೇಜ್ಜೀವಕೃತೇತ್ಯಪಿ ॥"* ಇತಿ ಗೀತಾ ತಾತ್ಪರ್ಯ

ಅಂದರೆ ಜ್ಞಾನಿಗಳು ಕರ್ಮ ಮಾಡುವುದು ಮನಶ್ಶುದ್ಧಿಗೆಂದು ಸರ್ವಥಾ ಅರ್ಥವಲ್ಲವು. "ಆತ್ಮ ಶುದ್ಧಯೇ ಆತ್ಮನಃ ಚಿತ್ತಸ್ಯ ಅನ್ಯಥಾಕಾರ ಪರಿತ್ಯಾಗೇನ ಸ್ವರೂಪಾವಿರ್ಭಾಯ(ವ) ಕುರ್ವಂತಿ।" ಎಂಬ ಗೀತಾ ವಿವೃತ್ತಿ ವಚನದಿಂದ ಜೀವನ ಮುಕ್ತಿ ಶುಭಕ್ಕೋಸ್ಕರ 'ತತ್ಕೃತಾನಿ' ಎಂದು ಶ್ರೀ ಹರಿಯೇ ಜ್ಯೋತಿಷ್ಟೋಮಾಂತ ಕರ್ಮವನ್ನು ಅಸಂಪ್ರಜ್ಞತ ಸಮಾಧಿಯೇ ಕೊನೆಯಾದ ಮಾನಸ ಬಿಂಬೋಪಾಸನಾಂತ ಜ್ಞಾನಯೋಗವನ್ನು ಮಾಡುತ್ತಾನೆ, ಎಂಬ ಮುಖ್ಯಾನುಭವವೇ ಅಜ್ಞಾನಿಗಳಿಗೆ ದತ್ತ ಸ್ವಾತಂತ್ರ್ಯರೂಪವಾಗಿ ತೋರುತ್ತದೆ. ಹಾಗಾದರೆ ಸುಖ ದುಃಖಾನುಭವವೇ ಸುಳ್ಳಾಗಲೀ ಎಂದರೆ ಜೀವನು

ಮುಕ್ತನಾಗುವುದು ಹೇಗೆ ಯಥಾರ್ಥವೋ ಹಾಗೆ ಯಾತನಾನುಭವವೂ ಜೀವನಿಗೆ ಪ್ರಾರಬ್ಧ ಸಂಸಾರ ಎನಿಸಿಕೊಂಡು ಅಂತಹ ಯಾತನಾನುಭವದೊಳಗೆ ಗುಣಪೂರ್ಣ ಸುಖ ಅನುಭವಶೀಲನಾಗಿ ಸ್ವರಮಣನಾಗಿ ಕರ್ತನಾಗಿದ್ದಾನೆ ಎಂದು ಗೀತಾ ವಿವೃತ್ತಿಯ ಭಾವವು. ಹಾಗಾದರೆ ಸಂಚಾರ ಮಾಡುವ ಭಗವದ್ರೂಪಕ್ಕೆ ಕಂಠಕ ವೇಧೆಯು ಹ್ಯಾಗೆ ಇಲ್ಲವೆಂದರೆ ತಪ್ತ ಬಂಗಾರ ತಾಡನ ಕಾಲದಲ್ಲಿ ಅಗ್ನಿಗೆ ಹೇಗೆ ಪೆಟ್ಟುತಗಲುವುದಿಲ್ಲವೋ ಔಷದ ರಸದಿಂದ ತೋಯಿಸಿ ವಣಗಿದ ವಸ್ತ್ರ ಅಗ್ನಿಜ್ವಾಲೆಯಲ್ಲಿಟ್ಟರೂ ದಹಿಸುವುದಿಲ್ಲವೋ ಸುಳಾದಿ:- "ದೀಪ ಪಚ್ಚಿಸಿದರೂ ವಸನ ಸುಡದು ಎಣೆಗಾಣೆ ಒಂದುರಸ ವಿಶೇಷ ಇದ್ದಂತಲ್ಲಿ ಗುಣವುಂಟಾಗಿ ಇದೆ ನೋಡು ಪ್ರತ್ಯಕ್ಷವು" ಎಂಬಂತೆ "ತನಗೆ ತಾನೆ ಕುಣಿದು ಜೀವರ ಕುಣಿಸುವ ಎಂತ ಪುಣ್ಯ ಪಾಪಗಳೆರಡು" ಎಂಬ ಸುಳಾದಿ ವಚನದಂತೆ ಶ್ರೀಹರಿಗೆ ಯಾವ ದೋಷಗಳ ಲೇಪವಾಗುವುದಿಲ್ಲ. ಮುಂದಿನ ವಚನ "ಸಂತೋಷ ಗುಣಪೂರ್ಣ ಪ್ರಕೃತಿ ಮನೆಯ ಮಾಡಿ ಆ ಸೂಕ್ಷ್ಮ ದೇಹಕ್ಕೆ ಲಿಂಗ ವ್ಯಾಜದಿಂದ ಮೋಸಗೊಳಿಸುವ ಮಾಯವ ಕಲ್ಪಿಸಿ ತಾಸುಮ್ಮನಿರುವಲ್ಲ ಒಂದು ಕ್ಷಣವಾದರೂ" ಎಂತಲೂ ಅದನ್ನು ಅನುಭವಿಸುವ ಮಾಯವನೇಮಿಸಿ ನಡೆವ "ಎಂತಲೂ ಅನುಭವ ಬಿಡದ ಪ್ರಯುಕ್ತ ನೀನಿತ್ತ ಸ್ವಾತಂತ್ರ್ಯವಲ್ಲನೆಂದರೆ ಬಿಡದು" ಎಂತ ಸ್ವಾತಂತ್ರ ಸುಳಾದಿ ಜತೆ. "ವಿಕೃತಿರ್ನಾಮ ಕರ್ತೃತ್ವಂ ಜಡಸಂಶ್ರಯಂ" ಎಂತ ಗೀತಾ ತಾತ್ಪರ್ಯದಲಿ ಜಡಕ್ಕೆ ಕರ್ತೃತ್ವ ನಿರೂಪಿಸಿದ್ದಾರೆ "ಪುಮಾನ್ ದೋಗ್ಧಾ ಸೌರ್ದೋಗ್ಧೀಸ್ತನೋ ದೋಗ್ಧೀತಿ ಚ ಕ್ರಮತ್" ಎಂದು ಗೀತಾ ತಾತ್ಪರ್ಯದಲ್ಲಿ ಭಗತ್ಕರ್ತೃತ್ವ ಜೀವ ಕರ್ತೃತ್ವ ಜಡ ಕರ್ತೃತ್ವಗಳನ್ನು ನಿರೂಪಿಸಿದ್ದಾರೆ. "ಕರೋಮೀತಿ ಇಚ್ಛಾಂಯಾಂ ಅಕೃತಿಃ ನಕರೋಮೀತೀಚ್ಛಯಾಮಪಿ ಕಾರ್ಯದರ್ಶನಾತ್। ಅನ್ವಯ ವ್ಯತಿರೇಕಾಭ್ಯಾಂ ಜೀವ ಸ್ವಾತಂತ್ರ್ಯ ಮಾತ್ರ ಪ್ರತಿಕ್ಷೇಪಕತ್ವಂ" ಎಂದು ಸತ್ತತ್ವರತ್ನಮಲಾ ಟಿಪ್ಪಣಿ. "ನಿಯಮೇನ ಸ್ವೇಚ್ಛಾಧೀನ ಪ್ರವೃತ್ತಿಮತ್ವಂ ಸ್ವತಂತ್ರತ್ವಂ" ಎಂದು ಸ್ವತಂತ್ರ ಕರ್ತೃ ಶ್ರೀಹರಿಯೆಂದು ಹೇಳಿ ತದಧೀನ ದತ್ತ ಸ್ವಾತಂತ್ರ್ಯವನ್ನು ಸುಖ ದುಃಖಾನುಭವ ನಿಮಿತ್ತ ಮಾತ್ರಕ್ಕೆ ಕೊಟ್ಟ ಶಾಸ್ತ್ರ ಮಾಡಿ ಅದರಲ್ಲಿ ಶ್ರೀ ಹರಿಯು ಕೂತು ಇದ್ದ ಪ್ರಯುಕ್ತ ಜೀವನು ಕ್ರಿಯಾ ಸ್ವತಂತ್ರನು ಇದ್ದರೂ ಇಲ್ಲವಾಯಿತು. ಸುಳಾದಿ:- "ಎನಗಾವ ಸ್ವಾತಂತ್ರಕೆ ಇದ್ದರಾದರೂ ಪ್ರಯೋಜನಕ್ಕೆ ಬರದಿರೆ ಇದ್ದರೂ ಇಲ್ಲವೆನ್ನಿ" ಎಂತಲೂ, "ಎನಗೆ ಮೊದಲೇ ಇಲ್ಲ

ಇತ್ತದರಿಂದಲಿ ನೀನೇ ಕಡಿಮೆ ಎಂದು ಯೋಚನೆ ಹುಟ್ಟುತ್ತದೆ. । ದಿನದಿನದಲ್ಲಿ ಕರ್ಮ ಆಚರಣೆಯ ಮಾಡಿ ಉಣಿಸುವ ಬಗೆ ಮತ್ತಾವುದೋ ತಿಳಿಯದು'' ಎಂದು ಸ್ವತಂತ್ರ ಸುಳಾದಿ ಸಿದ್ಧವು. ಏತೇನ ಜೀವ ಜಡಗಳ ಕರ್ತೃತ್ವವು ಕೆಲಸಕೆ ಬಾರದ ಹಾಗೆ ಇದೆ ಎನ್ನುವುದೇ ಜ್ಞಾನಿಗೆ ನಿಶ್ಚಯವು. ''ಜ್ಞಾನಿತ್ವಂ ಕರ್ತೃತಾಭಾವತ್ ಈಶ ಕರ್ತೃತ್ವ ನಿಶ್ಚಯಾತ್'' ಎಂದು ಏಕಾದಶ ತಾತ್ಪರ್ಯ ವಚನವು. ಹಾಗೂ ಆಗಲಿ ಜಡಕ್ರಿಯಶಕ್ತಿ ಅನುಭವ ಹೇಗೆಂದರೆ ನೀರಿನಲ್ಲಿ ನಿಂತ ಪುರುಷನಿಗೆ ಪ್ರವಾಹದ ವೇಗವೇ ನನ್ನನ್ನು ದಬ್ಬುತ್ತದೆ ಎಂತಲೂ ವೃಕ್ಷ ಕಂಪನ ಹೇತು ಜಡವಾಯು ಚೇಷ್ಟೆಯೂ, ಪ್ರತ್ಯಕ್ಷ ಸಿದ್ಧ ಹೇಗೋ ಹಾಗೆ ಜೀವನ ಸ್ವಾಧೀನದಲ್ಲಿ ನಿಲ್ಲದೆ ಮನಸ್ಸಿನ ಜಡಸ್ವರೂಪ ಕ್ರಿಯಾಶಕ್ತಿಯಿಂದಲೇ ಕ್ಷಣ ಮಾತ್ರ ಬ್ರಹ್ಮಾಂಡವೆಲ್ಲಾ ಸುತ್ತತಕ್ಕ ಮನೋವೇಗದ ಬಲವನ್ನು ಇದು ಮನೋ ವೇಗವಲ್ಲವೆಂತಲೂ ಸರ್ವ ಪದಾರ್ಥ ಜ್ಞಾನ ಜೀವರಿಗೆ ಹುಟ್ಟುತ್ತಾದುದರಿಂದ ಜೀವನ ಸ್ವರೂಪ ಜ್ಞಾನಧರ್ಮ ಇದು ಯಾಕಾಗಬಾರದೆಂದರೆ, ಈ ಜೀವನು ಜಪ ಮಾಡುತ್ತ ಕೂತಿರುವ ಕಾಲದಲ್ಲಿ ಮೂರ್ತಿಧ್ಯಾನ ಮಂತ್ರಾರ್ಥ ಸ್ಮರಣೆ ಜಪ ಸಂಖ್ಯಾ ದೀಕ್ಷೆಯಲ್ಲಿ ಸ್ವರೂಪ ಜ್ಞಾನವೂ ಉದ್ಯುಕ್ತವಾಗಿರುತ್ತದೆಯಷ್ಟೆ. ಈ ಜಪವನ್ನು ಬೇಗ ಸಾಧಿಸಿದರೆ ಮನೆಯಲ್ಲಿ ವಿವಾಹಾದಿ ಮಹಾಕಾರ್ಯಗಳನ್ನು ಸಾಧಿಸಿಯೇನು ಎಂಬ ದಿಗಲಿನಿಂದಯುಕ್ತವಾದ ಜಪ ದೀಕ್ಷೆಯನ್ನು ಕೂಡಾ ಇವನ ಮನಸ್ಸನ್ನು ಕೆಡಿಸಿ ಇವನ ಜ್ಞಾನವನ್ನು ತೆಗೆದುಕೊಂಡುಹೋಗಿ ನರಕಕ್ಕೆ ಸೇರಿಸುತ್ತದೆ. ಆದುದರಿಂದ ಈ ಸ್ಥೂಲಾಂತಃಕರಣ ಕ್ರಿಯಾಶಕ್ತಿ ಇಂತಹುದೆಂಬುದೇ ಅನುಭವ ಸಿದ್ಧವು. ಹಾಗಾದರೆ ಜೀವನು ಅಲಗಾಡುವ ಅಲ್ಪಕ್ರಿಯೆಯೊಳಗೆ ಸ್ವಾಮಿಯೇ ಗುಣ ಪೂರ್ಣ ಕ್ರಿಯಾಶಕ್ತಿ ಇದ್ದು ಅಲುಗಾಡಿದ ಬಳಿಕ ಈ ಜೀವನು ತನ್ನ ಜ್ಞಾನದಿಂದ ತಾನು ಅಲ್ಪ ಕ್ರಿಯಾಶಕ್ತಿ ಉಳ್ಳವನು ಎಂದು ಇಚ್ಛಿಸುವುದು ಹ್ಯಾಗೆ? ನಾನೇ ಅಲುಗಾಡುವೆನು ಎಂದು ಇಚ್ಛಿಸುವುದು ಹ್ಯಾಗೆ? ಅಲುಗಾಡುವುದು ಹೇಗೆ ಕೂಡುತ್ತದೆಂದರೆ– ಸಿದ್ಧಾಂತ:– ಅಪರಿಮಿತ ಗುಣ ಪೂರ್ಣ ಕ್ರಿಯಾ ಶಕ್ತಿಯುಳ್ಳ ಸ್ವಾಮಿಯು ಜೀವನ ಸ್ವರೂಪ ಜ್ಞಾನ ಇಚ್ಛಾ ಚಲನ ಕ್ರಿಯಗಳಲ್ಲಿ ಹೇಗೆ ಅಡಗಿದ್ದಾನೆ ಎಂದರೆ– ಅವರೇ ಕಾಳಿಗೆ ಅತಿ ಸೂಕ್ಷ್ಮವಾದ ಒಂದು ಈರುಳ್ಳಿ ಪೊರೆಯನ್ನು ಮೇಲೆ ಸುತ್ತಲೂ ಕವಚ ಮಾಡಿ ಮೇಲೆ ಸಣ್ಣ ರಂಧ್ರವನ್ನು ಮಾಡಿ ನೀರು ಬಿಡುತ್ತಾ ಇದ್ದು ಆ ಅವರೇಕಾಳು ಚೆನ್ನಾಗಿ ನೆನೆದು ದಪ್ಪವಾದರೆ

ಮೇಲಿನ ಈರುಳ್ಳಿ ಪೊರೆಗೆ ಬಾಧೆ ಬಂದು ಹೇಗೆ ಆ ಪೊರೆಯು ಬಿರಿದು ಹೋಗುವುದು ಅಂತಹ ಬಂಧ'ವನ್ನು ಜೀವನಿಗೆ ಹರಿಂಯು ಕೊಡುವುದಿಲ್ಲವಾದುದರಿಂದ ಇವನ ಅಲ್ಪಶಕ್ತಿಗೆ ಆದರೊಳಗಿದ್ದವನ ಪೂರ್ಣಶಕ್ತಿಗೆ ತಕ್ಕ ಹಾಗೆ ಅಲುಗಾಡೆನೆಂಬ ಇಚ್ಛೆ ಒಳಗೂ ಶ್ರೀ ಹರಿಇಚ್ಛೆ ಇದ್ದರೂ ಪ್ರತಿಬಂಧಕವಾಗಿದೆ- ಇದೇ ಪ್ರಕಾರ ಅಲುಗಾಡುವುದರೊಳಗೂ ಮನುಷ್ಯ ಚೇಷ್ಟೆವಳಗೆ ಪಿಶಾಚಾವಿಷ್ಟ ಚೇಷ್ಟೆಯಂತೆ ಪ್ರತಿಬಂಧಕವಾಗಿದೆ. ಅದ್ಭುತ ಶಕ್ತಿಯುಳ್ಳ ಶ್ರೀಹರಿಯು ಅಡಗಿಇದ್ದ ಮಹಿಮೆಯಿಂದಲೇ ಈ ಜೀವನು ಇದು ನನ್ನ ಶಕ್ತಿ ಇದು ನನ್ನ ಅಪೇಕ್ಷೇ ಇದು ನನ್ನ ಮಹಿಮೆ ಇದು ನನ್ನ ಕ್ರಿಯೆಗಳೆಂಬ ಸ್ವರೂಪಾನಂದ ಪೂರ್ವಕ ಅನುಭವ ಜ್ಞಾನವು. ಇಂತಹ ಭಗವದಧೀನವಾಗಿ ಗುಣ ಪೂರ್ಣ ಜ್ಞಾನೇಚ್ಛಾ ಕ್ರಿಯೆಗಳಿಂದ ಕೇವಲ ಭಿನ್ನವಾದ ಜ್ಞಾನೇಚ್ಛಾ ಕ್ರಿಯೆಗಳು ಜೀವ ಸ್ವರೂಪಭೂತಗಳು.

ಆಕ್ಷೇಪ:- ಕುಠಾರದಿಂದ ಮನುಷ್ಯನು ವೃಕ್ಷವನ್ನು ಛೇದಿಸಿದರೆ, ನಿಷ್ಕ್ರಿಯವಾದ ಆ ಕುಠಾರ ಸಮವಾದ ಜೀವನು ಕೂಡ ಛೇದಿಸುವ ಪುರುಷನೆಂಬ, ಶ್ರೀ ಹರಿಯಂತೆ, ಕರ್ತನಾಗಬೇಕಾದರೆ ಅರ್ಥ ಹೊಂದಿಸೋಣವು ಪರಮ ವಿರುದ್ಧವೇ ಸರಿ. ಎಂದರೆ

ಸಿದ್ಧಾಂತ:- ಪೂರ್ವೋಕ್ತ ಬ್ರಹ್ಮ ಸೂತ್ರ ಮೊದಲಾದ ಪ್ರಮಾಣವಿದ್ದರೂ "ಅಸ್ತಿಹಿ ಪ್ರಮಾಣ ಘಟನಾ ಕಥಮಿತಿ ಚೇತ್ ಈಶಾಚಿಂತ್ಯ ಶಕ್ತ್ಯೇತಿ ಬ್ರೂಮಃ" ಎಂತಲೂ "ಜಡಮಪಿ ಪರಕೃತತೋ(ನೋ)ದನಾದಿನಾ ಕ್ರಿಯಾವದ್ಭವತಿ" ಅಂದರೆ ನೋದನ ಎಂದರೆ ಕೋರಡೆ (ಚಿವಟ) ಆದರಂತೆ ಶ್ರೀಹರಿಯಿಂದ ನೂತನ ಸೃಷ್ಟಿ ಕ್ರಿಯೆ ಅಲ್ಲವಾದುದರಿಂದ ಶಾಶ್ವತ ಕ್ರಿಯಾ ಎಂದರ್ಥವು . "ಜೀವಸ್ತು ಅನಾದಿ ಸಿದ್ಧ ಸತ್ವ ತುಲ್ಯಯಾ ಪರಮೇಶ್ವರ ಪ್ರಸಾದಾಯುಕ್ತಯಾ ಕ್ರಿಯಾಶಕ್ತ್ಯಾ ಕರ್ತೋಽಚ್ಯತೇ" ಇದು ಸತ್ತತ್ವರತ್ನಮಾಲಾ ಟಿಪ್ಪಣಿ. ಅಂದರೆ ಭಗವತ್ಸ್ವರೂಪದಂತೆ ಸತ್ವ ತುಲ್ಯಯಾ ಎಂದರೆ ಜೀವನ ಸ್ವರೂಪ ಸಚ್ಚಿದಾನಂದ ಸಮ ಕ್ರಿಯಾ ಎಂದು ಅರ್ಥ. ಅಚಿಂತ್ಯಾದ್ಭುತ ಶಕ್ತಿ ಅಂದರೆ ನಿತ್ಯ ಭೃತ್ಯ ಕ್ರಿಯಾವಂತ ಎಂದು ತಾತ್ಪರ್ಯ ಮಾಡಿದ್ದಾರೆ. ತೃಣಾದಿ ಬ್ರಹ್ಮ ಪರ್ಯಂತರ್ಗತ ಗುಣ ಪೂರ್ಣ ಭಗವತ್ಕ್ರಿಯೆಯೇ ಮುಖ್ಯವಾಗಿ ನಡಿಯತಕ್ಕದ್ದು. ಎಂದು ಸಿದ್ಧಾಂತ

ಮಾಡಿದ ತರುವಯಾದಲ್ಲೂ ಜೀವಾಂತರ್ಯಾಮಿಗೆ ಜೀವನು ಕವಚರೂಪನಾಗಿ ಕವಚ ದಂತೆ ನಿಷ್ಕ್ರಿಯನೇ ಏಕೆ ಆಗಬಾರದು ಎಂದರೆ ಭಗವದಚಿಂತ್ಯಾದ್ಭುತ ಶಕ್ತಿ ಏಕೆ ಕಲ್ಪಿಸಬೇಕು ಎಂದರೆ, ಅದರ ಕರ್ಮ ಹಾದಿ ನಡಿಯತಕ್ಕ ಮನುಷ್ಯ ಕ್ರಿಯಾಂತರ್ಗತ ಶ್ರೀ ಹರಿಯ ಗೂಣಪೂರ್ಣ ಕ್ರಿಯಾ ಶಕ್ತಿಯಿಂದ ನಡೆಯುವುದೇ ಸಿದ್ಧಾಂತವಾದರೂ ಮನುಷ್ಯನ ಅಧಿಕ ನಡೆಯಿಂದ ಕಾಲು ನೋವು ಉಂಟಾಗುತ್ತದ್ದುದರಿಂದ ಗುಣಪೂರ್ಣನ ಕ್ರಿಯಾಶಕ್ತಿ ಅಲ್ಪವಾಯಿತು ಎಂದು ಹೇಳ ಕೂಡದು. ಆದುದರಿಂದ ಈ ಜೀವನು ನಿಷ್ಕ್ರಿಯನಾದಲ್ಲಿ ಸಂಚಾರ ಕ್ರಿಯೆಯಿಂದ ನೋವು ಹುಟ್ಟುವ ಹಾಗೆ ಸಂಚಾರಕ್ಕೆ ಪೂರ್ವದಲ್ಲಿಯೇ ಅಂತಹ ಕಾಲು ನೋವು ಏಕೆ ಇರಬಾರದು. ಜಗತ್ತು ಸರ್ವವೂ ನಿಷ್ಕ್ರಿಯೆಯಾದರೆ ಸರ್ವ ಜೀವರಿಗೂ ಅನಾದ್ಯನಂತ ಕಾಲಕ್ಕೂ ನಡೆಯುತ್ತಲೇ ಇದ್ದರೂ ಕಾಲು ನೋವು ಇಲ್ಲದೆ ಹೋಗಲಿ. ಅಥವಾ ಗರ್ಭದೊಳಗಿದ್ದ ಶಿಶು ಮೊದಲಾದ ಸರ್ವ ಜೀವರಿಗೂ ಅಖಂಡವಾಗಿ ಸರ್ವದಾ ಕಾಲು ನೋಯೋಣವೇ ಜೀವರ ಧರ್ಮವಾಗಲಿ. ಅತಏವ ಕೊನೆಯ ನಿಶ್ಚಯ ಹೇಗೆಂದರೆ ಮೂರು ಮಾತು– ಜೀವಕರ್ತೃತ್ವವು ಅಜಗಳಸ್ತನದಂತೆ ಇರುವುದು ಯಥಾರ್ಥವಾದರೂ ವ್ಯರ್ಥವೇ ಸರಿ– ವ್ಯರ್ಥವೆಂದು ತಿಳಿದ ಜ್ಞಾನಿಗೆ ಸ್ವಾತಂತ್ರ್ಯದಾನ ಮಾಡಿದ್ದು ಸಾರ್ಥಕವೇ ಸರಿ.

೧. ಅಗ್ನಿಯನ್ನು ತಂದು ಪಾಕ ಮಾಡಿ ಭೊಜನ ಮಾಡುವುದು ಬಿಟ್ಟು ಅಗ್ನಿ ವ್ಯಾಪ್ತಿರಹಿತವಾದ ಶುಷ್ಕಾಂಗಾರ ಮಾತ್ರದಿಂದ ಪಾಕ ಮಾಡುವೆನೆಂಬ ದುರಾಶೆಯಂತ ಅಜಗಳ ಸ್ತನದಿಂದಲೇ ಅಪರೋಕ್ಷಾದಿ ಮುಖ್ಯ ಭಗವದ್ಪ್ರಸಾದ ಸಾಧಿಸುತ್ತೇನೆಂದು ಸ್ವಾತಂತ್ರ್ಯ ಭ್ರಾಂತಿ, ಕರ್ತೃತ್ವ ಭ್ರಾಂತಿ ಈ ಎರಡರಿಂದ ಭಗವದ್ರೋಹ ಸಾಧನದಿಂದ ಸಂಸಾರಿಯಾಗತಕ್ಕ ಭಕ್ತನಿಗೆ ಸ್ವಾತಂತ್ರ್ಯದಾನ ವ್ಯರ್ಥವೇ ಸರಿ.

೨. ವ್ಯರ್ಥದಿಂದ ಅಜಗಳ ಸ್ತನಗಳನ್ನು ಸುಳ್ಳು ಎಂದು ಹೇಳಿ ಜೀವಸ್ವರೂಪ ಕ್ರಿಯೆಯೇ ಅನಾದಿ ಕರ್ಮ ನಿಮಿತ್ತವೆಂದು ಅರಿಯದೆ, ಜೀವ ನಿಷ್ಕ್ರಿಯನೇ ಸರಿ ಎಂಬ ಅಜ್ಞಾನಿಯು ಜಗನ್ಮಿಥ್ಯಾ ಎಂಬ ಶುದ್ಧ ಅದ್ವೈತಿಯಂತೆ ತಮೋಯೋಗ್ಯನೇ ಸರಿ.

೩. ಅದರ ವಿವರ ನಾನು ಎಂಬ ಅಜ್ಞಾನವು ಬುದ್ಧಿಪೂರ್ವಕ ಭಗವದ್ರೋಹವಲ್ಲವಾದ ಪ್ರಯುಕ್ತ ತಿಳಿದ ಅನಂತರ ಅವನು ಕೆಡುವುದಿಲ್ಲ ಎಂಬುದೇ ಸರಿ. ಜೀವನು ನಿಷ್ಕ್ರಿಯನು ಎಂಬ ಮಿಥ್ಯಾ ಜ್ಞಾನಿಯು ಬುದ್ಧಿ ಪೂರ್ವಕ ಭಗವದ್ರೋಹಿಯಾದುದರಿಂದ ಇದೇ ಶುದ್ಧ ಅದ್ವೈತಿಯ ತಮೋಯೋಗ್ಯ ಸಾಧನವೆಂಬುದೇ ಸಿದ್ಧ. ಇದಕ್ಕೆ ಪ್ರಮಾಣವನ್ನು ತಾತ್ಪರ್ಯ ನಿರ್ಣಯ ಹಠವಾದ ಶ್ಲೋಕದಿಂದ ಪೂರ್ವದಲ್ಲಿಯೇ ನಿರೂಪಿಸಿದ್ದೇನೆ.

ಆಕ್ಷೇಪ:- ಈ ಜೀವನು ನಿಷ್ಕ್ರಿಯನಾದ ಮಾತ್ರದಿಂದ ಹೇಗೆ ಅದ್ವೈತಿಯಾಗುವನು ಎಂದರೆ ಅದರ ಅನುಭವ ನಾನು ಎನ್ನುವುದು ದೇವರೇ ನಾನು ಎಂದು ಅಜ್ಞಾನದಿಂದ ಹೇಳತಕ್ಕವನು, ಇವನಾದರೋ ನನ್ನ ಕ್ರಿಯ ದೇವರು ಎಂದು ಬುದ್ಧಿಪೂರ್ವಕ ವಿಪರೀತ ಜ್ಞಾನಿಯಾದ ಪ್ರಯುಕ್ತ ಜೀವ ಪರಮಾತ್ಮನ ರೂಪಗಳಿಗೆ ಐಕ್ಯ ಹೇಳದೇ ಇದ್ದಾಗ್ಯೂ ಭಗವದ್ರೂಪ ಕ್ರಿಯೆಗಳು ಹ್ಯಾಗೆ ಭಗವತ್ಸ್ವರೂಪವೋ ಹಾಗೆ ಜೀವ ಗುಣ ಪ್ರಕ್ರಿಯಗಳು ಜೀವ ಸ್ವರೂಪವೆಂದು ಮಲಬಂಧ ದುಃಖ ಸಹಿಸದೆ ಏಳತಕ್ಕ ಪರಮ ತುಚ್ಛ ಕಲಿ ಸ್ವರೂಪ ಕ್ರಿಯೆಯನ್ನು ಕೂಡ ಭಗವತ್ಸ್ವರೂಪ ಕ್ರಿಯೆ ಎಂದು ಅದ್ವೈತಿಯ ಐಕ್ಯ ಭಾವವನ್ನು ಹೇಳುತ್ತಾನಾದುದರಿಂದ, ಪೂರ್ವದಲ್ಲಿ ಹೇಳಿದ ಎರಡು ಬ್ರಹ್ಮ ಸೂತ್ರಗಳಲ್ಲಿ ನಾನು ಎಂಬುವನು, "ಓಂ ಬ್ರಹ್ಮ ಪರಾತ್ತು ತಚ್ಛ್ರುತೇಃ ಓಂ" ಎಂಬ ಸೂತ್ರಕ್ಕೆ ದ್ರೋಹಿಯಾದವನು ನಿಷ್ಕ್ರಿಯ ಜೀವನೆ ಎಂಬುವನು- "ಓಂ ಕರ್ತಾ ಶಾಸ್ತ್ರಾರ್ಥವತ್ವಾತ್ ಓಂ" ಎಂಬ ಸೂತ್ರ ದ್ರೋಹಿಯಾದವನು ಆದುದರಿಂದ ಶ್ರೀ ಹರಿ ಗುರು ಪ್ರಸಾದಕ್ಕೆ ಪಾತ್ರನಾಗಬೇಕಾದರೆ, ಜೀವ ಕರ್ತೃತ್ವವನ್ನು ಮರಿಯೋಣವೆಂಬ ಮಾತುಗಳಿಗೆ ಕರ್ತೃತ್ವವು ಅಜಾಗಳಸ್ತನಗಳ ಹಾಗೆ ವ್ಯರ್ಥವಾಗಿರುವುದೇ ಸತ್ಯವೆಂದು ತಿಳಿಯಬೇಕು.

ಸುಳಾದಿ:- "ತ್ರಾಣ ನಾದರೊ ಹರಿ ಜೀವನ ಚೇಷ್ಟೆಯಂತೆ ನಾನಾವಿಧದಲ್ಲಿ ಅನುಸಾರಿಯಾಗಿ । ತಾನೇ ನಡಿಸಿ ನಡಕೊಂಬ ಕಾಲಮೀರದೆ" ಎಂದು ಜ್ಞಾನ ಸುಳಾದಿ ಸಿದ್ಧವು. ಪೂರ್ವದಲ್ಲಿಯೇ ಜೀವ ಪ್ರಕರಣದಲ್ಲಿ ವಿಜಯರಾಯರ ೫-೬ ಸುಳಾದಿಗಳ ಭಾವದಿಂದ ಪ್ರಯೋಜನಕ್ಕೆ ಬಾರದ

ಜೀವ ಕ್ರಿಯೆಯನ್ನು ತೋರಿಸಿ ಇದ್ದೇನೆ. ಇಷ್ಟರಮೇಲೂ ಹರಿಕಥಾಮೃತಸಾರದ ದತ್ತ ಸ್ವಾತಂತ್ರ್ಯ ಸಂಧಿಗೆ ದ್ರೋಹ ಸಂಪಾದಿಸಿದ ಅಪರಾಧ ತಿಳಿಯದೇ ಜೀವನಿಗೆ ನಿಷ್ಕ್ರಿಯತ್ವ ಸಾಧಿಸತಕ್ಕ ಪರಮ ಸಮರ್ಥನು– ಜ್ಞಾನ ಸುಳಾದಿಯಲ್ಲಿ "ನೀನು ನಾನೆಂಬಲ್ಲಿ ಮುಕ್ತಿ ಸಿದ್ಧ" ವೆಂಬ ಈ ಬಿಂಬಮೂರ್ತಿಗೆ ಮಾತ್ರ ಪ್ರಥಮ ಪ್ರಕರಣದಲ್ಲಿ ನಾನು ಬರೆದುಕೊಂಡ ಅರ್ಥವನ್ನು ಬಿಟ್ಟು ಅಜ್ಞಾನರಹಿತರಾದ ಮುಕ್ತರಲ್ಲಿ ನಾನು ಎಂಬುದು ಇದೆ ಎಂಬ ವಚನಕ್ಕೆ ಅರ್ಥ ಮಾಡಿದರೆ ಅವನ ಪಾದಕ್ಕೆ ಶರಣು ಮಾಡುತ್ತೇನೆ

ಆಕ್ಷೇಪ:– ಇಷ್ಟು ಪ್ರಕಾರದಿಂದ ಈ ವಿಧಿ ನಿಷೇಧ ಕರ್ಮಗಳನ್ನು ಜ್ಯೋತಿಷ್ಟೋಮಾಂತವಾಗಿ ಮಾಡಬೇಕೆಂದು ಹೇಳಿದ ಬಳಿಕ ಜ್ಞಾನಿಗಳಿಗೂ ಅಜ್ಞಾನಿಗಳಿಗೂ ಭೇದವಿಲ್ಲದೇ ಹೋಗಲಿ ಎಂದರೆ, ಸಿದ್ಧಾಂತಃ– "ನಮೇ ದೋಷೋ ನ ಚ ಗುಣಃ" ಎಂಬ ಪೂರ್ವೋಕ್ತವಾದ ಏಕಾದಶ ತಾತ್ಪರ್ಯದಿಂದ ಕರ್ಮ ಮಾಡುವುದರಲ್ಲಿ ಈ ಪಾಪ ಹೋಗುತ್ತದೆ ಈ ಪುಣ್ಯ ಬರುತ್ತದೆ ಎಂಬ ಭ್ರಾಂತಿಯು ಮನಸ್ಸಿನಲ್ಲಿಯೇ ಇಲ್ಲದ ಪ್ರಯುಕ್ತ ಗುರುಗಳ ಅನುಗ್ರಹದಿಂದ ಈ ಕರ್ಮಾಧಿಕಾರ ಎಂತಹದಾಯಿತೆಂದರೆ ಅದರ ಅನುಭವ ದೃಷ್ಟಾಂತ:– ಹೇ ಸ್ವಾಮಿಯೇ! ನಿನ್ನ ಚರಣವನ್ನು ನಂಬತಕ್ಕ ಅಧಿಕಾರವನ್ನು ನೀನು ನನಗೆ ಕೊಡು ಎಂಬ ಪ್ರಾರ್ಥನೆಯು. ಹೇ ಸ್ವಾಮಿಯೇ ! ನೀನು ಬೀಸುವ ಕಲ್ಲನ್ನ ಭಂಗಾರ ಮಾಡಿ ನನಗೆ ಕೊಟ್ಟರೆ ನಾನು ನಿನ್ನ ಚರಣ ಕಮಲಗಳಿಗೆ ಅದರ ಮೇಲಿನ ಮರದ ಗೋಟವನ್ನೇ ವಂಚನೆಯಿಲ್ಲದೆ ಸಮರ್ಪಣೆ ಮಾಡುತ್ತೇನೆ ಎಂದು ಪ್ರಾರ್ಥಿಸಿದ ಹಾಗಾಯಿತು. ಆದುದರಿಂದ ಇವನಿಗೆ ಮುಕ್ತನಿಗೆ ಹೇಗೋ ಹಾಗೆ ಪುಣ್ಯ ಪಾಪ ಲೇಪವಿಲ್ಲದ ಮಹಿಮೆಯಿಂದಲೇ ಈ ಅಧಿಕಾರವು ಅತ್ಯಾಶ್ಚರ್ಯಕರವಾಗಿ ಅಪರೋಕ್ಷದಿ ಹರಿಗುರುಗಳ ಪ್ರಸಾದವನ್ನು ಹುಟ್ಟಿಸಿ ಕೊಡುವುದೇ ನಿಶ್ಚಯವು. "ಭಕ್ತಿ ಪೂರ್ವಕವಾಗಿ ಮುಕ್ತಾಮುಕ್ತ ನಿಯಾಮಕನ ಗುಣಗಳನವರತ ಕೊಂಡಾಡು ಮರಿಯದಲೆ" ಅಂದರೆ ಇದೇ ಜ್ಞಾನ ಯಜ್ಞವು. ಕರ್ಮ ಯಜ್ಞ ಯಾವುದೆಂದರೆ ಅದರ ಮುಂದಿನ ವಚನ:– "ಸಕ್ತನಾಗದೆ ಲೋಕವಾರ್ತೆ ಪ್ರಸಕ್ತಿಗಳ ನೀಡ್ಯಾಡಿ ಶೃತಿ ಸ್ಮೃತ್ಯುಕ್ತ ಕರ್ಮ ಮಾಡುತಿರು. ಹರಿಯಾಜ್ಞೆ ಎಂದರಿದು" ಲೋಪವಾದರು ಸರಿಯೆ ಕರ್ಮಜ ಪುಣ್ಯ ಪಾಪಗಳೆರಡು ನಿನ್ನನ್ನು ಲೇಪಿಸವು. ನಿಷ್ಕಾಮಿಯಾಗಿ ನೀ ಮಾಡು ಕರ್ಮಗಳ–

ಸೌಪರ್ಣೀವರವಹನನು ನಿನ್ನಪರಾಧಗಳೆಣಿಸದಲೆ ಸ್ವರ್ಗಾಪವರ್ಗದೊಳಿಟ್ಟು ಸಲಹುವ ಸತತ ಕರುಣಾಳು" ಮಾಣವಕ ತತ್ಫಲಗಳನು ಸಂಧಾನವಿಲದೆ ಕರ್ಮಗಳ ಸ್ವೇಚ್ಛಾನುಸಾರದಿ ಮಾಡಿಮಾಡಿಸುವಂತೆ ಪ್ರತಿದಿನದಿ। ಜ್ಞಾನಪೂರ್ವಕ ವಿಧಿ ನಿಷೇಧಗಳೇನು ನೋಡದೆ ಮಾಡು ಕರ್ಮ ಪ್ರಧಾನ ಪುರುಷೇಶನಲ್ಲಿ ಭಕುತಿಯ ಬೇಡುಕೊಂಡಾಡು ನದ ನದಿಗಳಿಲೆವಳಗೆ ಪರಿದವು। ಉದಧಿ ಪರಿಯಂತದಲಿ ತರುವಾಯದಲಿ ರಮಿಸುವುದಲ್ಲದೆ ತನ್ಮಯವಾಗಿ ತೋರದಲೆ ವಿಧಿ ನಿಷೇಧಗಳಾಚರಿಸುವರು ಬುಧರು ಭಗವದ್ರೂಪ ಸರ್ವತ್ರದಲಿ ಚಿಂತನೆ ಬರಲು ತ್ಯಜಿಸುವರಖಿಲ ಕರ್ಮಗಳ॥" ಎಂದರೆ, ಪಾಪ ಪರಿಹಾರಾರ್ಥವಾಗಿ ಪುಣ್ಯ ಪ್ರಾಪ್ತ್ಯರ್ಥವಾಗಿಯೂ ಅಜ್ಞಾನಿಯೋಪಾದಿಯಲ್ಲಿ ಕರ್ಮ ಮಾಡತಕ್ಕವನಲ್ಲ– ಎಂದು ಅರ್ಥ ಹೊರತು ಕರ್ಮ ಸ್ವರೂಪಗಳನ್ನು ಬಿಟ್ಟವರಿಗೆ ಪ್ರಾಣದೇವರ ದ್ರೋಹ ತಪ್ಪದು. ಎಂದು ಅರ್ಥವು.

ಭಗವದ್ಭಕ್ತಿಯೆಂದರೆ– ನಿಷ್ಕಾಮ ಕರ್ಮಾನುಷ್ಠಾನವೇ ಸರಿಯಾದುದರಿಂದ ಬುದ್ಧಿ ಪೂರ್ವಕ ಕರ್ಮ ತ್ಯಾಗ ಮಾಡುವವನು ಅದ್ವೈತಿಯೇ ಸರಿ.

*ನದಿಯ ಜಲ ನದಿಗೆರೆವ ತೆರದಂ। ದದಲಿ ಭಗವದ್ದತ್ತ ಧರ್ಮಗ*
*ಳುದಧಿಶಯನಿಗರ್ಪಿಸುತ ವ್ಯಾವರ್ತ ನೀನಾಗಿ॥*
*ವಿಧಿ ನಿಷೇಧಗಳಿಗೊಳಗಾ ।ಗದಲೆ ಮಾಡುತ ದರ್ವಿಯಂದದಿ।*
*ಪದುಮನಾಭನ ಸಕಲ ಕರ್ಮಗಳಲ್ಲಿ ನೆನೆಯುತಿರು ॥*

ಎಂದು ಬಹುಕಡೆಯಲ್ಲಿ ಸ್ಪಷ್ಟವಾಗಿದೆ ಎಂದು ಪಂಚ ಯಜ್ಞಾದಿ ಸಂಧಿಗಳೇ ಇದರ ನಿಮಿತ್ತ. ಹಾಗಾದರೆ ಜ್ಯೋತಿಷ್ಟೋಮಾದಿ ಯಜ್ಞಾಂತ ಕರ್ಮ ಮಾಡದೆ ತೀರದಾದರೆ, ಪ್ರಾರಬ್ಧ ದುಷ್ಕರ್ಮ ಬದ್ಧರಾದ ಅಜ್ಞಾನಿಗಳಾದ ಪರಮ ಅಲ್ಪ ಜೀವರುಗಳಿಂದ ಹೇಗೆ ನಿರ್ವಾಹವಾದೀತು. ? ಎಂದರೆ – ವಿವೇಕ ಜ್ಞಾನಿಯು ಹೇ ! ಪರಮದಯಾಳುವಾದ ಶ್ರೀಹರಿಯೇ ಈ ಅಧಿಕಾರವನ್ನು ನೀನು ಒಲಿದು ಯಾವಾಗ ಕೊಡುವಿಯಯ್ಯಾ? ನೀನು ಕರ್ಮಾನುಸಾರ ಸಾಧನ ಒದಗಿಸತಕ್ಕವನಾದುದರಿಂದ ನನ್ನ ಸಾಧಕ ಪ್ರತಿಬಂಧಕ ದುಷ್ಕರ್ಮ ರಾಶಿಗಳು ಎಷ್ಟು ಇವೆಯೋ ನೀನು ಎಂದಿಗೆ ಉದ್ಧಾರ ಮಾಡುವಿಯಯ್ಯಾ. ನಿನ್ನ ಸಂಕಲ್ಪ ನಾನು ಅರಿಯನಾದುದರಿಂದ ನಿನ್ನ ಚಿತ್ತಕ್ಕೆ ಬಂದ ಹಾಗೆ ಮಾಡಯ್ಯಾ– ಎಂಬ

ಜ್ಞಾನ ಮಾತ್ರ ಪಂಚಮ ಜನ್ಮಗಳಲ್ಲಿ ಬಂದಿದ್ದಾಗ್ಯೂ ಆ ಪಂಚಮನ ಭಕ್ತಿ ಪೂರ್ವಕ ನಾಮೋಚ್ಚಾರಣೆ ನರ್ತನ ಗಾನಗಳಿಗೆ ಒಲಿದು ಶ್ರೀಹರಿಯು ಅವನಿಗೆ ಗೋಮಾಂಸ ಭಕ್ಷಣೆ ಜಾತ್ಯಾಹಾರವಾದಾಗ್ಯೂ ನಿಷ್ಠೆಯ ಜ್ಞಾನ ದೃಢ ಭಕ್ತಿಗೆ ಒಲಿದು ಮುಂದೆಯೂ ಪಂಚಮ ಜನ್ಮ ಪ್ರಾಪಕ ದುಷ್ಕರ್ಮ ಬಹಳವಿದ್ದಾಗ್ಯೂ ಅವನ ಸಂಕಲ್ಪವನ್ನ ತಿಳಿದು ಇವನು ಮೊರೆಹೊಕ್ಕವನಾದ ಕಾರಣ ಶ್ರೀಹರಿಯು ಬಹು ಕಾಲ ಭೋಕ್ತವ್ಯ ದುಷ್ಕರ್ಮಗಳನ್ನು ಸ್ವಲ್ಪ ಕಾಲದಲ್ಲಿ ಪರ್ಯವಸಾನ ಮಾಡಿ ಅಲ್ಪ ಸ್ವಲ್ಪ ಮುಂದಿನ ಜನ್ಮಗಳಲ್ಲಿಯೇವೇ ನಿಷ್ಕಾಮ ಕರ್ಮ ಸಾಧನ ಸಾಧಕ ಬ್ರಹ್ಮ ಯೋನಿಯು ನನಗೆ ಎಂದು ಬಂದೀತೆಂಬ ಇಚ್ಛೆಯೂ ಹಿಂದಿನ ಪ್ರಾರ್ಥನೆಯೂ ಕೂಡ ಹಿಂದಿನ ಪೂರ್ವ ಕರ್ಮಕ್ಕೆ ತಗಲಿಕೊಂಡಿರುವುದರಿಂದ ರಾಜ ಪದವಿಗಿಂತಲೂ ಅಧಿಕವಾದ ಅತ್ಯುತ್ತಮ ಜನ್ಮ ಕರ್ಮಗಳನ್ನು ಶ್ರೀ ಹರಿಯು ಅತಿ ತೀವ್ರದಿಂದ ತಂದುವದಗಿಸುವುದೇ ಸಿದ್ಧವು. ಆದುದರಿಂದ ಪಂಚಮನ ಜನ್ಮದಲ್ಲಿಂಯಾದರೂ ಜ್ಞಾನದಲ್ಲಿ ಮಾತ್ರ ಸೊಟ್ಟು ಬರಬಾರದೆಂಬುದೇ ಮುಖ್ಯ ತಾತ್ಪರ್ಯವು. ಹಾಗಾದರೆ ಜ್ಯೋತಿಷ್ಟೋಮಾದಿ ಕರ್ಮಗಳೇ ತಾರಕವಾದ ಮೇಲೆ ಭಗವದ್ಭಕ್ತಿಯು ಏತಕ್ಕೆ ನಾಮೋಚ್ಚಾರಣೆ ಮಾಹಾತ್ಮ್ಯ ತಿಳಿಯತಕ್ಕದ್ದು ಏತಕ್ಕೆ? ಎಂದರೆ–ಸಿದ್ಧಾಂತವು:– ನಾನು ಎಂಬುದು ಹೋಗದೇಇದ್ದ ಅಜ್ಞಾನಿಗೆ ಭಗವದ್ಭಕ್ತಿಗೆ ಈ ಕರ್ಮಗಳು ಸಮವಾಗಲಾರದೆಂಬುದೇ ನಿಷ್ಠಯವು. ಈ ಅಜ್ಞಾನಿಗೆ ಆದರೂ ಅಸಂಪ್ರಜ್ಞಾತ ಸಮಾಧಿ ಮೊದಲಾಗಿ ಮಾನಸ ಬಿಂಬೋಪಾಸನಾಂತ ಜ್ಞಾನಯಜ್ಞವೂ ಜ್ಯೋತಿಷ್ಟೋಮಾಂತ ಕರ್ಮ ಯೋಗವೂ "ಶರೀರ ಚೇಷ್ಟಾಮಿ ಮಮ ಪ್ರಣಾಮಃ" ಇತ್ಯಾದಿಗಳಿಂದ ಶರೀರಚೇಷ್ಟೆಗಳು ಕೂಡ ಸಮಸಾಧನ ಕರ್ಮ ಭಾವ ಬಂದ ಪ್ರಯುಕ್ತ "ಮುಖ ಮೊದಲಾದ ಕರ್ಮಕ್ಕೆ ಶಕುತಿ ಕೊಡುವ" ಎಂದು ಬಿಂಬಕ್ರಿಯಾ ಸುಳಾದಿ. ಹಾಗಾದರೆ ಸರ್ವಸಾಧನವೂ ಸಮವಾದ ಬಳಿಕ ಮತ್ತು ಮಾಡತಕ್ಕ ವಿಧಿ ಲೋಪಬಂದರೂ ಜ್ಞಾನಿಗೆ ಅದರ ಪುಣ್ಯ ಪಾಪಲೇಪವಿಲ್ಲದ ಬಳಿಕ ಮನಸ್ಸಿಗೆ ಬಂದ ಕರ್ಮಗಳು ಮಡಬಹುದಷ್ಟೆ. ಇದಕ್ಕೆ ಗುರುಗಳ ನಿಬಂದನೆ ಯಾಕೆ ಅಂದರೆ– ಸಮಾಧಾನ. ಇದಕ್ಕೆ ಕಾಲಕಾಲಕ್ಕೆ ಕರ್ಮ ದೀಕ್ಷಾ ನಿಬಂದನೆಯೂ ಅಜ್ಞಾನಿಗಳಿಗೂ ಒಂದೇ ಪ್ರಕಾರವೇಸರಿ. ಅದು ಹ್ಯಾಗೆ ಅಂದರೆ ಅಜ್ಞಾನಿಗೆ ಈ ಕರ್ಮ ಲೋಪವಾದರೆ ಯಾವ ಪಾಪ ಬರುತ್ತದೆಯೋ ಯವ ಪಾರ್ಶ್ವದಲ್ಲಿ ಲೋಪ ಬಂದಾಗ್ಯೂ ಸಕಲ ಪ್ರಯಾಸವೂ

ವ್ಯರ್ಥವಾಗಿ ಅರಣ್ಯ ರೋಧನವಾಗ ಬಾರದೆಂಬ ವಿಧಿ ನಿಷೇಧಗಳ ಭಯದಿಂದ "ಕರ್ಮಾದೌ ಕರ್ಮ ಮಧ್ಯೇಚ ತದುಪರಿ ಚ ಹರಿಂ ಪ್ರೇರಕಂ ಸಂಸ್ಮರಂ ತಸ್ತಸ್ಮಿನ್ಸಾಸ್ತ್ಯನ್ಯ ಪರ್ಯಂತಃ।" ಎಂತ ರಾಜರ ಉಕ್ತಿಯು. ಹೀಗೆ ಪರಮಾತ್ಮನ ಭಕ್ತಿ ಪೂರ್ವಕ ನಾಮೋಚ್ಚಾರಣೆಯಿಂದ ಆ ಕರ್ಮವನ್ನು ಸಫಲ ಮಾಡಿಕೊಳ್ಳುವವನಿಗೆ ಅಜ್ಞಾನಿಯೂ ಹೌದು ಜ್ಞಾನಿಯೂ ಹೌದು. ಜ್ಞಾನಿ ಚಿಂತನೆಯಲ್ಲಿ ಭೇದವೇನೆಂದರೆ, ನೀನೇ ಕರ್ಮ ನೀನೇಕರ್ಮಫಲ ನೀನೇ ಕರ್ಮ ಕರ್ತಾ ನೀನೇ ಕರ್ಮಜ್ಞ ನೀನೇ ಕರ್ಮಫಲದಾತಾ ನೀನೇ ಕರ್ಮ ಪ್ರೇರಕ ನೀನೇ ವಿವೇಕ ಜ್ಞಾನರೂಪ. ಅದರ ಅವಿವೇಕತಾ ಜ್ಞಾನಾನಂತರ್ಗತ ಕೃದ್ಧೋಲ್ಕಾದಿರೂಪ, ನಿನ್ನ ಸ್ವರೂಪ ಕರ್ಮಫಲರೂಪವೆಂಬ ಅಪರೋಕ್ಷ ಸುಖಕ್ಕೆ ನೀನೇ ಭೋಗಿ. ನೀನೇ ವೇದೋಕ್ತ ದೇವತೆಗಳು. ನೀನೇ ಸ್ವಾಹಾಕಾರ ನೀನೇ ಸ್ವಧಾಕಾರ, ನೀನೇ ವೇದರೂಪ. ವರ್ಣರೂಪ ಸ್ವರ ಸಂಧ್ಯಾದಿರೂಪ, ನೀನೇ ಯಜ್ಞವೇದಿಕಾ, ನನ್ನ ಭಕ್ಯಂತರ್ಗತನಾಗಿ ನಿನ್ನ ಪಾದದಲ್ಲಿ ನೀನೇ ಕರ್ಮ ಸಮರ್ಪಣೆ ಮಾಡಿಕೊಡುವ. ಹೀಗೆ ಜಗತ್ತನ್ನೇ ಮರೆತು ಕರ್ಮ ಶ್ರದ್ಧಾ ದೀಕ್ಷೆಯುಳ್ಳವನೇ ಜ್ಞಾನಿಯು. ಇದೇ ನಿರ್ಗುಣ ಭಕ್ತನ ಕರ್ಮಾನುಷ್ಠಾನವು. ಇಂತಹ ಗುರುಗಳ ನಿಬಂಧನೆಯೇ ಸ್ವರೂಪ ಸುಖ ವರ್ಧಕವು. ಇಂತಹ ಚಿಂತನೆಯೇ ಸಂಧ್ಯಾವಂದನಾದಿ ಬಿಂಬೋಪಾಸನಾಂತವಾಗಿ ಅಖಂಡ ನಿಶ್ಚಿತ ಪರೋಕ್ಷದಿಂದ ಬಹು ಜನ್ಮ ವಿಳಂಬದಿಂದ ಯೋಗ್ಯಾಪರೋಕ್ಷವನ್ನು ಕೊಡುತ್ತದೆ. ಈ ನಿರ್ಗುಣೋಪಾಸಕನು ಕಾಲನಾಮಕನ ಚಿಂತನೆಯಿಂದ ಕಾಲವನ್ನು ಮರಿಯತಕ್ಕನಾದುದರಿಂದ ಇವನಿಗೆ ಬ್ರಹ್ಮ ಕಲ್ಪಗಳೆಲ್ಲವು ಒಂದು ನಿಮಿಷ ಪ್ರಾಯವೇಸರಿ.

*"ಬ್ರಹ್ಮಾರ್ಪಣಂ ಬ್ರಹ್ಮ ಹವಿಃ ಬ್ರಹ್ಮಗ್ನೌ ಬ್ರಹ್ಮಣಾಹುತಂ ।*
*ಬ್ರಹ್ಮೈವ ತೇನ ಗಂತವ್ಯಂ ಬ್ರಹ್ಮ ಕರ್ಮ ಸಮಾಧಿನಾ"*

ಎಂದು ***ಗೀತಾ*** ವಚನವು.

ಹಾಗಾದರೆ ಅಜ್ಞಾನಿಯಂತೆ ಜ್ಞಾನಿಯೂ ಕರ್ಮದಲ್ಲಿ ಆಯಾಸ ಪಡಬೇಕಾದರೆ ಕರ್ಮ ಯೋಗಕ್ಕಿಂತಲೂ ಜ್ಞಾನ ಯೋಗವೆಂಬ ಹರಿಕಥಾ ಶ್ರವಣ ದೊಡ್ಡದು ಎಂತಲೂ ಭಕ್ತಿ ಯೋಗವು ಅದಕ್ಕಿಂತಲೂ ಮಿಗಿಲಾದುದು ಎಂಬ ವ್ಯವಹಾರವೇ ಹೋಗಲಿ ಎಂದರೆ – ಅತಏವ ಆಕ್ಷೇಪ ಪರಿಹಾರಾರ್ಥವಾಗಿ ಭಂಗಾರದ

ಬೀಸುವ ಕಲ್ಲಿನ ದೃಷ್ಟಾಂತದಿಂದ ನಿರ್ಗುಣ ಭಕ್ತನ ಕರ್ಮಾಧಿಕಾರವನ್ನು ಪೂರ್ವದಲ್ಲಿಯೇ ನಿರೂಪಿಸಿರುವೆನು. ಇವನಿಗೆ ಸಕಲ ಕರ್ಮವೂ ಭಕಿ ಯೋಗರೂಪವಾಗಿರುತ್ತದೆ, ಎಂದು ಅರ್ಥವು. ಕರ್ಮದಲ್ಲಿ ಆಯಾಸದ ಅನುಭವವೇನೆಂದರೆ, ವೇದಗಳಲ್ಲಿ ಕನ್ನಡ ಮಾತಿನಂತೆ ವ್ಯಾಕರಣಾದಿ ಬಲದಿಂದ ಅರ್ಥಗಳನ್ನು ತಿಳಿಯದೆ ಮೀಮಾಂಸಾದಿಗಳನ್ನು ಅರಿಯದೆ ಯಾಗದ ಅಭಿರುಚಿ ತೋರದೆ, ನಾಮಗಳಿಗೆ ಅರ್ಥವಾಗದೆ– ಸಾಮಗಾನದಿಂದ ಶ್ರೀ ಹರಿಯನ್ನು ಸ್ತುತಿಸುವ ಸುಖವರಿಯದೆ ಇವುಗಳ ಅಜ್ಞಾನ ಬಲದಿಂದಲೇ ಅಜ್ಞಾನಿಯಾಗಿ ಅವನ ಭಾಗಕ್ಕೆ ಆಯಾಸವಾಗಿ, ಜಾತ್ಯಂತರ ಭಾಷೆ ತಿಳಿಯದೆ ಹಾಗೆ ತೋರುವುದೇ ನಿಶ್ಚಯವು. ಈ ಅಜ್ಞಾನಿಗೆ ವಿಶಿಷ್ಟ ಜ್ಞಾನ ಕರ್ಮ ಅನುಷ್ಠಾನ ವದಗಬೇಕಾದರೆ ಒಂದೊಂದು ಜನ್ಮದಲಿ ಒಂದೊಂದು ಶಾಸ್ತ್ರಾಭ್ಯಾಸ ಕ್ರಮದಿಂದ ಅಂತಹ ಒಂದೊಂದು ವಿಷಯಕ ಅಜ್ಞಾನವು ಕ್ರಮದಿಂದ ಪರಿಹಾರವಾಗಿ ಶ್ರೀಹರಿಯು ಬಹು ಜನ್ಮಗಳಮೇಲೆ ತನ್ನ ಅಪರೋಕ್ಷವನ್ನು ಒದಗಿಸುತ್ತಾನೆ. "ಬಹೂನಾಂ ಜನ್ಮನಾಮಂತೆ ಜ್ಞಾನವಾನ್ಮಾಂ ಪ್ರಪದ್ಯಂತೆ" ಎಂದು ಗೀತೆಯ ವಚನವು, ಈಗಿನ ಸಂಸ್ಕಾರವೇ ಮುಂದಕ್ಕೆ ಹೇಗೆ ನಿಲ್ಲುತ್ತದೆ ಎಂದರೆ– ಈ ವೃತ್ತಿ ಜ್ಞಾನ ಪ್ರವಾಹರೂಪವಾದಾಗ್ಯೂ "ಸುದೃಢೋರ್ನಿರ್ಣಯೋ ಯತ್ರ ಜ್ಞೇಯಂ ತತ್ಸಾಕ್ಷಿ ದರ್ಶನಂ" ಎಂದು ಮಂಥನ ಮಾಡಿ ಅರ್ಥವನ್ನು ಪರಮ ದೃಢ ಮಾಡಿಕೊಂಡರೆ– ಅದು ಸ್ವರೂಪ ಜ್ಞಾನಕ್ಕೆ ತಗಲಿ ಕೊಳ್ಳುತ್ತದೆ. ಆದುದರಿಂದ ಇವನು ಮುಕ್ತನಾಗುವತನಕ ಈ ನಶ್ವರ ಜಡ ಜ್ಞಾನವೇ ಮೋಕ್ಷ ಕೊಡುವುದಕ್ಕೆ ಸ್ವರೂಪ ಜ್ಞಾನಕ್ಕೆ ಸಹಾಯಕವಾಗಿ ಕೂಡಿರುತ್ತದೆ" "ಜನುಮ ಜನ್ಮಾಂತರ ಸಂಸ್ಕಾರ। ಸಂಸ್ಕಾರವೇನ್ನು." ಎಂದು ವಿಜಯದಾಸರ ಉಕ್ತಿಯು. "ಮುಂದಿನ ಬಲು ಜನ್ಮಕ್ಕೆ ಸಾಧನವೆನ್ನು" ಎಂದು ಧ್ಯಾನ ಪ್ರಕರಣ ಸುಳಾದಿಯು. ಪ್ರಮಾಣ :–

*ಪ್ರಾಕೃತಾಂತಃಕರಣ ಜಲ ಜ್ಞಾನಮಸ್ತ್ರಂ ಪ್ರಕೃತಿಭಂದಂ।*
*ತದೇವ ತೇನ ಸಂಭೇದ್ಯಂ ಚಿತ್ತಂ ಪ್ರಕೃತಿ ಸಂಭವಂ।*
*ಜ್ಞಾನಂ ಪ್ರಕೃತಿಜಂಚಾಪಿ ಮೂಲ ನಾಶೇ ವಿನಶ್ಯತಿ।*
*ತತಃ ಪರಂ ಸ್ವರೂಪೇಣ ಜ್ಞಾನೇನ್ನೈವ ಜನಾರ್ದನಂ॥*

ಎಂದು ಏಕಾದಶ ತಾತ್ಪರ್ಯ ಸಿದ್ಧ.

ಜ್ಞಾನಿಗಳು ಕರ್ಮ ಮಾಡುವ ವಿಷಯದಲ್ಲಿ ಅನುಭವದ ಸೊಟ್ಟನ್ನು ತಿದ್ದಬೇಕಾದ ಪ್ರಯುಕ್ತ ಮುಖ್ಯ ಭಾವವೇನೆಂದರೆ ರೋಗಾದ್ರುಪದ್ರವಗಳಂತೆ ತೀರದ ದುಷ್ಕರ್ಮದ ದುಃಖಾನುಭವಕ್ಕೆ ಸಮರನ್ನಾಗಿ ಸಂಧ್ಯಾವಂದನಾದಿ ನಿತ್ಯ ನೈಮಿತ್ತಿಕ ದೈಹಿಕ ಷೋಡಶ ಕರ್ಮಾದಿಗಳಲ್ಲಿಯೂ ಹಾಗೆ ಭೋಜನಾದಿಗಳಲ್ಲಿಯೂ, ಗುರುಗಳು ತೋರಿಸಿದ ಅನುಸಂಧಾನ ವಿಶೇಷಗಳಿಂದಲೂ ಮಾಡಬೇಕು. ಹಾಗಲ್ಲದೆ ಕಾಟಗಳನ್ನು ಕಳಿಯೋಣವೆಂಬ ಆಸಡ್ಡೆಯೇ ಇವರಿಗೆ ಗುರು ದ್ರೋಹ ಕೊಡುತ್ತದೆ. ಆದುದರಿಂದ ಹೇಗೆ ತಿಳಿಯಬೇಕೆಂದರೆ, ಇಂತಹ ಆಸಡ್ಡೆಯನ್ನು ಬಿಟ್ಟು ಪರಮ ದುರ್ಲಭವಾದ ನಿಷ್ಕಾಮ ಕರ್ಮವನ್ನು ನಾನು ಯಾವಾಗ ಮಾಡುವೆನೆಂದು, ರಾಜ ಪದವಿಯು ಮನುಷ್ಯನಿಗೆ ಬಂದರೆ, ಆ ರಾಜನು ಪರಮ ಕುತೂಹಲದಿಂದ ಕ್ಷಣ ಬಿಡದೆ ಅಹೋ ರಾತ್ರಿಯೂ ದ್ರವ್ಯ ಸಂಪಾದನೆ ಪರಮ ಶಾಶ್ವತ ಧರ್ಮ ಸಂಪಾದನೆ ಮತ್ತು ಕೀರ್ತಿ ಸಂಪಾದನೆ ಗೋಸ್ಕರ ತನ್ನ ಬುದ್ಧಿಗೆ ಮಂತ್ರಿಗಳ ಬುದ್ಧಿ ಸಹಾಯದಿಂದಲೂ ರಕ್ಷಣ ಶಿಕ್ಷಣಾದಿ ವ್ಯಾಸಂಗದಲ್ಲಿ ತನ್ನ ಶರೀರಾಯಾಸವೇ ಹೇಗೆ ಸುಖರೂಪವೋ ಹಾಗೆ ಈ ಜ್ಞಾನಿಯು ಏಕಾದಶ್ಯಾದ್ಯುಪವಾಸಾದಿ ವೈಷ್ಣವ ಧರ್ಮಗಳನ್ನೂ ಸ್ವಾಮಿಯು ತನಗೆ ವದಗಿಸದೆ ತನ್ನ ದರ್ಶನವನ್ನು ಹೇಗೆ ಕೊಟ್ಟಾನು ಎಂದು ಪರಮ ಶ್ರದ್ಧೆಯಿಂದ ಶ್ರೀಹರಿಯು ನನ್ನ ಯೋಗ್ಯತಾನುಸಾರ ವಿಹಿತ ಕರ್ಮಾನುಷ್ಠಾನವನ್ನು ಗುರುಭಕ್ತಿಪೂರ್ವಕವಾಗಿ ಬ್ರಹ್ಮ ಕಲ್ಪಾಂತಕ್ಕೂ ಭೂಮಿಯಲ್ಲಿ ಸಾಧನ ಜನ್ಮಗಳನ್ನು ಕೊಟ್ಟು ಮಾಡಿಸಲಿ ಎಂದು ಪ್ರಾರ್ಥಿಸಬೇಕು. ಪ್ರಮಾಣ:-

*"ಧ್ಯಾನಂ ಚ ಗುರು ಶಿಶ್ರೂಷಾ ನಿತ್ಯ ನೈಮಿತ್ತಿಕಾಃ ಕ್ರಿಯಾಃ।*
*ತೀರ್ಥದಾನ ವ್ರತಾದ್ಯಶ್ಚ ಸ್ವಾಧ್ಯಾಯೋ ಹರಿಕೀರ್ತನಂ*
*ದ್ವಾದಶ್ಯಾದಿ ವ್ರತಂಚೈವ ತುಲಸ್ಯಾದ್ಯೈರಥಾರ್ಚನಂ।*
*ಸರ್ವಂ ಭಕ್ತ್ಯರ್ಥಮುದ್ದಿಷ್ಟಂ ನಿಶ್ಫಲಂತು ತಯಾವಿನಾ।"*

ಎಂದು ಸತ್ತತ್ತ್ವರತ್ನಮಾಲಾ.

ಅಂದರೆ ಇವನ ಅನಾದಿ ನಿತ್ಯ ಸ್ವರೂಪ ಭಕ್ತಿಯು ಈ ವಿಶಿಷ್ಟ ನಿಷ್ಕಾಮ ಕರ್ಮಗಳನ್ನು ಮಾಡದೆ ಅಭಿವೃದ್ಧಿಯಾಗುವುದಿಲ್ಲ. ಎಂದರ್ಥವು. ಇವನಿಗೆ

ಅಪರೋಕ್ಷವಾದಾಗ್ಯೂ ವಿಶಿಷ್ಟ ಭಕ್ತ್ಯುದ್ರೇಕಕ್ಕೆ ಅತ್ಯರ್ಥ ಪ್ರಸಾದವೂ ಚತುರ್ಮುಖ ಬ್ರಹ್ಮನ ಉಪದೇಶವೂ ವದಗಬೇಕು.

*"ತಮೇವಂ ವಿದ್ವಾನಮೃತ ಇಹಭವತಿ।*
*ನಾನ್ಯಃಪಂಥಾ ಅಯನಾಯ ವಿದ್ಯತೇ॥"*

ಈ ಶೃತಿಯು ಅನಂತರ ಬಿಂಬಾರೋಕ್ಷವಿನಾ ಮೋಕ್ಷವಿಲ್ಲವೆಂದು ಹೇಳುತ್ತದೆ.

*"ಹರಿ ನಿನ್ನ ಘನತ್ರಯ ಪ್ರಸಾದವಾಗದೆ ಮೋಕ್ಷ ಎಂದಿಗೂ ಉಂಟೇ।*
*ಫಲದ ಬೋರಿಯದೆ ನುಡಿಯಲದೆವಾಹದು ಭೇದ ಉಚ್ಚರಿಪುದು ವೇದ॥"*
ಎಂದು ವಿಜಯರಾಯರ ವೈರಾಗ್ಯ ಪಾರಿಜಾತದ ನುಡಿಯು.

*"ಯಸ್ಯ ಪ್ರಸಾದಾತ್ಪರಮಾರ್ಥರೂಪಾದಸ್ಮಾತ್ಸಂಸಾರಾನ್ಮುಚ್ಯತೆ ನಾಪರೇಣ"*

ಈ ಶೃತಿಯು ಅನಂತ ಈಶನ ಅತ್ಯರ್ಥ ಪ್ರಸಾದ ಹೊರತು ಮೋಕ್ಷವಿಲ್ಲವೆಂದು ಹೇಳುತ್ತದೆ.

*"ಅಜ್ಞಸ್ಯ ಕರ್ಮಲಿಪ್ಯೇತ ಕೃಷ್ಣೋಪಾಸ್ತಿಮಕುರ್ವತಃ।*
*ಜ್ಞಾನಿನೋಪಿ ಯತೋ ಹ್ರಾಸಃ ಆನಂದಸ್ಯ ಭವೇದ್ಧ್ರುವಂ।*
*ಅತೋ ಅಲೇಪೇಪಿ ಲೇಪಃ ಸ್ಯಾದತಃ ಕಾರ್ಯೈವ ಸಾ ಸದಾ ॥*
ಎಂದು ಸೂತ್ರ ಭಾಷ್ಯವು.

ಅಂದರೆ ಅನಪರೋಕ್ಷಿಯಾದ ಅಜ್ಞಾನಿಯು ಆವ ಕರ್ಮವ ಮಾಡದೇ ಇದ್ದರೆ ಅಪರೋಕ್ಷವಿಲ್ಲ. ಅವನಿಗೆ ಕರ್ಮ ಲೇಪವು ಬಿಟ್ಟಿದ್ದಲ್ಲ. ಅಪರೋಕ್ಷೋತ್ತರ ಕರ್ಮ ಬಿಟ್ಟರೆ ಮುಕ್ತಿಯಲ್ಲಿ ಕ್ಲಪ್ತಾನಂದಕ್ಕೆ ಹ್ರಾಸ ಉಂಟು. ಎಂದು ಭಾಷ್ಯಾರ್ಥವು. "ದುಷ್ಕರ್ಮಕೊಳಗಾಗದಿರೆಲೋ" ಎಂದು ವಿಜಯ ರಾಯರ ಉಕ್ತಿಯು. ಇದನ್ನು ಹಿಂದೆ ವಿಸ್ತಾರವಾಗಿ ತೋರಿಸಿದ್ದೇನೆ. ಮತ್ತೊಂದುಕಡೇ ಭಾಷ್ಯ ವಚನ

*ಅತೀತಾನಾಗತ ಜ್ಞಾನೀ ತ್ರೈಲೋಕ್ಯೋದ್ಧರಣಕ್ಷಮಃ ।*
*ಏತಾವಾನಪಿ ನಾಚಾರಂ ಶ್ರೌತಮ್ ಸ್ಮಾರ್ತಂ ಪರಿತ್ಯಜೇತ್ ॥*

ಎಂಬ ಈ ಭಾಷ್ಯ ವಚನದಲ್ಲಿಯೂ ಅಪರೋಕ್ಷೋತ್ತರ ಕರ್ಮಗಳನ್ನು ಬಿಡಕೂಡದು ಎಂದು ಹೇಳಿದಾರೆ. ಅಪರೋಕ್ಷೋತ್ತರ ಕರ್ಮ ಬಿಟ್ಟರೆ ಮುಕ್ತಿಯಲ್ಲಿ ಕ್ಲಿಪ್ತಾನಂದಕ್ಕೆ ಹ್ರಾಸ ಉಂಟು. ಸುಳಾದಿ:-

*ಅಪರೋಕ್ಷಾನಂತರದಲ್ಲಿ ಮಾಡಿದ ವಿವಿಧ ಕರ್ಮ*
*ಸ್ವಪ್ನ ಜಾಗರದಾವಸ್ಥೆವಿಡಿದು ನಿತ್ಯ।*
*ಅಪರಿಮಿತವಾಗಿ ಈದಾವಗತಿ ಕೇಳೋ*
*ಅಪವರ್ಗದಲ್ಲಿ ಆನಂದಾಭಿವೃದ್ಧಿ ಕಾರಣ*
*ಉಪಚರಿಸಿದ ಪಾಪ ಆನಂದಕ್ಕೆ ಹ್ರಾಸ*
*ಸುಪರ್ವಾಣರಿಗೆ ಪ್ರಾಪ್ತವ್ಯಕ್ಕೆ।*
*ಕ್ಲಪ್ತಕ್ಕೆ ಮನುಷ್ಯಾದಿಗಳಿಗೆ ಸಿದ್ಧವೆನ್ನಿ.*
*ತಪನ ಚಂದ್ರಮ ಸಾಕ್ಷಿ ಪೇಳಿದಿದಕೆಲ್ಲ॥*

ಎಂದು ಅನಾದಿ ಕರ್ಮ ಸುಳಾದಿ.

ಅಂದರೆ ದೇವತೆಗಳಿಗೆ ಅಪರೋಕ್ಷೋತ್ತರ ಶ್ರೀ ಹರಿಯು ಪಾಪ ಘಟನೆ ಮಾಡಿಸುವುದಕ್ಕೆ ದೇವತೆಗಳಿಗೆ ಅಧಿಕ ಆನಂದ ಹ್ರಾಸವೂ ಮನುಷ್ಯರಿಗೆ ಕ್ಲಿಪ್ತ ಆನಂದಹ್ರಾಸವು ಉಂಟು ಎಂದು ಸೂರ್ಯ ಚಂದ್ರ ಸಾಕ್ಷಿ ಹೇಳೀರುತ್ತಾರಾದ್ದರಿಂದ ಸೂರ್ಯನಿಗೆ ಸುಗ್ರೀವನಾಗಿ ಭ್ರಾತೃ ಪತ್ನಿಗಮನವೂ ಚಂದ್ರನಿಗೆ ಗುರುದಾರಾಗಮನ್ನು ಮುಕ್ತಿಯಲ್ಲಿ ಪ್ರಾಪ್ಯವಾದ ಅಧಿಕಾನಂದಕೆ ಹ್ರಾಸ ಕೊಟ್ಟಿತು. ಅಲ್ಲದೆ ಕ್ಲಪ್ತಹಾನಿಯಿಲ್ಲವೆಂಬುದೇ ಸಿದ್ಧವು. "ಚಂದ್ರ ಸುಗ್ರೀವಯೋಶ್ಚೈವ" ಎಂಬ ಪ್ರಮಾಣಕ್ಕೆ ಪ್ರಾಪ್ತ ಹಾನಿ ಎಂಬುದಕ್ಕೆ ಪ್ರಾಪ್ತವ್ಯ ಹಾನಿ ಎಂದು ಅರ್ಥ ಮಾಡಿದ್ದಾರೆ. ಈ ಕರ್ಮಾಧಿಕಾರವು ಜ್ಞಾನಿಗಳಿಗೆ ಸುಲಭ ಸಾಧ್ಯವೇ ಹೊರತು, ಬ್ರಹ್ಮ ಮೀಮಂಸಾ ಕರ್ಮ ಮೀಮಾಂಸ ಶಾಸ್ತ್ರಾಭ್ಯಾಸವಿಲ್ಲದ ಕೇವಲ ಅಜ್ಞಾನಿಗಳಿಗೆ ಪರಮ ಅಸಾಧ್ಯವೇಸರಿ. ಆದುದರಿಂದ ಅಗ್ನಿಹೋತ್ರಾದಿಗಳನ್ನು ಅಜ್ಞಾನಿಯನ್ನು ಮಾಡು ಎಂದರೆ ಸಣ್ಣ ಮನುಷ್ಯನನ್ನು ದೊಡ್ಡ ಕುಂಬಳ ಕಾಯಿ ಹೋಳು ಮಾಡದೆ ಹಾಗೆಯೇ ನುಂಗು ಎಂದರೆ ಹ್ಯಾಗೆ ನುಂಗ್ಯಾನು. ಅಥವಾ ಯತ್ಕಿಂಚಿತ್ ವಿಚಾರಪರನಾದಾಗ್ಯೂ ನಿರ್ಗುಣ ಭಕ್ತನಾದರೆ- ಮೋಕ್ಷ ಸಾಧನ ಕರ್ಮ ಕರಣ ಯೋಗ್ಯತೆಯೇ ಇಲ್ಲವಾದುದರಿಂದ ಹತ್ತು ಪ್ರಕಾರ ಯೋಗ ತಿಳಿದವನು ಒಂದು ಪ್ರಯೋಗವನ್ನು

ಪರಮ ಕುತೂಹಲದಿಂದ ಮಾಡುತ್ತಾನೆಯೇ ಹೊರತು ಸಂಧ್ಯಾವಂದನೆಯೇ ಬರದ ನೂತನ ಬ್ರಹ್ಮಚಾರಿಗೆ ಅಜ್ಞಾನ ಬಲವಾದುದರಿಂದ ಅವನಿಗೆ ಕಾಲತ್ರಯ ವಿಧಿ ಪೂರ್ವಕ ಸಂಧ್ಯಾವಂದನೆಯು, ಕಾಲದ್ವಯ ಅಗ್ನಿ ಕಾರ್ಯವೂ ಸಹಸ್ರ ಗಾಯಿತ್ರಿಯೂ ಬ್ರಾಹ್ಮಣ್ಯ ಉಳಿಸತಕ್ಕ ಬ್ರಹ್ಮ ಯಜ್ಞವೂ ಅಷ್ಟಾಕ್ಷರ ಜಪವೂ ಹೇಗೆ ತೋರುತ್ತದೆ ಎಂದರೆ ಅಡಕೆ ಕತ್ತರಿ ಒಳಗೆ ತಗುಲಿದ ಅಡಿಕೆಯಂತೆ, ನಾನು ಈ ಮ್ಯಚ್ಬಾಚಾರಿಗಳಿಂದ ಈ ಚಿತ್ರ ಹಿಂಸೆ ಪಡಲಾರೆ ಎಂದು ಹ್ಯಾಗೋ ಹಾಗೆ ಅಜ್ಞಾನಿಗಳಿಗೆ ತೋರುವುದಕೆ ನಿಶ್ಚಯವು. ಅಜ್ಞಾನಿ ಮಾಡಿದ ಕರ್ಮ ವ್ಯರ್ಥವೆಂದು ಹೇಳತಕ್ಕದ್ದೇನು ? ಸುಳಾದಿ:-

*"ಜ್ಞಾನಶೂನ್ಯರಾಗಿ ಮಾಡಿದರೆ ಇದೇ ಫಲವೋ"*

ಅಂದರೆ ವ್ಯರ್ಥವೇ ಸರಿ ಎಂದು ಅನಾದಿ ಕರ್ಮ ಸುಳಾದಿ. ಹಾಗಾದರೆ ಅಜ್ಞಾನಿಗೆ ಗತಿ ಎಂದರೆ ಅದಕ್ಕೆ ಸಂಗತಿ. ಅನಾದಿ ಕರ್ಮ ಸುಳಾದಿಯಿಂದ ನಾವು ಈಗ ಅನುಭವಿಸತಕ್ಕ ಸಂಚಿತ ಕರ್ಮವು ಶೇಷದ ಜನ್ಮಗಳಲ್ಲಿ ನಮಗೆ ಪೂರ್ವ ಜನ್ಮಗಳ ಪ್ರಾರಬ್ಧ ನಿಷ್ಕಾಮ ಭಗವತ್ಪ್ರೀತಿಕರ ದಾನ ಧರ್ಮಗಳು ಮೂಢ ಭಕ್ತಿಯಿಂದಲಾದರೂ ಮಾಡಿದ್ದು ಮತ್ತು ಯಾವ್ಯಾವ ಶಾಸ್ತ್ರಾಭ್ಯಾಸಗಳ ಬಲವಿರುತ್ತದೋ ಆ ಹಿಂದಿನ ಪ್ರಾರಬ್ಧವೇ ಈಗಿನ ಕರ್ಮಕ್ಕೆ ಹಿಂದಿನ ಜನ್ಮ ಕರ್ಮ ಸಾಧನ ಫಲವು, ಅದಕ್ಕೆ ಅದರ ಹಿಂದಿನ ಜನ್ಮ ಕರ್ಮ ಸಾಧನವು. ಹೀಗೆ ಹಿಂದಿನ ಜನ್ಮದ ಸ್ವಲ್ಪ ಸ್ವಲ್ಪ ಸಾಧನ ಪ್ರವಾಹಕ್ಕೆ ನಮಗೆ ಇದರ ಮುಂದಿನ ಪೂರ್ಣ ಪ್ರವಾಹ ನಿಷ್ಕಾಮ ಭಗವತ್ಪ್ರೀತಿಕರ ಪೂಜಾ ಪ್ರಾರಬ್ಧ ಕರ್ಮಕ್ಕೆ ಸಂಪಾದಕ ಉತ್ತಮ ಜನ್ಮಗಳಿಂದ ಬಿಂಬಾಪರೋಕ್ಷವೇ ಸಾಧನವು. ಪ್ರಾರಬ್ಧ ಕರ್ಮ ಫಲ ಎಂದರ್ಥವು. –

*"ಸತ್ಕರ್ಮ ಕೃತ್ವಾ ನಿಷ್ಕಾಮ್ಯಾ ಲಭತೇ ಗುರು ಸಂತತಿಂ।"*

ಎಂತ ಪ್ರಕಾಶ ಸಂಹಿತಾ.

ಇಂತಹ ಫಲವೆಂದರೆ ಇಷ್ಟು ಫಲವೆಂದು ಅರ್ಥವು. ಅನಿಷ್ಟ ಫಲ ಯಾವುದೆಂದರೆ ದೇಹ ಸೌಖ್ಯ ಮನಸ್ಸೌಖ್ಯ ಇಂದ್ರಿಯ ಸೌಖ್ಯ ಜ್ಞಾನಿಗಳಿಗೆ ಇಂತಹ ಅನಿಷ್ಟ ಫಲದಲ್ಲಿ ಅಸಹ್ಯ ತೋರುತ್ತದೆ ಆದಾಗ್ಯೂ ಬ್ರಹ್ಮಕಲ್ಪ ಪರ್ಯಂತಕ್ಕೂ ಇಂತಹ

ಸೌಖ್ಯಗಳು ವದಗದೇ ಇದ್ದರೆ ಅಂತಹ ಜ್ಞಾನಿಗಳಿಗೆ ಸರ್ವಥಾ ಸರ್ವ ಸಾಧನೆ ವದಗಲಾರದು. ಏಕೆಂದರೆ ಧ್ಯಾನ ಸಾಧನವಾಗಲೀ ಬಾಹ್ಯ ಪೂಜೆಯಾಗಲೀ ಅತಿಥಿ ಸಂತರ್ಪಣೆಯಾಗಲೀ ದಾನ ಧರ್ಮವಾಗಲೀ ಅಗ್ನಿಹೋತ್ರಾದಿಗಳಾಗಲೀ ಇಂತಹ ಸರ್ವ ಸಾಧನಕ್ಕೆ ಯೋಗ್ಯತೆ ಇಲ್ಲದೆ ಮೂಢ ಜ್ಞಾನಿಯಂತೆ ಶುದ್ಧ ಭಕ್ತಿಯಿಂದ ಗರಿಕೆಯ ಬೇರನ್ನು ಹಿಡಿದುಕ್ಕೊಂಡ ಹಾಗೆ ಶ್ರೀ ಹರಿಯೇ ನೀನೇ ಗತಿ ಎಂದು ನಾಮೋಚ್ಚಾರಣೆ ಮಾತ್ರದಿಂದ ನಂಬ ಬೇಕು. ಹೊರತು, ಜ್ಞಾನಿಗಳಿಂದ ಸ್ತೋತ್ತಮರಿಗೆ ಬಹು ದ್ರವ್ಯಾದಿ ದಾನಗಳಿಂದ ಬಹು ವಿಧವಾಗಿ ಭಗವತ್ಪ್ರೀತಿ ಪಡಿಸೋಣವೇ ನಿಷ್ಕಾಮ ಪರಮೈಕಾಂತ ಧರ್ಮವಾದ ಪ್ರಯುಕ್ತ "ತದರ್ಥಂ ಕಾಂಚನ ವಿದ್ಯಾಮಾಹ ।" ಎಂತ ಕಾಂಚನ ಹೊರತು ಕರ್ಮ ಸಾಧನವಿಲ್ಲ. ( ಸ್ವಶಂಕಾ = ಬಾಲ ಸನ್ಯಾಸಿಗಳ ಗತಿ ಹೇಗೆ ). ಸಮಾಧಿ ಸಾಧನಕ್ಕೆ ಬೇಡದೆ ಇದ್ದಾಗ್ಯೂ ಗ್ರುಹಸ್ಥಾಶ್ರಮಕ್ಕೆ ಬೇಕು ಎಂತ ಅರ್ಥವು. ಅನಿಷ್ಟ ಕರ್ಮ ಫಲರೂಪ ದ್ರವ್ಯಗಳೆಲ್ಲವೂ ಇಷ್ಟ ಪೂಜೆಗೆ ಉಪಕರಣ ದ್ರವ್ಯಗಳಾದ್ದರಿಂದ ಶ್ರೀ ಹರಿ ಇಚ್ಛೆಯಿಂದ ದತ್ತವಾದ ಸುವರ್ಣಾದಿ ದ್ರವ್ಯಗಳಲ್ಲಿ ಶ್ರೀ ರಮಾದೇವಿಯರನ್ನು ಚಿಂತಿಸಿ ಹರಿ ಪ್ರೀತಿಪಡಿಸಬೇಕು. ಆತಏವ ಅನಿಷ್ಟ ಸಕಲ ಸೌಖ್ಯ ಹೊರತು ಇಷ್ಟ ಸಾಧನ ಪೂರ್ಣವಾಗದು. ಎಂದು ಅಭಿಪ್ರಾಯವು. ಇದಕ್ಕೆ ಜೀವರ ಊಹಾಪೋಹ –

*ಮನಮನೋಭಾವನ ಪಿತನ ನೆನೆದನುಸಾರರಿಯಾಗಿದೆ. ।*
*ತನು ಮನೋನುಕೂಲವಾಗಿ ಅನುಸರಿಸುತಲಿರೆ ॥*

ಅಂದರೆ ಅವಧೂತಾಶ್ರಮಕ್ಕೆ ಇಷ್ಟು ಸಾಕು ಎಂದರ್ಥವು. ಗೃಹಸ್ಥನಿಗೆ ಹ್ಯಾಗೆ ಎಂದರೆ ಮುಂದಿನ ಮಾತು

*"ತನು ಸಂಬಂಧಿಗಲನುಕೂಲದಿ ಉಪಚರಿಸುತಲಿರುತಿರೆ*
*ಅನುಪಮ ದೇಶ ಕಾಲದಲ್ಲಿ ವಿಹಿತಗಳನ್ನು ಮಾಡುತಿರೆ*
*ಅನಿಮಿಷರೊಡೆಯ ವಾಸುದೇವ ವಿಠಲರೇಯ*
*ದನುಜ ಮರ್ದನಾವನ ಪಾಣಿ ವನಜಕ್ಕೆ ಬಲು ಸಿಲಿಕಿದ"*

ಎಂದು ಜ್ಞಾನಿಗಳಿಗೆ ಬೇಡದೇ ಇದ್ದ ಪದಾರ್ಥಗಳೇ ಇಲ್ಲವಾದುದರಿಂದ ಹರಿ ಪೂಜೆಯ ಆಶೆಯೇ ಹೊರತು ಮತ್ತೊಂದು ಆಶೆ ಇಲ್ಲವೆಂಬುದೇ ಸಿದ್ಧವು.

ಅಪರೋಕ್ಷಾತ್ಪೂರ್ವದಲ್ಲಿ ನಾವು ಅನುಭವಿಸತಕ್ಕ ಸಂಚಿತ ಕರ್ಮ ಶೇಷ ಕೂಡ ಪ್ರಾರಬ್ಧವೆಂದು ಹೇಳುವುದುಂಟು. ಹೇಗೆಂದರೆ ಸುಳಾದಿ:-

*"ಅಜ್ಞಾನ ಕರ್ಮದಿಂದ ಗತ ಜನ್ಮಗಳ ಮಿಶ್ರ ಮಾತೃ ಗರ್ಭಸ್ಥನ ಶೇಷ ಪ್ರಾರಬ್ಧಧೌತ್ತವಾಗುವತನಕ ಇದೇ ಪ್ರಣವ ಮಂತ್ರವೆಂದು ಪ್ರೀತಿಯಿಂದಲಿ ಜಪಿಸು ಧ್ಯಾನೋಕ್ತದಿ."*

ಎಂಬ ಜಪ ಸುಳಾದಿಯಲಿ ನಾನು ಎಂಬ ಅಜ್ಞಾನರೂಪವಾದ ಸಂಚಿತ ಕರ್ಮದ ಬೇರು ಭಸ್ಮವಾದ ಪ್ರಯುಕ್ತ ಅಪರೋಕ್ಷಪರ್ಯಂತ ಸಂಚಿತ ಶೇಷವೆಂಬ ವ್ಯವಹಾರವಿದ್ದರೂ, ಪ್ರಾರಬ್ಧ ಕರ್ಮವು ಅಪರೋಕ್ಷೋತ್ತರ ಕಾಲದ್ದು ಆದಾಗ್ಯೂ ಆ ಪ್ರಾರಬ್ಧಕ್ಕೆ ಜನಕವಾದ ಅವ್ಯವಹಿತ ಪೂರ್ವವನ್ನಾಗಿ ಸೇರಿಸಿದ್ದಾರೆ. ಹ್ಯಾಗಾದರೂ ಆಗಲಿ ಅಜ್ಞಾನಿಗಳಿಗೆ ಸಕಲ ಸಾಧನಗಳೂ ವದಗುವ ಕ್ರಮ ಹೇಳಿ ಎಂದರೆ – ಶ್ರೀ ಹರಿಭಕ್ತಿಯು ಅನಾದಿ ಸಿದ್ಧವಾದ ಪ್ರಯುಕ್ತ ಮನಸ್ಸಿಗೆ ಸುಲಭೊಪಾಯವೇ ಸುಖರೂಪವಾದ ಪ್ರಯುಕ್ತ ನಿರ್ಗುಣ ಭಕ್ತನಿಗೆ ಕ್ರಮದಿಂದ ಒಂದು ಜನ್ಮದಲ್ಲಿ ಕೇವಲ ನಾಮೋಚ್ಚಾರಣೆಯಿಂದ ಭಕ್ತ್ಯುದ್ರೇಕ– ಮತ್ತೊಂದು ಜನ್ಮ ಅಗ್ನಿಹೋತ್ರದಿ ಕರ್ಮ ದೀಕ್ಷಾ ಮತ್ತೊಂದು ಜನ್ಮದಿಂದ ಅನುಯಾಗ ಸಹಿತ ಪೂಜಾ ದೀಕ್ಷೆಯೂ ಸೇರಿಬಂದು ಮತ್ತೊಂದು ಜನ್ಮ ಪ್ರವಚನ ಸೇರಿಕೊಂಡು ನಾನಾ ಮುಖವಾಗಿ ದೀಕ್ಷೆಗಳು ಹೆಚ್ಚಿ ಸಂಪ್ರಜ್ಞಾತ ಸಮಾಧಿ ಪರ್ಯಂತ ಕಾಲ ಕಾಲ ಸಂಧ್ಯಾದೀಕ್ಷೆ ಬಿಡಕೂಡದಾದುದರಿಂದ ಅನಂತರ ಅಸಂಪ್ರಜ್ಞಾತ ಸಮಾಧಿಯನ್ನು ಶ್ರೀ ಹರಿಯು ವದಗಿಸಿದರೆ ಆ ಕಾಲದಲ್ಲಿ ಕರ್ಮ ತ್ಯಾಗಕ್ಕೆ ಶ್ರೀ ಹರಿಯೇ ಶರೀರ ಸ್ಮರಣೆಯನ್ನು ತಪ್ಪಿಸುವುದರಿಂದ ಆಗ್ಯೆ ಸಂಧ್ಯಾವಂದನೆ ಹೋದರೆ ಹೋಗಲೀ ಎಂದು ಹಿರಿಯರ ಭಾವವು. ಏತೇನ ಯಾವ ಯಾವ ಜನ್ಮಗಳಲ್ಲಿ ಶ್ರೀ ಹರಿಯು ಯಾವ ಸುಲಭ ಸಾಧನೆಗಳನ್ನು ವದಗಿಸುತ್ತಾನೋ ಆ ಪ್ರಕಾರ ಪಾಂಗ್ತವಾಗಿ ನಿರ್ಗುಣ ಭಕ್ತಿ ಅಭಿವೃದ್ಧಿ ಮಾಡಿಕೊಳ್ಳತಕ್ಕದ್ದು. ಅಜ್ಞಾನಿಯಾದಾಗ್ಯೂ ತಿಳಿದಷ್ಟು ಸ್ವಲ್ಪ ಸ್ವಲ್ಪವಾದರೂ ಕರ್ಮಗಳನ್ನು ಸೇರಿಸಿಕೊಳ್ಳತಕ್ಕದು. ರಾಜರ ಸುಳಾದಿ:-

*ಗುರು ಭಕ್ತಿ ಬೇಕು. ಹಿರಿಯರ ಕರುಣ ಬೇಕು.*
*ಹರಿಕಥೆಯ ನಿತ್ಯದಲಿ ಕೇಳುತಿರ ಬೇಕು*

*ವಿರಕ್ತಿ ಬೇಕು ವಿಷ್ಣುವಿನಾರಧನೆ ಬೇಕು*
*ವರ ಮಂತ್ರ ಜಪಿಸ ಬೇಕು-ತಪ ಬೇಕು ಪರಗತಿಗೆ*
*ಶ್ರೀ ಹಯವದನನ ಚರಣಾನುಗ್ರಹ ಬೇಕು*
*ವಿಷಯ ನಿಗ್ರಹ ಬೇಕು* ಎಂದು ಹೇಳಿದ್ದಾರೆ.

"ದುಗ್ಧಸಮುದ್ರೇಶ ಪುರಂದರ ವಿಠಲಗೆ ಇದ್ದದ್ದೇ ಸಂಪದ ತಪ್ಪದೆ ಇದೀಗ ಭಕುತಿಯು ಮತ್ತಿದೀಗ ಮುಕುತಿಯು" ಎಂತ ದಾಸರ ವಚನವು. ಗುರು ಭಕ್ತಿ ತಾರತಮ್ಯ ವಿಷ್ಣು ವೈಷ್ಣವ ಜ್ಞಾನ ನಿರತ। ತದೇಕ ಧ್ಯಾನದಿಂದ ಕರ್ಮವಾಚರಣೆ ಮಾಡಲಿ ಬೇಕು. ಸಂಕಲ್ಪಮೌನ ಉಪಸ್ಪರ್ಶ ಸಂಭಾಷಣ ಭೋಜನೈಕಾಸನ ಈ ಆರು ಬಗೆಯನ್ನೂ ಸುಜನರ ಬಳಿಯಲ್ಲಿ ಇಟ್ಟು ಮೆಚ್ಚಿಸ ಬೇಕು ಎಂದು ಅನಾದಿ ಕರ್ಮ ಸುಳಾದಿ. ಈ ಮಾತುಗಳಿಗೆ ಕರ್ಮ ದೀಕ್ಷೆಯೇ ನಿರ್ಗುಣ ಭಕ್ತನಿಗೆ ಮುಖ್ಯ ಧರ್ಮ ಎಂದರ್ಥವು.

ಈಗ ಇಷ್ಟು ಪರ್ಯಂತ ಹೇಳಿದುದು ಮೋಕ್ಷ ಸಾಧನ:- ಬಹಿರಂಗಭೂತವಾದ ಕರ್ಮಗಳ ಮಹಾಮಹಿಮೆಯು ಈಗಿನ ಕಾಲಾನುಕೂಲ ಕರ್ಮ ಮಾಡಬೇಕಾದರೆ, ಶ್ರೀ ಹರಿ ಇಚ್ಛೆಯಿಂದ ದ್ರವ್ಯ ವದಗಿದರೆ, ಜ್ಞಾನಿಗಳಿಗೆ ದ್ರವ್ಯ ಸಮರ್ಪಣೆ ಮಾಡಿದರೆ ಪ್ರವಚನೋಪಾಸನೆ ಅಭಿವೃದ್ಧಿಯಾಗುವುದು. ಈ ಕಾಲಕ್ಕೆ ಅಗ್ನಿಹೋತ್ರಾದಿಗಳು ವ್ಯರ್ಥವೇ ಸರಿ. ಏಕೆಂದರೆ ಅದರ ದುರ್ಗುಣವನ್ನು ನಿರೂಪಿಸುತ್ತೇನೆ.

"ಯೋಹವಾ ವಿದಿತಾರ್ಷ ಛಂದೋ ದೈವತ ಬ್ರಾಹ್ಮಣೇನ ಮಂತ್ರೇಣ ಯಜತಿ ಯಾಜಯತಿ। ಅಧೀತೆ ಅಧ್ಯಾಪಯತಿ ವಾ ಸ್ಥಾಣುಂ ವರ್ಛತಿ ಗರ್ತೇವಾಪದ್ಯತೆ- ಪ್ರವಾಮೀಯತೇ ಪಾಪೀಯಾನ್ ಭವತಿ" ಎಂದೂ "ಯಾತಯಾ ಮಾನ್ಯಸ ಛಂದಾಂಸಿ ಭವಂತ್ಯಾತ್ಮಾನ್ಯಸ್ಯ ಛಂದಾಂಸಿಭವಂತ್ಯಥಯೋ ಮಂತ್ರೇಣ ವೇದ ಸರ್ವಮಾಯುರೇತಿ ಶ್ರೇಯಾನ್ ಭವತ್ಯಯಾಂತ ಮಾನ್ಯಸ್ಯ ಛಂದಾಂಸಿ ಭವಂತಿ. ತಸ್ಮಾದೇತಾನಿ ಮಂತ್ರೇ ಮಂತ್ರೇ ವಿದ್ಯಾತ್" ಇತ್ಯಾದಿ ಶೃತಿಃ

ಈ ಶೃತಿಗಳಿಂದ ಸಂಧ್ಯಾವಂದನಾದಿ ವೇದೋಕ್ತಾಶೇಷ ಕರ್ಮಗಳಲ್ಲಿಯೂ ತಿಳಿಯತಕ್ಕದ್ದಕ್ಕೆ ನಿದರ್ಶನವು. "ಓಂ ಆಪಃಪುನಂತು"

ಎಂಬ ಋಕ್ಕಿಗೆ ಮಂತ್ರ ದ್ರಷ್ಟರು ಪೂತ ನಾಮಕ ಋಷಿಗಳು. ಮುಖ್ಯಪ್ರತಿಪಾದ್ಯ ದೇವತೆಯು ನಿತ್ಯ ಪವಿತ್ರನಾದ ಶ್ರೀಹರಿಯು (ವಿಷ್ಣುವು) ಅಮುಖ್ಯವಾಗಿ "ಅಪ್" ದೇವತೆಯು. ಇದರ ಛಂದಸ್ಸು "ಅಷ್ಟಿ" ಎಂಬುದು. ಋಷಿ ಛಂದಸ್ಸು ಮತ್ತು ದೇವತೆಯ ಜ್ಞಾನವಿಲ್ಲದೆ ಶೃತಿಯ ಪ್ರತಿ ಅಕ್ಷರಗಳಿಗೂ ಅರ್ಥವನ್ನರಿಯದೆ ಯಾವ ಪುರುಷನು ಪ್ರಯೋಗ ನಡೆಸುತ್ತಾನೆಯೋ ಅವನು ಮಂತ್ರ ಕಂಟಕನಾಗುವಾನು.

*"ಋಷಿ ಛಾಂದೋದೇವತಾನಿ ಬ್ರಾಹ್ಮಣಾರ್ಥಃ ಸ್ವರಾದ್ಯಪಿ।*
*ಅವಿದಿತ್ವಾ ಪ್ರಯುಂಜಾನೋ ಮಂತ್ರ ಕಂಟಕ ಉಚ್ಯತೇ ।*
*ಮೃತ್ಯುಸ್ಯಾದ್ದೇವತಾ ಅಜ್ಞಾನೇ ಛಂದೋ ಹೀನೇತು ನಿಷ್ಫಲಂ।*
*ಋಷಿ ಹೀನೇ ಮಹಾ ವ್ಯಾಧಿಃ ಭವತ್ಯೇವ ನ ಸಂಶಯಃ॥"*

ಎಂದು ಅರಿಯದೆ ಪ್ರಯೋಗ ಮಾಡುವವನಿಗೆ ಮಹಾ ಅನರ್ಥಗಳನು ಹೇಳುತ್ತದುದರಿಂದ

"ಪಾಪೀಯಾನ್ ಭವತಿ ಯತ ಯಾ ಮಾನ್ಯಸ್ಯ ಛಂದಾಂಸಿ" ಎಂದು ಅವನು ಮಹಾ ಪಾಪಿಷ್ಠನು. ಅಜ್ಞಾನದಿಂದ ಅಧ್ಯಯನ ಮಾಡಿದ ವೇದಗಳು ಅವನಿಗೆ ನಿಸ್ಸಾರಗಳು. ಅರಿಯದೆ ಪ್ರಯೋಗ ಮಾಡುವವನೆ ವೇದ ಶತೃವು. ಆದುದರಿಂದ ವೇದೋಕ್ತ ಕರ್ಮಾನುಷ್ಠಾನಗಳಿಗೆ ಕೃತ ಯುಗ ಹುಟ್ಟಿದ ಹೊರತು ಈ ಕಲಿಯುಗದಲ್ಲಿ ಸಿದ್ಧಿಸುವುದವಲ್ಲ. ಅಥವಾ ಕಷ್ಟಪಟ್ಟು ಪ್ರಯೋಗಗಳನ್ನು ನಡೆಸಿದಾಗ್ಯೂ ಕಲಿಯ ವ್ಯಾಪರದಿಂದ ವೇದಾಭಿಮಾನಿ ದೇವತೆಯ ಸನ್ನಿಧಾನವಿರುವುದಿಲ್ಲವು. ಏಕೆಂದರೆ ಬ್ರಾಹ್ಮಣ ಸ್ತ್ರೀಯಲ್ಲಿ ಶೂದ್ರ ಪುರುಷನಿಂದ ಹುಟ್ಟಿದವನು ಜಾತಿ ಚಂಡಾಲನು

"ಸ್ಯಾಚ್ಚಂಡಾಲಸ್ತು ಜನಿತೋ ಬ್ರಾಹ್ಮಣ್ಯಾಂ ವೃಷಲೇನಯಃ॥" ಎಂದು ಅಮರ ನಿಘಂಟು.

ಗುರುಗಳು ಅವನನ್ನು ಚಂಡಾಲ ಜಾತಿಗೆ ಸೇರಿಸದೇ ಹೋದ ಬಳಿಕ ಅಂತಹ ಚಂಡಾಲನು ತನ್ನ ಸ್ವಬುದ್ಧಿಯಿಂದಲಾದರೂ ಬ್ರಹ್ಮ ಜಾತಿಯನ್ನು ನಾನು ಕೆಡಿಸಿದರೆ ನನಗೆ ಮಹಾ ದೋಷಬಂದೀತು ಎಂದು ತಿಳಿದುಕೊಂಡು ತಾನಾಗಿ ಪಂಚಮ ಜಾತಿಗೆ ಸೇರುವುದಂತು ಹೇಳ ಕೆಲಸವಿಲ್ಲವಾದುದರಿಂದ

ಅವನು ಜಾತಿ ಬಾಹಿರನಾಗದೆ ಮನಶ್ಚ ಬ್ರಾಹ್ಮಣ ಸ್ತ್ರೀಯನ್ನು ವಿವಾಹ ಮಾಡಿಕೊಂಡು ಅವನಿಂದ ಹುಟ್ಟಿದ ಸಂತಾನವು ಅತಿನೀಚ ಪ್ರತಿಲೋಮಿಜಾತಿಯಾದುದರಿಂದ ಜಿತೇಂದ್ರಿಯನಾಗದೆ ವಿಹಿತ ಗೃಹಸ್ಥಾಶ್ರಮ ಧರ್ಮವನ್ನು ಕೆಡಿಸಿಕೊಂಡರೆ –ಸುಳಾದಿ:– ಅನುಲೋಮ ಪ್ರತಿಲೋಮ ಜಾತಿ ಶಾಶ್ವತದಲ್ಲಿ ಬೆಳೆವುದು. "ಎಂದು ಹೆಣ್ಣಿನ ಬಣ್ಣ ನೋಡಿ" ಎಂಬ ಸುಳಾದಿ– ಧರ್ಮ ಮಾಡುವುದೆಂತು? ಕರ್ಮ ಗಳಿಗೆ ಸಹಾಯಕನಾಗುವುದು ಹೇಗೆ?. ಅವನ ಸಹಪಂಗ್ತಿ ಭೋಜನ, ಅವನ ಹಸ್ತ ಪಕ್ವಾನ್ನ ಭೋಜನ ಮೊದಲಾದದ್ದರಿಂದ ನಮ್ಮೊಳಗೆ ಬಿದ್ದ ಪ್ರಯುಕ್ತ ಜಾತಿಯೇ ಹೊಲಕಲಿಸಿ ಹೋಯಿತು. ಆದುದರಿಂದ ಕೃತಯುಗ ಹುಟ್ಟುವ ತನಕ ಕಲಿಗರ್ಭವಾಸ ಮಾಡುವಂತಹ ನಮಗೆ–ಈ ವ್ಯಥೆಯು ಬಿಟ್ಟದ್ದಲ್ಲವಾದುದರಿಂದ ಬ್ರಾಹ್ಮಣ ವೇಷ ಧರಿಸಿದಂತಹ ಕಲಿಗಳು ನಾವೇ ಸರಿ. ಹಾಗಾದರೆ ನಮಗೆ ಪುರುಷ ಸೂಕ್ತ ಹೇಳಿ ಶಾಲಿಗ್ರಾಮ ತೀರ್ಥ ಮಾಡುವ ಯೋಗ್ಯತೆಯೂ ಮುಳುಗಿಹೋಯಿತಲ್ಲ ಎಂದರೆ, ನಾನು ಈ ದುಷ್ಕಲದ ಮಹಿಮೆ ಯಾಕೆ ಹೇಳಿದೆ ಎಂದರೆ – ಕೇವಲ ಕರ್ಮ ಮಾರ್ಗದಲ್ಲಿ ಆಸಕ್ತನಾಗದೆ ಅನೇಕ ಮುಖದಿಂದ ಶತ್ರುವಾದ ಕಲಿಯು ಕರ್ಮ ಸಿದ್ಧಿಯನ್ನು ಕೆಡಿಸುವುದೇ ನಿಶ್ಚಯವು. ಎಂದು ತೋರಿಸಿದೆನು. ನಮಗಾದರೂ ಯೋಗ್ಯತೆ ಹೇಗೆ ಬಂದೀತು ಎಂದರೆ, ಅವರವರುಗಳು ತಂತಮ್ಮ ಮನಃ ಪೂರ್ವಕವಾಗಿ ಭ್ರಷ್ಟರ ಸಹವಾಸ ಮಾಡದೆ ಶ್ರೀ ಹರಿವಾಯುಗಳೆ ಗತಿ ಎಂದು ತ್ರಿಕರಣ ಶುದ್ಧರೂ ಸಾಧುಗಳೂ ಬಹು ಜನರಿದ್ದಾರೆ. ಆದುದರಿಂದ ಗುಪ್ತವಾಗಿ ತಮ್ಮ ಯೋಗ್ಯತೆಯನ್ನು ಉಳಿಸಿಕೊಳ್ಳಲು ಅಪೇಕ್ಷಿಸುವವರು ದುರಾನ್ನಗಳನ್ನು ಬಿಟ್ಟು ಹಾಗೆ ಅತಿ ಕಠಿಣ ದೀಕ್ಷೆಯನ್ನೂ ಮಾಡದೆ ಗೋಪ್ಯನಿಯಮಗಳಿಂದ ಹಿರಿಯರ ಅನುಗ್ರಹ ಪಾತ್ರರಾಗುತ್ತಾರೆ– ಸರ್ವಜ್ಞರಾಯರ ಶಾಸ್ತ್ರವು ಭೂಮಿಯಲ್ಲಿ ಇರುವತನಕ ಜಾತಿ ಸಾಂಕರ್ಯ ಕಲಿಬಾಧೆಯು ಸಾದುಗಳಿಗೆ ತಗಲಲಾರದು. ಈ ಮಾತಿಗೆ ಪ್ರಕೃತ ಮುಖ್ಯ ತಾತ್ಪರ್ಯವೇನೆಂದರೆ ಪಂಚ ಯಜ್ಞಗಳನ್ನು ಮಾತ್ರ ಸಾಧಿಕೊಂಡು ನಿತ್ಯ ನೈಮಿತ್ತಿಕಗಳಲ್ಲೂ ಎಷ್ಟು ತೀರದೋ ಅಷ್ಟು ಮಾತ್ರಕ್ಕೆ ಶ್ರೀಹರಿ ಮಾಡಿಸಿದರೆ ಶ್ರೌತಾಗ್ನಿ ಅಥವಾ ಸ್ಮಾರ್ತಾಗ್ನಿಯಲ್ಲಾದರೂ ಔಪಾಸನಾದಿಗಳಿಂದ ಬ್ರಾಹ್ಮಣ್ಯ ಮಾತ್ರ ಉಳಿಸಿಕೊಂಡರೆ ಸಾಕು. ಎಂದು ಅಭಿಪ್ರಾಯವು. ಸುಳಾದಿ:–

*ವೈಕುಂಠವಾಗುವುದಕ್ಕೆ ಲೌಕಿಕದಿಂದ ಪೂಸಿ।
ಸಾಕು ಮಾಡುವ ಧಾವತಿ ಕುಲಾತಿ ಯಾತಕ್ಕೆ।
ನಾಕ ಧರಣೀ ಸುಖಿಯಾಕೆ ನಿನಗೆ ವೈ-
ದಿಕ ಲಾಭವನ್ನು ಮಾಕಾಂತ ದೈವವೆನ್ನು॥*

ಅಂದರೆ – ಇಷ್ಟು ಪ್ರಕಾರ ಕರ್ಮ ಮಾಡುವುದರಲ್ಲಿ ನಿರ್ಗುಣ ಭಕ್ತನ ಅನುಸಂಧಾನದಿಂದ ಸಕಲ ಕರ್ಮಗಳೂ ಅಸಂಪ್ರಜ್ಞಾತ ಸಮಾಧಿಗೆ ಸಮ ಫಲ ಕೊಡತಕ್ಕದ್ದಾದಾಗ್ಯೂ ಅದೇ ಸಮಾಧಿಯಲ್ಲವಾದ ಪ್ರಯುಕ್ತ– "ಅಥಪರಾ ಯಯಾಸಹರಿರ್ವೇದಿತವ್ಯಃ" ಎಂದು ಸೂತ್ರ ಭಾಷ್ಯದಂತೆ ಪರವಿದ್ಯೆಯೇ ಸಮಾಧಿಗೆ ಕಾರಣವಾದುದು. ಆದರಲ್ಲಿಯೂ ಸಂಪ್ರಜ್ಞಾತ ಸಮಾಧಿಯು ಶರೀರಾಭಿಮಾನ ವಿಶಿಷ್ಟವಾದ ಕಡೆಯಿಂದ ಹಠಯೋಗಾದಿಗಳಲ್ಲಿ ಕಷ್ಟ ಪಟ್ಟು "ಬಲ್ಲಜನರ ಒಲಿಸಿಕೊಂಡು ನಲಿದಾಡು" ಎಂತ ಧಾರಣ ಧ್ಯಾನ ಸುಳಾದಿಯಲ್ಲಿ ಹೇಳಿರುವಂತೆ ಯೋಗ ಧಾರಣೆಯಲ್ಲಿ ಪರಮ ಸಮರ್ಥರನ್ನು ನಂಬ ಬೇಕು. ಪ್ರಕೃತ ವೈಕುಂಠ ಸುಳಾದಿಯ ಮುಂದಿನ ಮಾತು– ಲೋಕ ಸಂಸಾರನೀಗಿ ಏಕಚಿತ್ತದಲಿ ಎಂತಲೂ ಮುಂದೆ

*"ಹೃದಯಾಕಾಶದಲ್ಲಿ ದಿವಾಕರವರ್ಣನ ಆಕಾರ ಕಾಂಬೋದಕ್ಕೆ
ನೀಕಾಣೋ ಉಪಾಯ। ಲೋಕದೊಳಗೆ ಮಾಣಿಕ್ಯವೆಂಬೋದೆ
ಸ್ವಲ್ಪತೂಕ ಆದರಂತೆ ಅನೇಕ ಬೆಲೆ ಇಪ್ಪೋದು"*

ಎಂದರೆ ಮಾಣಿಕ್ಯಕ್ಕೆ ಹ್ಯಾಗೆ ತೂಕ ಕಡಿಮೆಯೋ ಹಾಗೆ ಹಾಗೆ ಕೋಟ್ಯಂತರ ಬೆಲೆ ಅಧಿಕವು ಆದರಂತೆ ಅಪರೋಕ್ಷ ಜ್ಞಾನ ಸಾಧಕ ಪರಮ ಸೂಕ್ಷ್ಮ ಉಪಾಸನೆಯನ್ನು ಬಿಟ್ಟು– ಮುಂದಿನ ಮಾತು

*"ತಾ ಕಪ್ಪೆಯಾಗಿ ರತ್ನಾಕರದಂತೆ ಕರ್ಮವಾನೇಕ ಬಗೆಯಿಂದ
ತಾ ಕುಳಿತು ಮಾಡಿದರೂ ವೈಕುಂಠವಾಗದು
ಲೋಕನಾಯಕ ಸ್ವಾಮಿ ವಿಜಯ ವಿಠಲರೇಯ।
ಸಾಕುವ ನಮ್ಮ ಪರಾಕು ಜ್ಞಾನದಲಿ ಪೇಳೆ."* ಎಂತಲೂ

ಪಾರಾವರಕ್ಕೆ ಕರ್ಮ ತೀರದಷ್ಟೇ ಮಾಡಿವಾರಾಣದಲ್ಲಿ ಇದ್ದು ವೈರಾಗ್ಯ ಜ್ಞಾನ ಭಕುತಿ ಮೂರು ಸಂಪಾದಿಸಿ ನಾರಾಯಣನ ಮಂದಿರವ ಸೇರುವ ಮನವೇ। ಚಾರುಚರಿತ ನಮ್ಮ ವಿಜಯವಿಠಲರೇಯ–ಸಾರಿಸಾರಿಗೆ ರೂಪ ತೋರುವ ಬಗೆ ತಿಳಿ ಕರ್ಮ ದಾರಿಯ ವಿಡಿದು ಕಡೆಗೆದ್ದವರ ಕಾಣೆ ನಿರ್ಮಲಾತ್ಮಕ ವಿಜಯ ವಿಠಲನ ನಂಬು  ಎಂದು ವೈಕುಂಠ ಸುಳಾದಿ.

ಇದರಲ್ಲಿ ತೀರದಷ್ಟೇ ಮಾಡಿ ಎಂದು ಹೇಳಿದ್ದರಾದುದರಿಂದ "ವಾರಾಣದಲ್ಲಿದ್ದು" ಎಂಬ ಮಾತಿಗೂ ಹರಿಕಥಾಮೃತಸಾರೋಕ್ತ ಪಂಚಯಜ್ಞಾದಿಗಳಲ್ಲಿ ಮಾತ್ರ ನಿಷ್ಠೆಮಾಡಿದರೆ ಆದೇ ದೇವತೆಗಳೇ ಮೋಕ್ಷ ಕೊಡತಕ್ಕವರು ಎಂಬ ಜ್ಞಾನ ಕೂಡಾ ಈ ಗೃಹಸ್ಥಾಶ್ರಮಿಗೆ ಇರದೇ ತೀರದು. ಎಂದು ಅರ್ಥವು. "ಪರಸ್ಪರಂ ಭಾವಯಂತಃ" "ಶ್ರೇಯಃ ಪರಮವಾಪ್ಸ್ಯಥಃ" ಎಂಬ ಗೀತಾ ವಾಕ್ಯಕ್ಕೂ ಇದೇ ಭಾವವು.. "ಕರ್ಮದಾರಿಯ ವಿಡಿದು ಕಡೆಗೆದ್ದವರ ಕಾಣೆ" ಎಂದು ಹೇಳಿದ ಮೇಲೆ ನಿಶ್ಶೇಷವಾಗಿ ಕರ್ಮ ತ್ಯಾಗವೇ ಅರ್ಥವಾಗಿ ತೋರುತ್ತದೆಯಲ್ಲ ಎಂದರೆ ಅದರ ಮುಖ್ಯ ಸ್ವಾರಸ್ಯವನ್ನು ನಿರೂಪಿಸುತ್ತೇನೆ. ಈ ಜೀವನು ಭಗವನ್ಮಾಹಾತ್ಮ್ಯೆಯನ್ನು ತನ್ನ ಯೋಗ್ಯತಾನುಸಾರವಾಗಿ ಚಂಡಾಲನಾಗಲೀ ತಿಳಿದು ಪರಮ ಭಕ್ತಿಯಿಂದ ನಾಮೋಚ್ಚಾರಣ ನರ್ತನಾದಿ ಸೇವಾಸಕ್ತನಾದ ಕಾಲಕ್ಕೂ ಅಂಗ ದೇವತೆಗಳಿಂದ ಅಂತರಂಗ ಭಕ್ತರಾದ ಪ್ರಾಣಾದಿ ದೇವತಾ ಭಜನೆ ಇಲ್ಲದೆ ಅವನಲ್ಲಿ ಶ್ರೀಹರಿ ಒಬ್ಬ ಮಾತ್ರ ಒಲಿದು ನರ್ತನೆ ಮಾಡುತ್ತಾ ಪ್ರಸನ್ನನಾಗಿ ಆ ಪಂಚಮನಿಗೂ ಭೃತ್ಯನಂತೆ ಸಂರಕ್ಷಣೆ ಮಾಡುತ್ತಿದ್ದಾಗ್ಯೂ ಆ ಪಂಚಮನ ಸಂದರ್ಶನದಿಂದಲೂ ಸಮೀಪ ಗಮನ ಸಂಸ್ಪರ್ಶಗಳಿಂದಲೂ ತತ್ತತ್ಕಾಲದಲ್ಲಿ ಬ್ರಾಹ್ಮಣ ತೇಜೋಭಂಗವಾಗುವುದೇ ಸಿದ್ಧವು. ಆ ಪಂಚಮನ ಉಪಾಸನೆಯಲ್ಲಿ ಆ ಭಗವನ್ಮೂರ್ತಿಯು ಇಂದ್ರಜಾಲದ ಮಾಯಾವೇಷವ ಧರಿಸಿ ಮೋಹಿಸಿ ತನ್ನ ಅಪರೋಕ್ಷಾದಿ ದಾನದ ಮಹಿಮೆಯನ್ನು ಪ್ರಾಣದೇವರಲ್ಲಿ ಬಚ್ಚಿಟ್ಟು ಆ ಜೀವನನ್ನು ಅಜ್ಞಾನಿಯನ್ನಾಗಿ ಮಾಡುವುದೇ ನಿಶ್ಚಯವು. ಕಪಟ ನಾಟಕ ಹರಿಯ ರೂಪವ ಬಹಿರ ಅಪರೋಕ್ಷವಾಗಲು ಅದು ನಿಮಿತ್ತವಲ್ಲ. ಎಂದು ಮನ ಮೂರ್ತಿ ಸುಳಾದಿ ಸಿದ್ಧವು. ಬ್ರಾಹ್ಮಣ ಜನ್ಮದಲ್ಲಿಯೂ ಅದ್ವೈತಿಗೆ ಪ್ರಾಣದೇವರ ದ್ರೋಹದಿಂದ ಬುದ್ಧಿಪೂರ್ವಕ ಸರ್ವ ಜೀವ ಬ್ರಹ್ಮೈಕ್ಯ– ವಿಪರೀತ ಜ್ಞಾನ– ಆ ಹರಿ ಸರ್ವದಾ ನರ್ತನ

ಮಾಡಿ ಆ ಕಲಿಗೂ ಭೃತ್ಯ ಮಾಡಿಕೊಂಡಿದ್ದಲ್ಲಿ ಶರೀರ ಸೌಖ್ಯಪಡಿಸಿ ಅಂಧಃ ತಮಸ್ಸಿಗೆ ಕಳುಹಿಸುತ್ತಾನೆ. ಪ್ರಮಾಣ:-

*"ದರ್ಶನಂಚ ಯಾ ಹೀನಂ ವ್ಯರ್ಥ ಮನ್ಯತ್ಕಿಮಿಷ್ಯತೆ।*
*ಯೋಗ್ಯಂತು ದಶನಂ ನೈವ ತಯಾ ಹೀನಂ ಭವಿಷ್ಯತಿ॥"*

ಎಂದು ತಂತ್ರಸಾರ ವಚನವು ಸಿದ್ಧವಾಗಿದೆ. ಅಂದರೆ ತಾರತಮ್ಯ ಜ್ಞಾನ ಮೊದಲಾದ ನವಭಕ್ತಿ ರಹಿತವಾದ ಭಗವದ್ದರ್ಶನಗಳೇ ಅಂಧಃ ತಮಸ್ಸಾಧಕಗಳಾದ ಬಳಿಕ "ಅನ್ಯತ್ಕಿಮಿಷ್ಯತೇ" ಅಂದರೆ ಅದ್ವೈತಿಯ ನಿತ್ಯ ನೈಮಿತ್ತಿಕಗಳು ವ್ಯರ್ಥವೆಂದು ಹೇಳತಕ್ಕದ್ದೇನು? ಎಂದು ಅರ್ಥವು. ಆದರೆ ಆ ಪಂಚಮನೂ ಹರಿಭಕ್ತನೇ ಸರಿ. ಯೋಗ್ಯವೇ ಸರಿ ಬುದ್ಧಿಪೂರ್ವಕ ವಿಪರೀತ ಜ್ಞಾನಿಯು ಅಲ್ಲ. ಆದುದರಿಂದ ಶ್ರೀ ಹರಿಯು ಅವನಿಗೆ ವಲಿದು ಪ್ರಾಣದೇವರಿಂದ ಸಹಿತವಾಗಿ ಬ್ರಾಹ್ಮಣ ಯೋನಿ ಕೊಟ್ಟು ಜ್ಞಾನಾಧಿಕಾರಿಯನ್ನಾಗಿ ಮಾಡಬೇಕಾಯಿತು. ಸುಳಾದಿ:-

*ತಪ್ತ ಮುದ್ರೆಗಳಿಲ್ಲದಂಥ ಮಾನವ ನಿನ್ನ।*
*ಅಪರೋಕ್ಷೀಕರಿಸಿ ಪ್ರತ್ಯಕ್ಷ ನೋಡುತಿರಲು*
*ನಮಿಪೆ ನಮಿಪೆನೋ ನಾನು ಎಂತಲೂ ಹೇಳಿ*

ವೈಕುಂಠವೂ ಬೇಡ ಸ್ವರ್ಗವೂ ಬೇಡ, ನರಕವಾದರೂ ಇಷ್ಟವೇ ಸರಿಯೆಂದು ಹೇಳುತ್ತಾರೆ- ಸುಳಾದಿ ಮುಂದಿನ ಮಾತು

*"ಅಪವರ್ಗವಾಗಲಿ ಸ್ವರ್ಗವಾಗಲಿ ಯಮನು ಕುಪಿತದಲ್ಲಿಡಲಿ"*

ಎಂದು ಹರಿಯೇ ನಿನ್ನಧೀನ ಜ್ಞಾನೇಂದ್ರಿಯಗಳು ಎಂಬ ದಾಸ್ಯ ದೀಕ್ಷೆ ಸುಳಾದಿ ವಿಜಯರಾಯರ. "ಎಳೆ ಬಕುತಿಯಿಂದ ವಿಜಯ ವಿಠಲ ಹರಿಯ ಜಲಜ ಪದವನ ನಂಬಲು ಕರ್ಮವು ಯಾತಕ್ಕೆ" ಎಂದು ಇದೇ ವೈಕುಂಠ ಸುಳಾದಿಯಲ್ಲಿ ಹೇಳಿದ ಮೇಲೆ ಸಂಧ್ಯಾವಂದನೆಯನ್ನು ಏಕೆ ಪರಿತ್ಯಾಗ ಮಾಡಕೂಡದು ಎಂದರೆ- ಹಾಗಾದರೆ ಮನಸ್ಸು ಬಂದ ಹಾಗೆ ಈ ಜ್ಞಾನಿಗಳು ಪುತ್ರರಿಗೆ ಉಪನಯನ ಪರಿತ್ಯಾಗವನ್ನೂ ತಮ್ಮ ಯಜ್ಞೋಪವೀತ ಪರಿತ್ಯಾಗವನ್ನೂ ಮಾಡಿದರೆ

ನಿಶ್ಚಿಂತೆಯಿಂದ ಶ್ರೀಹರಿ ಸೇವೆ ಮಾಡಿಕೊಂಡಿರಬಹುದು. ಇದೇ ಹರಿ ಮತ್ತು ಪ್ರಾಣದೇವರ ದ್ರೋಹವು. ಇದು ಹ್ಯಾಗೆ ದ್ರೋಹವಾಯಿತು ಎಂದರೆ

***"ಅನುಜ್ಞಾಲಂಘನಂ ವಿಷ್ಣೋಃ ವಧ ಪಾಪಂ ಹಿ ಜಾಯತೆ"***

ಎಂದು ವಿಷ್ಣುರಹಸ್ಯ ವಾಕ್ಯವು. ಹಾಗಾದರೆ ಕರ್ಮಜ ಪಾಪ ಪುಣ್ಯಗಳೆರಡೂ ನಿನ್ನನ್ನು ಲೇಪಿಸದು ಎಂದು ಹಿಂದೆ ಹೇಳಿದ ವಚನಗಳಿಂದ ಶ್ರೀ ವೀಷ್ಣುವಧ ದ್ರೋಹವೇ ಹೋಗಬಹುದಷ್ಟೇ ಎಂದರೆ, ಮಾಡುವ ಕರ್ಮ ವ್ಯತ್ಯಾಸಕ್ಕೂ ಕರ್ಮ ಲೋಪಕ್ಕೂ ಅದರಿಂದ ಹುಟ್ಟಿದ ಪಾಪ ಪುಣ್ಯ ಲೇಪವಿಲ್ಲವೆಂದು ಅರ್ಥವೇ ಹೊರತು ಪ್ರಯತ್ನ ಪೂರ್ವಕ ಆಜ್ಞೋಲ್ಲಂಘನೆಗೆ ಇವನಿಗೆ ಭೃತ್ಯ ಧರ್ಮ ವಲ್ಲವಾದುದರಿಂದ ಅಧೋಗತಿ ತಪ್ಪದು. "ನಿನ್ನ ಧ್ಯಾನ ಮಾಡುವನೋ ಆಜ್ಞೆಮೀರಿದರೇನೋ" ಎಂದು ಹೇಳುವ ಮಾತುಗಳಿಗೆ ಏನು ಗತಿ ಎಂದರೆ, ಇವನಾಗಿ ಕಾಲಕಾಲದ ಕರ್ಮ ಬಿಟ್ಟೆನು ಎಂದು ಸರ್ವದಾ ಚಿಂತಿಸುವುದಿಲ್ಲವಾದರೂ, ಜ್ಞಾನಿಗಳ ಸಹವಾಸ ಬಲದಿಂದ ಶ್ರೀಹರಿ ಇಚ್ಛೆಯಿಂದಲೇವೇ ಮಾಹಾತ್ಮ್ಯ ಶ್ರವಣ ಜ್ಞಾನ ಯಜ್ಞವೇ ಕರ್ಮವನ್ನು ಬಿಡಿಸುತ್ತಾದುದರಿಂದ ಅದು ದೋಷಾಪಾದಕವಲ್ಲವು. "ಆವ ಜನ್ಮದ ಪಾಪ ಬಂದೊದಗಿತೋ ಎನಗೆ ದೇವ ಗಂಗೆಯ ನೋಡಿದೆ" ಎಂದು ವಿಜಯರಾಯರ ಉಕ್ತಿಯು. ಅಂದರೆ– ಭಗವನ್ಮಾಹಾತ್ಮ್ಯ ಶ್ರವಣ ಕಾಲದಲ್ಲಿ ಕರ್ಮಗಳ ಬಿಟ್ಟ ಪಾಪವೋ ಎಂಬೀತ್ಯಾದಿ ವಚನಗಳಿಂದ ಸ್ವೋತ್ತಮರ ಸನ್ನಿಧಿ ವಾಸದಿಂದ ಇವನ ಪ್ರಯತ್ನವಿಲ್ಲದೆ ಬಲಾತ್ಕಾರವಾಗಿ ಶ್ರೀಹರಿಯೇ ಅಮೃತಪಾನ ಮಾಡಿಸುತ್ತಾನೆ. ಉತ್ತಮರು ಮನೆಗೆ ಬಂದಾಗ ಸತ್ಕರ್ಮ ತೊರೆದಿದ್ದೇನೋ ಎಂದು ಈ ನಾಮದ ಮಾತು. ಸುಳಾದಿ:– "ನಿನ್ನ ಚರಣ ನಂಬಿದವರ ಎಂದೆಂದು ಸಂಗಡದಲಿಪ್ಪ ಉನ್ಮಾದದವನೋ ಸ್ವಾಮಿ। ಬಿರಿ ಬಿರಿ ಬಿಸಾಡದೆ ಅವನ ಜನನೀ ಸಾಕುವಂತೆ ಒಡನೆ ಪಾಲಿಸುವುದು ದುರ್ಮತಿಯೂ।" ಎಂತ "ಏಕೆ ಸೇರಿದಿ ಎನ್ನ" ಎಂಬ ಸುಳಾದಿ. ಅದು ಅಪರಾಧವಾದಾಗ್ಯೂ ಆ ಕಾಲಕ್ಕೆ ಅಪರಾಧರೂಪವಲ್ಲದೆ, ಹಿರಿಯರಲಿದ್ದ ಭಗವದನುಗ್ರಹ ವಿಶೇಷ ಲಾಭವೇಸರಿ. "ವಿಧಿ ನಿಷೇಧ ತನ್ನ ಮನ ಬಂದಂತೆ ಉಣಪ" ಎಂದು ಸುಳಾದಿ. "ಇಂತ ಪರಿ ನಿನಗಾನಂದ ವೈಭವ ಮುಂದೆ ಮುಂತಾಗಿ ನಿಂತಿವೆ

ಕೇಳೆಲೋ'' ಎಂತ ಚಿಂತೆ ಮಾಡುವುದಲ್ಲ ಎಂಬ ಸುಳಾದಿ "ಅಂಡಲಯದೆ ಇದು ನಾಮಾಮೃತವನ್ನು ಉಂಡಲ್ಲದೆ ಬಿಡ ಉನ್ನತವಾಗಿವಲಿದು'' ಎಂತ ಘನ ಪೂಜಾ ಸುಳಾದಿ. "ಸರಿಬಂದದ್ದು ಉಣ ಉಂಟು ಸರಿಬಂದ ಕಾಲಕ್ಕೆ ಸರಿಸರಿ ಬಂದಂತೆ ಸುರಿದು ಸುಖಿಸು ತನ್ನ ಜತಿ ಮರಣ ರೋಗ ಜ್ವರ ರೋಗಂಗಳು ಉರುಳಿ ಪೋಗುವುದಯ್ಯಾ॥ : ಎಂತ ರೋಗ ನಿವಾರಣೆ ಸುಳಾದಿ. ಅಂದರೆ ಶ್ರೀ ಹರಿಯು ಬಲಾತ್ಕಾರವಾಗಿ ಕಥಾಮೃತ ಪಾನ ಮಾಡಿಸದೆ ಇದ್ದ ಕಾಲಕ್ಕೆ ಇವನ ಬುದ್ಧಿಪೂರ್ವಕವಾಗಿ ಬ್ರಾಹ್ಮಣ್ಯ ಕರ್ಮ ಬಿಡಕೂಡದು ಎಂದರ್ಥವು. ನಾಮಾಮೃತವನ್ನು ಶ್ರೀಹರಿಯು ಉಂಡಲ್ಲದೆ ಬಿಡ'' ಎಂತ ಏಕೆ ಹೇಳಿದ್ದಾರೆ ಎಂದರೆ– ಪ್ರಮಾಣ:–

*"ಜೀವ ಭೋಗ್ಯ ಭೋಕ್ತೇಶೋ । ಜೀವಸ್ತದ್ಭೊಗಭುಂಜ್ಞಾತು''*

ಎಂತ ಮಾಂಡೊಕ್ಯ ಭಾಷ್ಯ ವಾಕ್ಯವು. ಅಂದರೆ ಜೀವಾನಂದ ಭೊಗವು ಸ್ವಾಮಿಗೆ ಉಂಟೇ ವಿನಹ ಸ್ವಾಮಿಯ ಗುಣ ಪೂರ್ಣ ಭೋಗಕ್ಕೆ ರಮಾದೇವಿಯರುಕೂಡ ಪಾತ್ರರಲ್ಲವಾದುದರಿಂದ ಸ್ವೋತ್ತಮರ ಭೋಗವೇ ಜೀವರಿಗೆ ಅಯೋಗ್ಯವಾದುದರಿಂದ ಜೀವನಿಗೆ ಹರಿಯ ಭೊಗವು ಇಲ್ಲವೆಂದು ಹೇಳತ್ತಕ್ಕದ್ದೇನು?

ಆಕ್ಷೇಪ :– ಕರ್ಮವನ್ನು ಬೇಕು ಎಂದು ಬಿಟ್ಟರೆ( ಪ್ರಯತ್ನ ಪೂರ್ವಕ) ಹರಿವಾಯುಗಳ ದ್ರೋಹ ಬಿಡದು ಎಂತ ಹೇಳಿದರಷ್ಟೆ. ಸರ್ವದಾ ಶ್ರೀ ಹರಿಯನ್ನು ಮರೆತಿರುವುದು ಈ ಭಕ್ತನ ಧರ್ಮವಲ್ಲವಾದುದರಿಂದ ಭಕ್ತಿ ಹೊರತು ಮಾಡಿದ ಕರ್ಮವು ಯಾವ ಪ್ರಕಾರದಿಂದಲೂ ವ್ಯರ್ಥವಾಗುವುದೇ ಸಿದ್ಧವಾದುದರಿಂದ ಸಂಧ್ಯಾದಿಕರ್ಮದಿಂದ ಭಕ್ತಿ ಅಭಿವೃದ್ಧಿ ಆಗುವುದಕಿಂತಲೂ ಚೆನ್ನಾಗಿ ನಾಮೋಚ್ಚಾರಣೆ ಮಾಡಿ ಸಧ್ಯಾವಂದನೆ ಬಿಟ್ಟು, ಸಂಧ್ಯವಂದನೆ ಸಾಂಗವಾಗಿ ಮಾಡಿದರೆ ಎಷ್ಟು ಭಗವತ್ಪ್ರೀತಿಯೋ ಅದಕ್ಕಿಂತಲೂ ಅಧಿಕ ಪ್ರೀತಿಯನ್ನು ಸುಲಭದಿಂದ ಸಂಪಾದಿಸಿಕೊಳ್ಳಬಹುದಷ್ಟೆ ಅಂದರೆ ಸಿದ್ಧಾಂತ:– ಹೀಗೆ ಆಕ್ಷೇಪ ಮಾಡುವವನು ಶುದ್ಧ ಅವಿವೇಕಿಯು ಎಂತ ಅರ್ಥವು. ಏಕೆಂದರೆ, ಸುಳಾದಿ:– ಕಾಣು ಶ್ರೀ ಹರಿ ಪಾದ ತಾತ್ವಿಕರೊಡನೆ ಎಂದು ಮಾನಸ ಪೂಜೆ ಮಾಡು ಎಂಬ ಸುಳಾದಿಯಲ್ಲಿ ಹೇಳಿದ್ದಾರೆ. ಬಿಂಬಾಪರೋಕ್ಷ ಎಂಥಾದ್ದೆಂದರೆ

"ಅನಿತರೊಳು ಪ್ರಾಜ್ಞನ ಸಂದರುಶನವಾಗೆ ಘನವಾದ ಸಂಚಿತನಾಶವಹುದು." ಎಂತ ಅನಾದಿ ಕರ್ಮ ಸುಳಾದಿ. ಆದುದರಿಂದ ಪ್ರಾಜ್ಞನ ಮೂರ್ತಿಯನ್ನು ಶ್ರೀ ಭೂ ರೂಪಗಳನ್ನು ಕಂಡು "ಮತ್ಸ್ಯೋಚ್ಚಾ ಮಂಟಪಾಂತಂಚ" ಎಂಬ ಪ್ರಕಾಶ ಸಂಹಿತಾ ರೀತಿಯಿಂದ ಮನುಜೋತ್ತಮ ಮಂಟಪ ಪೀಠಾವರಣಸ್ಥರ- ಎಂತ ತೃಣ ಪ್ರಾರಂಭ ಮಾಡಿ ಎಂಬ ಸುಳಾದಿಯಲ್ಲಿ ಹೇಳಿದ ರೀತಿಯಿಂದ, ಮಹಾ ಮಂಟಪವನ್ನು ಪೀಠದೇವತೆಗಳನ್ನು ಕಂಡು ಅನಂತರ ತನ್ನ ಜೀವ ದರ್ಶನವಾಗಬೇಕೆಂದು, ಸಾಮಾನ್ಯ ಧ್ಯಾನ ಸುಳಾದಿಯಲ್ಲಿ ಕುರುಹು ತೋರಿಸುವ ನಿಜ ಸ್ವರೂಪವೆಂದು ಹೇಳಿದ್ದುದರಿಂದ ಒಂದು ರೂಪದಿಂದ ಶ್ರೀ ಹರಿಯು ಮಾತನಾಡುತ್ತಾ ಇರೋಣವೋ ಇವನಿಗೆ ಪ್ರಯೋಜನವಿಲ್ಲವಾದುದರಿಂದ ಅದೇ ದೇವತೆಗಳ ಸಹಿತ ಸಂದರ್ಶನವಾಗಬೇಕಾದರೆ "ಏಹ್ಯಗ್ನೇ" ಎಂಬ ವೇದದಿಂದ ಕರೆದಾಗ್ಯೂ ದೇವತೆಗಳಲ್ಲಿ ಅಧಿಕಾರದಿಂದ ಅಧಮನಾದ ಅಗ್ನಿಯೂ ಕೂಡ ಈ ಮನುಷ್ಯನ ಸಮೀಪಕ್ಕೆ ಬರುವುದು ಪರಮ ಅಸಾಧ್ಯವೇ ಸರಿ. ಏಕೆಂದರೆ

*"ಅದೃಷ್ಯತ್ವಮಸಸ್ಪರ್ಶಂ ಅಸಂಭಾಷಣಮೇವಚ।*
*ಸುರೈರಪಿನ್ಯಜಾತ್ಯೇಸ್ತು ಗುಹ್ಯ ಧರ್ಮಾದಿವೇಕಸಾಂ॥"*

ಎಂದು ತಾತ್ಪರ್ಯ ನಿರ್ಣಯ ವಾಕ್ಯ. ಅಂದರೆ ದೇವತೆಗಳೇ ತಾವು ಶಾಪಗ್ರಸ್ತರಾಗಿ ಭೂಮಿಯಲ್ಲಿ ಮನುಷ್ಯರಾದಾಗ್ಯೂ ಅಂತಹ ಮನುಷ್ಯರನ್ನೂ ಕೂಡ ದೇವತೆಗಳು ಕಣ್ಣೆತ್ತಿ ನೋಡತಕ್ಕವರಲ್ಲ. ಅವರನ್ನು ಸ್ಪರ್ಶ ಮಾಡತಕ್ಕವರಲ್ಲ. ಸಂಭಾಷಣೆ ಮಾಡುವುದಂತೂ ದೂರತೋಪಾಸ್ತವಾದುದು. ಇದೇ ದೇವತೆಗಳ ಪರಮ ಗೋಪ್ಯ ಧರ್ಮ ಎಂತ ಅರ್ಥವು. - ಶಾಪ ಗ್ರಸ್ತ ದೇವತೆಗಳೆ ಅವರಿಗೆ ಪಂಚಮರು ಹೇಗೋ ಹಾಗೆ ಆದುದರಿಂದ ನಾವು ಕರಿಯೋಣವು ದೇವತೆಗಳು ಬರುವುದು ಹೇಳಕೆಲಸವಿಲ. ದೇವತೆಗಳ ಮರ್ಯಾದೆಯು, ದೇವಗಂಧರ್ವಾ ಸಂಗಡ ಸಾಕ್ಷಾತ್ತಾಗಿ ಮತನಾಡೋಣ- ಮನುಷ್ಯ ಗಂಧರ್ವರು ಮನುಷ್ಯರ ವರ್ತಮಾನವನು ಗಂಧರ್ವರಿಗೆ ತಿಳಿಸೋಣ ಇಂತಹ ಪುಣ್ಯಾದಿಗಳಾದುದರಿಂದ ಮನುಷ್ಯನು ಅಶುಚಿಕಾಲದಲ್ಲಿ ಶ್ರೀಹರಿಯ ನಾಮ ಉಚ್ಚರಿಸ ಬಹುದಾದರೂ ದೇವತೆಗಳ ಹೆಸರು ಹೇಳಕೂಡದು ಎಂದು ವಿಷ್ಣುರಹಸ್ಯ ವಾಕ್ಯವನ್ನು ಹೇಳಿರುವೆನಾದುದರಿಂದ ಪರಮಾತ್ಮನ ಪೀಠಪೂಜೆ ಮಾಡುವ ಕಾಲದಲ್ಲಿ,

ಅಧರ್ಮಾದ್ಯಭಿಮಾನಿ ನಿರುರುತಿ ಮನ್ಮಥಾದಿಗಳನ್ನು ಪೂಜಿಸದೆ ಸುಮ್ಮಗಿರೋಣ ಮಾತ್ರದಿಂದ ಅವರು ಇವನು ಪಾಪಿಷ್ಟನಾಗಲಿ ಅಜ್ಞಾನಿಯಾಗಲಿ ವಿರಕ್ತನಲ್ಲದೆ ಹೋಗಲಿ ನಿರ್ಭಾಗ್ಯದ ದರಿದ್ರನಾಗಲಿ ಎಂತ ಆ ಪರಮತ್ಮನ ಪೀಠದ ನಾಲ್ಕು ಭಾಗದಲ್ಲಿಯೂ ನಾಲ್ಕು ದೇವತೆಗಳು ಕುಳಿತುಕೊಂಡು ಶಾಪ ಕೊಡುತ್ತಾರಾದುದರಿಂದ ಆ ಭಗವತ್ಸನ್ನಿಧಿಯಲ್ಲಿ ಈ ಅಂಗ ದೇವತೆಗಳಾದ ಪರಿವಾರಕ್ಕೆ ಉಪಚಾರ ಮಾಡೋಣವೇ ಪರಮಾತ್ಮನಿಗೆ ಕೇವಲ ಪ್ರೀತಿ. ಹೇಗೆಂದರೆ ಬಾಲಕರಿಗೆ ಫಲಗಳನ್ನು ಕೊಟ್ಟರೆ ಜನಕನಿಗೆ ಹೇಗೆ ವಿಶೇಷ ಸಂತೋಷವಾಗುವುದೋ ಹಾಗೆ ಆದಿಕಾರಿದೇವತೆಗಳ ಉಪಾಸನೆಯನ್ನು ಬಿಟ್ಟು ಪೂಜಾವಿಧಾನ ವಿಸ್ತಾರೋ ವಿಜ್ಞೇಯಃ ಪಂಚರಾತ್ರಕಃ॥ ಎಂದು ಪೂಜೆಗೋಸ್ಕರ ಹುಟ್ಟಿದ ಪಂಚರಾತ್ರವೇ ಬೇಡವೆಂಬ ಅಜ್ಞಾನಿಯನ್ನು ದೇವತೆಗಳು ನೋಡಿ ಈ ಭಕ್ತ್ಯಧಮನು ಕಳ್ಳತನದಿಂದ ನಮ್ಮ ಸ್ವಾಮಿಯ ಸಮೀಪಕ್ಕೆ ಬಂದನು ಎಂದರೆ ಅವನ ಮೂಢ ಭಕ್ತಿಯನ್ನು ಕಡಿಮೆ ಮಾಡಿ ನಾವು ನೀಚ ಜನ್ಮಕ್ಕೆ ಹಾಕದೆ ಬಿಡೆವು. ಎಂತ ದೇವತೆಗಳ ಸಂಕಲ್ಪವೂ ಭಗವತ್ಸಂಕಲ್ಪವೂ ಹೀಗೆಯೇ ಸರಿ ಎಂತ ಶಾಂಡಿಲ್ಯರು ಹೇಳುತ್ತಾರೆ. ಪ್ರಮಾಣ:–

*ಅಪೂಜಿತಾ ಅಧರ್ಮಾದಿ ದಾತಾರೋ ಯಜತಾಂ ಸುರಾಃ।*
*ಯಥಾ ಪ್ರಜ್ಞಾ ಪ್ರಾಪಯತಿ ಮಾನವೈರಪುರಸ್ಕೃತಾಃ।*
*ಅವಜ್ಞಾತಾ ರಾಜ ಭೃತ್ಯಾಃ ನೇಚ್ಛಂತಿ ಸ್ವಾಮಿ ಸೇವನಂ*

ಅಂದರೆ ದೇವತೆಗಳು ನಮ್ಮನ್ನು ಈ ಮನುಷ್ಯ ಪೂಜಿಸದೇ ಇದ್ದಾಗ್ಯೂ ಶ್ರೀ ಹರಿಯನ್ನು ಮಾತ್ರ ಇವನು ಪೂಜಿಸಿ ದಿವ್ಯನಾಗಲಿ. ಎಂದು ಸುಮ್ಮನಿರುವುದಿಲ್ಲ. ಆ ದೇವತೆಗಳು ರಾಜ ಭೃತ್ಯರಂತೆ ಈ ಜೀವನನ್ನು ಏತಕ್ಕೆ ನೂಕಬೇಕು ಎಂದರೆ ಈ ಜೀವನು ಯಾವ ಜ್ಞಾನದಿಂದ ಶ್ರೀಹರಿಯನ್ನು ತಿಳಿಯಬೇಕೋ ಆಜ್ಞಾನವೇ ಬ್ರಹ್ಮ ವಾಯುಗಳ ಶರೀರವಾಗಿ ಮಹತ್ತತ್ತ್ವವೆನಿಸಿಕೊಳ್ಳುವುದು. ಪೂಜೆಯನ್ನು ಮಾಡಬೇಕೆಂಬ ಹರಿರೂಪವಾದ ದೀಕ್ಷೆಯೇ ರುದ್ರದೇವರ ದೇಹವು, ಬುದ್ಧಿಯೇ ಉಮಾದೇವಿಯರ ಶರೀರವು. ಮನಸ್ಸೇ ಇಂದ್ರ ಕಾಮರ ಶರೀರವು. ಚಿತ್ತವೇ ಗರುಡ ದೇವರ ಶರೀರವು. ಮುಂದಿನ ಪ್ರಕರಣದಲ್ಲಿ ಪ್ರಮಾಣ ಬರೆಯುತ್ತೇನೆ. ಈ ಪ್ರಕಾರ ಸಮಸ್ತ ತತ್ವಗಳನ್ನೂ ದೇವತೆಗಳಿಂದ ತಿಳಿಸಿಕೊಳ್ಳದೆ

"ಆನಿತರೊಳು ಪ್ರಾಜ್ಞನ ಸಂದರುಶನವಾಗೆ ಘನವಾದ ಸಂಚಿತನಾಶವಹುದು." ಎಂತ ಅನಾದಿ ಕರ್ಮ ಸುಳಾದಿ. ಆದುದರಿಂದ ಪ್ರಾಜ್ಞನ ಮೂರ್ತಿಯನ್ನು ಶ್ರೀ ಭೂ ರೂಪಗಳನ್ನು ಕಂಡು "ಮತ್ಯೋಚ್ಚಾ ಮಂಟಪಾಂತಂಚ" ಎಂಬ ಪ್ರಕಾಶ ಸಂಹಿತಾ ರೀತಿಯಿಂದ ಮನುಜೋತ್ತಮ ಮಂಟಪ ಪೀಠಾವರಣಸ್ಥರ- ಎಂತ ತೃಣ ಪ್ರಾರಂಭ ಮಾಡಿ ಎಂಬ ಸುಳಾದಿಯಲ್ಲಿ ಹೇಳಿದ ರೀತಿಯಿಂದ, ಮಹಾ ಮಂಟಪವನ್ನು ಪೀಠದೇವತೆಗಳನ್ನು ಕಂಡು ಅನಂತರ ತನ್ನ ಜೀವ ದರ್ಶನವಾಗಬೇಕೆಂದು, ಸಾಮಾನ್ಯ ಧ್ಯಾನ ಸುಳಾದಿಯಲ್ಲಿ ಕುರುಹು ತೋರಿಸುವ ನಿಜ ಸ್ವರೂಪವೆಂದು ಹೇಳಿದ್ದುದರಿಂದ ಒಂದು ರೂಪದಿಂದ ಶ್ರೀ ಹರಿಯು ಮಾತನಾಡುತ್ತಾ ಇರೋಣವೋ ಇವನಿಗೆ ಪ್ರಯೋಜನವಿಲ್ಲವಾದುದರಿಂದ ಆದೇ ದೇವತೆಗಳ ಸಹಿತ ಸಂದರ್ಶನವಾಗಬೇಕಾದರೆ "ಏಹ್ಯಗ್ನೇ" ಎಂಬ ವೇದದಿಂದ ಕರೆದಾಗ್ಯೂ ದೇವತೆಗಳಲ್ಲಿ ಅಧಿಕಾರದಿಂದ ಅಧಮನಾದ ಅಗ್ನಿಯೂ ಕೂಡ ಈ ಮನುಷ್ಯನ ಸಮೀಪಕ್ಕೆ ಬರುವುದು ಪರಮ ಅಸಾಧ್ಯವೇ ಸರಿ. ಏಕೆಂದರೆ

*"ಅದೃಷ್ಯತ್ವಮಸಸ್ಪರ್ಶಂ ಅಸಂಭಾಷಣಮೇವಚ।*
*ಸುರೈರಪಿನ್ಯಜಾತ್ಯೇಸ್ತು ಗುಹ್ಯ ಧರ್ಮಾದಿವೇಕಸಾಂ॥"*

ಎಂದು ತಾತ್ಪರ್ಯ ನಿರ್ಣಯ ವಾಕ್ಯ. ಅಂದರೆ ದೇವತೆಗಳೇ ತಾವು ಶಾಪಗ್ರಸ್ತರಾಗಿ ಭೂಮಿಯಲ್ಲಿ ಮನುಷ್ಯರಾದಾಗ್ಯೂ ಅಂತಹ ಮನುಷ್ಯರನ್ನೂ ಕೂಡ ದೇವತೆಗಳು ಕಣ್ಣೆತ್ತಿ ನೋಡತಕ್ಕವರಲ್ಲ. ಅವರನ್ನು ಸ್ಪರ್ಶ ಮಾಡತಕ್ಕವರಲ್ಲ. ಸಂಭಾಷಣೆ ಮಾಡುವುದಂತೂ ದೂರತೋಪಾಸ್ತವಾದುದು. ಇದೇ ದೇವತೆಗಳ ಪರಮ ಗೋಪ್ಯ ಧರ್ಮ ಎಂತ ಅರ್ಥವು. - ಶಾಪ ಗ್ರಸ್ತ ದೇವತೆಗಳೆ ಅವರಿಗೆ ಪಂಚಮರು ಹೇಗೋ ಹಾಗೆ ಆದುದರಿಂದ ನಾವು ಕರಿಯೋಣವು ದೇವತೆಗಳು ಬರುವುದು ಹೇಳಕೆಲಸವಿಲ. ದೇವತೆಗಳ ಮರ್ಯದೆಯು, ದೇವಗಂಧರ್ವಾ ಸಂಗಡ ಸಾಕ್ಷಾತ್ತಾಗಿ ಮತನಾಡೋಣ- ಮನುಷ್ಯ ಗಂಧರ್ವರು ಮನುಷ್ಯರ ವರ್ತಮಾನವನು ಗಂಧರ್ವರಿಗೆ ತಿಳಿಸೋಣ ಇಂತಹ ಪುಣ್ಯಾದಿಗಳಾದುದರಿಂದ ಮನುಷ್ಯನು ಅಶುಚಿಕಾಲದಲ್ಲಿ ಶ್ರೀಹರಿಯ ನಾಮ ಉಚ್ಚರಿಸ ಬಹುದಾದರೂ ದೇವತೆಗಳ ಹೆಸರು ಹೇಳಕೂಡದು ಎಂದು ವಿಷ್ಣುರಹಸ್ಯ ವಾಕ್ಯವನ್ನು ಹೇಳಿರುವೆನಾದುದರಿಂದ ಪರಮಾತ್ಮನ ಪೀಠಪೂಜೆ ಮಾಡುವ ಕಾಲದಲ್ಲಿ,

ಅಧರ್ಮಾದ್ಯಭಿಮಾನಿ ನಿರುರುತಿ ಮನ್ಮಥಾದಿಗಳನ್ನು ಪೂಜಿಸದೆ ಸುಮ್ಮಗಿರೋಣ ಮಾತ್ರದಿಂದ ಅವರು ಇವನು ಪಾಪಿಷ್ಟನಾಗಲಿ ಅಜ್ಞಾನಿಯಾಗಲಿ ವಿರಕ್ತನಲ್ಲದೆ ಹೋಗಲಿ ನಿರ್ಭಾಗ್ಯದ ದರಿದ್ರನಾಗಲಿ ಎಂತ ಆ ಪರಮತ್ಮನ ಪೀಠದ ನಾಲ್ಕು ಭಾಗದಲ್ಲಿಯೂ ನಾಲ್ಕು ದೇವತೆಗಳು ಕುಳಿತುಕೊಂಡು ಶಾಪ ಕೊಡುತ್ತಾರಾದುದರಿಂದ ಆ ಭಗವತ್ಸನ್ನಿಧಿಯಲ್ಲಿ ಈ ಅಂಗ ದೇವತೆಗಳಾದ ಪರಿವಾರಕ್ಕೆ ಉಪಚಾರ ಮಾಡೋಣವೇ ಪರಮಾತ್ಮನಿಗೆ ಕೇವಲ ಪ್ರೀತಿ. ಹೇಗೆಂದರೆ ಬಾಲಕರಿಗೆ ಫಲಗಳನ್ನು ಕೊಟ್ಟರೆ ಜನಕನಿಗೆ ಹೇಗೆ ವಿಶೇಷ ಸಂತೋಷವಾಗುವುದೋ ಹಾಗೆ ಅದಿಕಾರಿದೇವತೆಗಳ ಉಪಾಸನೆಯನ್ನು ಬಿಟ್ಟು ಪೂಜಾವಿಧಾನ ವಿಸ್ತಾರೋ ವಿಜ್ಞೇಯಃ ಪಂಚರಾತ್ರಕಃ। ಎಂದು ಪೂಜೆಗೋಸ್ಕರ ಹುಟ್ಟಿದ ಪಂಚರಾತ್ರವೇ ಬೇಡವೆಂಬ ಅಜ್ಞಾನಿಯನ್ನು ದೇವತೆಗಳು ನೋಡಿ ಈ ಭಕ್ತ್ಯಧಮನು ಕಳ್ಳತನದಿಂದ ನಮ್ಮ ಸ್ವಾಮಿಯ ಸಮೀಪಕ್ಕೆ ಬಂದನು ಎಂದರೆ ಅವನ ಮೂಢ ಭಕ್ತಿಯನ್ನು ಕಡಿಮೆ ಮಾಡಿ ನಾವು ನೀಚ ಜನ್ಮಕ್ಕೆ ಹಾಕದೆ ಬಿಡೆವು. ಎಂತ ದೇವತೆಗಳ ಸಂಕಲ್ಪವೂ ಭಗವತ್ಸಂಕಲ್ಪವೂ ಹೀಗೆಯೇ ಸರಿ ಎಂತ ಶಾಂಡಿಲ್ಯರು ಹೇಳುತ್ತಾರೆ. ಪ್ರಮಾಣ:-

*ಅಪೂಜಿತಾ ಅಧರ್ಮಾದಿ ದಾತಾರೋ ಯಜತಾಂ ಸುರಾಃ।*
*ಯಥಾ ಪ್ರಜ್ಞಾ ಪ್ರಾಪಯತಿ ಮಾನವ್ಯೈರಪುರಸ್ಕೃತಾಃ।*
*ಅವಜ್ಞಾತಾ ರಾಜ ಭೃತ್ಯಾಃ ನೇಚ್ಛಂತಿ ಸ್ವಾಮಿ ಸೇವನಂ*

ಅಂದರೆ ದೇವತೆಗಳು ನಮ್ಮನ್ನು ಈ ಮನುಷ್ಯ ಪೂಜಿಸದೇ ಇದ್ದಾಗ್ಯೂ ಶ್ರೀ ಹರಿಯನ್ನು ಮಾತ್ರ ಇವನು ಪೂಜಿಸಿ ದಿವ್ಯನಾಗಲಿ. ಎಂದು ಸುಮ್ಮನಿರುವುದಿಲ್ಲ. ಆ ದೇವತೆಗಳು ರಾಜ ಭೃತ್ಯರಂತೆ ಈ ಜೀವನನ್ನು ಏತಕ್ಕೆ ನೂಕಬೇಕು ಎಂದರೆ ಈ ಜೀವನು ಯಾವ ಜ್ಞಾನದಿಂದ ಶ್ರೀಹರಿಯನ್ನು ತಿಳಿಯಬೇಕೋ ಅಜ್ಞಾನವೇ ಬ್ರಹ್ಮ ವಾಯುಗಳ ಶರೀರವಾಗಿ ಮಹತ್ತತ್ವವೆನಿಸಿಕೊಳ್ಳುವುದು. ಪೂಜೆಯನ್ನು ಮಾಡಬೇಕೆಂಬ ಹರಿರೂಪವಾದ ದೀಕ್ಷೆಯೇ ರುದ್ರದೇವರ ದೇಹವು, ಬುದ್ಧಿಯೇ ಉಮಾದೇವಿಯರ ಶರೀರವು. ಮನಸ್ಸೇ ಇಂದ್ರ ಕಾಮರ ಶರೀರವು. ಚಿತ್ತವೇ ಗರುಡ ದೇವರ ಶರೀರವು. ಮುಂದಿನ ಪ್ರಕರಣದಲ್ಲಿ ಪ್ರಮಾಣ ಬರೆಯುತ್ತೇನೆ. ಈ ಪ್ರಕಾರ ಸಮಸ್ತ ತತ್ವಗಳನ್ನೂ ದೇವತೆಗಳಿಂದ ತಿಳಿಸಿಕೊಳ್ಳದೆ

ಶ್ರೀ ಹರಿಯೇ ಇವರುಗಳಿಗೆ ಬಲಾತ್ಕಾರವಾಗಿ ಬ್ರಹ್ಮ ಸೃಷ್ಟಿ ಕಾಲದಲಿ ತತ್ವಗಳನ್ನು ಇವರ ಆಧೀನಕ್ಕೆ ಕೊಟ್ಟು ಅದರಲ್ಲಿ ಅಧಿಕಾರ ಕೊಟ್ಟಿರುವುದರಿಂದ ಇವರು ಸಂತುಷ್ಟರಾಗದೆ ಹೋದರೆ ಅವರ ಅಂತರ್ಯಾಮಿಯು ಸಂತುಷ್ಟನಾಗುವುದಿಲ್ಲ. ಆದುದರಿಂದ ಈ ಜೀವನ, ಇವರ ಶರೀರರೂಪಗಳಾದ ತತ್ವಗಳನ್ನು ತಸ್ಕರಮಾಡಿ ಅನ್ಯಾಯದ ದ್ರವ್ಯದಿಂದ ಶ್ರೀಹರಿಯನ್ನು ಪ್ರೀತಿಪಡಿಸುತ್ತೇನೆಂಬ ಭ್ರಾಂತನನ್ನು ದೇವತೆಗಳು ಕೆಳಗೆ ನೂಕುವುದೇ ಸಿದ್ಧವು. ಆದುದರಿಂದ ಆ ದೇವತೆಗಳನ್ನು ಪ್ರೀತಿಪಡಿಸಿ ಅವರು ಕರುಣದಿಂದ ಕೊಟ್ಟ ತತ್ವಗಳಿಂದ ಭಗವದ್ಭಜನೆ ಮಾಡಿ ಶ್ರೀ ಹರಿ ಗುರು ಪ್ರಸಾದವನ್ನು ಪಡಿಯುವವನೇ ಮುಖ್ಯಾಧಿಕಾರಿಯು ಎಂದರ್ಥವು. ಆದರ ಮುಂದಿನ ಶಾಂಡಿಲ್ಯ ತತ್ವದ ಶ್ಲೋಕ:-

*"ಹರಿದ್ವಿಷೋ ದೇವ ಭಕ್ತ: ಹರಿಭಕ್ತಾಸ್ಸುರದ್ವಿಷಃ ಉಭಯೋ ತೇ ವ್ರಜಂತ್ಯದ್ಧಾ ಯಾತನಾನ್ನಾರುಣಾ ಲಯಾನ್। ಯಥಾ ಶೃತಿ ಯಥಾಚಾರಃ ಕರ್ತವ್ಯೋ ಹಿತಮಿಚ್ಛುಭಿ:। ತಸ್ಮಾದ್ವಿಷ್ಣ್ವನುಗಾ ದೇವಾನ್ ವಿಷ್ಣುಂಚೈವ ಯಥಾಕ್ರಮಂ। ಪೂಜಯನ್ ರಮಣಾಸ್ವೇನ ನಿಯತೇನಚವೈನರ:। ನಿಜಂಗತಿಮವಾಪ್ನೋತಿ ನಾತ್ರ ಕಾರ್ಯ ವಿಚಾರಣಾ। ಏವಂ ವಿಜ್ಞಾತ ಯೋಗೇನ ಯತ್ಕೃತಂ ಕರ್ಮವಿದ್ಯತೆ।"*

ಎಂದು ಶಾಂಡಿಲ್ಯತತ್ವ ಷೋಡಶೋಧ್ಯಾಯದಲ್ಲಿ ಯಥಾ ಕ್ರಮದಿಂದ ಭಗವದ್ಭಜನೆಯೂ, ಭಗವದ್ಭಕ್ತರ ಭಜನೆಯೂ, ಸ್ವಸ್ವಾಶ್ರಮ ನಿಯತ ನಿಷ್ಕಾಮ ಕರ್ಮಾನುಷ್ಠಾನವೇ ನಿರ್ಗುಣ ಭಕ್ತನಿಗೆ ಅಪರೋಕ್ಷ ಸಾಧಕವಾಗಿ ಮುಕ್ತಿಪ್ರದವಾಗುತ್ತದೆ. ಎಂದು ಹೇಳಿದ್ದಾರೆ. ಸರ್ವಜ್ಞರಾಯರ ವಚನ:-

*"ತದ್ಭಕ್ತತ್ವಾದ್ದೇವಕಾಶ್ಚಾ: ಪೂಜ್ಯ: ವಿಶೇಷತಸ್ತೇಷು ಯೋ ಅತ್ಯಂತ ಭಕ್ತಾ: ಸಂಪೂಜಿತೋ ವಾಸುದೆವ: ಸ ಮುಕ್ತಿಂ ದೇವಾ ಪೂಜಿತೋ ದು:ಖಮೇವ।। ಸ್ವತಂತ್ರತ್ವಾತ್ ಸುಖ ದು:ಖ ಪ್ರದೋ ಅಸೌ ನಾನ್ಯ: ಸ್ವತಂತ್ರಸ್ತದ್ವಶಾ ಯತ್ಸಮಸ್ತಾ: ।।"*

ಎಂತಲೂ "ಏತ್ಯೆಃ ಧರ್ಮೋ ವಿಷ್ಣುನಾ ಪೂರ್ವಕಲ್ಪೈ್ತಃ ಸರ್ವೈರ್ಮಾಣ್ಯೈಃ ವಿಷ್ಣುದೇವಾಭಿ ಪೂಜ್ಯ:। ತದ್ಭಕ್ತಿರೇವಾ ಅಖಿಲಾನಾಂಚ ಧರ್ಮೋ ಯಥಾ

ಯೋಗ್ಯಂ ಜ್ಞಾನಮಸ್ಯಾಪಿ ಪೂಜಾ। ಪಿತಾ ಗುರುಃ ಪರಮಂಚ ದೈವತಂ ವಿಷ್ಣುಸ್ಸರ್ವೇಷಾಂ ಪೂಜ್ಯಃ ಸ ಏವ॥" ಎಂತ ತಾತ್ಪರ್ಯ ನಿರ್ಣಯ ವಚನವು.

ಇಂತಹ ಸರ್ವ ಸ್ವತಂತ್ರನಾದ ಪಿತೃವಾದ ಗುರುವಾದ ಪರದೇವತೆಯೇ ಸರ್ವ ಜಾತಿ ಆಶ್ರಮಗಳಿಂದಲೂ ಪೂಜಿಸಿಕೊಳ್ಳತಕ್ಕವನು ಎಂದು ಹೇಳಿದ್ದಾರೆ.

ಆಕ್ಷೇಪ:- ಅಶುಚಿಕಾಲದಲಿ ಶ್ರೀ ಹರಿನಾಮೋಚ್ಚಾರಣೆ ಮಾಡಬಹುದು. ದೇವತಾ ಋಷಿಗಳ ನಾಮೋಚ್ಚಾರಣೆ ಮಾಡಕೂಡದು ಎಂದು ಹೇಳಿದರಷ್ಟೆ- ಸುಳಾದಿ:- "ನಾಮವೇ ಕಾಯುವುದು ನಾಮವೇ ಉಳಹುವುದು. ನಾಮವೇ ಘನದುರಿತ ಸಂಹಾರ ಮಾಡುವುದು" ಎಂತಲೂ ಮತ್ತು ಹರಿನಾಮ ಸುಳಾದಿಯಲ್ಲಿ "ಹರಿನಾಮ ಸಕಲ ಪ್ರಾಯಶ್ಚಿತ್ತಕ್ಕೆ ಮೊದಲು ಎಂದು ಹೇಳಿದ್ದಾರಷ್ಟೆ- ಇತ್ತ ಮುಂದಾಗಿ ಇನ್ಯಾವ ಭಯ ನಮಗಿಲ್ಲ" ಎಂದು ಇದರ ಜೊತೆಯಲ್ಲಿ ಹೇಳಿರುವುದರಿಂದ ಮತ್ತು ನಾಮ್ನಾ ಮಹಾಘೋಘ ಹಾನಿಃ ತೇನ ದೇಹಹೃದೋಃ ಶುಚಿಃ॥ ಎಂಬ ಆದಿತ್ಯ ಪುರಾಣ ವಾಕ್ಯದಿಂದಲೂ ಅಶುಚಿ ಕಾಲದಲ್ಲಿ ಭಗವನ್ನಾಮೋಚ್ಚಾರಣೆಯಿಂದ ಶುಚಿರ್ಭಾವವೂ ಸ್ವತ ಏವ ವದಗುತ್ತದೆ. ಆದುದರಿಂದ ಇಂತಹ ಉತ್ತಮ ಸ್ನಾನವನ್ನು ಬಿಟ್ಟು ಜಡವಾದ ಉದಕದಲ್ಲಿ ಜಡದೇಹವನ್ನು ಮುಳುಗಿಸಲು ಅಧಮ ಸ್ನಾನವೇ ಹೊರತು, ದೇವತಾ ಋಷಿಗಳ ನಾಮೋಚ್ಚಾರಣೆ ಕೂಡದು ಎಂಬ ಅಲ್ಪ ದೀಕ್ಷೆಯನ್ನು ಜ್ಞಾನಿಗಳು ಏಕೆ ಆಶ್ರಯಿಸಬೇಕೆಂದರೆ, ಸಮಾಧಾನ॥ ಕರ್ಮ ದೀಕ್ಷೆಗಳಿಗಿಂತಲೂ ನಾಮೋಚ್ಚಾರಣೆಯು ಅತ್ಯುತ್ತಮವೇ ಸರಿ ಎನ್ನುವುದೇ ಸಿದ್ಧಾಂತವು. ಕರ್ಮ ದೀಕ್ಷೆ ನಡಿಸ ಹೇಳತಕ್ಕ ಭಗವದಾಜ್ಞೆಯೇ ನೀಚರೂಪವೆನ್ನುವುದೂ ಸಿದ್ಧ. ಆದಾಗ್ಯೂ ಆ ಕರ್ಮದ ಮರ್ಯಾದೆಯನ್ನು ಬಿಡೋಣವೇ ಭಗವದ್ರೋಹವು. ಬುದ್ಧಿ ಪೂರ್ವಕ ಆಜ್ಞೋಲ್ಲಂಘನೆ ಮಾಡಿದರೆ ಶ್ರೀಹರಿಯನ್ನೇ ಸಂಹಾರ ಮಾಡಿದಂತಹ ಸಂಪೂರ್ಣ ಕೃತ್ಯ ಸಾಧಿಸಿದ ಪಾಪ- ಬುದ್ಧಿ ಪೂರ್ವಕವಲ್ಲದೆ ಅಜ್ಞಾನದಿಂದಲೂ ಪ್ರಮಾದ ದಿಂದಲೂ ಕರ್ಮಗಳನ್ನು ಬಿಟ್ಟರೆ ಆ ಪಾಪಗಳೂ ಕೊಡ ಅಪರಾಧರೂಪವಾಗಿ, ಜೀವನ ತಲೆಯು ಮೇಲೆ ಭಾರವಾಗಿ ಕೂತಿರತಕ್ಕದ್ದೇ ಸರಿ. ಪ್ರಮಾಣ:-

*ವರ್ಷಾಚ್ಚತುರ್ದಶಾದೂರ್ಧ್ವಂ ಯೇ ವಿಷ್ಣುಃ ಶುಭಾಶುಭಂ*
*ತೇಷಾಮಜ್ಞಾನದೋ ದೋಷಃ ಸುಮಹಾನ್ ಕರ್ಮಜಾದಪಿ*

ಎಂದು ಏಕಾದಶ ತಾತ್ಪರ್ಯ ವಚನವು.

ಆದ ಪ್ರಯುಕ್ತ ಆ ಮಹಾಮಹಿಮನ ಪದವನ್ನು ನಂಬುವುದರಿಂದಲೂ, ಕರ್ಮ ದೀಕ್ಷೆಯಿಂದಲೂ ನಾಮೋಚ್ಚರಣೆಯಿಂದಲೂ ಬುದ್ಧಿಪೂರ್ವಕವಲ್ಲದ ಪ್ರಮದಾಜ್ಞಾನಕೃತ ಅನಂತಾನಂತಾಪರಾಧಗಳು ಭಸ್ಮವಾಗಿ ಹೋಗುತ್ತವೆ. ಬುದ್ಧಿ ಪೂರ್ವಕ ಮಾಡಿದ ಪಾಪಗಳೂಕೂಡ ಅಧಿಕವಾಗಿ ಅನುಭವಿಸಬೇಕಾದದ್ದನ್ನು ಸ್ವಾಮಿಯು ಸಂಕೋಚಾನುಭವ ಕೊಡುತ್ತಾನೆ ಹೊರತು. ನಿಶ್ಶೇಷ ಸಂಹಾರ ಮಾಡುವುದಿಲ್ಲ. ಅದೇ ಸ್ವಾಮಿತ್ವದ ಲಕ್ಷಣವು. ಸ್ವಯೋಗ್ಯ ಪೂರ್ಣ ಭಕ್ತಿಯಿಂದ ನಾರಾಯಣ ಎಂದು ಕೂಗಿದರೆ ಸರ್ವಾರಿಷ್ಟವೂ ಪ್ರಾರಬ್ಧವೂ ಏಕೆ ಭಸ್ಮವಾಗಬಾರದೆಂದರೆ ಹಾಗೆ ಆಗುವ ಪಕ್ಷದಲ್ಲಿ ಆ ಶರೀರವು ತಕ್ಷಣದಲ್ಲಿಯೇ ಪಾತವಾಗಿ ಜೀವನಿಗೆ ಶರೀರ ವಿಯೋಗವಾಗುವುದಿಲ್ಲವಾದ ಕಾರಣ ನಿರ್ಗುಣ ಭಕ್ತನು ಅನುಭವಿಸುವ ಸಂಚಿತ ಶೇಷವೇ, ಇವನು ಮುಕ್ತನಾಗುವ ತನಕ ಪ್ರಾರಬ್ಧವೆನಿಸಿಕೊಂಡು ಅಪರೋಕ್ಷಜ್ಞಾನ ಹುಟ್ಟುವುದಕ್ಕೆ ಪೂರ್ವ ನರಕಗಳನ್ನು ಕೊಡದೇ ಬಿಡದು. ಪ್ರಮಾಣ :–

*"ಅಪರೋಕ್ಷ ದೃಶೇ ಪ್ರಾಗ್ವೈ ಯೋಗೀ ಕರ್ಮಣಿ ಸಂಚರೇತ್। ನರಕಾದಿ ಮಹಾದುಃಖಂ ಪ್ರಾಪ್ನೋತ್ಯೇವ ನ ಸಂಶಯಃ। ನಾಪ್ನೋತಿ ಕರ್ಮಣಾಂ ಲೇಪಮಪರೋಕ್ಷ ದೃಶೇಪರಂ।। ತಥಾಪಿತಾದೃಗ್ಯೋಗೀವ ಕರ್ಮ ಕುರ್ಯಾದತಂದ್ರಿತಃ। ಮುರ್ಯಾದಾರ್ಥಂತು ಜಗತಃ ಕುರ್ಯಾದ್ವಿಷ್ಣೋರನುಜ್ಞಯಾ।। ತೇನಾನಂದಸ್ಯ ವೃದ್ಧಿಸ್ಯಾನ್ನೋಕ್ಷೇತಸ್ಯ ಮಹಾತ್ಮನಃ। ತಸ್ಯಾಪಿ ಮಹತಾಂ ದ್ರೋಹೇ ಕುತಶ್ಚಿತ್ಕಾರಣಾಂತರಾತ್। ಅನಂದಸ್ಯ ಭವೇದ್ಧ್ರಾಸೋ ನಾನ್ಯತ್ಕರ್ಮವಿಲಿಪ್ಯತಿ। ಹ್ರಾಸೋ ನಾಮಾನಭಿವ್ಯಕ್ತಿರ್ವಿದ್ಯಮಾನಸ್ಯತಸ್ಯತು।। ಅಬಿವ್ಯಕ್ತಿಸ್ತು ತತ್ರೈವ ವೃದ್ಧಿರಿತ್ಯಭಿಧೀಯತೇ। ವೃಕ್ಷಾದಿ ಜಾತಿ ಜೀವಾನಾಂ ಸಾನಿತ್ಯೇವಯತಸ್ತತಃ। ಮುಕ್ತಾಸ್ತೇನ್ಯೈವರೂಪೇಣ ಯಾಂತಿ ತೇ ಕಾಮರೂಪಿಣಃ।। ಸಂಸೃತಾವನ್ಯಥಾ ಭಾವಃ ತೇಷಾಂ ತನುಭೃತಾಂಕಿಲ। ತತ್ರಸ್ತ್ರಾವೆರ*

*ಮುಕ್ತೇಭ್ಯೋ ವರ ಜಂಗಮ ಮುಕ್ತಗಾಃ। ತೇಭ್ಯೋ ಮಾನುಷ ಮುಕ್ತಾಶ್ಚತೇಭ್ಯೋ ಮುಕ್ತಾದ್ವಿಜಾಸ್ತತಃ। ತತ್ವೋಪದೇಶ ಕರ್ತಾರೋ ಮುಕ್ತಾಸ್ತೇಭ್ಯೋ ಅದಿಕಾಮತಾಃ। ತೇಭ್ಯೋ ಅಧಿಕಾಸ್ತು ಭೂಪಾಲಾ ಮುಕ್ತಿಗಃ ಪರಿಕೀರ್ತಿತಾಃ॥ ಭೂತೇಭ್ಯೋ ಪಿತರಶ್ಚೈವ ಮುಕ್ತಿಗಾಸ್ತೇಭ್ಯ ಏವ ಚ॥ ಋಷಯೋಪ್ಯಧಿಕಾ ಪ್ರೋಕ್ತಾಃ ತೇಭ್ಯೋ ವೈಕರ್ಮಜಾಪರಾಃ। ತೇಭ್ಯೋ ವಹ್ನಿಸ್ತಥಾ ಸೂರ್ಯಸ್ತತೋ ವಾಚಸ್ಪತಿಃಪರಃ। ತಸ್ಮಾದಿಂದ್ರಪದೇ ಮುಕ್ತಾ ತಸ್ಮಾದ್ಗೌರೀ ತತೋಹರಃ। ಹರಾದ್ಬುದ್ಧಿಸ್ತತೋ ಬ್ರಹ್ಮಾ ಮುಕ್ತಾ ಜೀವಾಧಿಕೋಮತಃ॥ ನ ತಸ್ಮಾದಧಿಕಃ ಕೋವಾ ಮುಕ್ತಜೀವೇಷುಚಾಸ್ತಿಹಿ। ಬ್ರಹ್ಮಣಃ ಪರಮವ್ಯಕ್ತಂ ತಸ್ಮಾದ್ವಿಷ್ಣುಃ ಮಹಾಪ್ರಭುಃ॥ ಎಂದು ವಾಯು ಪುರಾಣ ಶಾಂಡಿಲ್ಯ ತತ್ವ ಅಷ್ಟಾದಶಾಧ್ಯಾಯ ಸಿದ್ಧಃ॥"*

ಈ ಪ್ರಮಾಣಗಳನ್ನು ಯಾಕೆ ಉದಹರಿಸಿದೆ ಎಂದರೆ ಜೀವ ಸ್ವರೂಪ ಖಗ ಮೃಗಾದ್ಯಾಕಾರಗಳನ್ನೂ ಮುಕ್ತರ ತಾರತಮ್ಯವನ್ನೂ ಈ ಗ್ರಂಥ ಹೇಳುತ್ತದೆ. ಆದುದರಿಂದ ನಿರೂಪಿಸಿದೆ. ನಾರಾಯಣ ನಾಮಸ್ಮರಣೆಗಿಂತಲೂ ಕರ್ಮ ಮಾಡತಕ್ಕ ಭಗವದಾಜ್ಞೆಯೇ ಹೇಗೆ ನೀಚವೆಂದರೆ- ಶ್ರೀಮದ್ಭಾಗವತ ಅಷ್ಟಮ ಸ್ಕಂಧದಲ್ಲಿ ಬಲಿ ಚಕ್ರವರ್ತಿಯು ಮಾಡಿದ ಯಜ್ಞವು ಅಪೂರ್ಣವಾಗಿದ್ದಾಗ ಶ್ರೀ ವಾಮನನು ಶುಕ್ರಾಚಾರ್ಯರನ್ನು ಕುರಿತು ಇದನ್ನು ಪೂರ್ಣ ಮಾಡಿರೆಂದು ಹೇಳಿದಾಗ ಅವರು

*"ಮಂತ್ರತಸ್ತಂತ್ರತಛಿದ್ರಂ ದೇಶ ಕಾಲಾರ್ಹವಸ್ತೇತಃ ।*
*ಸರ್ವಂ ಕರೋತಿ ನಿಚ್ಛಿದ್ರಮನು ಸಂಕೀರ್ತನಂ ತವ॥"* (೮-೨೨-೧೬)

ಎಂದು ನಿನ್ನ ನಾಮಸ್ಮರಣೆಗೆ ಸಮಾನವಾದ ಪೂರ್ಣತೆಂಯು ಮತ್ತೊಂದಿಲ್ಲವಾದಾಗ್ಯೂ ನಿನ್ನ ಅಜ್ಞೆಯನು ಮೀರಬಾರದೆನ್ನುವುದಕ್ಕಾಗಿ ಈ ಕರ್ಮ ಮಾಡುತ್ತೆನೆಯೇ ವಿನಾ ಪ್ರತ್ಯೇಕವಲ್ಲ ಎಂದು ನಾಮಸ್ಮರಣೆಯ ಮಾಹತ್ಮ್ಯೆಯನ್ನು ನಿರೂಪಿಸಿದಾರೆ. ಮಧ್ಯೆ ಮಧ್ಯೆ ನಾಮೋಚ್ಚಾರಣೆ ವಿನಾ ಕರ್ಮಗಳು ಸಫಲವಾಗಲಾರವು. ಫಲ ಕೆಲಸವಿಲವೆಂದರೆ, ಫಲವೇ ಅಪರೋಕ್ಷ ಜ್ಞಾನವು. ಬ್ರಾಹ್ಮಣನಿಗೆ ಸುರಾ ಪಾನದಿಂದ ಬ್ರಾಹ್ಮಣ್ಯ ಹೋಗುವುದು ಸಿದ್ಧವಷ್ಟೆ- ಪುನಶ್ಚ ಅವನಿಗೆ ಬ್ರಾಹ್ಮಣ್ಯ ಬರಬೇಕಾದರೆ ಸುರೆಯನ್ನು ಮರಳಿಸಿ

ಚನ್ನಾಗಿ ಕುದಿಯುತ್ತಾ ಇರುವುದನ್ನು ಕುಡಿದು ಬದುಕಿಸಿದರೆ ಮತ್ತು ಸಾಂಗವಾಗಿ ಪುನರುಪನಯಾದಿ ಪ್ರಾಯಶ್ಚಿತ್ತ ಕರ್ಮಗಳಿಂದ ಸಹಿತವಾದ ನಾರಾಯಣನ ನಾಮಸ್ಮರಣೆ ಹೊರತು ಕೇವಲ ನಾಮಸ್ಮರಣೆ ಮಾಡೋಣ ಮಾತ್ರದಿಂದ ಬ್ರಾಹ್ಮಣ್ಯ ಬರಲಾರದು. ಎಂದು ಏಕಾದಶ ತಾತ್ಪರ್ಯ ಮುಂದೆ ಬರೆಯುತ್ತೇನೆ. ಆ ಪ್ರಾಯಶ್ಚಿತ್ತ್ತದಿಂದ ದೇಹಹೋಗುವುದೇ ಸಿದ್ಧವಾದರೂ ಅದಕ್ಕೆ ತಕ್ಕ ನರಕಾನುಭವವಿಲ್ಲ ವಾದುದರಿಂದ ಕರ್ಮ ಮಾಡದವನಿಗೆ ಹೇಗೆ ಬ್ರಾಹ್ಮಣ್ಯ ಬಂದೀತು. ? ಯಾಕೆಂದರೆ ಶರೀರ ಜನನಿಯೇ ಒಬ್ಬಳು ಉಪನಯನದಲ್ಲಿ ಬ್ರಾಹ್ಮಣ್ಯ ಜನನಿಯೋ ಗಾಯತ್ರೀದೇವಿಯು. ಇಬ್ಬರು ಮಾತೃಗಳಿಂದ ಹುಟ್ಟಿದ್ದರಿಂದ ದ್ವಿಜನೆಂದು ಹೆಸರು. "ದೇವಾನಾಂ ಧಾಮ ನಾಮಾಸಿ" ಎಂಬ ಸಂಧ್ಯಾ ಭಾಷ್ಯದಲ್ಲಿ ಭಗವದಂಗಗಳಲ್ಲಿ ದೇವತೆಗಳ ಉಪಾಸನೆಯು ಹೇಳಲ್ಪಟ್ಟಿದೆಂಬಾದುದರಿಂದ ಈ ಕಾಲತ್ರಯ ಸಂಧ್ಯಾನಾಮಕ ಪರಬ್ರಹ್ಮೋಪಾಸನೆಯು, ಬಿಂಬಾಪರೋಕ್ಷಕ್ಕೆ ಕೇವಲ ಮುಖ್ಯವಾಗಿ ಶೃತಿಮೂಲಕವು ಉಪಾಸನೆ ಎನಿಸಿಕೊಂಡಿತು. ಸಂಧ್ಯಾಭಾಷ್ಯವನ್ನು ಯಥಾರ್ಥವಾಗಿ ನೋಡದೆ ಹೋದರೆ ಗಾಯತ್ರಿಯ ಮಹಿಮೆಯು ತಿಳಿಯದೆ ಭಕ್ತಿಯೂ ಆ ಕರ್ಮದಲ್ಲಿ ಆದರ ಪೂರ್ವಕ ದೀಕ್ಷೆಯೂ ಹುಟ್ಟಿ ಮನಸ್ಸು ಎರಗಲಾರದೆಂಬುದೇ ಪ್ರತ್ಯಕ್ಷಾನುಭವ ಸಿದ್ಧವು. ಶ್ರೀ ಹರಿ ನಾಮಸ್ಮರಣೆಯನ್ನು ಮಾತ್ರನಂಬಿ ಬ್ರಾಹ್ಮಣ್ಯವನ್ನು ಉಳಿಸಿಕೊಳ್ಳುವ ಮಹಾಪುರುಷನು ಉಪನೀತ ಪರಿತ್ಯಾಗವನ್ನೂ ಪ್ರತಿ ಸಾಂವತ್ಸರಿಕ ಕರ್ಮ ತ್ಯಾಗವನ್ನೂ ಮಾಡಿ ಗೃಹಸ್ಥಾಶ್ರಮವನ್ನು ಉಳಿಸಿಕೊಂಡರೆ ಅವನಿಗೆ ಶರಣು ಮಾಡಬಹುದು. ಸರ್ವ ಪ್ರಕಾರದಿಂದಲೂ ಕರ್ಮ ಮಾಡೋಣವು ವಿಹಿತವೇ ಸರಿ. ಆದಾಗ್ಯೂ ನಮಗೆ ಶಕ್ತಿ ಸಾಲದೆ ಬಿಟ್ಟುಹೋದ ಕರ್ಮಕ್ಕೆ ಗತಿ ಏನೆಂದರೆ –ಅದು ಅಜ್ಞಾನಿಗಳಿಗೆ ದೋಷಾಪಾದಕವಲ್ಲ. ಏಕೆಂದರೆ ಪ್ರಮಾಣ:-

*"ಶಕ್ಯಸ್ಯಾಶಕ್ತವತ್ಕರ್ಮ ಮನೋ ದೋಷಾ ಇತೀರಿತಾಃ"*

ಎಂದು ಏಕಾದಶ ತಾತ್ಪರ್ಯದಲ್ಲಿಯೂ ಮತ್ತು ವಿಷ್ಣುರಹಸ್ಯದಲ್ಲಿಯೂ ಸಿದ್ಧ. ವ್ಯಾಧ್ಯಾದ್ಯುಪದ್ರವಗಳನ್ನು ಈ ಜೀವನಿಗೆ ಯಾಕೆ ಕೊಡುತ್ತಾನೆಂದರೆ, ಇವನು ಯೋಗ್ಯತೇ ಮೀರಿ ನಡಿಸುತ್ತಾ ಬರುವ ನಿಷ್ಕಾಮರಾಧನೆಯನ್ನು ಶ್ರೀಹರಿಯು

ಕಡಿಮೆ ಮಾಡಬೇಕಾದ ಪ್ರಯುಕ್ತ, ಅದಕ್ಕೆ ಇವನ ಯತ್ನ ಮೀರಿಬರುವ ಹರೀಚ್ಛೆಯೇ ಹೊರತು ಶ್ರೀಹರಿ ದತ್ತ ಮನೋವಾಕ್ಕಾಯ ಶಕ್ತಿಯು ಕರ್ಮವಂಚನೆಯೇ ಭಕ್ತಿ ನಾಶಕವಾದುದರಿಂದ ಅಶಕ್ತನಿಗೆ ಮಾತ್ರ ಹ್ಯಾಗೆ ದೋಷವಿಲ್ಲವೆಂದರೆ, ಅಶಕ್ತನಿಗೆ ಅನೇಕ ಪ್ರಕಾರ ಭಗವದ್ರೋಹಗಳು ಘಟನೆ ಬಿದ್ದಾಗ್ಯೂ ಹೇ ! ಎನ್ನ ಸ್ವಾಮಿಯೇ ಸಮುದ್ರದ ತೆರೆಗಳಂತೆ, ನಿನ್ನ ದ್ರೋಹ ದುಷ್ಕರ್ಮ ಪರಂಪರೆಗಳೇನೂ ಕರ್ಮಾನುಸಾರ ಎಂದು ಹೇಳಿಸಿ ಘಟನೆ ಮಾಡುತ್ತಾ ಬರುವುದರಲ್ಲಿ ನನ್ನನ್ನು ಹೇಗೆ ಉದ್ಧಾರಮಾಡುವಿಯಯ್ಯಾ! ಎಂದು ನಮ್ರವಾಗದೆ ಹೊರತು ಆ ಶ್ರೀಹರಿಯು ಇವನನ್ನು ಉದ್ಧರಿಸುವುದಿಲ್ಲ. ಎಂದು ಅರ್ಥವು. ಸುಳಾದಿ:- ಅಪಾರ ಜನುಮದಿಂದ ಮಾಡಿದ ಅಪರಾಧಗಳನುಚ್ಚರಿಸಿ ಖ್ಯಾಪಿ ಖ್ಯಾಪಿಗೆ ಹರಿಯ ಸ್ಮರಿಸಿ ಹಾ ಹಾ ಎಂದು "ಎಂತ ಮನ ಮೂರ್ತಿ ಸುಳಾದಿ. ಖ್ಯಾಪಿ ಖ್ಯಾಪಿ ಎಂದರೆ ಪುನಃ ಪುನಃ ಎಂದು ಅರ್ಥವು. ಆದುದರಿಂದ ದರ್ವಿಂಯಂತೆ, ಜೀವನನ್ನು ನಿಮಿತ್ತೀಕರಿಸಿ, ಶ್ರೀ ಹರಿಯು ಮಾಡಿದ ಅಪರಾಧಗಳನ್ನೇವೆ, ಶ್ರೀಹರಿಯು, ಮುಂದೆ ಕಾಣಿಕೆಯನ್ನಂತೆ ಇಟ್ಟು ಶ್ರೀ ಹರಿಯೇ ನೀನಾಗಿಯೇ ಹಾಗೆ ಮಾಡಿ ಮಾಡಿಸಿದರೆ ನಾನು ಹೇಗೆ ಅನುಭವಿಸಲಿ ಸ್ವಾಮಿ ಎಂದು ಆತನ ಸರ್ವದಾ ಸಮೀಪದಲ್ಲಿ ನಿಂತು ಕಣ್ಣೀರು ತರುತಲೇ ಇದ್ದು ಪ್ರಾರ್ಥಿಸಿದ ವಿನಾ ಬುದ್ಧಿ ಪೂರ್ವಕ ದುಷ್ಕರ್ಮಾನುಭವವನ್ನು ಶ್ರೀಹರಿಯು ಸರ್ವಥಾ ಸ್ವಲ್ಪ ಮಾಡಲಾರನು ಎಂತ ಅರ್ಥ". ಸ್ವಲ್ಪ ಮಾಡೋಣವೇ ನಿರ್ಗುಣ ಭಕ್ತನಿಗೆ ಪ್ರಾರಬ್ಧಾನುಭವವೆನಿಸಿಕೊಳ್ಳುವುದು ಎಂದು ಅರ್ಥ. ಆದುದರಿಂದ

*"ನಿನ್ನ ವಿಸ್ಮೃತಿ ಕೊಡುವ ಪುಣ್ಯ ಕರ್ಮಗಳೋಲ್ಲೊಲ್ಲೆ.*
*ನಿನ್ನ ಸ್ಮೃತಿಯೀವ ಘನ ಪಾಪ,*
*ಆನ ಪಾಪ ಕರ್ಮಎಂದೆಂದಿಗೂ ಎನಗಿರಲ್ಯೆಯ್ಯ"*

ಎಂದು ಜಗನ್ನಾಥ ದಾಸರ ವಚನವು. ಆದರೆ ನಿನ್ನ ದ್ರೋಹಗಳು ನನ್ನನ್ನು ಹೇಗೆ ಕಷ್ಟ ಪಡಿಸದೇ ಬಿಟ್ಟೀತು? ಎಂದು ಪರಮ ದೈನ್ಯದಿಂದ ಆರ್ತರಾಗಿ ದ್ರೋಹಿಗಲಾದೆವಲ್ಲ ಎಂಬ ಧಿಗಲಿನಿಂದ ಅವನ ಸ್ಮರಣೆ ಅದಿಕವಾಗುತ್ತದೆ. ಎಂದು ಭಾವ. "ಎಂದೆಂದಿಗಿರಲಿ" ಎನ್ನುವುದರಿಂದ ಹ್ಯಾಗೆ ಹ್ಯಾಗೆ

ಹರಿದ್ರೋಹಾಧಿಕ ಸೂಚಕ ಪಾಪಗಳೋ ಹಾಗೆ ಹಾಗೆ ದೈನ್ಯಭಾವಗಳು ರೋದನಗಳು ಮಹಾ ಧಿಗಲುಗಳಿಂದ ಆವನ ಚಿಂತನೆಯು ಮಹಾಬಲವಾಗಿ ಆವನ ಪಾದಗಳನ್ನು ನಂಬೋಣವೂ ಗುರುಗಳ ಪಾದನಂಬೋಣವೂ ಅತ್ಯಂತ ಬಲವಾಗುವುದು ಎಂದು ಭಾವ.

ಆಕ್ಷೇಪ:- ಶ್ರೀ ಹರಿಯು ಮಾಡುವ ವ್ಯಾಪಾರಕ್ಕೆ ಇವನು ಯಾಕೆ ನಮ್ರನಾಗಿ ವ್ಯಥೆ ಪಡಬೇಕೆಂದರೆ, ಅಪರಾಧ ಮಾಡಿ ವ್ಯಥೆ ಪಡದೆ ಇದ್ದ ದ್ರೋಹಿಯು ಪುಣ್ಯ ಮಾಡಿ ಶ್ರೀಹರಿಯ ಮತಿಯಂತೆ ಪಾಪ ಮಾಡಿದಾಗ್ಯೂ ಈ ಪಾಪವು ಶ್ರೀಹರಿಗೆ ಅಪರಾಧರೂಪವಲ್ಲ. ಅಪರಾಧ ನಾನೆಲ್ಲಿ ಮಾಡಿದೆನೆಂದು ಪೂರ್ವೋಕ್ತ ಶ್ರೀ ವಿಷ್ಣುರಹಸ್ಯ ರೀತಿಯಿಂದ ಪಾಪೋತ್ಸಾಹರೂಪವಾಗಿ ಶ್ರೀಹರಿಯಲ್ಲಿ ಅನಾದರವಾದ ನೀಚ ಪುರುಷಭಾವ ಬಂದುದರಿಂದ ಶ್ರೀ ಹರಿಭಕ್ತಿಯೇ ಬೇಡವೆಂದು ಹೇಳಿದ ಹಾಗೆ ಆಗುತ್ತದೆ. ನಿನ್ನ ಸ್ಮೃತಿ ಯಾವ ಯಾವ ಘನ ಪಾಪವೆಂಬುದಕ್ಕೆ ಅರ್ಥವು. ಕೆಟ್ಟ ಪಾಪದಲ್ಲಿ ಮಾತ್ರ ಹರಿಸ್ಮರಣಾಧಿಕ್ಯಾರ್ಥ ಹೊಂದದೇ ಹೋದೀತು. ಆದುದರಿಂದ ಮನಮೂರ್ತಿ ಸುಳಾದಿಯ ಮಾತಿಗೂ ಜಗನ್ನಾಥದಾಸರ ಮಾತಿಗೂ ನಾನು ಬರೆದಿರುವ ಅರ್ಥ ಸಿದ್ಧ. ಶೂದ್ರ ಎಂದು ಶೂದ್ರನಿಗೆ ಯಾಕೆ ಹೆಸರು ಎಂದರೆ- ಶಯಾನಃ ಶೂದ್ರಃ ಅಂದರೆ ಶಯನ ಮಾಡಿದವನು ಎಂದರ್ಥವು. ವೇದೋಕ್ತ ಕರ್ಮ ಮಾಡದೇ ಇರೋಣವೇ ಶಯನಕ್ಕೆ ಭಾವ. ಶಯನ ಸ್ವರೂಪಕ್ಕೆ ನೀಚ ಆಹಾರಾದಿಗಳಿಂದ ಶೂದ್ರನಿಗೆ ಪಾತಕವಿಲ್ಲ. ಬ್ರಾಹ್ಮಣನಿಗೆ ಮಾತ್ರ ಅದು ಯಾತಕ್ಕೆ ಪಾತಕವಾಗುವುದು ಎಂದರೆ, ಉಪನಯನ ಕರ್ಮದಿಂದ ನೂತನವಾಗಿ ಬ್ರಾಹ್ಮಣ್ಯವನ್ನು ಹುಟ್ಟಿಸಿಕೊಂಡು ನಿತ್ಯ ನೈಮಿತ್ತಿಕ ಕರ್ಮಗಳಿಂದ ಬ್ರಾಹ್ಮಣ್ಯವನ್ನು ಉಳಿಸಿಕೊಳ್ಳ ಬೇಕು ಆದುದರಿಂದ ಇವನಿಗೆ ನೀಚ ಆಹಾರಗಳು ಪಾತಕವಾಯಿತು. ಹಾಗಾದರೆ ಶೂದ್ರ ಯೋನಿಜನಿಗೆ ಉಪನಯನದಿಂದ ಬ್ರಾಹ್ಮಣ್ಯ ಉಂಟಾಗಲಿ ಎಂದರೆ, ಷೋಡಶ ಸಂಸ್ಕಾರ ಕರ್ಮಗಳಲ್ಲಿ ಪ್ರಥಮ ಸಂಸ್ಕಾರ ರೂಪವಾದ ಋತು ಶಾಂತಿಯಿಂದಲೇ ವೇದ ಮೂಲಕವಾಗಿ ಮಾತೃ ಗರ್ಭದಲ್ಲಿ ಜೀವನು ಪ್ರವೇಶ ಮಾಡುತ್ತಾನೆ. ಆದುದರಿಂದ ಪ್ರಸಿದ್ಧ ಶೂದ್ರನು ಬ್ರಾಹ್ಮಣನಾಗಲಾರನು.

ಪ್ರಮಾಣ:-

*ತಥಾ ಶಯಾನಶ್ಶೂದ್ರೋಪಿ ನ ಪತತಿ ನ ಶುನ ಭಕ್ಷಣಾದಿಭಿ:। ಬ್ರಾಹ್ಮಣಾದಿ ಪಾತಕೈ: ಔತ್ಪರೀತೋ ಯತಸ್ತಸ್ಯ ತಾದೃಶ ಗುಣ ಸಂಗ:। ಅತ: ಅಯೋಗ್ಯ ಏವ ಕರ್ಮಾಣಿ ಪತತಿ। ತ್ರೈವರ್ಣಿಕಾಂ ಸಂಚರಂತೋ ವೇದ ಕರ್ಮ ಪ್ರವರ್ತನಾತ್। ಶಯಾನ ಶ್ಶೂದ್ರ ಉದ್ದಿಷ್ಟೋ ವೇದ ಕರ್ಮ ಪ್ರವರ್ತನಾತ್। ನ ತಸ್ಯಾ ಭಕ್ಷ್ಯಜೋ ದೋಷ: ಶುಶ್ರೂಷಾಯಾಂ ಪ್ರವರ್ತಿತ:। ಯಥಾ ಸುವರ್ಣಸ್ಯ ಮಲಂ ಶುಕ್ಲಂ ತಾಮ್ರಸ್ಯ ನೈವತತ್। ಏವ ವಿಪ್ರಾದಿ ದೋಷಸ್ತು ನ ಶೂದ್ರೇ ದೋಷತಾಮಿಯತ್॥* ಎಂದು ಸರ್ವಜ್ಞರ ವಚನವು. ಏಕಾದಶ ತಾತ್ಪರ್ಯ ಇಪ್ಪತ್ತನೆಯ ಅಧ್ಯಾಯ ಸಿದ್ಧ.

ಹಾಗಾದರೆ ಚಂಡಾಲನಲ್ಲಿಯೂ ಬ್ರಾಹ್ಮಣನಲ್ಲಿಯೂ ಶ್ವಾನಾದಿಗಳಲ್ಲಿ ಇರುವ ಶ್ರೀ ಹರಿಯು, ಬ್ರಾಹ್ಮಣಾದಿಗಳಲ್ಲಿರುವ ಹರಿಯು ಒಬ್ಬನೇನೋ ಇಬ್ಬರೋ- ಆದುದರಿಂದ ಆ ಶೂದ್ರನು ತಾಮ್ರದಹಾಗೂ ಬ್ರಾಹ್ಮಣನು ಭಂಗಾರದ ಹಾಗೂ ವರ್ಣಿಸುವುದರಿಂದ ಹರಿ ಭಕ್ತನಿಗೆ ಏನು ಭಾಗ್ಯ ಬಂತು?. ಎಂದರೆ ಸಿದ್ಧಾಂತ:- ಸರ್ವ ಜೀವ ಸಮಮೂರ್ತಿ ಎಂತಲೂ, ಗೀತಾವಿಭೂತ್ಯಧ್ಯಾಯೋಕ್ತ ವಿಭೂತಿಮೂರ್ತಿಯೋ ಸನ್ನಿಧಿ ಮೂರ್ತಿ ಎನಿಸಿಕೊಂಡು ಜೀವ ಸ್ವಭಾವ ತಾರತಮ್ಯಾನುಕೂಲ ಶ್ರೀಹರಿಯು ತನ್ನ ಸ್ವರೂಪ ಸನ್ನಿಧಾನ ತಾರತಮ್ಯ ರೂಪನಾಗಿ ಸರ್ವದಾ ಈ ರೀತಿಯಿಂದಲೇ ಏಕಪ್ರಕಾರನಾಗಿ ಇದ್ದಾನೆ. ಮತ್ತು ಪಂಚಭೂತಗಳಲ್ಲಿ ಸಮಮೂರ್ತಿಯೂ ಸನ್ನಿಧಾನ ತಾರತಮ್ಯಭೇದವೂ ಉಂಟು. ಪ್ರಮಾಣ:-

*ಪಂಚಭೂತಾತ್ಮಕತ್ವೇನ ಸಮತಾ ಸರ್ವ ವಸ್ತುಷು।*
*ಹರಿಸನ್ನಿಧಿ ವೈಶೇಷ್ಯಾದ್ವಿಶೇಷಸ್ತು ಮಹಾನ್ಯದಾ॥*

ಎಂತ ಏಕಾದಶ ತಾತ್ಪರ್ಯವು.

ಅತಏವ ಈ ಸನ್ನಿಧಿ ಮೂರ್ತಿ ದರ್ಶನವೇ ಬಿಂಬಾಪರೋಕ್ಷವು. ಈ ಸನ್ನಿಧಿ ಮೂರ್ತಿಯು ಪಶ್ವಾದಿ ಯೋನಿದೇಹದಲ್ಲಿ ಇಲ್ಲ. ಸಮಮೂರ್ತಿಯದುದರಿಂದ ಮಹಾತ್ಮರ ಸಂದರ್ಶನ ವಂದನ ಸೇವಾಪೂರ್ವಕ ನಿಷ್ಕಾಮನುಷ್ಠಾನದಿಂದ ಸನ್ನಿಧಾನ ಹೆಚ್ಚಾಗುವುದಕ್ಕೆ ಶೂದ್ರಾದಿಗಳು ತಮ್ಮ

ಗತಿಗೋಸ್ಕರ ದ್ರವ್ಯ ವ್ಯಯ ಮಾಡಿ ಬ್ರಾಹ್ಮಣರಿಂದ ಪ್ರತಿಷ್ಠೆಮಾಡಿದ ಪ್ರತಿಮೆಯ ಹರಿ ರೂಪಕ್ಕೆ ಬ್ರಾಹ್ಮಣನು ಕೈ ಮುಗಿದರೆ, ಬ್ರಾಹ್ಮಣನ ಹೃದಯ ಸನ್ನಿಧಾನಮೂರ್ತಿಯ ಸನ್ನಿಧಾನ ಕಮ್ಮಿಯಾಗಿ ಯಮದೇವರರಿಂದ ಆ ಕೈಮುಗಿದ ಹಸ್ತಗಳನ್ನು ಛೇದಿಸುವುದಕ್ಕೂ ಇಂತಹ ಪ್ರತ್ಯವಾಯುವನ್ನು ಗರುಡ ಪುರಾಣ ಬ್ರಹ್ಮ ಕಾಂಡದಲ್ಲಿ ಹೇಳಿದ ದೀಕ್ಷೆಯಿಂದ ಶ್ರೀಹರಿಯನ್ನು ಬಿಟ್ಟಾಗ್ಯೂ ಗುರುಗಳನ್ನೆ ಬಿಡಕೂಡದು, ಎಂತ ಅರ್ಥವು. ಇದಕ್ಕೆ ಏಕಾದಶ ಷೋಡಶೋಧ್ಯಾಯದಲ್ಲಿ

*"ಸೃಷ್ಟಿ ಸ್ಥಿತ್ಯಾದಿ ಹೇತುತ್ವಾದ್ಭೂತಾನಿ ಹರಿರುಚ್ಯತೇ। ನ ಹಿ ಭೂತ ಸ್ವರೂಪತ್ವಾತ್ಸಹಿ ಸರ್ವೇಶ್ವರೇಶ್ವರः। ಇತಿ ವಸ್ತುತತ್ವೇ ಸ್ವಸ್ವ ಜಾತ್ಯುತ್ತಮತ್ವಂತು ಭವೇದ್ಯದ್ರೂಪ ಸನ್ನಿಧೇः॥ ವಿಭೂತಿರೂಪಂ ತತ್ರೋಕ್ತಮಿಂದಿರಾದಿಷು ಸಂಸ್ಥಿತಂ ತಥಾಬಹಿಸ್ಥಿತಂ ರೂಪಂ ವಿಭೂತಿತ್ಯೇವ ಶಬ್ದಿತಂ॥ ಸರ್ವ ಸಾಧಾರಣಾರೂಪಮಂತರ್ಯಾಮಿತಿ ಚೋಚ್ಯತೇ ॥ ಯಥಾ ಕೃಷ್ಣಾಮನಾದುಷ್ಟೇ ಹಂತಾ ವ್ಯಾಸಾತ್ಮನಾ ನಮः। ಅಸವೋ ಏಕರೂಪೋಪಿ ಸಾಮರ್ಥ್ಯಾತ್ಪುರುಷೋತ್ತಮः ಇತಿಚ ॥ ಬ್ರಹ್ಮ ರುದ್ರೇಂದ್ರ ಜೀವೇಭ್ಯः ಪೃಥಗೇವ ವ್ಯವಸ್ಥಿತಂ । ವಿಭೂತಿರೂಪಂ ವಿಷ್ಣೋಸ್ತು ತದ್ಗಾ ಸೃಷ್ಟ್ಯೈವ ಕಾರಣಂ ॥ ತದೇವ ಬ್ರಹ್ಮ ರುದ್ರಾದಿ ವಾಕ್ಯಭಿರ್ವಾಕ್ಯ ಮಂಜಸಾ। ತದೇವ ದೇವೇಷ್ವಿಂದ್ರೋಸ್ಮಿ ತಥಾ ರುದ್ರೇಷು ಶಂಕರः। ಇತ್ಯಾದಿನೋಕ್ತಂ ಕೃಷ್ಣೇನ ನೇಂದ್ರಾದ್ಯಾ ಜೀವ ಸಂಚಯಾ ॥ ಇತಿ ಗೀತಾಕಲ್ಪೇ॥"*

ಎಂತ ಏಕಾದಶ ಷೋಡಶ ತಾತ್ಪರ್ಯ ವಾಕ್ಯಗಳು.

*"ವರ್ಷಾಚ್ಚತುರ್ದಶಾದೂರ್ಧ್ವಂ ಯೋ ನವಿದ್ಯು: ಶುಭಾಶುಭಂ। ಯೇಷಾಮಜ್ಞಾನದೋ ದೋಷः ಸುಮಹಾನ್ ಕರ್ಮಜಾದಪಿ. । ಕಿಮಿತಿರಕ್ಷಾಮಿಂದ್ರಿಯಾ ಶಕ್ತೇನ ದೋಷೋ ಜ್ಞಾನಿನೋಭವೇತ್। ಗುಣೋಪಿನೈವಕಶ್ಚಿತ್ಸ್ಯಾತ್ರ್ಯಚ್ಯತೋ ಜ್ಞಾನಬಹಿಷ್ಕೃತಾ। ಇತಿ ಚ ಅತೋ ಮೂರ್ಖಾಣಾಮದೋಷ ಇತಿ ನಾ ಸಮಾನಂ ಕರ್ಮಾಚರಣೇ ಆತ್ಮಯೋಗ್ಯ ಕರ್ಮ ಚರಣೆ ಪೂರ್ವಮಪತಿತೋ ಯೇನ ಪತತಿ ಪ್ರಾಯಶ್ಚಿತ್ತೇನ ತತ್ಸಮಾನ ಕರ್ಮಾಚರಣೇಪಿ ನದೋಷः ।ತತ್ರ ಸುರಾಪಾನವತ್"*

ಎಂತ ಏಕಾದಶ ತಾತ್ಪರ್ಯ॥

ಅಂದರೆ ಪೂರ್ವದಲ್ಲಿ ಬ್ರಾಹ್ಮಣನು ಶೂದ್ರನಾಗಿದ್ದು ಸುರಾಪಾನದಿಂದ ಬ್ರಾಹ್ಮಣ್ಯ ಹೋದ ತರುವಾಯ ಸಂತಪ್ತ ಮನಸ್ಸುಳ್ಳವಗೆ ರೋಗಕ್ಕೆ ಔಷಧದಂತೆ- ಮರುಳಿಸಿದ ಸುರಾ ಪ್ರಾಯಶ್ಚಿತ್ತದಿಂದ ಸಹಿತವಾದ ನಾಮೋಚ್ಚಾರಣೆಯಿಂದ ಸನ್ನಿಧಿಮೂರ್ತಿ ಸನ್ನಿಧಾನಕ್ಕೆ ಕಲೆ ಕಡಿಮೆಯಾಗಿದ್ದದ್ದು ಯಥಾ ಪ್ರಕಾರ ಪೂರ್ಣ ಸನ್ನಿಧಾನ ಒದಗಿ ಸಂಪ್ರೋಕ್ಷಣೆಯಂತೆ ಬ್ರಾಹ್ಮಣ್ಯವನ್ನು ವದಗಿಸಿಕೊಂಡರೆ ದೋಷವಿಲ್ಲವೆಂದು ಭಾಗವತ ತಾತ್ಪರ್ಯ ವಚನಕ್ಕೆ ಅರ್ಥವು.

ಆಕ್ಷೇಪ:- ಪೂರ್ವದಲ್ಲಿ ಹೇಳಿದ ತಾತ್ಪರ್ಯಕ್ಕೂ ಈಗ ಹೇಳಿದ ತಾತ್ಪರ್ಯಕ್ಕೂ ಪರಮ ವಿರುದ್ಧವಾಯಿತಲ್ಲವೇ ಎಂದರೆ:-

***"ನಮೇ ದೋಷೋ ನಚ ಗುಣಃ ತತ್ಕೃತ್ವಾ ಭಾವತಃ ಸ್ಫುಟಂ ।***
***ಸ್ವತಂತ್ರತ್ವಾನ್ನಚೇಶಸ್ಯ ಯೇ ಅಜ್ಞಾಸ್ತೇಷು ಭವೇದಿತಿ ।"***

ಎಂತ ಏಕಾದಶ ಸಪ್ತಮಾಧ್ಯಾಯ ತಾತ್ಪರ್ಯದಿಂದ ಶ್ರೀಹರಿಯಂತೆ ಭಕ್ತನಿಗೂ ಗುಣ ದೋಷಗಳು ಇಲ್ಲವೆಂತಲೂ ಮತ್ತು

***"ಅಂತಃಕರ್ಮಣ್ಯಪಿ ಸದಾ। ದೋಷ ಬುದ್ಧ್ಯಾ ನನಿಂದಿತಂ ಗುಣಬುದ್ಧ್ಯಾ ನವಿಹಿತಂ"*** ಎಂತಲೂ ಪೂರ್ವೋಕ್ತ ತಾತ್ಪರ್ಯ ವಚನ ಸಿದ್ಧವಷ್ಟೆ ಎನ್ನುವುದಕ್ಕೆ ಪೂರ್ವದಲ್ಲಿಯೇ ಸಮಾಧಾನ ಹೇಳಿದ್ದೇನೆ. ಆದರ ಮುಂದಿನ ತಾತ್ಪರ್ಯದಿಂದ ***"ಇತಿಮತ್ವಾ ಶುಭಂ ಕುರ್ಯನ್ನಿವೃತ್ತೇದಶುಭಾದಪಿ"*** ಎಂತಲೂ ***"ನಚಾಲ್ಪ ಗುಣ ಸಿದ್ಧ್ಯರ್ಥಮ್ ಬಾಲವತ್ಕೃತ ನಿಶ್ಚಯಃ।"*** ಎಂತ ಇದೆ. ಹಿಂದೆ ಹೇಳಿದ ಸಮಾಧಾನ ವಚನವು. ಅಂದರೆ ನಿರ್ಗುಣ ಭಕ್ತನು ಭಗವದಾಜ್ಞಾರೂಪವಾದ ದೇಹ ನಾಶ ಸಾಧಕವಾದ ತಪ್ತ ಸುರಾಪಾನದಿಂದ ಬದುಕಿದರೆ, ಪುನರುಪನಯನ ಮಾಡಿಕೊಳ್ಳದೆ ಇದ್ದರೆ ಬ್ರಾಹ್ಮಣ್ಯ ಹೋಗಿ ಶಾಶ್ವತ ನಿಷ್ಕಾಮಾರಾಧನೆಗೆ ಹಾನಿ ಬರುತ್ತೆ ಎಂದು ಅರ್ಥ. ಪ್ರಮಾಣ:-

***"ಕಿಂತು ಪೂರ್ಣ ಗುಣಾಯ್ಯೈವ ನತು ದೋಷಾಪನುತ್ತಯೇ।"***

ಎಂತ ತಾತ್ಪರ್ಯ ಶ್ಲೋಕವನ್ನು ಪೂರ್ವದಲ್ಲಿಯೇ ನಿರೂಪಿಸಿದ್ದೇನೆ. ಉಪಾಸನೆಗೆ ಎರಡು ಬ್ರಾಹ್ಮಣ್ಯವೇ ಮುಖ್ಯ ಅಂಗರೂಪ. ಏತೇನ ಸನ್ನಿಧಿಮೂರ್ತಿಗೂ

ಕರ್ಮ ದೀಕ್ಷೆ ಸಹಿತ ಭಕ್ತನು ಮಾಡುವ ನಾಮೋಚ್ಚಾರಣೆಗೂ ಗಂಟು ಬಿದ್ದಿದೆ ಎನ್ನುವುದೇ ಪರಮ ಮುಖ್ಯ ತತ್ವವು.

ಈ ವಿಭೂತಿ ರೂಪವು ಎರಡು ಪ್ರಕಾರವು– ವಿಶೇಷ ವಿಭೂತಿ ಸ್ವಭಾವ ವಿಭೂತಿ ಎಂತ. ಜೀವನಲ್ಲಿ ಜೀವನಿಯಕ ಸತ್ವಾದಿ ಗುಣಗಳಲ್ಲಿ ಸತ್ವ ಎಂದೂ ರಜ ಎಂದೂ ಹೀಗೆ ಸರ್ವ ತತ್ವನಾಮಕ ಎಂತ. ಪ್ರಮಾಣ:

*"ಸತ್ವಾದಿ ನಾಮ ವಿಷ್ಣೋಸ್ತು ಸತ್ವಾದಿಸ್ಥಸ್ಯ ಕೇವಲಂ।"*

*ಜೀವಸ್ಥಸ್ಯಚ ತನ್ನಾಮ ಜೀವಾದೇರುಪಚಾರಕ. ಇತಿ ಚ ವಿಶೇಷಾಖ್ಯ ವಿಭೂತಿಸ್ತು ವಿಭೂತಿಶ್ಚ ಸ್ವಭಾವಜಃ। ದ್ವಿಧಾ ವಿಭೂತಿರ್ವಿಜ್ಞೇಯಾ ವಿಷ್ಣೋಸ್ತು ಪರಮಾತ್ಮನ ಇತಿ ಚ।*

ಎಂತ ಏಕಾದಶತಾತ್ಪರ್ಯ ಸಪ್ತದಶಾಧ್ಯಾಯ.

ಶ್ರೀಮದಾಚಾರ್ಯರು ಕರ್ಮ ಮಾಡುವ ವಿಷಯದಲ್ಲಿ ಯುಕ್ತಿ ತೋರಿಸಿ ಇದ್ದಾರೆ. ಹ್ಯಾಗೆಂದರೆ ಕುಸುಮ ಎಂದು ಸ್ವರ್ಗಕ್ಕೆ ಹೆಸರು. ಪ್ರಮಾಣ:–

*"ಕುಸುಮಸ್ಯಾನಿತ್ಯತಾದಿ ದೋಷ ಜ್ಞಾನಾನ್ಮೋಕ್ಷಸ್ಯ ದೋಷತಾಜ್ಞಾನಾಚ್ಚ ಈಕ್ಷದುತ್ತಮಸ್ಯ ಶ್ರೋತುರ್ವಿವಕ್ಷಯಾ ಬುಧೋ ವೇದಂ ಕಥಂ ಯುಜ್ಯಾತ್ ಅಂತಕಾಲಗತೋಪಿ ಸ್ವರ್ಗ ಏವಂ ವಿಧಃ ಕಿಮು ಸಾಕ್ಷಾತ್ಫಲರೂಪ ಮೋಕ್ಷ ಇತಿ ವಿರೋಚಕಃ ॥ ಅನೇಕ ಬ್ರಹ್ಮಕಲ್ಪ ಪ್ರಾಪ್ಯತ್ವನ್ಮೋಕ್ಷಸ್ಯ ತಾವಂತಂ ಕಾಲಂ ತಪ ಏವಂ ಕರ್ತುಂ ನಶಕ್ಯತ ಇತಿ ಮಂದಾಧಿಕಾರಿಣಾಂ ಸ್ವರ್ಗಾದಿಷ್ವಭಿರುಚಿಃ ಭವತಿ । ತಾನ್ಪ್ರತ್ಯಂತೇ ಮೋಕ್ಷಏವ ಭವತಿ । ಅಂತಕಾಲೇಪಿ ಏವಂ ವಿಧಂ ಸ್ವರ್ಗಾದಿಕಂ ಸುಖಂ ಭವತಿ । ತಸ್ಮಾದ್ವಿಹಿತ ಕರ್ಮ ಕರ್ತವ್ಯಮಿತಿ ರೋಚಯತಿ ।ಎಂತ ಏಕಾದಶ ತಾತ್ಪರ್ಯದ ದ್ವಾವಿಂಶಧ್ಯಾಯದ ವಚನವು"*

ಅಂದರೆ ಜೀವರು ಸ್ವಯೋಗ್ಯ ಸಾಧನವನ್ನು ಬ್ರಹ್ಮ ಕಲ್ಪಗಳ ಪರ್ಯಂತವಾಗಿ ನಿಶ್ಶೇಷವಾಗಿ ಶರೀರಾಹಾರವನ್ನು ಬಿಟ್ಟು ನಾಮಸ್ಮರಣೆ ನರ್ತನ ಧ್ಯಾನ ಸಮಾಧಿರೂಪ ತಪಸ್ಸು ಮಾಡಬೇಕಾದರೆ ಅವನು ಅಖಂಡ

ತಪೋನಿಷ್ಟನಾದಾಗ್ಯೂ ಪೂರ್ವಕರ್ಮಾನುಭವ ರೂಪವಾಗಿ ಕ್ಷಣಮಾತ್ರ ದಾಹೋಪಶಾಂತಿಗೆ ನೀರು ಕುಡಿದೇನೆಂಬೋ ಇಚ್ಛೆಗೆ ಕುಡಿಯುವನೀರು ಭಗವದಭಿಷೇಕವಾಗಿ ಶ್ರೀ ಹರಿಯೇ ಉದಕ ಪಾನ ಮಾಡುತ್ತಾನೆ ಎಂಬ ಚಿಂತನೆ ಇದ್ದಾಗ್ಯೂ ನೀರು ಇಲ್ಲದೆ ಎದೆ ಗುಂಡಿಗೆ ಹಿಡಿದು ಮನುಷ್ಯನು ಕೆಳಗೆ ಬೀಳುವ ಕಾಲಕ್ಕೆ ಈ ಜ್ಞಾನಿಗೆ ಶರೀರ ತ್ಯಾಗವು ಸಂತೋಷವೇ ಸರಿ. ಆದಾಗ್ಯೂ ಸತ್ಯಸಂಕಲ್ಪನ ಮರ್ಯಾದೆಯಿಂದಲೇ ಪೂರ್ವ ಜನ್ಮದ ಜ್ಞಾನ ಧ್ಯಾನಗಳಿಗೆ ಈ ಜನ್ಮದ ಜ್ಞಾನ ಧ್ಯಾನಗಳು ಮಾತ್ರ ಫಲರೂಪವು. ಪೂರ್ವಜನ್ಮದಲ್ಲಿ ಬ್ರಾಹ್ಮಣಾಂತರ್ಗತ ಶ್ರೀ ಹರಿಗೆ ಉದಕವನ್ನು ನಿಷ್ಕಾಮನೆಯಿಂದ ಸಮರ್ಪಿಸಿ ಇದ್ದೇವೆ. ಅಪರೋಕ್ಷ ಶಾಶ್ವತ ಆನಂದವನ್ನು ಕೊಡುವ ಮೋಕ್ಷ ದರ್ಮ ಇಷ್ಟು ಫಲರೂಪವಾಗಿ ಬೆಳೆಯುತ್ತಾ ಬರುವುದು ಸಿದ್ಧವು. ಅದೇ ನೀರಿಗೆ ಅನಿಷ್ಟ ಫಲವದ ಅರ್ಧ ಪಂಚಪಾತ್ರೆ ನೀರು ವದಗಿ ಆಯುರ್ಮರ್ಯಾದೆಗೆ ಅನುಕೂಲಿಸುತ್ತದೆ. ಇಂತಹ ಹರಿ ಸಂಕಲ್ಪಕ್ಕೋಸ್ಕರ ವಿಹಿತಕರ್ಮ ಮಾಡಬೇಕು. ಎಂತ ಮೂಲವಚನದ ಭಾವವು. ತಾತ್ಪರ್ಯ ನಿರ್ಣಯದಿಂದ ಶ್ವೇತರಾಯನು ಅನ್ನದಾನ ವಿಲ್ಲದ ಯಜ್ಞ ಮಾಡಿ ತನ್ನ ದೇಹದ ಮಾಂಸವನ್ನೇ ಆಹಾರ ಮಾಡಿಕೊಂಡು ಕಷ್ಟಪಟ್ಟನು, ಎಂದು ತಿಳಿಯುತ್ತದೆ. ಆದುದರಿಂದ ಸುಕರ್ಮ ಮಾಡದೆ ಪ್ರಾರಬ್ಧ ನೆಟ್ಟಗೆ ಆಗದು, ಎಂದು ಅರ್ಥವು. ಅನಿಷ್ಟ ನಶ್ವರ ಸ್ವರ್ಗಾದಿ ಸುಖವು ಈ ಜ್ಞಾನಿಗಳಿಗೆ ವದಗ ಬಹುದು ಎಂತ ಹೇಳಿದ್ದಾರೆ. ಸುಳಾದಿ:

*“ದಿನ ಪ್ರತಿದಿನ ಸತ್ಕರ್ಮಾಚರಣೆಯೇ ಹಬ್ಬ ।*
*ವಾಲಯಾ- ಗಯದಲ್ಲಿ ಕಾಲ ಪವಿತ್ರವೇ ಹಬ್ಬ”*

ಎಂತ ಸುಲಾದಿ.

ಒಂದು ಆಶೆಯಿಂದ ನಿತ್ಯ ಮಾಡುವ ಸಂಧ್ಯಾವಂದನ ಜಪ ತಪ ಅತಿಥಿಪೂಜಾ ಸಂದರ್ಶನ ದೇವಪೂಜಾ ಉತ್ತಮ ಗತಿ ಎಂದೆಂದಿಗೂ ಎನಗೆ ದೊರಕೊಲ್ಲದೆ । ಎಂತ ಆಶಾ ಸುಳಾದಿ.

‘‘ಹರಿನಾಮವಿತ್ತಕಾಣೋ ಸತ್ಕರ್ಮ ಕೊಂಬುವುದಕ್ಕೆ ಎಂತ ಹರಿನಾಮ ಸುಳಾದಿ. ಏನು ಹೀನ ಹಾನಿ ಬರಲಿ ಅಳುಕಿ ಹಾಕದಲೆ ನೀನೇ ನೀನೇ ನೀನೇ

ನೀನೇ ನಿನ್ನದು ನಿನ್ನದು ಎಂದು" ಎಂಬ ದಾಸರ ಸುಳಾದಿವಳಗೆ ಸ್ನಾನ ಪಾನ ದಾನ ಜ್ಞಾನ ಧ್ಯಾನ ಮಿಗಿಲಾದ ಕರ್ಮ ಬಿಡದೆ ದೀಕ್ಷಿತನಾಗ ಬೇಕೆಂದು ಹೇಳಿದ್ದಾರೆ –

"ಬಿಡರೋ ಕರ್ಮ ಸ್ವಧರ್ಮ ಏನು ಬಂದರೂ" ಎಂದು ಜಗನ್ನಾಥದಾಸರ ಉಕ್ತಿಯು. ಅಧಿಕಾರಿಗಳಲ್ಲಿ ಮುಕ್ತರಾದ ಸಕಲ ಜೀವರಲ್ಲಿ ಕರ್ಮಯೋಗಿಗಳು ಕರ್ಮ ಮಾಡೋಣವು ಭಕ್ತಿಯೋಗಿಗಳಾದ ನವಕೋಟಿ ತಾತ್ವಿಕರು. ಶ್ರೀ ಹರಿಯ ದೇಹದಲ್ಲಿ ಏಕೈಕಾವಯವ ಸಾಯುಜ್ಯಯ್ಯೆದಿ ಬ್ರಹ್ಮ ದೇವರು ಸರ್ವಾಂಗ ಸಾಯುಜ್ಯ ಯ್ಯೆದಿ ದೇವರ ಹಸ್ತದಿಂದ ಭೋಜನ ಶ್ರೀ ಹರಿಯ ಪಾದದಿಂದ ಗಮನ ಈ ಪ್ರಕಾರ ಭಗವದ್ಭುಕ್ತ ಶೇಷ ಭೋಗ ಮಾಡಿಕೊಂಡು ಹೊರಗೂ ಅನೇಕ ರೂಪದಿಂದ ಭೊಗಿಸತಕ್ಕವರು, ಯಾವ ಪ್ರತಿಬಂಧಕ ಹೋಗಬೇಕೆಂದು ತಾವು ಅನಂತರೂಪ ಧರಿಸಿ ಭಗವತ್ಸೇವೆ ಯಾಕೆ ಏಕಪ್ರಕಾರ ಮಾಡುತ್ತಾ ಬರಬೇಕು. ಹೀಗೆ ಮುಕ್ತ ಮಧ್ಯಮರು ಅಧಮರು ಧ್ಯಾನ ಯೋಗವನ್ನು, ಅಗ್ನಿಹೋತ್ರಾದಿ ಕರ್ಮಗಳನ್ನೂ ಮಾಡೋಣವೇ ಮುಕ್ತರ ಧರ್ಮವೆಂದು ಪ್ರತಿಬಂಧಕ ಇಲ್ಲದಿದ್ದರೂ ಕರ್ಮಗಳನ್ನು ಮಾಡೋಣವೇ ಜೀವರ ಸ್ವರೂಪ ಗುಣವೆಂದು ಸೂತ್ರ ಭಾಷ್ಯದಲ್ಲಿ "ಓಂ ಛಂದಕಃ ಉಭಯ ವಿರೋಧಾತ್ ಓಂ" ಎಂದು ಸೂತ್ರದಿಂದ ಸ್ಥಾಪಿಸಿದ್ದಾರೆ. ಸ್ಯಮಂತಕ ಮಾಣಿಕ್ಯವು ತಾನು ಇದ್ದಲ್ಲಿ ಭಂಗಾರವನ್ನು ವರ್ಷಿಸೋಣವು ಅದರ ಸ್ವಭಾವವು. ಅದರಂತೆ ಎಂತ ಭಾವವು.

*"ಅಮೃತಸ್ರಗುತ್ತಮ ಫಲ ಪ್ರಸವಾನಮೃತಾಯ ತತ್ರ ಜನತಾರ್ಪಯತಿ। ಉಪ ಭೋಕ್ತುಮಪ್ಯವಿಧಿ ಬಂಧವಶಾತ್ಪ್ರಕೃತಿಂ ಪ್ರಯಾತಿ ಸಂತಲೋಪಿ ಸದಾ ॥"*

ಎಂತ ಮಧ್ವ ವಿಜಯ. ಆದಪ್ರಯುಕ್ತ ಮುಕ್ತಿಯೋಗ್ಯ ಅಂದರೆ ಸರ್ವದಾ ಭಗವದಾರಾಧನೆ ಕುತೂಹಲವುಳ್ಳವನು ಎಂತ ಅರ್ಥವು. ಅವನ ಹರಿ ಭಕ್ತಿಯು

*"ಅನಾದಿ ಕಾಲದಾಧಿಕ್ಯಂ ವಿಷ್ಣೋರ್ಜಾನಂತಿ ಸರ್ವತಃ ।*
*ಭಕ್ತಿ ಜ್ಞಾನಾದಯಸ್ಸರ್ವೇ ಸರ್ವೇಷಾಮಪ್ಯನಾದಯಃ ॥ "*

ಎಂತ ಸತ್ತತ್ತ್ವರತ್ನಮಾಲಾ ಮುಕ್ತಿಯೋಗ್ಯ ಪ್ರಕರಣವು.

ತಮೋ ಯೋಗ್ಯ ಜೀವ ಸ್ವಭಾವದಲ್ಲಿ "ಅಜ್ಞಾನಾದಿ ಸ್ವರೂಪಸ್ತು ಕಲಿಃ ದುರ್ಯೋಧನಃ ಸ್ಮೃತಃ ॥" ಎಂಬ ನಿರ್ಣಯ ಪ್ರಮಾಣದಿಂದಲೂ "ಅಜ್ಞಾನ ಮಿಥ್ಯಾಮತಿರೂಪತೋ ಅಸೌ" ಎಂಬ ತಾತ್ಪರ್ಯ ನಿರ್ಣಯದ ದಶಮಾಧ್ಯಾದಿಂದಲೂ, ಬ್ರಹ್ಮ ಸೂತ್ರದಿಂದಲೂ ಜ್ಞಾನರೂಪನಲ್ಲದೆ ಹೋದರೆ, ಜಡನಾಗಲಿ ಎಂದರೆ, ಹರಿ ಗುರುದ್ವೇಷ ವಿಪರೀತ ಜ್ಞಾನದಿಂದಲೇ ದುಃಖಿಯಾಗಿ ಅಜ್ಞಾನಿ ಎನಿಸಿಕೊಂಡನು- ಎಂತ ಭಾವ. ಪ್ರಮಾಣ

*"ಭಯಾದಪಿ ಹರಿಂ ಭಕ್ತ್ಯಾ ಚಿಂತಯಸ್ತನ್ ತತ್ವರೂಪತಾಃ ।*
*ಪೇಶಸ್ಕರೀವದಾಯತಿ ದ್ವಿಷನ್ ದೋಷ ಸ್ವರೂಪತಾಂ ।*
*ಸುಖರೂಪಸ್ಯಹಿ ದ್ವೇಷೋ ದುಸ್ವರೂಪ ಇತೀರ್ಯತೇ ॥*
*ತಸ್ಮಾದ್ದುಃಖಂ ಸಮಾಯಾತಿ ದ್ವೇಷವಾನ್ಪುರುಷೋತ್ತಮೆ ।*
*ನೃಸಿಂಹದ್ವೇಷತೋ ದುಃಖಂ ರಕ್ಷೋರೂಪೇಣ ರಾವಣಃ।*
*ಅಗಿಂದ್ರಾಮವಿದ್ವೇಷಾ ಶಿಶುಪಾಲಸ್ತಥೈವ ಚ ।*
*ತತೋ ಭಕ್ತ್ಯಾ ಪರಂಯಾತೋ ದ್ವೇಷರೂಪೀಪ್ಯಧೋಗತಿಃ ।*
*ತಸ್ಮಾತ್ ಸರ್ವಗುಣೋದ್ರೇಕೇ ವಿದ್ವೇಷಾ ದ್ವೇಷರೂಪವಾನ್ ॥*
*ಭವೇದತಿ ಸ್ವರೂಪತ್ವಂ ದ್ವೇಷಾದೇಃ ಪುರುಷಸ್ಯ ಹಿ । ಇತಿ ತಂತ್ರ ಭಾಗವತೇ ॥ ಎಂತಲೂ*
*"ಅತ್ಯಲ್ಪೋಽಹಿ ಹರೇಃ ದ್ವೇಷಃ ಸ್ನೇಹಸ್ಯಾನುದಯಾಕರಃ ।"*

ಎಂತ ಏಕಾದಶ ನವಮಾಧ್ಯಯ ತಾತ್ಪರ್ಯ ವಚನವು -

ಆಕ್ಷೇಪ ಸುಳಾದಿ "ದಾರೀನ ನಡೆದರೇನೋ ಧರ್ಮ ಮಾಡಿದರೇನೋ, ನೀರು ಕಾವಾಡಿ ನಿತ್ಯ ಹೊತ್ತರೇನೋ ವಾರಕಾಂತೆಯರೊಡನಾಡಿದರೇನೋ ಎಂತ ಹೇಳಿ ನಾರಾಯಣನ ಪಾದದಲ್ಲಿ ಹಗಳಿರಳು ಸಾರುತ್ತ ಮನವಿಟ್ಟದಾಸರಿಗೆ ಸೂರೆ ವೈಕುಂಠ ಮಾರ್ಗ" ಎಂತಲೂ "ಜಾತ ರಹಿತ ಶ್ರೀನಾಥನ ಪಾದಾವ ಆತು ಮಾದೋಳಗಿಟ್ಟು ಮಾತು ಮಾತಿಗೆ ಬಲು ಮಾತಾ ಪಿತನೆ ಸರ್ವ ಈತನೇ ನಮಗೆಂದುತಾ ತಿಳಿದವಗೆ ಯಾತಕ್ಕೆ ಸ್ನಾನ ಸಂಧ್ಯಾವಂದನ ಕರ್ಮಗಳೂ ಪ್ರಾತರಾರಂಭಿಸಿ ಮೈಯ್ಯಾ ಘಾತಿಸಿಕೊಂಡವಗೆ" ದಾನಂತಿಪ್ಪನು ವಿಜಯ ವಿಠಲ ಎಂತ ಮತ್ತೊಂದು ಸುಳಾದಿಯಲ್ಲಿ ವಿಜಯರಾಯರು ಹೇಳಿದ್ದಾರೆ ಎಂದರೆ, ಆದರ ಮುಖ್ಯ ಭಾವ ಸದಾಚಾರಿಗಳಾದ ಹರಿದಾಸರು ಹರಿವಾಯುಗಳ ಪೂರ್ಣ

ಪ್ರಸಾದಪಾತ್ರರಾಗಲಿ ಎಂತಲೂ ಅನಂತರ "ಸ್ತ್ರೀ ಶೂದ್ರ ಬ್ರಹ್ಮ ಬಂಧೂನಾಂ ತಂತ್ರ ಜ್ಞಾನೇ ಅಧಿಕಾರಿತಾ" ಎಂತ ಸೂತ್ರ ಭಾಷ್ಯ ಮತ್ತು ನೀಚ ಜಾತಿ ಕೂಡಾ ನಾಮ ಜ್ಞಾನಾಧಿಕಾರಿಗಳು. ಅವರಿಗೆ ಪ್ರಾಣದೇವರನ್ನು ನಂಬತಕ್ಕ ಜನ್ಮವಲ್ಲವಾದರೂ ಚೆನ್ನಾಗಿ ಶ್ರೀಹರಿಪದವನ್ನು ಮಾತ್ರ ನಂಬಿದವರಿಗೆ ಮುಂದಿನ ಜನ್ಮಗಳಲ್ಲಿ ಪ್ರಾಣದೇವರ ಪ್ರಸಾದವಾಗುತ್ತದೆ. ಅಪರೋಕ್ಷ ಸಾವಿರದ ಹದಿಮೂರು ಜನ್ಮಗಳು ನಿಶ್ಕಾಮಾರಾಧನೆಯು ಒದಗದೇ ಹೊರತು ಅಧಮಾಧಿಕಾರಿಗೆ ದರ್ಶನ ಒದಗದು ಎಂತ ಅಪರೋಕ್ಷ ತಾರತಮ್ಯ ಸುಳಾದಿ ಮತ್ತು ಪ್ರಕಾಶ ಸಂಹಿತಾ ಸಿದ್ಧ.

ಆದುದರಿಂದ ಪರಮಾತ್ಮನನ್ನು ಚಿಂತಿಸಿ "ಅಂತರಂಗದೊಳಗಿಟ್ಟು ಅಂತರ್ಮುಖನಾಗಿ ಸಂತತ ಪಾಡುವ ಅಂತ್ಯಜಗೆ ಭಯವೆಂತುಂಟು ಹೇಳಿರೋ ಅಂತಗಂಡವರು." ಎಂತ ಭ್ರಷ್ಟ ಜನ್ಮಗಳಿಂದಾದರೂ ಶ್ರೀಹರಿಯನ್ನು ಬಿಟ್ಟರೆ ಅವನು ಉದ್ಧೃತನಾಗುವುದಿಲ್ಲಾವಾದುದರಿಂದ ಮುಂದಿನ ಜನುಮಗಳಲ್ಲಿ ಪ್ರಾಣದೇವರ ಅನುಗ್ರಹ ಸಿದ್ಧವಾದುದರಿಂದ ಅವನಿಗೆ ಭಯವೇ ಇಲ್ಲವು. ಅದರ ಮರ್ಮವು ಹರಿಸೇವೆ ಸುಳಾದಿಯಲ್ಲಿ ವ್ಯಕ್ತವಾಗಿದೆ. "ವನಜಭವಾಂಡದೊಳು ಹರಿದಾಸತ್ವದ ದೀಕ್ಷೆ ಬಲು ಕಷ್ಟ ಕಷ್ಟ ಕಷ್ಟ ಕಷ್ಟ ಕಾಣೋ । ಮನುಜಾಧಮರ ಅಧಮರಿಗೆ ಇದು ಸುಲಭವಲ್ಲ" ಇನಿತು ಇದರೊಳಗೆ ತ್ರಿವಿಧ ಬಗೆಯುಂಟು. ಗುಣವಂತನಾಗಿ ನೀನು ಕಾಲ ಕ್ರಮೇಣ ಮಾಡು "ಅಂದರೆ ತಾಮಸದಾಸ್ಯ ರಾಜಸ ದಾಸ್ಯ ಸಾತ್ವಿಕದಾಸ್ಯ ನಿರ್ಗುಣ" ಎಂಬ ಶುದ್ಧ ಸತ್ವದಾಸ್ಯ ಹೀಗೆ ನಾಲ್ಕು ವಿಧವು. ತಾಮಸ ದಾಸ್ಯ ಯಾವುದೆಂದರೆ ಸ್ವರ್ಗ ಜನಕ ಧರ್ಮಾಪೇಕ್ಷೆ. ಪರಗತಿ ಈ ಆಶೆ ಎರಡೂ ಇಲ್ಲದೆ ಮಹಾಮಹಿಮನ ನಾಮವೇ ಸಲ್ಲದ ಕಾಮನಂತೆ ತಿಳಿದು ಆ ನಾಮವನ್ನು ಮಾರಿಬಿಟ್ಟು ವೇಳೆವೇಳೆಗೆ ಕುಕ್ಷಿಂಭರಣವಾದರೆ ನಾನೇ ದೇವರಿಗೆ ಸಮನೆಂದು ನಿಶ್ಚಿತನಾಗಿ ಶೂನ್ಯವಾದಿಯಂತೆ ದುಷ್ಟ ಚೇಷ್ಟೆಯುಳ್ಳವನೇ ತಾಮಸ ದಾಸನು ಎಂದರ್ಥವು. ಮತ್ತೊಂದುಸುಳಾದಿಯಲ್ಲಿ "ಮಾರಿಗೆ ನಿನ್ನ ಮಹಿಮೆ ಮಾರಿ ಧನ್ಯನಾಗಿ ಊರು ಕೇರಿಯೊಳು ನಾಸಾರ ಹೃದಯನೆನಿಸಿ ಪರರ ವಸ್ತ್ರ ಅಪಹರಿಸಿ ತೋರುವೆ ಸುಗುಣನೆಂದು" ಎಂತ ಜಾತಿಕಾರನು ಎಂಬ ಸುಳಾದಿ ಸಿದ್ಧವು. ಮತ್ತೊಂದು ಸುಳಾದಿ

***"ರತನಾ ಬೆಲೆಗೆ ಹಾಕಿ ಪಲ್ಯವ ಕೊಂಬುವಂತೆ ಗತಿಗೆ ಸಾಧನವಾದ ನಿನ್ನ ನಾಮಗಳ***
***ಕ್ಷಿತಿಯೊಳು ಶೇರು ತೌಡಿಗೆ ಬೀರಿ ಬಲು ಅನುಚಿತ ಕರ್ಮಗಳೆಲ್ಲ***
***ಹಿತವಾಹಾದೆಂದು ನಗುತ ಕಾಲ ಕಳೆವನೋ ಉದರಂಭರನಾಗಿ***
***ಮತಿ ಭ್ರಷ್ಟ ನಾನಯ್ಯ ಸತಿ ಇಲ್ಲದವಾಗೆ ವೊಮ್ಮಗ ಹೀನನೆಂತೆಂದು***
***ಅತಿಶಯವಾಗಿ ಪೇಳಿದ ವೊರ್ಖನಂದದಿ ಕ್ಷಿತಿಯೊಳು ನಾನೊಬ್ಬ ಜ್ಞಾನ***
***ಭಕುತಿ ವಿರಕುತಿಯಿಲ್ಲದಲೆ ಮುಕುತಿ ಬೇಡುವೆ ನೋಡು"***

ಅಂದರೆ ಅನುಚಿತ ಕರ್ಮಗಳೆಲ್ಲವೂ ಹಿತವಾದದ್ದೆಂದು ನಗೋಣ ಅಂದರೆ ಹರಿ ಗುರು ದ್ವೇಷ ಮಾಡೋಣವೇ ಹರಿ ಗುರು ಭಕ್ತಿಯಂತ ತಿಳಿದು ಕೊಂಡು ಭಕ್ತರ ಭಕ್ತಿಯನ್ನು ತಾಮಸ ದಾಸನು ನೋಡಿ ನಗುತ್ತಾನೆ ಎಂತ ಅರ್ಥವು. ಹ್ಯಾಗೆಂದರೆ ಏಕಾದಶಿ ದಿನದಲ್ಲಿ "ನಪಿತೃಭ್ಯಃ ಸ್ವಧಾ ಸ್ವಾಹಾ" ಎಂಬ ಶೃತಿ ವೊದಲಾದುದರಿಂದ ಬ್ರಾಹ್ಮಣ್ಯ ಉಳಿಸತಕ್ಕ ಪಿತೃ ಶ್ರಾದ್ಧವೆಂಬ ನಿಷ್ಕಾಮ ಕರ್ಮಯೋಗವೇ ಆ ದಿನದಲ್ಲಿ ಹರಿ ಗುರು ದ್ವೇಷರೂಪವಾಗಿ ಲಕ್ಷ್ಮೀ ಬ್ರಹ್ಮಾದಿ ಭಕ್ತರ ನಿರಾಹಾರವೇ ಭಗವದ್ಭಕ್ತನಿಂದ ಕೂಡುತ್ತದೆ. ವಿಜಯದಾಸರ ವಚನ ಈ ಧರೆಯೊಳಗೆ ಇದನ ಮಾಡದ ನರ ಮಧ್ಯ ಮಾಂಸ ಮೂತ್ರ ಮಲ ಕ್ರಿಮಿ ವಮನವ ಮೆದ್ದ ಸದ್ವೇಷಿ ಚಂಡಾಲ ವೀರ್ಯಕ ಬಿದ್ದವನೆನ್ನಿ " ಎಂತ ಆ ದಿನ ಶ್ರಾದ್ಧ ಬಿಡದೇ ಇದ್ದರೂ ಹರಿ ಗುರು ದ್ವೇಷ ಬಿಡದು ಮತ್ತು ವಿವಾಹ ಕಾಲದಲ್ಲಿ ವಿವಾಹಾಗ್ನಿ ಸನ್ನಿಧಿಯಲ್ಲಿ ಅನೇಕ ಬ್ರಹ್ಮ ಮಂಡಲದಲ್ಲಿ ಪತ್ನಿಯನ್ನು ಹೊರತು ಧರ್ಮಾರ್ಥ ಕಾಮಗಳಲ್ಲಿ- "ನಾತಿ ಚರಾಮಿ" ಎಂಬ ಸತ್ಯ ಪ್ರತಿಜ್ಞೆ "ಸಾಕ್ಷಿಣಃ ಸರ್ವ ದೇವತಾಃ" ಎಂತೆಂದು ಇರತಕ್ಕ ಸಾಕ್ಷಿಗಳಿಂದ ಅಗ್ನ್ಯಾದಿ ಸರ್ವದೇವತೆಗಳೂ ಕೂಡ ನೊಡುತ್ತಾರೆ. ಎನ್ನುವುದನ್ನು ಅರಿಯದೆ ತನ್ನ ಪ್ರತಿಜ್ಞಾ ಮಾಡಿಕೊಂಡು ಅಹಲ್ಯೆಗೂ ಕೂಡ ಬುದ್ಧಿ ಪೂರ್ವಕವಲ್ಲದೆ ವೋಸದಿಂದ ನಡೆದ ಜಾರತ್ವ ದ್ರೋಹಕ್ಕೆ ಪುನಶ್ಚ ಇಂದ್ರಾದಿಗಳೂ ಕೂಡ ಶ್ರೀ ಹರಿಗೆ ವೊರೆಇಟ್ಟದ್ದಕ್ಕೆ ಪರ್ವತದಷ್ಟು ದ್ರೋಹವನ್ನು ಸಾಸಿವೆ ಕಾಳನ್ನಾಗಿ ಮಾಡದೇವೆ ಬಹು ಕಾಲ ಪಾಷಾಣ ಜನ್ಮವಾಯಿತೆಂದು ಅರಿಯದೆ- ಬುದ್ಧಿ ಪೂರ್ವಕವಾದ ನಮ್ಮ ಕೃತ್ಯಗಳು ಸುಖರೂಪಗಳೇಬ ವಿಪರೀತ ಜ್ಞಾನದಿಂದ ನಗುತ್ತಾ ಕಾಲ ಕಳೆವನೋ ಎಂತ ಸುಳಾದಿಯ ಭಾವ. ವಿಪರೀತ ಜ್ಞಾನ

ಯಾವುದೆಂದರೆ ಸತಿಯಿಲ್ಲದವನಿಗೆ ಮೊಮ್ಮಗನೀಹೆನೆಂಬ ಸುಳಾದಿ ಮಾತಿನಿಂದ ತೋರಿಸಿದರು. ಮುಂದಿನ ಮಾತು "ಕೃತ ಕಾರ್ಯನಾಗಿ ನಿನ್ನನು ಬೇಡಿದರೆ ಸರಿ ಅದು ಬಿಟ್ಟು ಧರ್ಮಕ್ಕೆ ಪ್ರತಿಕೂಲವಾಗಿ ಸಜ್ಜನರ ಪ್ರೀತಿ ತೊರೆದು" ಎಂದರೆ ಯಥಾಶಕ್ತಿ ಅವನ ಅಜ್ಞಾನರೂಪ ವಿಹಿತ ಕರ್ಮಾನುಷ್ಠಾನ ಮಾಡೋಣವೇ ಕೃತಕಾರ್ಯನಾಗೋಣ ಎಂತ ಅರ್ಥವು. ಬೇಡೋಣ ಎಂದರೆ

*ನಜಾನೆ ಕರ್ಮಯತ್ಕಿಂಚಿನ್ನಾಪಿ ಲೌಕಿಕ ವೈದಿಕೆ ।*
*ನನಿಷೇಧ ವಿಧಿಯಸ್ಮಾತ್ತವ ದಾಸೋಸ್ಮಿ ಕೇವಲಂ ॥*

ಎಂತ ದೇವ ಪೂಜಾ ಪದ್ಯಮಾಲೆಯಲ್ಲಿ ಟೀಕಾರಾಯರ ವಚನವು. ಅಂದರೆ ನಾವು ಕರ್ಮರೂಪವನ್ನೇ ಅರಿಯೆವು ಮಹಾನುಭಾವ ಎಂತ ಅರ್ಥವು. ಬ್ರಹ್ಮಾದಿಗಳೂ ಕೂಡ ಕ್ಷಮಾಪಣೆಯಿಂದಲೇ ಕರ್ಮಗಳನ್ನು ದಕ್ಕಿಸಿಕೊಂಡಿದ್ದಾರೆ. ದಕ್ಕೋಣವೆಂದರೆ, ಶ್ರೀಹರಿಯು ಕರ್ಮರೂಪನಾಗಿ ತನ್ನ ಸನ್ನಿಧಾನ ಮೂರ್ತಿಯ ಸನ್ನಿಧಾನವನ್ನು ದಿನ ಕ್ರಮದಿಂದ ತಾನೇ ಬೇಳಿಸಿಕೊಂಬೋಣ ಎಂತ ಅರ್ಥವು. ಸುಳಾದಿ:

*"ಪರಸತಿಯರ ಕೂಟ ಕಾಲಕೂಟದ ಲೇಪ ।*
*ತತ್ಕಾಲಕ್ಕೆ ದುರ್ವ್ಯಸನ ಶೀತಲವಾಗಿಖರೆಗೊಳಿಸುವುದೋ ಇಹ ಪರದಲಿ"*

ಎಂತ ಹೇಳಿ ಮುಂದೆ

*"ಆ ಯಮರಾಯನು ನಿನ್ನ ಕುಲವೈದು ಪೂಯಾಸೃಜ ಮೊದಲಾದ ನರಕದಲ್ಲಿಟ್ಟು ಶ್ರೇಯಸ್ಸು ಕೆಡಿಸುವ"*

ಎಂತ ಹೇಳಿದ್ದಾದುದರಿಂದ ಇವನು ಜ್ಞಾನಿಯಾದಾಗ್ಯೂ ಅಪರೋಕ್ಷ ಜ್ಞಾನಿಯಾಗುವ ತನಕ ಯಮದೇವರು ನರಕಕ್ಕೆ ಹಾಕದೇ ಬಿಡರು ಎಂತಲೂ ಶಾಂಡಿಲ್ಯ ತತ್ವದಿಂದಲೂ ಅನಾದಿಕರ್ಮ ಸುಳಾದಿಯಿಂದಲೂ ಪೂರ್ವದಲ್ಲಿಯೇ ನಿರೂಪಿಸಿದ್ದೇನೆ. ಅದರ ಪ್ರಮಾಣವು

*ಪರದಾರ ದೃಶಿ ಪ್ರೋಕ್ತಾ ಕ್ಷಿದ್ರಪಾತಕ ಸಂಜ್ಞಿತಂ ।*
*ಉಪಪಾತಕಂ ತದ್ಗತಿಶ್ಚ ವರ್ಣ ಬಾಹ್ಯೇಷು ಪಾತಕಂ ।*

*ಮಹಾಪಾತಕ ಸಂಜ್ಞಾಂತು ತ್ರಿಪದೇ ದಾರದರ್ಶಣಂ ।*
*ದಾರದೃಶಿಃ ಸ್ವೋತ್ತಮಾನಾಂ ಮನುಷ್ಯಾಣಾಂ ಸ್ವಭಾವತಃ ।*
*ಸುಮಹಾಪಾತಕಂ ಪ್ರೋಕ್ತಂ ತದ್ಗತಿಃ ಸುಮಹತ್ತತಃ ।*
*ಋಷಿದಾರೇಷು ಮನಸೋಗತಿರೇವ ತತೋಧಿಕಂ ।*
*ದೇವ ದಾರಾಭಿಕಾಮಾನಾಂ ಸಂಗಿ ಸಂಗ ತತೋಧಿಕಃ ।*
*ಕಿಮು ವಿಷ್ಣುಸ್ತಥಾ ಯೋಷಿತ್ಸಂಗಸ್ಯ ವ್ಯವಸ್ಥಿತೇಃ ।*
*ನಸಮಂ ಪಾತಕಂ ಕ್ವಾಪಿ ನಹಿ ಸ್ವಸ್ತ್ಯಭಿಕಾಮತಃ ॥*
*ಅವಿಜ್ಞಾತಾ ಮಾಧವಾದೇ ತಸ್ಮಾತ್ತದ್ದೂರತಸ್ತ್ಯಜೇತ್ ।*
*ಮಾನುಶೇಷು ದುಃಖಿತ್ವಂ ಕ್ಷಿದ್ರ ಪಾಪ ಫಲಂ ಸ್ಮೃತಂ ।*
*ಪಾಪಾತ್ತು ವರ್ಣ ಬಾಹ್ಯತ್ವಂ ತಿರ್ಯಗ್ಯೋನಿಗತಸ್ತಥಾ ।*
*ಸಹಸ್ರ ವರ್ಷ ನರಕಂ ಯುಗಮಾತ್ರಕಂ।*
*ಚತುರ್ಯುಗಾವಸಾನಂತು ಪಾತಕಸ್ಯ ಫಲಂ ಶೃತಂ ।*
*ಮಹಾ ಪಾತಕ ಜನ್ಯಂಚ ಕಲ್ಪಾವಧಿ ಸಮೀರಿತಂ ।*
*ಸು ಮಹಾಪಾತಕಶ್ಚಾಪಿ ಯಾವದ್ಬ್ರಹ್ಮ ಲಯೋ ಭವೇತ್ ।*
*ತತ್ಪರಾಣಾಂ ಪಾತಕಾನಾಂ ಫಲಮಾಂಧಃ ತಮಃಸ್ಮೃತಂ ।*
*ಅಧೋಧೋ ದುಃಖಮತುಲಂ ವಿಷ್ಣುದಾರಾಭಿ ದರ್ಶನಾತ್ ।*
*ವದಾದಪಿ ಹಿ ದಾರಸ್ಯ ಧರ್ಷಣಾಂ ಕೋಪ ಕಾರಣಾಂ ।*
*ತಸ್ಮಾದ್ದೇವ್ಯಃ ಸದಾವಂದ್ಯಾಃ ಅಗ್ನಿವನ್ನಾಮಕಾಮತಃ ।*

ಇತಿ ಧರ್ಮ ತತ್ವೇ

ಎಂತ ಏಕಾದಶ ಸ್ಕಂಧ ಚತುರ್ದಶೋಧ್ಯಾಯ ತಾತ್ಪರ್ಯ ವಚನವು. ತಾತ್ಪರ್ಯ ದೀಪಿಕೆಯಿಂದ ಅರ್ಥವನ್ನು ತಿಳಿಯತಕ್ಕದು. ಇದರಲ್ಲಿ ರಾವಣಾವಿಷ್ಟದೈತ್ಯನ ಸೀತಾಭಿಕಾಮನ ಮೊದಲಾದ ಮಹಾ ಅರ್ಥಗಳನ್ನು ಕೂಡಾ ಪಾಂಗ್ತವಾಗಿ ಶ್ರೀ ಸರ್ವಜ್ಞರಾಯರು ವಿಸ್ತರಿಸಿದ್ದಾರೆ. ಈಗಿನ ಪ್ರಕೃತ ತಾಮಸ ದಾಸನ ಉನ್ಮತ್ತ ಭಾವವನ್ನು ಹೇಳಿ ಇದ್ದೇನೆ. ರಾಜಸ ದಾಸ್ಯ ಎಂಥಾದದ್ದೆಂದರೆ ತನ್ನ ಯಶಸ್ಸು ಭೂಮಿ ಮೇಲೆ ಹರವಿ ಸ್ವರ್ಗ ಸಂಪಾದಿಸುವುದು ಎಂತ ಅರ್ಥವು. ಸುಳಾದಿ

*"ಕೀರ್ತಿಸುವೆನಾ ಕಾಮ್ಯಕರ್ಮದ ವಿಚಾರದ ಕೀರ್ತಿ*
*ಪುರುಷರಿಗೆ ಬಿಡದು ಮುಂದೆ"*

ಎಂತ ಅನಾದಿ ಕರ್ಮ ಸುಳಾದಿ. ಸಾತ್ವಿಕ ಭಕ್ತಿ ಭಕ್ತನ ಲಕ್ಷಣವೇನೆಂದರೆ ಪರಮ ವೈರಾಗ್ಯ ಕೊಟ್ಟು ಪರಮ ದೃಢ ಭಕ್ತಿಯಿಂದ ಶ್ರೀ ಹರಿ ಪ್ರೀತಿ ಮಾತ್ರ ಉದ್ದೇಶ ಮಾಡತಕ್ಕವನೇ ಸರಿ. ಆದಾಗ್ಯೂ ಈ ಪುರುಷ ನಿರ್ಗುಣವೆಂಬ ಶುದ್ಧ ಸಾತ್ವಿಕ ಭಕ್ತ ಹ್ಯಾಗೆ ಆಗಲಿಲ್ಲ ಎಂದರೆ ನಾನು ಎಂಬ ಸ್ವಾನುಭವದಲ್ಲಿ ಅನಾದ್ಯಜ್ಞಾನ ಪ್ರಾಪ್ತ ಜೀವ ಬ್ರಹ್ಮೈಕ್ಯ ಜ್ಞಾನ ದ್ರೋಹವಿರುವುದರಿಂದ ಈ ಭಕ್ತರು ಶುದ್ಧ ಸಾತ್ವಿಕರಾಗಲಿಲ್ಲ.

ಇದು ನಿವೃತ್ತಿಗೆ ಪೂರ್ವೋಕ್ತ ಭಗವಚ್ಚಿಂತನೆಗಳನ್ನು ತಿಳಿದು ಅನಂತರದಲ್ಲಿಯೂ ಕೊಡ ಜ್ಞಾನಿಗಳಿಗೆ ಕತ್ತಲೆ ಬಂದು ಮುಚ್ಚುವ ಹಾಗೆ ಮಧ್ಯೆ ಮಧ್ಯೆ ಚರ್ಯದಲ್ಲಿ ಪೂರ್ವಕರ್ಮಾನುಸಾರ ಅಜ್ಞಾನವು ಘಟಿಸುತ್ತದೆ. ಆದಾಗ್ಯೂ ಸುಳಾದಿ "ಮರೆದೋಮ್ಮೆನೆನೆದಾರೆ ಚನ್ನಾಗಿ ಚನ್ನಾಗಿ" ಎಂತ ಆರಸಿನ ಭೀತಿಯಿಂದ ಎಂಬ ಸುಳಾದಿಯಲ್ಲಿ ಹೇಳಿ ಇದ್ದಾರೆ. ಜ್ಞಾನಿಗಳಿಗೆ ಸಾವಕಾಶದಿಂದಲಾದರೂ ಈ ಜ್ಞಾನವು ಸ್ಪೂರ್ತಿಯಾಗುವುದು ನಮ್ಮ ಸಾಧನವನ್ನು ಕೆಡಿಸುವ ಕಲಿಯೇ ಈ ಅಜ್ಞಾನದಲ್ಲಿ ನಮ್ಮ ಸಂಗಡವೇ ಬೆನ್ನು ಹತ್ತಿ ಇರುವುದರಿಂದ ನಮ್ಮ ಯೋಗ್ಯತೆಗೆ ತಕ್ಕ ಸಾಧನಗಳನ್ನು ದಕ್ಕಿಸಿಕೊಡುವ ಸತ್ಯ ಸಂಕಲ್ಪನ ಇಚ್ಛೆಯ ಮೇಲೆ ನಮ್ಮ ಯತ್ನವು ವ್ಯರ್ಥವೇ ಸರಿ. ಇವನೇ ನಿರ್ಗುಣ ಭಕ್ತನು.

ಸಾತ್ವಿಕ ಭಕ್ತನ ಅನುಭವ ಎಂತಹದೆಂದರೆ ಹೇ! ಸ್ವಾಮಿಯೇ ನೀನು ಎಂದು ಎನಗೆ ಪ್ರಸನ್ನನಾಗುವಿ, ನನ್ನ ಕೈಯನ್ನು ಬಿಡ ಬೇಡ. ನನ್ನನ್ನು ಉದ್ಧರಿಸು ಎಂದು ಪರಮ ದೃಢ ಭಕ್ತಿಯ ಉದ್ರೇಕಾದಿಂದ ಶಾಸ್ತ್ರಾಲೋಡನೆಯಿಂದ ಸ್ವಾಮಿಯ ಪಾದಗಳನ್ನು ಘಟ್ಟಿಯಾಗಿ ನಂಬಿಕೊಂಡಿರತಕ್ಕವನು. ಆದಾಗ್ಯೂ ಇಂತಹ ಭಕ್ತಿ ಮಾಡತಕ್ಕವನು ನಾನು ಎಂಬ ಅಜ್ಞಾನವು ಆ ಪುರುಷನನ್ನು ಹೇಗೆ ಕೆಡಿಸುತ್ತದೆ ಎಂದರೆ – ಮನಸ್ಸಿನಲ್ಲಿ ಒಂದು ಕಲಂಕ ತಂದು ಬಿಡುತ್ತದೆ. ಅದ್ಯಾವುವೆಂದರೆ ನಾನು ಹೇಗೆ ಅವನ ಚರಣಗಳನ್ನು ನಂಬಿ ಇದ್ದೇನೆಯೋ ಶ್ರೀಹರಿಯು ಇವನನ್ನು ಉದ್ಧಾರ ಮಾಡುವೆನು ಎಂತ ಇಚ್ಚಿಸಿ ಇದ್ದಾನೋ ಇಲ್ಲವೋ ಅವನ ಸಂಕಲ್ಪವು ಬಲವಾದುದರಿಂದ ಶ್ರೀಹರೀಚ್ಛೆಯನ್ನು ಅರಿಯನಾದುದರಿಂದ ನನ್ನ ಕುತೂಹಲಕ್ಕಿಂತಲೂ ಆತನ ಕುತೂಹಲ ಅಧಿಕವಾದರಷ್ಟೆ ನನ್ನ ನಂಬಿಕೆ ಶ್ರೀಹರಿಯ ಮನಸ್ಸಿಗೆ ಬಂದೀತು. ದೇವತೆಗಳೂ

ಕೂಡ ಕಲಿಯ ಆವೇಶ ಬಲದಿಂದ ತಪಸ್ಸು ಮೊದಲದ ಸಾಧನಗಳನ್ನು ಕೆಡಿಸಿಕೊಂಡು ಸ್ವೋತ್ತಮ ಶಾಪ ತಗಲಿ ಋಷಿಗಳಿಗೂ ದೇವತೆಗಳಿಗೂ ಕೂಡ ಬಹು ಪ್ರಕಾರ ತಪಸ್ಸುಗಳ ನಾಶವಾಗಿ ಇರುತ್ತದೆ. ನಮ್ಮಂತಹ ಅಲ್ಪರ ಸಾಧನವನ್ನು ಮತ್ತು ಭಕ್ತಿಯನ್ನು ಮುಂದೆ ಶ್ರೀ ಹರಿಯು ಬಲ ಮಾಡುವನೋ ಎಂತ "ಶ್ವಪಚಾದಪಿ ಕಷ್ಟತ್ವಂ" ಎಂಬ ಭಾಷ್ಯ ಸ್ಮರಣೆ ಮಾಡಿಕೊಂಡು ನನ್ನ ಭಕ್ತಿ ಸಾಧನವು ಶ್ರೀ ಹರಿಗೆ ಬೇಡದೇ ಇರೋಣ ಅಂತಹ ಕಾಲವೇ ಇದೇನೋ ಏನೋ ತಿಳಿಯದಲ್ಲಾ ಎಂದು ಒಂದು ವೇಳೆಗೆ ಹಾಗೆ ಇದ್ದ ಪಕ್ಷಕ್ಕೆ ನಾನಾಗಿ, ನಿದ್ರೆಯನ್ನು ಮಾಡುವ ಪುರುಷನಿಗೆ ಉಪಚಾರ ಮಾಡಿದ ಹಾಗೆ ನನ್ನ ತ್ರಿಕರಣ ಪೂರ್ವಕ ಕರ್ಮಾಯಾಸಗಳು ವ್ಯರ್ಥವಾಗೋಣ ಅಧಿಕ ಭಕ್ತಿ ಮಾಡಿಕೊಂಡು ಜನಗಳ ಅಪಹಾಸ್ಯಾಸ್ಪದನಾಗಿ ನಿಷ್ಕಾಮಾರಾಧನೆ ದೀಕ್ಷಿತನೆಂದು ಮದುವೆಯ ಮನೆಯ ಊಳಿಗನಂತೆ ಕುಳಿತು ಅಧಿಕ ಸೌಖ್ಯವು ಕೊಡ ಬೇಕೆಂತ ಕೇಳಿಕೊಂಡು ಯಾಕೆ ದ್ರವ್ಯೋಪಪತಿಯನ್ನು ಕೆಡಿಸಿಕೊಳ್ಳಲಿ ಎಂತ ಸಾತ್ವಿಕ ಭಕ್ತನ ಮನಸ್ಸಿನೊಳಗೆ ಇರುವುದೇ ನಿಶ್ಚಯವು. ಇದೇ ನಾನು ಎಂಬ ಅಜ್ಞಾನದ ದೋಷವು. ಆದ ಪ್ರಯುಕ್ತ ಮನೋ ವಾಕ್ಕುಗಳಲ್ಲಿ ಚರ್ಯದಲ್ಲಿ ಕಲಿಯು ಕೊತಿರುವ ಪ್ರಯುಕ್ತ ನಿಷ್ಕಳಂಕ ಭಗವತ್ಪ್ರೀತಿ ಕರ್ಮಗಳ ಅನುಷ್ಠಾನವೇ ಮರುಮರೀಚಿಕಾಜನ ಭ್ರಾಂತಿಯಾದುದರಿಂದ ಸುಳಾದಿಯಲ್ಲಿ "ಹಿಟ್ಟುಗಳನ್ನು ಗಾಳಿಗೆ ತೂರಿ ರೊಟ್ಟಿ ಸುಟ್ಟು ಉಂಡೆನೆಂಬ" ದೃಷ್ಟಾಂತವನ್ನು ತೋರಿಸಿ ಇದೆ. ಆದುದರಿಂದ ಅರಗಿಣಿಯು ರಾಮ ರಾಮ ಎಂಬ ಉಚ್ಚಾರಣೆಯಂತೆ ನಿಷ್ಕಾಮ ಕರ್ಮ ದೀಕ್ಷೆಯನ್ನು ಅರಿಯದೆ ನಿರ್ಗುಣ ಭಕ್ತನು ಸಂಪಾದಿಸುವ ಮಹಾ ಪುಣ್ಯಕ್ಕೆ ಪಾತ್ರನಾಗದೆ ಆತನಿಗೆ ಬಿಂಬಪರೋಕ್ಷವಾಗುವುದು ಅಪಹಾಸಕರವೇ ಸರಿ.

*"ಕಡೆ ಕಡೆಗೆ ಇದೆ ಮುಕ್ತಿಯೋಗ್ಯಗೆ ಜ್ಞಾನ ಹುಟ್ಟದಲ್ಲದೆ*
*ಬಿಂಬ ದರ್ಶನವಾಗದು."*

ಎಂತ ಹಿಂದೆ ಸರ್ವ ಸಮರ್ಪಣೆ ಸುಳಾದಿ ಹೇಳಿದೆ "ಏತದ್ವಾರೋಹಿ ಸಂಸಾರೋ" ಎಂಬ ಭಾಗವತ ಶ್ಲೋಕವು. ಅದೃಷ್ಟೇ ಜೀವ ಪರಯೋರ್ಭೇದಸ್ಯಾಪ್ನೋತಿ ಸಂಸೃತಿಃ ॥ ಎಂಬ ಭಾಗವತದ ಶ್ಲೋಕದ ಶ್ರೀಮದಾಚಾರ್ಯರ ವಚನವು. ನಿರ್ಗುಣ ಭಕ್ತಿಯನ್ನು ಹೇಳುತ್ತದೆ. ಎಂತ

ತಿಳಿಯದ ಪ್ರಯುಕ್ತ ತಮೋಯೋಗ್ಯಗೆ ಅದೇ ಅದ್ವೈತ ಸಿದ್ಧಾಂತ ಹುಟ್ಟಲಿಕ್ಕೆ ವಾಂಯುಮಿಶ್ರ ಗಂಧ್ವೈಕ್ಯ ಜ್ಞಾನವೇ ದುರ್ಬೀಜವಾದುದರಿಂದ "ಮಾಯಾಮಾತ್ರಮಿದಂ ದ್ವೈತಂ ಅದ್ವೈತಂ ಪರಮಾರ್ಥತಃ "ವಿದ್ಯಾತ್ಮನಿ ಭಿದಾಭೊಧಃ" ಎಂಬ ಎರಡು ಶೃತಿಗಳು ಕೂಡಾ ಏಕಾರ್ಥ ಮಡಿಕೊಳ್ಳದೇ "ಅಬೋಧಃ" ಎಂತ ಪದ ಮಾಡಿ ಅಬೋಧವನ್ನು ಅದ್ವೈತಿಯು ವಿದ್ಯಾ ಎಂತ ಹೇಳಲಿಕ್ಕೆ ಸಂಕಟವು. ತನ್ನ ಮೂಗಿಗೆ ತಕ್ಕನಾಮವನ್ನಾಗಿ ವ್ಯಾವಹಾರಿಕ ಭೇದ ಏಂತಲೂ ದುರ್ಬಲ ಶೃತಿಎಂತಲೂ ತನ್ನ ಅದ್ವೈತವನ್ನು ಸ್ವತ ಏವ ತಾನೇ ಬಲ ಮಾಡಿಕೊಂಡು ಅಂದಃ ತಮಸ್ಸನ್ನು ಸೇರಲಿಕ್ಕೆ ವೇದವ್ಯಾಸದೇವರು ಚತುರ್ಥ ಸ್ಕಂಧ ಭಾಗವತದಲ್ಲಿ

*ಅಹಂ ಭವಾನ್ನಚಾನ್ಯಸ್ತ್ವಂ ತ್ವಮೇವಾಹಂ ವಿಚಕ್ಷತೇ ।*
*ನಸೌ ಪಶ್ಯಂತಿ ಕವಯಃ ಛಿದ್ರಂಜಾತುಮನಾಗಪಿ ॥*

ಎಂತ ಈ ಪ್ರಕಾರ ಬಹು ಮೋಹಕ ಉಪದೇಶಗಳಿಂದಲೂ ಆಪಾತ ಪ್ರತೀತಿಯಿಂದ ಪರಮ ಸುಲಭವಾಗಿ ಅದ್ವೈತ ಬೋಧೆಯನ್ನು ಕೊಟ್ಟು ಇದ್ದಾರೆ. ಆದುದರಿಂದ "ಒಬ್ಬ ಬ್ರಹ್ಮರ ಮುಕುತಿ ಒಬ್ಬ ಬ್ರಹ್ಮಗೆ ನರಕ" ಎಂತ ನಿಶ್ಚಯ ಜ್ಞಾನದಿಂದ ನಿಶ್ಚಿಂತ ಪುರುಷನೇ ಸರಿ.

ದ್ವೈತಿಗಳು ಮಾತ್ರ ನಿಷ್ಕಾಮಾಂಧಕರಾಗದೆ ಮಹಾ ಶಾಸ್ತ್ರ ವ್ಯವಹರ್ತುಗಳಾಗಿ ಆ ಮಹಾ ಶಾಸ್ತ್ರವೇ ದೇವೇಂದ್ರ ಭೊಗ ಕೊಡುತ್ತದೆ. ಅನಾದಿ ಕರ್ಮ ಸುಳಾದಿಯಲ್ಲಿ "ಸಪುತಾ ಸಪುತಾ ಭುವನಾವತಿಯಾಳುವ" ಎಂದು ಹೇಳಿದ ಪ್ರಯುಕ್ತ ಹರಿಕಥಾಮೃತಸಾರದಲ್ಲಿ

*"ಬೆಳಗಿದ ಹೂಜಿಯು ಥಳಥಳಿಸುವಂದದಿ*
*ತೊಳೆದು ದೇಹವ ನಾಮ ಮುದ್ರೆಗಳಿಂದ*
*ಅಲಂಕರಿಸಿ ವಲಿಸಿ ನಿತ್ಯ ಕುತರ್ಕ ಯುಕುತಿ*
*ಗಳಲವಬೋಧಕ ಶಸ್ತ್ರ ಮರ್ಮವ*
*ತಿಳಿಯದಿಹ ನರ ಬರಿದೆ ಇದರೊಳು ಶಂಕಿಸಿದರೇನು"*

ಎಂತ ಯಾಕೆ ಹೇಳಿದ್ದಾರೆಂದರೆ

"ವಿಶ್ವ ಕುಟುಂಬಿ ಕೊಟ್ಟ ಕಣಾನ್ನ ಕುತ್ಸಿತ ಕಂಬಳಿಯೇ ಸೌಭಾಗ್ಯವೆಂದವನ ಬಳಿ ಅವನಂಘ್ರಿ ಭಜಿಸು" ಎಂಬ ತನ್ನ ಮಾತಿನ ಪ್ರಕಾರ ಅಂತರೋಪಾಸನೆ ದೀಕ್ಷೆಗಳ ಕೆಡಿಸಿಕೊಂಡು ಶ್ರವಣ ಮನನಗಳನ್ನು ಧ್ಯಾನ ಸಾಧಕಗಳಲ್ಲಿ ಅನುಪಯೋಗಮಾಡುತ್ತಾರೆ ಎಂಬ ಅನುಗ್ರಹದ ಮಾತು ಎಂತ ಅರ್ಥವು. ಆದುದರಿಂದ ನಿರ್ಗುಣ ಭಕ್ತನ ಅನುಭವ ನಾನು ಭಕ್ತಿ ಪೂರ್ವಕ ಸಕಾಲ ಕರ್ಮ ಅನುಷ್ಠಾನ ಮಾಡೇನು ಎಂಬ ಇಚ್ಛೆ ಹುಟ್ಟಲಿಕ್ಕೆ ಪೂರ್ವದಲ್ಲಿಯೇ ಶ್ರೀ ಹರಿಯು, ಮನುಷ್ಯನು ಉದ್ಧರಣೆಯಿಂದ ನೀರು ತುಂಬಿ ತನ್ನ ಕೈಲಿ ತಾನೆ ಹಾಕಿ ಕೊಂಡು ಪ್ರಾಶನೆ ಮಾಡುವಂತೆ ವ್ಯವಧಾನವಿಲ್ಲದೆ ಸಾಕ್ಷಾತ್ತಾಗಿ ತನ್ನ ಕರ್ಮಗ:ಳನ್ನು ಶ್ರೀಹರಿಯು ಸ್ವೀಕರಿಸುವುದೇ ಸಿದ್ಧವು. ಮತ್ತು ದೇಹದ ತಿನಿಸಿಗೆ ತುರಿಸುವುದಕ್ಕೆ ಸ್ವತ ಏವ ನಖಗಳು ಹ್ಯಾಗೆ ಪ್ರವರ್ತಿಸುವುವೋ ಹಾಗೆ, ಶ್ರೀಹರಿಯು ಕರ್ಮಗಳನ್ನು ಸ್ವೀಕರಿಸಿ ಉದ್ಧರಿಸುತ್ತಾನೆ ಎಂತ ಹರಿಕಥಮೃತಸಾರ ಸಿದ್ಧ. ಹರಿ ಸೇವೆ ಸುಳಾದಿ ಮುಂದಿನ ಮಾತು "ಗುಣವಂತನಾಗಿ ನೀನು ಕಾಲ ಕ್ರಮೇಣ ಮಾಡು" ಎಂದರೆ, ಮೂರು ದಾಸ್ಯ ಭಾವಗಳನ್ನು ಅತಿಕ್ರಮಿಸು ಎಂತ ಅರ್ಥವು. ಕಾಲಕ್ರಮಣಕ ಭಾವ, ತಮೋ ಗುಣ ರಜೋ ಗುಣ ಸತ್ವ ಗುಣ ಎಂಬ ಲಿಂಗ ಶರೀರದಿಂದ ಹೊರಟು ಮೂರು ಪಂಪೆಗಳನ್ನೆ ನಂಬಿಕೊಂಡು ಮುಂದಿನ ಬಹು ಜನ್ಮಗಳ ಮೇಲೆ ಶ್ರೀ ಹರಿ ಸಂಕಲ್ಪ ಬಲಗಳಿಂದ ಸ್ವತ ಏವ ಶುದ್ಧ ಸತ್ವ ಗುಣದಾಸ್ಯ ವದಗಲು, ಭಿನ್ನ ಭಿನ್ನ ಕಾಲಗಳಲ್ಲಿ ಉದ್ಭವಿಸಿದೆನೆಂಬ ಶ್ರೀ ಹರಿಯು ಆ ಬದ್ಧರನ್ನು ರಕ್ಷಿಸಿದರೆ ನೀನು ಹರಿ ಗುರು ದ್ರೋಹಿಯಾಗುತ್ತೀ ಎಂದು ಭಾವ. ಮುಂದಿನ ಮಾತು

*"ಶುದ್ಧ ಸತ್ವದಾಸ್ಯ ಭಾವವನ್ನು ಮನಸ್ಸಿಗೆ ತಂದು ಜ್ಞಾನಿಯಾಗು"*

ಎಂತ ಹೇಳಿ ಮುಂದೆ

*"ಪಾಮರ ಮನುಜರು ದಾಸ ವೇಷಧರಿಸಿ ನೀನು ನಿತ್ಯಗಾ*
*ಪೋಗ್ಯಾಡಿಸಿಕಂಡ ಕಂಡಲ್ಲಿ ಸಂಚರಿಸಿ*
*ಮಾಮನೋಹರನ ಲೀಲೆ ಪೇಳಿದರೇನೋ, ತಾಮಸದಾಸನೆಂದು*
*ತಿಳಿಯೋ, ಘೋರ ತಮಸ್ಸು ಅವಗಾಗುವುದು ಸಂದೇಹವಿಲ್ಲ"*

ಎಂತಲೂ "ಘನ ಅಂಧಃ ತಮಸ್ಸಿನೊಳು ಬೀಳದಿರೋ" ಎಂತ ಮೊದಲು ಕಾಲದಲ್ಲಿ ಹೀಗೆ ಎರಡು ಬಾರಿ ತಮೋ ಯೋಗ್ಯನು ಎಂತ ಯಾಕೆ ಹೇಳಿದ್ದಾರೆ ಅಂದರೆ ಅದರ ಭಾವ- ವ್ಯಾಪ್ತ್ಯೋಪಾಸಕರಿಂದ ಭಕ್ತಿ ಯೋಗದಿಂದ ಒಬ್ಬ ಸೂರ್ಯ ದೇವರು ಹಿಂದಿನ ಹತ್ತು ಬ್ರಹ್ಮ ಕಲ್ಪದ ಕೆಳಗೆ ಯಾವನ್ಮನಸ್ತತ್ತ್ವ ವ್ಯಾಪ ಬ್ರಹ್ಮಾಪರೋಕ್ಷ ಸಂಪಾದಿಸಿಕೊಂಡು

*"ಪ್ರಾರಬ್ಧಸ್ಯ ಭವೇತ್ಕಾಲೋ ಯಾವಾನ್ ತಾವಾಂಶ್ಚ ಸಾಧನೆ ।*
*ಏವಂ ತತ್ವೇಶ ದೇವಾನಾಂ ನಿಯಮಃ ॥"*

ಎಂಬ ಪ್ರಕಾಶ ಸಂಹಿತಾ ಗರುಡ ಪುರಾಣ ಬ್ರಹ್ಮಕಾಂಡಗಳು.

ಆದ ಪ್ರಯುಕ್ತ ಈಗ ನಡೆಯತಕ್ಕ ಕೊನೇ ಬ್ರಹ್ಮಕಲ್ಪದ ಅನುಭವ ಮರ್ಯಾದೆಯಲ್ಲಿ ಮೇರು ಪ್ರದಕ್ಷಿಣೆ ರೂಪವಾದ ಭಗವತ್ಸೇವೆ ಮಾಡದೆ ತೀರದೆಂಬ ಭಗವದಾಜ್ಞೆಗೆ ಒಳಗಾಗಿ ವಿಶೇಷ ಪ್ರಸಾದವನ್ನು ಸಂಪಾದಿಸುತ್ತಾರೆ- ಎನ್ನುವುದನ್ನರಿಯದೆ, ಪರಗತಿಗೆ ಜ್ಞಾನಿಗಳು ಸರ್ವಥಾ ಕರ್ಮ ಮಾಡುವ ಕೆಲಸವಿಲ್ಲವೆಂದು ನಿಶ್ಚಯಿಸತಕ್ಕವನೇ ಸಚ್ಛಾಸ್ತ್ರವೆಂಬ ಸ್ವಾಮಿತ್ವದ ಆಜ್ಞೆಗೆ ದ್ರೋಹಿಯಾದ ಪ್ರಯುಕ್ತ ಅವನಿಗೆ ಘೋರ ತಮಸ್ಸು ಎಂತ ಸುಳಾದಿಯ ಭಾವವು.

*"ಕೋಮಲನಾಗಿ ಮಾಡಿ ಸ್ವಧರ್ಮ ಬಿಡದಲೆ ಯಾಮ*
*ಯಾಮಕೆ ಹರಿ ನಾರಾಯಣ ರಾಮ ಅನಂತ ಗೋವಿಂದ ಅಚ್ಯುತ*
*ಕೃಷ್ಣನೆಂಬೋ ನಾಮಾಮೃತದಲ್ಲಿ ವೋಲ್ಯಾಡುತ್ತಾ"*

ಎಂತ ಸಾಮಾನ್ಯಧ್ಯಾನ ಸುಳಾದಿ.

ಹಾಗಾದರೆ,

*"ಪಾದುಕೆಯು ಕಂಟಕ ಸಿಕತ ಮೊದಲಾದವನುದಿನ ಬಂಧಿಸುವವೇ-*
*ಕಾದಶೇಂದ್ರಿಯಗಳಲ್ಲಿ ಬಿಡದೆ ಹೃಷೀಕೇಶನ ಮೂರ್ತಿ*
*ಸಾದರದಿ ನೆನೆವವನು ಏನಪರಾಧ ಮಾಡಿದರೂ ನಿ-*
*ರೋಧಗೈಸವು ಮೋಕ್ಷ ಮಾರ್ಗಕೆ ದುರಿತ ರಾಶಿಗಳು"*

ಎಂತ ಅಮೃತಸಾರ

ಬೆಟ್ಟದಂಥ ದುರಿತವು ಸುತ್ತ ಮುತ್ತ ಇರಲಾಗಿ ಕೃಷ್ಣ ನಾಮ ಕಿಡಿ ಬಿದ್ದು ಬೆಂದದ್ದು ಕಂಡೆ- ಎಲೋ ದುರಿತವೇ ತಿರುಗಿ ನೋಡದೇ ಹೂಗು, ಎಲೋ ಎಲೋ ಪಾಪವೇ ನೋಡದೆ ಹೋಗು ಪುರಂದರ ವಿಠಲ ಕಂಡರೆ ನಿನ್ನ ಶಿರವ ಚಂಡಾಡುವನು

*"ಪತಿಯೊಡನೆ ಮನಬಂದ ತೆರದಲಿ ಪ್ರತಿದಿವಸದಲಿ ರಮಿಸಿ ಮೋದಿಸಿ ಸುತರ ಪಡೆದಿಳೆಯೊಳು ಜಿತೇಂದ್ರಿಯಳೆಂದು ಕರೆಸುವಳು. ಕೃತಿ ಪತಿ ಕಥಾಮೃತಿ ಸುಭೋಜನರತ ಮಾಹಾತ್ಮ್ಯಂಗಿತರ ದೋಷ ಪ್ರತತತಿಗಳು ಸಂಬಂಧಿಸುವವೇ ಅಚ್ಯುತನ ದಾಸರಿಗೆ"*

ಎಂತಲೂ. ಇಂತಹ ಹರಿನಾಮ ಸ್ಮರಣೆಯೇ ನಮ್ಮನ್ನು ಕೆಡಸಿದ ಪಕ್ಷದಲ್ಲಿ ಅನಿತ್ಯ ನೈತಿಕ ಕರ್ಮಗಳು ನಮ್ಮನ್ನು ಏನು ಉದ್ಧಾರ ಮಾಡೀತು, ಎಂದರೆ ಸಿದ್ಧಾಂತ ಈ ಭಕ್ತರ ಒಂದೇ ಹರಿನಾಮ ಸ್ಮರಣೆಯೇ ಪ್ರಾರಬ್ಧ ವ್ಯತಿರಿಕ್ತ ಸರ್ವಾರಿಷ್ಟ ದುರಿತ ರಾಶಿ ಪಾವಕವೆಂಬುದೇ ಸಿಧ್ಧಾಂತ. ನಿತ್ಯ ನೈಮಿತ್ತಿಕ ಕರ್ಮ ಸಹಕಾರಿಯಲ್ಲದೆ ಕೇವಲ ಹರಿನಾಮ ಸ್ಮರಣೆಗೆ ಪ್ರಾರಬ್ಧ ದುಷ್ಕರ್ಮವನ್ನು ಅನುಭವ ತಪ್ಪಿಸುವ ಹರಿಯ ಸಂಕಲ್ಪವೂ ಇಲ್ಲ. ಆದುದರಿಂದ ಅನಿಷ್ಟ ನಿವೃತ್ತಿಯಾದಾಗ್ಯೂ ಇಷ್ಟ ಪ್ರಾಪ್ತಿಯೆಂಬ ಬಿಂಬಾಪರೋಕ್ಷವು ಪ್ರಾರಬ್ಧ ನಿಷ್ಕಾಮ ಮಹಾಪುಣ್ಯ ಕರ್ಮ ರಾಶಿಗಳಿಗೆ ಫಲವು ಜ್ಞಾನವಾದ ಕಡೆಯಿಂದ ನನ್ನ ಭಕ್ತನಿಗೆ ನಿಷ್ಕಾಮ ಪುಣ್ಯಕರ್ಮ ಸಹಾಯ ಕೆಲಸವಿಲ್ಲವೆಂದು, ಶ್ರೀ ಹರಿಯ ಪ್ರೀತಿ ಮಾತ್ರ ಇದ್ದರೆ ಪ್ರಸನ್ನನಾಗಿ ಬಿಂಬಾಪರೋಕ್ಷವನ್ನು ಸ್ವತಏವ ತಾನೇ ವದಗಿಸಿ ಕೊಡುತ್ತಾನೆ. ಎಂಬುದು ಭ್ರಾಂತಿಯು. ದೃಷ್ಟಾಂತ ಶಲ್ಮಲಿ ಎಂಬ ಬೂರಗದ ವೃಕ್ಷವು ಆದರ ಫಲದೊಳಗಿನ ಅಗ್ನಿಯ ಕಿಡಿಗೆ ಆಧಾರದಿಂದ ಹತ್ತಿಯು ಆ ಫಲ ಭೋಜನದಿಂದ ಜಿಹ್ವೇಂದ್ರಿಯ ಚಾಪಲ್ಯ ಪರಿಹರಿಸಿಕೊಳ್ಳುವೆನೆಂಬ ಭ್ರಾಂತಿಗೆ ಸಮವು. ಎಂತ ಶಾಂಡಿಲ್ಯರ ವಚನವು.

*"ವಿನಾ ಕರ್ಮ ಯಶನ್ ಜ್ಞಾನೀ ನಸ್ವಾರ್ಥಾನಭಿಪದ್ಯತೆ ಸಹಕಾರಿ ವಿಹೀನಸ್ಯ ಪುರುಷಸ್ಯ ಫಲಂ ಯಥಾ. ವಿನಾ ಕರ್ಮಾಪ್ಯಯಾ ಜೀವಃ ಫಲಂ ಪ್ರಾಪ್ನೋತಿ ನ ಜಾತುಜಿತ ॥ ಶಾಲ್ಮಲೀ ಫಲಮಾದಾಯ ಭೊಕ್ತುಮಿಚ್ಛೋಃ ಯಥಾ ಕ್ರಿಯಾ ।"* ಎಂತ ಶಾಂಡಿಲ್ಯ ತತ್ವವಾದವು.

ಸುಳಾದಿ -

*"ಕೋಟಿ ದ್ರವ್ಯವುಳ್ಳ ಮಾನವ ತಾಟಿ ಕಾಣದೆ ಮರುಗುವನ್ಯಾಕೋ ।
ಮೀಟುಕವಡೆಯಿಲ್ಲದವನು ಊಟ ಮಾಡುವವನ ಸೌಖ್ಯ
ಆಟವಲ್ಲವೋ ಪೇಳಿದ ಮಾತು ದಾಟದಿರು ನಿದಾನವೆನ್ನು ।
ಕೂಟಲೇ ಬಿಡು ನಾನೆಂಬೋದು ಬೂಟಕವು"*

ಎಂದರೆ ಅಜಗಲ ಸ್ತನದ ಹಾಗೆ ಇದ್ದರೂ ವ್ಯರ್ಥವೆಂದರ್ಥ. ಮುಂದಿನ ಮಾತು

*"ಗೋಡೆ ಮೇಲಿನ ಓಟದಂತೆ ಆಗುವುದು ಭೂಮಿಯನ್ನು ಬಿಟ್ಟು
ಗೋಡೆಯ ಮೇಲೆ ಓಡಿಧಾಂಗೆ ॥"*

ಮುಂದಿನ ಮಾತು

*"ನೀಟು ಬಯಸುವ ಸತತ ಬಹುಜನ ಕೂಟದೊಡನೆ ಹರಿಯನ್ನು
ನೋಟಗಾರನಪ್ಪ ನೀ ಸಾಟಿಯೆನದಿರು ಇದರೊಳಗಾಗಿ"*

ಎಂತ ಸರ್ವದಾ ಹರಿಯನ್ನೇ ನಂಬಿಕೊಂಡು ಹೋಗಲು ತಾವು ಇರ ಹೇಳಿದ್ದಾರಾದರೂ ಆ ನಾಮವು ಪೂರ್ವ ಪ್ರಾರಬ್ಧ ದುಷ್ಕರ್ಮವನ್ನು ಬಿಡಿಸಲಾರದೆಂದು ಪ್ರಭು ಮರ್ಯಾದೆ ಉಳಿಸಿದವನ ದ್ರೋಹವನ್ನು ತೋರಿಸಿ ಇದ್ದಾರೆ. ಮುಂದಿನ ಮಾತು

*"ಗೀಟುಗೋಯಿದದ ಕರ್ಮವಲ್ಲ ತಾಟ ತೊಂಟಕ ಮಾಡಿದರೆ ಮಾಟ
ಹೋ ಹೊದೇನೊ ಮನವೆ । ಊಟ ಮಾಡು ಊಟ ಮಾಡು ತಲೆ
ಬಾಗಿ ಏಟು ಏಟಿಗೆ ಪೋಗಿ ಮರದ ಹೊಟ್ಟೆ ಒಳಗಿರೆ ತಪ್ಪುವುದೇ"*
ಎಂತ ಮನವೆ ಕಂಗೆಡದಿರು ಎಂಬ ಸುಳಾದಿ.

ಆಕ್ಷೇಪ:– ಅಪರೋಕ್ಷಾದಿ ಇಷ್ಟ ಫಲ ಸಾಧಕ ಶಾಶ್ವತ ನಿಷ್ಕಾಮ ಕರ್ಮ ನನಗೆ ವದಗಲಿ ಎನ್ನುವುದಕ್ಕೋಸ್ಕರವಾದರೂ ಶ್ರೀಹರಿಯನ್ನು ಅನಿಷ್ಟ ನಶ್ವರ ವಿಷಯ ಸೌಖ್ಯಗಳನ್ನು ಕೇಳಿಕೊಂಡಹಾಗೆ ಆಗುವುದಾದರಿಂದ ಈ ಭಕ್ತನು ನಿಷ್ಕಾಮಕನು ನಿರ್ಗುಣ ಶುದ್ಧ ಸಾತ್ವಿಕ ಭಕ್ತನಾಗದೆ ಹೋಗಲಿ ಎಂದರೆ

ಸಮಾಧಾನ– ಇವನೇ ನಿರ್ಗುಣ ಭಕ್ತನು. ಹ್ಯಾಗೆಂದರೆ ಕರ್ಮದಲಿ ಕಷ್ಟಪಟ್ಟು ಶ್ರೀಹರಿಯನ್ನು ಫಲ ಕೇಳದೆ ಇರುವುದರಿಂದ ಶ್ರೀ ಹರಿಗೆ ಅಗತ್ಯವಾದ ತನ್ನ ಪೂಜೆಯನ್ನು, ಇವನನ್ನು ದರ್ವಿಯನ್ನು ಮಾಡಿ ಸ್ವೀಕರಿಸುವೆನೆಂಬ ಕುತೂಹಲ ಹುಟ್ಟಿ ಸಕಲ ನಶ್ವರ ಸೌಖ್ಯಗಳನ್ನೂ ಇವನ ತಲೆಯ ಮೇಲೆ ಭಾರ ಕೂಡತಕ್ಕದ್ದೇ ವಿಹಿತ.

*"ಶ್ರೀಪತಿಯನಗೆ ಸಂಪದವೀಯಲಿ ವಾಣೀಪತಿ*
*ದೀರ್ಘಾಯು ನಮಗೀಯಲಿ"*

ಎಂಬ ಪುರಂದರದಾಸರ ದೇವರ ನಾಮದಲ್ಲಿ ಸಕಲ ದೇವತೆಗಳೂ ಕೂಡ ಜ್ಞಾನ ವಿದ್ಯಾ ಬುದ್ಧಿ ಮೊದಲಾದ ಸಕಲ ಸೌಖ್ಯಗಳನ್ನು ಕೊಟ್ಟರೆ ಉತ್ತಮವಾಯಿತು. ಎಂತ ಭಾವ. ಭಕ್ತರ ಭಕ್ತಿಗೆ ಕರ್ಮವು ಯಾಕೆ ಸಹಕಾರಿಯಾಗಬೇಕೆಂದರೆ ಜ್ಞಾನಿಗಳ ಸಂದರ್ಶನದಿಂದ ವಂದನೆ ಮಾಡಿ ವಾಚಾ ತೃಪ್ತಿ ಪಡಿಸುವುದಕಿಂತಲೂ, ಪಾದ ಪ್ರಕ್ಷಾಲನ ಪೂರ್ವಕ, ಭೋಜನ ವಸ್ತ್ರ ಗಂಧ ಪುಷ್ಪಾದಿಗಳಿಂದ ಅವರ ಅಂತರ್ಯಾಮಿ ಹರಿವಾಯುಗಳನ್ನು ಸಂತೋಷ ಪಡಿಸಕ್ಕೆ ಪೂರ್ವ ಪುಣ್ಯ ಹೀನನಾಗಿ ಅಲ್ಪ ಸುಖವನ್ನಾದರೂ ಪಡಿಸೆನೆಂಬ ಕುತೂಹಲದಿಂದ ಪೂಜೆಗಳನ್ನೆ ಮಾಡಿ ಪೂಜೆಯ ಮಧ್ಯದಲ್ಲಿ ನಾನೇನು ಮಾಡಲಾಪೆ ನನ್ನ ಕ್ರಿಯೆಯೇ ಕೇವಲ ಅಲ್ಪ. ತಾವಾಗಿ ಕೃಪೆ ಮಾಡಿ ನನ್ನ ದುರ್ಗುಣಗಳನ್ನು ಎಣಿಸದೆ ಉಧ್ಧಾರ ಮಾಡಬೇಕು ಎಂದರೆ ಪದಾರ್ಥಗಳು ಪಾಕ ಕೆಟ್ಟರೂ ಅದರ ಉಪಚಾರಕ್ಕೆ ಜ್ಞಾನಿಗಳು ಹೇಗೆ ಸಂತುಷ್ಟರಾಗುವರೋ ಹಾಗೆ ಸಂಧ್ಯೋಪಾಸನೆ ಮೊದಲಾದುದರಲ್ಲಿ ಹರಿ ಭಕ್ತಿ ವೃದ್ಧಿಗೆ ಕರ್ಮವೂ ಸಹಾಯವೇ ಸರಿ. ಜ್ಞಾನಿಯಾಗಿ ಶ್ರೀಹರಿಯನ್ನು ನಂಬಿ ಕರ್ಮದಲಿ ಉದಾಸೀನನಾದರೆ ಶ್ರೀಹರಿಯು ಇವನಲ್ಲಿ ಪ್ರೀತಿಯನ್ನು ಕಡಿಮೆ ಮಾಡುವುದೇ ನಿಶ್ಚಯವು. ಜನಕನು ವಿವೇಕ ಕಡಿಮೆಯಾದ ಪುತ್ರನನ್ನು ನೋಡಿ – ಆ ಪುತ್ರನು ಪಾದ ಸೇವೆಯನ್ನು ಮಾಡುತ್ತಾ ಇದ್ದರೂ ಆ ಪುತ್ರನ ಉದ್ಧಾರಾರ್ಥವಾಗಿ ಅನ್ನೋದಕ ಮಾತ್ರ ಕೊಟ್ಟು ವಿವೇಕ ಬಂದ ಹೊರತು ದ್ರವ್ಯ ಭೋಗಾರ್ಹ ಆಗದು ಎಂತ ತನ್ನ ದ್ರವ್ಯವನ್ನು ಅವನ ಕಣ್ಣಿಗೆ ಹಾಕದೆ ಹೇಗೆ ಅವನಲ್ಲಿ ವಿಶ್ವಾಸ ಮಾಡುವನೋ ಹಾಗೆ, ಅವನಿಗೆ ಅಪರೋಕ್ಷ ಸಾಧನ ವದಗಿಸುವುದರಲ್ಲಿ ಶ್ರೀಹರಿಯು ಅವಿಶ್ವಾಸ ಮಡುವುದೇ ಸಿದ್ಧ.

ಆಕ್ಷೇಪ "ಮೂಲಕಾರಣ ಪ್ರಕೃತಿ ಎನಿಪ ಮಹಾಲಕುಮಿ ಎಲ್ಲರೊಳಗಿದ್ದು ಸುಶೀಲೆಗೈವುತ ಪುಣ್ಯ ಪಾಪಗಳರ್ಪಿಸಲು ಪತಿಗೆ ಪಾಲಗಡಲೊಳು ಬಿದ್ದ ಜಲ ಬಿಂದು ಪಾಲುವೆನಿಸಿಕೊಳ್ಳುವುದೇನೋ। ಜೀವ ಗತ ಕರ್ಮ ತದ್ವತ್ ಶುಭವು ಎನಿಸುವುದು ಎಲ್ಲ ಕಾಲದಲಿ।" ಎಂದರೆ ಪುಣ್ಯ ಪಾಪ ಕರ್ಮಾಂತರ್ಗತ ವಾಯು ಕಲಿಗಳ ಅಂತರ್ಗತ ಶ್ರೀ ದುರ್ಗಾದೇವಿಯರುಗಳೆ ಶ್ರೀಹರಿಗೆ ಪಾಪಕರ್ಮವು ಪಾದುಕೆ ಪುಣ್ಯ ಕರ್ಮ ಶ್ರೀಗಂಧವನ್ನಾಗಿ ಸಮರ್ಪಿಸಿದುದು, ಕ್ಷೀರ ಸಮುದ್ರದಲ್ಲಿ ಬಿದ್ದ ನೀರು ಕ್ಷೀರವೆನಿಸಿಕೊಂಡಹಾಗೆ ಶುಭಗಳನ್ನು ಉಣಿಸತಕ್ಕವರಾದರೆ, ಕಲಿಮತವನ್ನು ನಂಬಿ ವಾಯುದೇವರ ಮತವನ್ನು ಪರಿತ್ಯಾಗ ಮಾಡಬಹುದು ಎಂದರೆ ಪೂರ್ವ ಕರ್ಮ ಕಟ್ಟಿ ಉಣಿಸಬೇಕಾಗಿ ಶ್ರೀಹರಿ ದುಷ್ಕರ್ಮ ಹೊರಿಸುವುದಕ್ಕೆ "ಬಿನ್ನಹಕೆ ಬಾಯಿಲ್ಲ ಎನಗೆ" ಎಂಬ ಪುರಂದರದಾಸರ ನಾಮದಲ್ಲಿ ನಾನಾವಿಧ ಮೋಹದಿಂದಲೂ ಕೆಟ್ಟುಹೋದಂತಹ ನನ್ನನ್ನು ಉದ್ಧರಿಸು ಎಂತ ಮುಖ ಕೊಟ್ಟು ಪ್ರಾರ್ಥಿಸಲಾರದೆ ಮಹಾ ಧಿಗಲಿನಿಂದ ಅನುತಾಪದಿಂದ ಕಣ್ಣೀರು ತರುತ್ತಿದ್ದವನಿಗೆ ಆ ಅನುತಾಪವೇ ಭಕ್ತಿ ಸ್ವರೂಪವಾದುದರಿಂದ ಕ್ಷೀರ ಮಿಶ್ರ ಜಲ ದೃಷ್ಟಾಂತದಿಂದ ಈ ಭಕ್ತಿಯೇ ಶುಭವೆನಿಸುವುದು. ಎಂತ ಅರ್ಥವು. ಹೀಗೆ ಅಗ್ನಿಯಲ್ಲಿ ಶುದ್ಧಿ ಮಾಡಿದ್ದಕ್ಕೆ ಸಮವಾದ ಸಾತ್ವಿಕ ಪಾಪವು ಕೂಡ ಅಪರೋಕ್ಷದ ತನಕ ಯಾತನಾನುಭವವನ್ನು ಕೊಡದೆ ಬಿಡದು. ಕರ್ಮದೀಕ್ಷೆಯೇ ಮುಕ್ತಿಯೋಗ್ಯನನ್ನು ಉದ್ಧರಿಸಬೇಕು ಎಂತ ಸರ್ವಜ್ಞರ ಸಿಧ್ಧಾಂತ. "ಸುಜನ ಕೈಯಿಂದ ಪಾಪ ಮಾಡಿಸಿ" ಎಂಬ ಸುಳಾದಿ ಮೊದಲಾದ ವಚನಗಳಿಂದ ಪೂರ್ವದಲ್ಲಿಯೇ ವಿಸ್ತಾರವಾಗಿ ನಿರೂಪಿಸಲ್ಪಟ್ಟಿದೆ. ಅನುಭವದಲ್ಲಿ ವಿಶೇಷ ಬರಲಾರದು. ಹರಿಕಥಮೃತಸಾರದಲ್ಲಿ "ಕಲ್ಪಾಂತದಲಿ ಸುಮ್ಮನೀ ಅವರವರ ನಿಜಗತಿಯ" ಎಂತ ಹೇಳಿದ್ದಾರೆ ಎಂದರೆ, ಬಾಲಕರಿಗೆ ಯೌವನಸ್ಥರ ಪೂರ್ಣಗ್ರಾಸ ಭೋಜನವನ್ನು ಮಾಡುವುದು ಅಸಾಧ್ಯವಾದರೂ ಬಾಲ್ಯಾವಸ್ಥೆ ಕಳೆದು ಪರಮ ಸುಲಭದಿಂದ ಪೂರ್ಣಗ್ರಾಸ ಭುಂಜಿಸುವ ರೀತಿಗೆ "ಪ್ರೌಢರಾದವರಿವನ ಭಜಿಸಿ ಭವಾಬ್ಧಿ ದಾಟುವರು. ಎಂತ ಬಲಾತ್ಕಾರವಾಗಿ ಪಾಪ ಪುಣ್ಯ ರಾಶಿಗಳನ್ನು ಹೊರಿಸಿದಾಗಿ, ಹರಿಕಥಾಮೃತಸಾರದ ರೀತಿಯಿಂದ ಅಧಿಕಾರಿಗಳು ಪ್ರೌಢರು ಎಂದರೆ ಅಸಂಪ್ರಾಜ್ಞಾತ ಸಮಾಧಿಯಲ್ಲಿ ಕೂತರೆ ಅದರಲ್ಲಿ ಪರಮ ಸುಲಭದಿಂದ ಕ್ರಿಯಾನಿಪುಣರಾಗೋಣ. ಹೀಗೆ ಪ್ರವಚನಾದಿ

ಸಕಲ ನಿತ್ಯ ನೈಮಿತ್ತಿಕ ಭಗವತ್ಪೂಜಾ ವಿಮರ್ಶನ ದೀಕ್ಷೆಗಳಲ್ಲಿಯೂ ತತ್ವ ವ್ಯವಹಾರಗಳಲ್ಲಿಯೂ ಭಕ್ತರು ತಂತಮ್ಮ ಅದೃಷ್ಟಾಂತರ್ಯಾಮಿ ಹರಿ ಗುರು ಪ್ರಸಾದದಿಂದ ಪರಮ ಸುಲಭವಾಗಿ ಕ್ರಿಯೆಗಳಲ್ಲಿ ನಿಪುಣರಾದರೆ, ಹೀಗೆ ಬ್ರಹ್ಮ ಕಲ್ಪಾಂತ ಸರ್ವರ ಆಯಾಸದ ಕ್ರಿಯೆಗಳಲ್ಲಿ ಅತಿ ವಿಚಿತ್ರ ಸಂತೋಷವನ್ನು ಜೀವರಿಗೆ ವದಗಿಸಿ, ಸುಖ ಪೂರ್ಣವಾದ ಶ್ರೀ ಹರಿಯು, ನಾನೇವೇ ಒಬ್ಬ ಪಾಚಕನು ಪರಮ ಸುಲಭವಾಗಿ ೫೦೦ ಜನಗಳಿಗೆ ಪಾಕವನ್ನು ಇಳಿಸುವವನಂತೆ ಸರ್ವ ನಿರ್ವಾಹ ಶಾಲಿಯಾದುದರಿಂದ ಬ್ರಹ್ಮಾದಿಗಳ ಸಾಧನವೆಲ್ಲವೂ ಅಜಾಗಳ ಸ್ತನ ಪ್ರಾಯವಾದುದರಿಂದ ಜೀವರು ಚಲಿಸದೆ ಇದ್ದ ಪ್ರಾಯ ವಾದುದರಿಂದ "ಸುಮ್ಮನೀವನವರವರ ನಿಜಗತಿಯ" ಎಂತ ಅರ್ಥವು. ಆದುದರಿಂದ ಕರ್ಮದ ಮರ್ಮವನ್ನು ತಿಳಿಯತಕ್ಕ ಪ್ರಮಾಣ.

*"ಶ್ರಧ್ಧಾ ಜನಿತ್ರೀ ಧರ್ಮಾಣಾಂ ಶ್ರಧ್ಧಾ ಮಾತಾಪರಾಮತಾ। ಶ್ರಧ್ಧಾ ಹೀನಾಃ ಕ್ರಿಯಾಃ ಸರ್ವಃ । ನ ಫಲಂತಿ ಕದಾಚನ । ತಾಂ ಪ್ರಾಹುರಾಸಿಕ್ತೀಂ ಬುದ್ಧಿಂ ನಕುರ್ಯಾತ್ಕರ್ಮಣಃ ಫಲೇ । ಕ್ರಿಯಾಫಲಾನ್ಯರ್ಥವಾದಾನ್ಯೇ ಕುರ್ವಂತಿನರಾಧಮಃ । ತೇ ಸರ್ವೇ ನರಕಂ ಯಾಂತಿ ಯಾವದಾಭೂತ ಸಂಪ್ಲವಂ॥"* ಅಂದರೆ ನಿರ್ಗುಣ ಭಕ್ತನ ಕರ್ಮಾನುಷ್ಠಾನದಲ್ಲಿ ತೃಣನೇ ಕರ್ಮ ಮೇರು ಪರ್ವತವು. ಆದುದರಿಂದ ಕ್ರಿಯೆಗಳಿಗೆ ಮಹಾ ಫಲವುಂಟು. ಎಂಬ ಪ್ರಮಾಣವು ಉಪಚಾರವಲ್ಲ ಎಂತ ಅರ್ಥವು.

ಅದರ ಮುಂದಿನ ಶಾಂಡಿಲ್ಯತತ್ವ ವಾಕ್ಯವು –

*"ಮಹದಪ್ಯಲ್ಪದಂ ಕಿಂಚ ಕಿಂಚಿದಲ್ಪಂ ಚ ಭೂರಿದಂ । ಕಿಂಚಿತ್ಸಮ ಫಲಂ ಕರ್ಮಗಹನಾ ಕರ್ಮಣೊ ಗತಿಃ । ಶೃತಿ ಸ್ಮೃತಿ ಪುರಾಣೋಕ್ತಂ ಶ್ರಧ್ಧೇಯಂ ಹಿತಮಿಮೌ ॥"*

ಎಂತ ಕರ್ಮ ಮಡುವೆನೆಂಬ ವಿಶ್ವಾಸವೇ ತಾಯಿ ಎಂತ ಯಾಕೆ ಹೇಳಿದ್ದಾರೆ ಎಂದರೆ ಅದರ ಅನುಭವ ಅಪರೋಕ್ಷ ಬೇಕೆಂಬ ಆಶೆ ಇದ್ದರೆ ಭೋಜನವನ್ನು ಮಾಡಿದರೆ, ಹಸಿವೆಯು ಪರಿಹಾರವಾಗುತ್ತದೆ ಎಂತ ಪ್ರಥಮತಃ ನಿಶ್ಚಯ ಜ್ಞಾನ ಹೊಂದಬೇಕು. ಅನಂತರ ಈಗಲೇ ಭೋಜನ ಮಾಡುವೆನೆಂಬ ಇಚ್ಛೆಯೂ

ಬೇಕು. ಅನಂತರ ಭೋಜನ ಕ್ರಿಯೆಯನ್ನು ನಡೆಯಿಸಬೇಕು. ಹಸಿವೆಯು ಸಾಕಲ್ಯೇನ ಪರಿಹಾರವಾಗ ಬೇಕಾದರೆ, ಉದರ ಪೂರ್ತಿಯಾಗೋತನಕ ಎಲೆಯನು ಬಿಟ್ಟು ಏಳುವುದಿಲ್ಲವೆಂಬ ದೀಕ್ಷೆಯು ಇರದೇ ತೀರದು. "ಕರ್ಮಸಮ್ಯಕ್ಪ್ರಯೋಜಿತಂ ಉತ್ಪಾದಯತಿ ತದ್ಜ್ಞಾನಂ" ಎಂಬ ಶಾಡಿಲ್ಯತತ್ವವನ್ನು ಪೂರ್ವದಲ್ಲಿಯೇ ಹೇಳಿದ್ದೇನೆ. ಇದೇನೆ ಇಷ್ಟ ಪುಣ್ಯಕರ್ಮವು ಬೀಜ ಬೆಳಸು. "ಪಾವಿತ್ರ ದೇಹದಲ್ಲಿ ಪರಿ ಪರಿ ಕರ್ಮಗಳು ನೊಂದು ಕೂಡದಂತೆ ಆಗುವವು ಪುಣ್ಯ ಬೀಜ" ಎಂತ ಅನಾದಿಕರ್ಮ ಸುಳಾದಿ. ಆದುದರಿಂದ ಆದರ ಮುಂದಿನ ಶಾಂಡಿಲ್ಯ ತತ್ವದ ವಾಕ್ಯವು.

*"ಕರ್ಮಣಾರಾಧ್ಯಮಾನೇಚ ವಿಷ್ಣೋಃ ಭಕ್ತಿಃ ಸದಾ ಭವೇತ್ ಷಡಪ್ಯಂಗಾನಿ ಚೈತಾನಿ ಕ್ರಿಯಮಾಣಸ್ಯ ಕರ್ಮಣಃ। ಶೃತಿ ಸ್ಮೃತಿ ವಿಚಾರಶ್ಚ ಶ್ರದ್ಧಾ ಸತ್ಸಂಗತಿಸ್ತಥಾ ॥ ಆರಾಧ್ಯ ದೇವತಾ ಭಕ್ತಿಂ ತಥಾ ಕರ್ತೃತ್ವ ವರ್ಜನಂ। ನಿಯಮಶ್ಚೇತಿ ಚತ್ವಾರಿ ತತ್ಸ್ಯಂಧ್ಯಂಗಾನಿತಾನಿತು । ಕಾಲೇ ಕಾಲೇ ಪ್ರಬೋಧಶ್ಚ ಯಥಾಶಕ್ತಿ ವಿಮರ್ಶನಂ । ಮನಸ್ಸಾಸ್ಥ್ಯಂ ಶುಚಿತ್ವಂಚ ಪ್ರಧಾನಾಂಗಂತ್ವಿದಂ ಮತಂ । ವಿಷ್ಣೋರರ್ಪಣಮೇವ್ಯೆಕಂ ಸರ್ವೇಷಾಂ ಕರ್ಮಣಾಂ ಮತಂ । ನಿಷ್ಕಾಮತ್ವಂ ಹರಿ ಪ್ರೀತಿ ಕಾಮನಾಲೋಚನ ದ್ವಯಂ । ತಥೈವ ಷಡುಪಾಂಗಾನಿ ತಾನ್ಯೇತಾನಿ ವಿದೋ ವಿದುಃ । ಗಂಡೂಷಂ ದಂಡಕಾಷ್ಟೇಚ ಶೌಚಾಚಾರ ತಥೈವಚ । ಸ್ನಾನಂ ವಸ್ತ್ರ ಪರೀಧಾನಂ ಸಪ್ತಮಂ ಪುಂಡ್ರ ಧಾರಣಂ ॥ ಏವಂ ಕರ್ಮ ವಿಜಾನೀಯಾತ್ಪಶ್ಚಾತ್ಕರ್ಮ ಸಮಾಚರೇತ್ । ಕರ್ಮಣಾನೇನ ಸದ್ ಜ್ಞಾನಂ ಜಾಯತೆ ಮೋಕ್ಷ ಸಾಧಕಂ ॥ ಏತದ್ ಜ್ಞಾನಂ ವಿನಾ ಕರ್ಮ ಕೃತಂವಾ ಬಹುಶೋ ನರೈಃ । ನ ತೇನ ವರ್ಧತೇಕ್ವಾಪಿ ನೋಕನೀಯಾದ್ಭವೇತ್ಕ್ವಚಿತ್ ॥"*

ಎಂದರೆ ನಾಲ್ಕು ಸಂಧ್ಯಂಗಗಳು ಆರು ಮುಖ್ಯಾಂಗಗಳು ಆರು ಉಪಾಂಗಗಳು ಎರಡು ಆಲೋಚನೆಗಳು ತಿಳಿಯದೆ ಹೋದರೆ, ಎಷ್ಟು ಕಾರ್ಯ ಮಾಡಿದರೂ ಭಕ್ತಿಯು ಅಭಿವೃದ್ಧಿಯಾಗದೆ ಮಾಡದೇ ಇದ್ದದ್ದರಿಂದ ಕಡಿಮೆಯೂ ಆಗದೆ ಜ್ಞಾನಿಗಳಿಗೆ ಜ್ಞಾನಬಲದಿಂದ ಭಕ್ತಿಯು ಕಡಿಮೆಯಾಗುವುದಿಲ್ಲ. ಕರ್ಮ ಶ್ರದ್ಧಾ ಇಲ್ಲದ ಪ್ರಯುಕ್ತ ಹೆಚ್ಚುವುದೂ ಇಲ್ಲ ಎಂತ ಅರ್ಥವು. ಆದೇವೇ ಭಕ್ತಿಗೆ ಮಧ್ಯಸ್ಥ ಭಾವವು. ಆದಾಗ್ಯೂ ಶ್ರೀಹರಿಯು ಜ್ಞಾನಿಗಳನ್ನು ಕೈ ಬಿಡದೆ

ವಿಲಂಬದಿಂದ ಉದ್ಧಾರ ಮಾಡುತ್ತಾನೆ. ಕರ್ಮ ಷಡಂಗ ವಿವರ. ೧. ಶೃತಿ ಸ್ಮೃತಿ ವಿಚಾರ ೨. ಆಸ್ತಿಕ್ಯ ಬುದ್ಧಿ. ೩. ಸಜ್ಜನರ ಸಂಗತಿ. ೪. ಆರಾಧ್ಯ ದೇವತಾ ಚರಣದಲ್ಲಿ ಭಕ್ತಿ. ೫. ಈ ಕರ್ಮ ಕರ್ತೃವೇ ನಾನಲ್ಲವೆಂಬ ಜ್ಞಾನ. ೬. ಕ್ಲಿಪ್ತಿಗೆ ಕಡಿಮೆ ಬರದಹಾಗೆ ನಿಯಮ. ಅಂತು ಆರು. ಇದಕ್ಕೆ ನಾಲ್ಕು ಸಂಧ್ಯಾಂಗ ವಿವರವು. ೧. ಆ ಕಾಲಗಳಲ್ಲಿ ಸೋಮಾರಿತನ ಬಿಟ್ಟು ಏಳತಕ್ಕದ್ದು., ೨. ಇವನ ಶಕ್ತಿ ಮಟ್ಟಿಗೆ ಕರ್ಮದಲ್ಲಿ ವಿತರಣೆ, ೩. ಇವುಗಳಿಗೆ ಗಾಳಿಯಿಲ್ಲದ ದೀಪದ ಹಾಗೆ ಮನಸ್ಸನ್ನು ನಿಲ್ಲಿಸತಕ್ಕದ್ದು, ಮತ್ತು ೪. ಶುಚಿ ಭಾವವು. ಅಂತ ನಾಲ್ಕು ಸಂಧ್ಯಾಂಗಗಳು. ಈ ವಿಶಿಷ್ಟ ಕರ್ಮಗಳಿಗೂ ಶ್ರೀಹರಿಯ ಪ್ರೀತಿಯೇ ಪರಮ ಮುಖ್ಯವೆಂದು ಸಮರ್ಪಿಸೋಣ. ಆಲೋಚನೆ ಎರಡು ಯಾವುದೆಂದರೆ ೧. ಈ ಕರ್ಮಗಳ ಫಲ ನನಗೆ ಕೆಲಸವಿಲ್ಲ ಎಂಬ ಆಲೋಚನೆ, ೨. ಈ ಕರ್ಮದಿಂದ ಶ್ರೀಹರಿಯು ಪ್ರೀತನಾಗಬೇಕು ಎಂಬ ಆಲೋಚನೆ. ಅಂತು ಎರಡು. ಆದರ ವಿವರ ಗಂಡೂಷ ದಂತ ಕಷ್ಟ ಶೌಚ ಆಚಮನ ಸ್ನಾನ ವಸ್ತ್ರಧಾರಣ ಊರ್ಧ್ವಪುಂಡ್ರಧಾರಣ ಸಹ ಏಳು. ಸುಳಾದಿ– ಸಂಕಲ್ಪ ಮೌನ ಉಪಸ್ಪರ್ಶ ಸಂಭಾಷಣ ಭೋಜನ ಏಕಾಸನ ಈ ಆರು ಬಗೆಯನ್ನೂ ಸುಜನರ ಬಳಿಯಲ್ಲಿ ಇಟ್ಟು ಮೆಚ್ಚಿಸಬೇಕು ಎಂತ ಅನಾದಿಕರ್ಮ ಸುಳಾದಿ. ಮಕ್ಕಳಿಗೆ ಔಷಧ ಕೊಡುವುದಕ್ಕೆ ಪೂರ್ವದಲ್ಲಿ ಗುಡವನ್ನು ಕೊಟ್ಟು ರುಚಿಯನ್ನು ತೋರಿಸಿ ಅನಂತರ ಔಷಧವನ್ನು ಕೊಡುವಂತೆ, ಶ್ರೀ ಹರಿಯು ಅಜ್ಞಾನಿಗಳಿಗೆ ಸ್ವರ್ಗದ ರುಚಿಯನ್ನು ಹುಟ್ಟಿಸಿ ಕರ್ಮದಲ್ಲಿ ಶ್ರದ್ಧೆ ಹುಟ್ಟಿದ ನಂತರ, ಸಂಸಾರವೆಂಬ ಮಹಾರೋಗಕ್ಕೆ ವೇದೋಕ್ತ ಕರ್ಮಗಳನ್ನು ನಿರ್ಗುಣ ಭಕ್ತನ ನಿಷ್ಕಾಮಾರಾಧನೆಗೆ ಅನುಕೂಲವನ್ನು ಮಾಡುತ್ತಾನೆ – ಮುಂದಿನ ಶಾಂಡಿಲ್ಯ ತತ್ವವು–

*"ವೇದ ಶೃತಿ ಪುರಾಣೇಷು ಯಾ ಚೋತ್ತಾ ಫಲ ಚೋದನಾ।*
*ಯೇ ಕರ್ಮ ವಿಮುಖಾಃ ತೇಷಾಮಾದೌ ಪ್ರವೃತ್ತಯೇ ।*
*ರುಚ್ಯರ್ಥಮುದಿತಾ ಸಾಚ ನಿಸ್ಸಂಗಃ ಸರ್ವತಃ ಸುಖೀ ।*
*ಯಥಾ ಮಾತಾ ಶಿಶೋರಾದೌ ಮಹಾರೋಗ ಪ್ರಶಾಂತಯೆ ।*
*ಔಷಧ ದಾತು ಕಾಮಾ ಸಾ ಗುಡಂ ದತ್ವಾ ತತಃ ಪರಂ ।*
*ಪ್ರಯಚ್ಛತ್ಯೌಷಧಂ ಪಶ್ಚಾತ್ ತಥೈವ ಶೃತಿ ಚೋದನಾ ।*
*ಸೇತಿಹಾಸ ಪುರಾಣಾನಿ ಪಶ್ಯಾನ್ನಿಷ್ಕಾಮ ಚೋದನಾ ॥ "*

ಈ ಪ್ರಮಾಣಗಳು ಏಕಾದಶ ಸ್ಕಂಧ ವಚನಗಳಿಗೂ ಅನುಕೂಲವಾಗಿದೆ. ನಿರ್ಗುಣ ಭಕ್ತನಾಗದೆ ಕರ್ಮ ಮಾಡಿದರೆ ಹರಿಗೋಲು ಇಲ್ಲದೆ ಹುಟ್ಟು ಹಾಕಿದಂತೆ ಕರ್ಮಕ್ಕಾವ ಮುಖ್ಯತ್ವವ ತಿಳಿದು ಮಾತಾಡುವವನು ಎಂತ ಹೇಳಿದುದರಿಂದ ಹರಿಗೋಲ ಮೇಲೆ ಕೂಡದೆ ನದಿಯ ದಡದಲ್ಲಿ ಕೂತು ಸಹಸ್ರ ವರ್ಷ ಹುಟ್ಟು ಹಾಕಿದರೂ ಸಂಸಾರ ನದಿಯನ್ನು ತಿಲ ಮಾತ್ರವೂ ದಾಟಲಾರನು ಎಂತ ಭಾವ.

*"ನಾನೆಂಬ ನರರನ್ನು ದಾನವರು ಶೆಳೆದೊಯ್ಯರಲ್ಲದೆ*
*ಶ್ರೀನಿವಾಸನು ಸ್ವೀಕರಿಸ"*

ಎಂದು ಹರಿಕಥಾಮೃತಸಾರವು. ಈ ದೋಷವಿದ್ದರೆ ಒಂದು ಅಂಗ ಹಾನಿ ಎಂತ ಇದೇ ವಿಶೇಷವು.

## ಸತ್ಸಂಗ ಲಕ್ಷಣವು

"ಹಿತೋಪದೇಶಕೆ ಯಾವ ಪದಾರ್ಥವು ಸಮವಲ್ಲ. ಆದುದರಿಂದ ಸ್ವೋತ್ತಮರ ಪಾದ ಚೆನ್ನಾಗಿ ನಂಬದೇ ಇದ್ದರೆ, ಇವನು ಜ್ಞಾನವನ್ನು ಸಾಧಿಸಿ ಮುಕ್ತನಾಗಲಾರನು."

*"ಸರ್ವದಾಚೈವ ದೇವೇಷು ಸಂಗೋ ಮುನಿಗಣೇಷು ಚ ।*
*ಭಾವ್ಯೋ ಹಿ ತಂ ವಿನಾನ್ಯೈವ ಪುರುಷಾರ್ಥಃ ಕ್ವಚಿದ್ಭವೇತ್ ।*
*ವಿಶೇಷತಃ ಸ್ವೋತ್ತಮೇಷು ವಿನಾ ಸಂಗಂ ನ ಮುಚ್ಯತೇ । "*

ಎಂತ ಏಕಾದಶ ತಾತ್ಪರ್ಯವು.

*"ಬಹ್ವಪೇಕ್ಷಾಹಿ ಜಿಜ್ಞಾಸು ರತೋ ದೇಹಾದಿ ವೃತ್ತಯೆ ।*
*ಕಿಂಚಿತ್ಪ್ರಶ್ಯಾಪಿ ಸಂಗೀಸ್ಯಾದಶಕ್ಯೇ ಸತಿ ವರ್ತನೆ ॥*
*ಕೃತಕೃತ್ಯಃ ತ್ಯಜೇತ್ಸಂಗಂ ಸದಾ ಗುರು ಸುರಾದಿಷು. ॥*
*ಸಂಗೀಸ್ಯಾನ್ನಹಿತಂ ಸಂಗಂ ವಿನಾತು ಸುಖಭಾಗ್ಭವೇತ್ ।*
*ತಸ್ಮಾದನಾದ್ಯಾನಂತ್ಯೈವಸಕ್ತಿರ್ಗುರು ಸುರಾದಿಷು. ॥ "*

ಎಂತ ಏಕಾದಶ ತಾತ್ಪರ್ಯ. ಅಂದರೆ ಮುಕ್ತ್ಯನಂತರದಲ್ಲಿಯೂ ಗುರು ದೇವತೆಗಳ ಸಂಗನಾಗಿರುತ್ತಾನೆ. ಪ್ರಮಾಣ :-

*ತ್ರೈರ್ವಿಘ್ನತಾ ಅಧೋಯಾಂತಿ ತದ್ಭಕ್ತಾನಾಮುಪೇಕ್ಷಕಾಃ ।*
*ಕುರ್ಯುರ್ವಿಷ್ಣಾವಪಿದ್ವೇಷಂ ದೇವಾದೇವಾವಮುನಿನಃ ॥*
*ಪೂಜಿತಾ ವಿಷ್ಣು ಭಕ್ತಂಚ ನಾವಜ್ಞೇಯಾಸ್ತತಃ ಸುರಾಃ ॥*
*ಉಪೇಕ್ಷೇತೇಷು ದೇವಾನಾಂ ಭಕ್ತಿ ನಾಶಂ ಸ್ವಯಂ ಹರಿಃ ॥*
*ಕರೋತಿ ತೇನ ವಿಭ್ರಷ್ಟಾಃ ಸಂಸರಂತಿ ಪುನಃ ಪುನಃ ।*
*ಅಧೋವಾಯಾನ್ತಿ ವಿದ್ವೇಷಾತ್ಪೂಜ್ಯಾದೆವಸ್ತತಃ ಸದಾ ॥*

ಎಂತ ಏಕಾದಶ ತಾತ್ಪರ್ಯ.

ಅಂದರೆ ದೇವತೆಗಳು ತಮಗೆ ಅವಮಾನ ಮಾಡತಕ್ಕ ಹರಿ ಪೂಜಕರಿಗೆ ಹರಿದ್ವೇಷವನ್ನು ಹುಟ್ಟಿಸುತ್ತಾರೆ.

*"ಹಗಲು ನಂದಾದೀಪದಂದದಲಿ*
*ನಿಗಮವೇದ್ಯನ ಪೂಜಿಸುತ ಕೈ*
*ಮುಗಿದು ನಾಲ್ಕರೊಳಗೊಂದು ಪುರುಷಾರ್ಥ ಬೇಡಾದಲೆ ॥*
*ಜಗದುದರ ಕೊಟ್ಟದನ್ನು ಭುಂಜಿಸಿ*
*ಮಗ ಮಡದಿ ಪ್ರಾಣೇಂದ್ರಿಯಾತ್ಮಗಳು*
*ಭಗವದಧೀನವೆಂದಡಿಗಡಿಗೆ ನೆನೆಯುತಲಿರು"*

ಎಂತ ಹರಿಕಥಾಮೃತಸಾರದಲ್ಲಿ ಮೋಕ್ಷವನ್ನು ಅಪೇಕ್ಷಿಸಬೇಡ ಎಂತ ಹೇಳಿದ್ದಾರಷ್ಟೆ. ಈ ಅಧಿಕಾರಿಗಳು ನರಕದಲ್ಲಿ ನಾನಾ ಹಿಂಸೆಗಳನ್ನನುಭವಿಸಿ ಶ್ರೀ ಹರಿ ಗುರು ಚರಣ ನಂಬಿದ್ದರಿಂದ ನಿಷ್ಕಾಮಾರಾಧಕನು ಹ್ಯಾಗೆ ಇವನು ಆದಾನು ಎಂದರೆ- ಮುಕ್ತಪ್ರಾಯರಾದ ಋಜುಗಣಕೆ ಮಾತ್ರ ಮೋಕ್ಷದ ಆಶೆಯಿಲ್ಲ. ಅನಾದಿ ಕರ್ಮದಿಂದಲೂ ಅಜ್ಞಾನ ಕಲ್ಯಾವೇಶ ದುಷ್ಕರ್ಮ ದೂಃಖಗಳು ಅವರನ್ನು ಹೊಂದದೇ ಇದ್ದ ಪ್ರಯುಕ್ತ ಅವರಿಗೆ ನಿಷ್ಕಾಮತ್ವವು ಸಲ್ಲುತ್ತದೆ. ಏವಂ ಪ್ರಲಯಕಾಲೇಪಿ ಪ್ರತಿಭಾತ ಪರಾವರಃ । ಮುಖ್ಯವಾಯುರ್ನಿತ್ಯ ಸಮಃ ಇತ್ಯಾದಿ ಪ್ರಮಾಣವು. ಮುಕ್ತ ಪ್ರಾಯಾಃ

ಸದಾ ಸರ್ವೆ ಎಂತ ಪೂರ್ವದಲ್ಲಿ ವಿಸ್ತಾರವಾಗಿ ಪ್ರಮಾಣಗಳನ್ನು ಹೇಳಿದ್ದೇನೆ. ಅನ್ಯಃ ಸಂಸಾರ ತಾಪೇನ ಎಂಬ ವಿಷ್ಣುರಹಸ್ಯಾದಿಗಳಿಂದಲೂ ರುದ್ರಾದಿಗಳಿಗೂ ಕೂಡ ಮೋಕ್ಷಾಪೇಕ್ಷೆಯುಂಟು. ಹಾಗಾದರೆ ಹರಿಕಥಾಮೃತಸಾರದಲ್ಲಿನ ಮತ್ತು ನಿರ್ವಾಣ ಬೇಡಸಲ್ಲ ಈ ಪರಿ ಇಪ್ಪವಗೆ ದೂರ್ತಿ ಯೇರಿರೋ ಹರಿ ಒಡನಾಡುವ ಎಂತ ಸರ್ವಸಮರ್ಪಣೆ ಸುಳಾದಿಗೂ, ಏನು ಭಾವವೆಂದರೆ, ಎರಡು ಭಾವ ಅದು ಹೇಗೆಂದರೆ ನಿರುಪಾಧಿಕ ಭಕ್ತಿ ಪೂರ್ವಕ ಉಪಾಸನಾ ದೀಕ್ಷೆಗೆ ಹ್ರಾಸ ಬಾರದೆ ದಿನದಿನಕ್ಕೆ ವೃದ್ಧಿ ಆಗಬೇಕೆಂಬ ಅಭಿಪ್ರಾಯವು. ಮತ್ತೊಂದು ಭಾವ ಯಾವುದೆಂದರೆ, ಈ ಸಂಸಾರವಸ್ಥೆವಳಗಿನ ಭಗವದುಪಾಸನೆಗೆ ಕ್ಷುತ್ಪಿಪಾಸ, ಅನೇಕ ವಿಧವಾದ ರೋಗಾನುಭವ, ನಿದ್ರೆ ಮೊದಲಾದ ಪ್ರತಿಭಂದಕಗಳಾದುದರಿಂದ, ಮೋಕ್ಷದಲ್ಲಿ ಇವನ ಉಪಾಸನೆಗೆ ಕ್ಷಣವೆಂದರೂ ತಿಲಮಾತ್ರ ಪ್ರತಿಬಂಧಕವಿಲ್ಲವಾದುದರಿಂದ ತದರ್ಥ ಮೋಕ್ಷಾಪೇಕ್ಷೆಯೇ ಹೊರತು ಜಕ್ಷನ್ ಕ್ರೀಡನ್ ರಮಮಾಣಃ ಇತ್ಯಾದಿ ಶೃತಿ ಸಿದ್ಧವಾದ ಕರ್ಮ ವ್ಯಂಗ್ಯವಾದ ಮುಕ್ತಿ ಸುಖಗಳನ್ನೇ ಉದ್ದೇಶ್ಯ ಮಾಡಬಾರದು. ಎಂತ ಗೀತಾ ತಾತ್ಪರ್ಯ ಪ್ರಮಾಣ. ಸುಳಾದಿ ಸರ್ವ ಸಮರ್ಪಣೆ ಮಾಡು ಮುಕ್ತಿಯ ಬೇಡು. ಎಂಬ ಪ್ರಾರಂಭದ ಮಾತಿನಿಂದ ಇದರಲ್ಲಿ ತೋರಿಸಿದ್ದಾರೆ. ಮುಕ್ತರು ಮಾಡುವ ಭಗವದುಪಾಸನೆಗೆ, ಈ ಸಂಸಾರಗಳು ಸಂಬಂಧ ವಿಷಯಾನುಭವ ಹ್ಯಾಗೆ ಪ್ರತಿಬಂಧಕವೋ ಹಾಗೆ ಮುಕ್ತಿ ಭೋಗ ವಿಚಿತ್ರವು ಪ್ರತಿಬಂಧಕಗಳಿಲ್ಲದೆ, ಮುಕ್ತರು ಚಿದ್ದೇಹವು ಅಚಿದ್ದೇಹವು ಉಭಯ ವಿಧದಿಂದಲೂ ಭಗವದ್ಕ್ರೀಡೆಗಳನ್ನು ತಿಳಿದು ಭೋಗಿಸಿ ಉಪಾಸಕರು ಆಗುತ್ತಾರೆ ಎಂತ ಅರ್ಥವು. ದ್ವಿವಿಧದಲ್ಲಿ ಸೇವಿಸು ಎಂತ ಮುಕ್ತ ಪ್ರಕರಣ ಸುಳಾದಿ. ಸತ್ತತ್ತ್ವರತ್ನಮಾಲಾ ಫಲಪ್ರಕರಣದಲ್ಲಿ ಮುಕ್ತ ಬ್ರಹ್ಮರ ಕ್ರೀಡಾ ವಿಷಯ.

*"ಮುಕ್ತೌ ಸ್ವೇನ ಸಮವ್ಯಾಪ್ತಿ ಮಾಪ್ತಯಾ ಹರಿಭಕ್ತ್ಯಾ"*

ಇತ್ಯಾದಿ ಶ್ಲೋಕಗಳಿಂದಲೂ

*"ಲೀಲಾಲೋಲಾಮಲ ಲಸನ್ಮಾಲಾ ಜಲ ವಿಲಾಸಯಾ ವೃಂದಾರಕೇಂದ್ರ ವೃಂದಾಭಿವಂದ್ಯ ಪಾದಾರವಿಂದಯಾ ಸೇವ್ಯಮಾನೇ ಅನುಸವನಂ ಗೀಯಮಾನಶ್ಚ ಸಾದರಂ । ನಂದಯುನ್ಮಂದಹಾಸೇನ ಸುಂದರೀಂ*

*ತಾಮನಿಂದಿತಾಂ । ಅನಂತಾನಂತ ರೂಪೇಣ ಗಾಂಯನ್ಧ್ಯಾಯನ್ ರಮಾಪತಿಂ".*

ಎಂತ ಇದು ಮುಕ್ತ ಬ್ರಹ್ಮರ ಕ್ರೀಡೆ ಆದಾಗ್ಯೂ ಅಧಮರಾದ ಜೀವರು ಕೂಡ ಅವರವರ ಉಪಾಸನೆ ಪ್ರತಿಬಂಧಕವಲ್ಲವು.

*"ಶುದ್ಧ ಸತ್ವಾತ್ಮ ಕಾನ್ಯೇವ ಜ್ಯೋತಿ ರೂಪಾನಿ ಕಾನಿಚಿತ್ ॥*
*ನಿಜ ದೇಹಃ ಸಪ್ರವಿಶ್ಯ ರಮತೇ ಲೀಲಯಾ ಕ್ವಚಿತ್ ।"*

ಎಂತ ಸತ್ತತ್ವರತ್ನಮಾಲಾ.

ಅಂದರೆ ಸುಳಾದಿ ಸತ್ವ ಗುಣದ ರಾಶಿ ವೈಕುಂಠ ಪುರದಲ್ಲಿ ಎಂತಲೂ, ಈ ಶುದ್ಧ ಸತ್ವ ದೇಹವನ್ನು ತಾತ್ವಿಕರು ಅಧಮ ಮುಕ್ತರಿಗೆ ತೆಗೆದು ಕೊಡುತ್ತಾರೆ ಎಂತಲೂ ಮುಕ್ತ ಪ್ರಕರಣ ಸುಳಾದಿಯಲ್ಲಿ ವಿಸ್ತರಿಸಿದ್ದಾರೆ. ಕೊನೆ ತಾತ್ಪರ್ಯವು. ಅಧಿಕಾರಿಗಳಿಗೆ ಮೋಕ್ಷವಾಗದ ಹೊರತು ಅವರವರ ಸಂಪೂರ್ಣ ಹರಿಭಕ್ತಿ ವದಗುವುದಿಲ್ಲ. ನಾವು ನಿಷ್ಕಳಂಕ ಭಕ್ತಿಯನ್ನು ಕರ್ಮಾಧಿಕಾರದಿಂದ ಭಗವದುಪಾಸನೆಯನ್ನು ಸಂಪಾದಿಸ ಬೇಕು. ಭಕ್ತಿ ಲಕ್ಷಣವು ಎಂಥಾದ್ದೆಂದರೆ ಪ್ರಮಾಣ: –

*ಚಿತ್ತ ದ್ರವಸ್ತಥಾ ಸ್ಥೈರ್ಯ ಪ್ರಸಾದೋ ಭಕ್ತ ಲಕ್ಷಣಂ ।*
*ಆಧಿಕ್ಯೇ ನತು ತತ್ರಾಪಿ ಸ್ಥೈರ್ಯಮೇವ ವಿಶೇಷತಃ ।*

ಎಂತ ಏಕಾದಶ ತಾತ್ಪರ್ಯವು.

ಸುಳಾದಿ– "ಮರಳಿ ಉದಕದಂತೆ ಹರಿದು ಪೋವುಪಲಿರೆ" ಎಂತ ವೈರಾಗ್ಯ ಸುಳಾದಿ ಭೂಮಿಯಲ್ಲಿ ಉದಕ ಹ್ಯಾಗೆ ಪ್ರವಹಿಸುತ್ತದೋ ಹಾಗೆ ಪರಮಾತ್ಮನ ಗುಣ ರೂಪ ಕ್ರಿಯೆ ಚಿಂತನೆಯಲ್ಲಿ ಮತ್ತು ಗುರು ದೇವತೆಗಳ ಚರಣದಲ್ಲಿಯೂ ಮನಸ್ಸು ಪರಮ ಧೈರ್ಯ ಭಾವದಿಂದ ಪ್ರವಹಿಸೋಣ ಎಂತ ಭಾವ. ಸ್ಥೈರ್ಯ ಅಂದರೆ ಶಾಂತಿ ಭಗವನ್ನಿಷ್ಠಾ ಎಂತ ಅರ್ಥವು. ಅಚಂಚಲ ಎಂತಲೂ ಅರ್ಥವು. ಪ್ರಸಾದ ಎಂದರೆ ಮನಸ್ಸಂತೋಷ. ಅದೂ ಸ್ವರೂಪಾನಂದವಲಿತವಾದಂತಹ ನಿತ್ಯಾನಂದ ಜನಕವಾದ ನಿಶ್ಚಯ ಜ್ಞಾನ ಜನ್ಯವಾದಂಥಾ ಗುರುಪ್ರಸಾದ ಲಬ್ಧವಾದಂಥಾ ಆನಂದವು ಎಂತ ಭಾವವು.

ಪುರಂದರದಾಸರ ನಾಮ "ಹರಿಪಾದ ಸೇವನ ಧ್ಯಾನ ಬಲ್ಲವನು ವರ ಪುಟ ಇಟ್ಟ ಚಿನ್ನದ ಮುಖ ಬಣ್ಣ" ಎಂತ ನವ ವಿಧ ಭಕ್ತಿನಾಮದ ಮಾತು ಈ ಆನಂದವೇ ಅವ್ಯಕ್ತ ತತ್ವ. ಇದೇ ಜಡಾನಂದಮಯ ಕೋಶವು. ಇಂತಹ ಶ್ರವಣ ಜನ್ಯ ಭಕ್ತಿಯಿಂದ ಎಂತಹ ಚಿಂತನೆ ವದಗುತ್ತದೆ ಎಂದರೆ, ಸುಳಾದಿ "ಪುಂಡರೀಕಾಕ್ಷನು ಬಿಡದಲೆ ಹೊತ್ತು ಕೊಂಡು ಬಂದಿಪ್ಪಾನು ವಡನೊಡನೆಯಂತ" ಘನ ಪೂಜಾ ಸುಳಾದಿ. ಅಂದರೆ ಜೀವಾಂತರ್ಯಾಮಿ ಅನೇಕ ರೂಪಗಳು ಜೀವನನ್ನು ಹೊತ್ತು ಕೊಂಡು ಸ್ಥೂಲ ದೇಹದ ತನಕ ಲಿಂಗ ಅವ್ಯಕ್ತ ಅನಿರುದ್ಧ ಸ್ಥೂಲ ಕಾಯಗಳನ್ನು ಶ್ರೀ ಹರಿಯೇ ಅನಂತ ರೂಪಗಳನ್ನು ಧರಿಸಿ ಹೊತ್ತು ಕೊಂಡು ಇರುತ್ತಾನೆ.

*ಮೋಕ್ಷಾಧಿಕಾರಿ ಪ್ರಕರಣ ಸಂಪೂರ್ಣವು. (೫)*

*॥ ಶ್ರೀಃ ॥*

॥ ಶ್ರೀ ಗುರುಭ್ಯೋ ನಮಃ ॥ ॥ ಹಂಃ ಓಂ ॥
ಆರನೆಯ ಉಪಾಸನಾ ಪ್ರಕರಣ ಪ್ರಾರಂಭವು.

# ಮುಕ್ತಿ ಮಾಣಿಕ್ಯ ಮಾಲಾ
## (ಪರತತ್ತ್ವ ವರ್ಣನೆ ಭಾಗ ೨)

# ಭಗವದುಪಾಸನಾ ಪ್ರಕಾರತಾ

ಇನ್ನು ಮೇಲೆ ಸಾಧನೆ ವಿಚಾರ ಹೊರತು ಆಕ್ಷೇಪ ವಿಚಾರವಿಲ್ಲ. ಪ್ರಥಮತಃ ಜೀವನಿಗೆ ಭಗವದುಪಾಸನೆ ಮಾಡಬೇಕು ಎಂತ ಇಚ್ಛೆ ಹುಟ್ಟಿದರೆ, ಆ ಬುದ್ಧಿಪ್ರೇರಕ ಭಗವದ್ರೂಪ ಯಾವುದು. ಆ ಸ್ವಾಮಿಗೆ ಇಚ್ಛೆ ಹುಟ್ಟದೇ ಇದ್ದರೆ ಜೀವನಿಗೂ ಇಚ್ಛೆ ಹುಟ್ಟುವುದಿಲ್ಲ ಎಂತ ಹೇಳಿದಿರಿ. ಕ್ಷಣ ಮಾತ್ರದಲ್ಲಿ ಜೀವನ ಇಚ್ಛೆಗೆ ವಿಘಾತವು ಬಂದು ವಡನೆಯೇ ಮತ್ತೊಂದು ಇಚ್ಛೆ ಹುಟ್ಟುತ್ತದಷ್ಟೆ. ಸತ್ಯ ಸಂಕಲ್ಪನ ಇಚ್ಛೆಯೇ ಭಂಗವಾಯಿತು ಎಂತ ಹೇಳುವುದು ಹ್ಯಾಗೆ? ಅಂದರೆ– ಯಾವ ರೂಪಕ್ಕೆ ಇಚ್ಛೆ ಹುಟ್ಟದೆ ಜೀವಗೆ ಹುಟ್ಟುವುದಿಲ್ಲವೋ ಆ ರೂಪ ಸಂಚಾರ ಹೊರತು ಇವನ ಸಂಚಾರವು ಇಲ್ಲದೆ ಹೇಗೆ ಸಕಲ ಕಾರ್ಯಕ್ಕೂ ಸಮಾಧಾನ ಮಾಡುವಂಥ ಮೂರ್ತಿಯೇ ವಿಶ್ವ ಮೂರ್ತಿ. ಆದು ಜೀವ ಕಾರ್ಯ ಬದ್ಧ ಮೂರ್ತಿ ಎಂತ ಮಾಂಡೂಕ ಭಾಷ್ಯ. ಜೀವರ ಇಚ್ಛೆಯ ಪರಂಪರೆಗೆ ಅನೇಕ ವಿಘ್ನಗಳು ಬಂದರೂ ಇಂಥಾ ಕ್ಷಣ ಹೀಗೆ ಬರುತ್ತದೆ ಎಂತ ತಿಳಿದು. ವಿಘ್ನ ರೂಪನು ತಾನೇ ಆದುದರಿಂದ ಜೀವನ ಇಚ್ಛೆ ಕೆಟ್ಟಿತು ಎಂತ ಅನ್ನಿಸಿ ಕ್ಷಣದಲ್ಲಿಯೂ, ಅವನ ಇಚ್ಛೆಯು ಗುಣ ಪೂರ್ಣನಾದರೂ ಜೀವನ ಇಚ್ಛೆಯಂತ ಕ್ಷಣಕ್ಕೆ ಅನಂತ ಇಚ್ಛೆಯು ಶ್ರೀ ಹರಿಗೆ ಉಂಟು. ಜೀವನ ಅನೇಕ ಭ್ರಷ್ಟ ಸಂಕಲ್ಪಗಳಿಗೆ ಮೂಲ ಕಾರಣಗಳೇ ಆಗುಣ ಪೂರ್ಣನ ಇಚ್ಛೆಗಳು. ಹಾಗಾದರೆ ಸತ್ಯ ಸಕಲ್ಪವೇ ಹರಿಗೆ ಇಲ್ಲದೇ ಹೋಯಿತಲ್ಲ ಎಂದರೆ ಆತಏವ ಕಾಮಾನುಕೂಲ ಕಾಮರಲ್ಲಿದ ಅಜ್ಞಾನ ಭ್ರಷ್ಟ ಸಂಕಲ್ಪ ವೇಷಧಾರಿಯಾದ ಸತ್ಯ ಸಂಕಲ್ಪ ಈ ಮೂರ್ತಿಯು ಜೀವ ಕಾರ್ಯ ಬದ್ಧ ಎನಿಸಿಕೊಂಡಿತು.

ಬದ್ಧನೆಂದನೆ ನಾನು ನಡೆಯುವಾಗ ಅದು ಕೂತು ಕೊಳ್ಳುವರೂಪವಲ್ಲ ನಾನು ಕೂಡುವಾಗ ಅದು ಸಂಚಾರ ಮಾಡತಕ್ಕದ್ದೂ ಅಲ್ಲ. ಇವನು ಕೈ ಅಲ್ಲಾಡಿಸಿದರೆ ಅದು ಸುಮ್ಮನೆ ಇರುವುದು ಅಲ್ಲ. ಅತಏವ ಕಾರ್ಯ ಬದ್ಧರೂಪವಾಯಿತು. ಈ ರೂಪವು ಜೀವರಿಂದ ಪ್ರಾರ್ಥನೆ ಮಾಡಿಸಿಕೊಳ್ಳಲಿಕ್ಕೆ ಅರಿಯದು. ಏತಕ್ಕೆಂದರೆ ಈ ಜೀವನು ನನ್ನನ್ನು ಉದ್ಧರಿಸುವ ಮಹಾನುಭಾವನು. ಎಂತ ಪ್ರಾರ್ಥನೆ ಮಾಡಿದ್ದೇ ಈ ರೂಪವಾದುದರಿಂದ ಪೂಜೆ ತೆಗೆದುಕೊಳ್ಳತಕ್ಕ ರೂಪ ಪ್ರತ್ಯೇಕವಾಗಿ ಪ್ರಾಜ್ಞಮೂರ್ತಿ ಮೊದಲಾಗಿ ಸರ್ವ ರೂಪವು ಇರುವುದೇ ಸಿದ್ಧವು. ಹರಿ ರೂಪಗಳಲ್ಲಿ ಭೇದ ಕೂಡದಷ್ಟೆ- ಅಂದರೆ ಪ್ರಮಾಣ:-

***"ವಿಷ್ಣೋರೇವಾತ್ಯಭೇದೇಪಿ ತದೈಶ್ವರ್ಯಂ ತದನ್ಯವತ್"***

ಎಂತ ತಂತ್ರಸಾರ.

ಅಂದರೆ ತನ್ನ ನಿಜೈಶ್ವರ್ಯ ಶಕ್ತಿಯಿಂದಲೇ ಅನ್ಯ ಪುರುಷ ವೇಷಧಾರಿ ಎಂತ ಅರ್ಥವು. ಹಾಗಾದರೆ ಈ ಸಕಲ ಕಾರ್ಯಗಳನ್ನು ನೋಡುವ ರೂಪ ಚಿಂತಿಸಿದರೆ ನನಗೆ ಬರುವ ಲಾಭವೇನಂದರೆ ಶ್ರೀ ಹರಿವಾಯುಗಳ ಅನುಗ್ರಹದಿಂದ ನಿಶ್ಕಾಮಾರಾಧನೆಯ ಪರಂಪರೆಗಳು ಪಾಂಗ್ತವಾಗಿ ಬೆಳೆಯುತ್ತ ಬರುವುದರಲ್ಲಿ ನನ್ನ ಉಪಾಸ್ಯ ಸ್ವಾಮಿಯ ಚರಣದಲ್ಲಿ ಒಂದು ದಳ ತುಳಸಿ ಒಂದು ಬಿಂದು ಉದಕ ಸಮರ್ಪಿಸಿದುದೂ ಕೂಡ ವ್ಯರ್ಥವಾಗದೆ, ವಿರಜಾ ಸ್ನಾನದ ತನಕ ನಡಿಯತಕ್ಕ ಸಕಲಾರಾಧನೆ ಪುಣ್ಯ ಕರ್ಮ ರಾಶಿಗಳಿಗೆ ದ್ರವ್ಯಗಳನ್ನು ಭದ್ರ ಮಾಡತಕ್ಕ ಚೀಲದಂತೆ ಈ ಮೂರ್ತಿ ಆಧಾರವು. ಆದುದರಿಂದ ಹೀಗೆ ತಿಳಿದು ಈ ಅಧಿಕಾರಿಯು ಸಾಧನೆ ಮಾಡತಕ್ಕದ್ದು ಆದುದರಿಂದ, ಸಕಲ ಕಾರ್ಯಗಳ ದೀಕ್ಷೆಯನ್ನು ತೊರೆದು ನಿಶ್ಕಮಾರಾಧನೆಯನ್ನು ಸಂಪಾದಿಸುವೆನೆಂಬ ಕುತೂಹಲವಿಲ್ಲದವಗೆ ಉಪಾಸ್ಯ ಮೂರ್ತಿಯನ್ನು ಬಿಟ್ಟು ಈ ಮೂರ್ತಿಯನ್ನು ನೋಡುವವನಿಗೆ ಶ್ರೀ ಹರಿಗೆ ನಾನು ಸ್ವಲ್ಪವಾದರೂ ತಲೆ ತಗ್ಗಿಸಿ ಕೈ ಮುಗಿದೇನು ಎಂಬ ಬುದ್ಧಿಯೇ ಕೆಟ್ಟು ಹೋಗಿ ಶುದ್ಧಾದ್ವೈತಿಗೆ ಸಮನಾಗಿ ಸ್ವಾಮಿ ದ್ರೋಹ ಎನಿಸಿಕೊಂಬುವನು.

# ಬುದ್ಧಿ ಪ್ರೇರಕ ಭಗವದ್ರೂಪ

ಬುದ್ಧಿ ಪ್ರೇರಕ ಭಗವದ್ರೂಪವು ಯಾವುದೆಂದರೆ ಅಷ್ಟದಳ ಕಮಲಾಧಿಷ್ಠಿತನಾಗಿ ಸರ್ವೋದ್ರಿಕ್ತ ಮಹಿಮನು ದಳಗಳಲ್ಲಿ ಸಂಚರಿಸುತ್ತ ವಳಗೆ ಇದ್ದು ದುಷ್ಟರಿಗೆ ದುರ್ಬುದ್ಧಿ ಕರ್ಮ ವಿಶಿಷ್ಟರಿಗೆ ಸುಜ್ಞಾನ ಧರ್ಮ ಸುಪುಷ್ಟೀಕರಿಸುತಲಿ ಅನವರತ ಸಂತೈಸುವ ನಿತ್ಯ ಸುಖ ಪೂರ್ಣ ಎಂತ ಅಮೃತಸಾರ ಸಿದ್ಧ.

*"ಹೃತ್ಪದ್ಮಸ್ಯಾಷ್ಟ ಪತ್ರೇಷು ಚಕ್ರವದ್ಭ್ರಮತಾ ಹರಿಃ ।*
*ರಮಯಾ ಸಹಿತೋ ಹಂಸರೂಪೀ ನಾರಾಯಣೋ ಅನಿಶಂ ।*
*ಪೂರ್ವ ದಳೆ ಪುಣ್ಯ ಬುದ್ಧಿ ರಾಗ್ನೇಯೇ ನಿದ್ರಾಲಸ್ಯಾದಿಕಂ ।*
*ಯಾಮ್ಯದಲೇ ಕ್ರೂರ ಬುದ್ಧಿರ್ನೈಋತ್ಯಾಂ ಪಾಪ ಕರ್ಮ ಕೃತ್ ।*
*ವಾರುಣೇಚ ಪರಿಪರಿ ಕ್ರೀಡಾ, ವಾಯುವ್ಯೇ ಗಮನಾಗಮಃ ।*
*ಕೌಬೇರ್ಯಾಂ ರತಿ ಬುದ್ಧಿಸ್ತು ಈಶಾನ್ಯೇ ದ್ರವ್ಯ ದಾನ ಕೃತ್ ॥*
*ಮಧ್ಯೇ ವೈರಾಗ್ಯ ಬುದ್ಧಿಸ್ಯಾಜ್ಜಾಗ್ರವಸ್ಥಾ ಚ ಕೇಸರೇ ।*
*ಸ್ವಪ್ನಾವಸ್ಥಾ ಕರ್ಣಿಕಾಯಾಂತಂ ಲಿಂಗೇಚೈವ ಸುಷೀಪ್ತಿ ಕೃತ್"*

ಎಂತ, ಅಷ್ಟದಳ ಕಮಲ ಸುಳಾದಿ.

ಅಷ್ಟದಳದಿಂದ ಒಪ್ಪುವ ಪದುಮಾ ಎಂಬ ಸುಳಾದಿ. ಈ ಮೂರ್ತಿಗೆ ಅಷ್ಟ ಬಾಹು ಹಂಸ ವಾಹನ ಲಕ್ಷ್ಮೀ ನಾರಾಯಣ ಎಂತಲೂ, ಹೃದಯ ಜ್ಯೋತಿಯೆಂತಲೂ ಎರಡು ಹೆಸರು ಇದೇ ಹೃದಯ ಜ್ಯೋತಿ ರೂಪ. ಗುಹ್ಯದಲಿ ವೀರ್ಯ ಜ್ಯೋತಿರೂಪನೇ ಪರಶುರಾಮನು. ನೇತ್ರದಲಿ ಕಪಾಲ ಮೂರ್ತಿಯೇ ಚಕ್ಷು ಜ್ಯೋತಿ. ಹೀಗೆ ದೇಹದಲ್ಲಿ ಮೂರು ರೂಪ ಎಂತ ಅಧ್ಯಾತ್ಮ ಮಾಲೆ. ಇದರಲ್ಲಿ ಹೇಳಿದ ದಳಗಳ ಸಂಚಾರ ರೂಪವು ಸರ್ವಥಾ ಮನುಷ್ಯರಿಂದ ಉಪಾಸ್ಯವಲ್ಲವು. ಏಕೆಂದರೆ, ಪೂರ್ವ ಕರ್ಮಾನುಕೂಲವಾಗಿ ಉಪಾಸನೆಗೆ ಇದೇ ಆದುದರಿಂದ ಒಂದು ಕ್ಷಣದಲ್ಲಿ ಬಹು ಸುಬುದ್ಧಿ ಕುಬುದ್ಧಿಗಳನ್ನು ಹುಟ್ಟಿಸಿ ಪುಣ್ಯ ಮಾಡುವೆನೆಂಬ ಇಚ್ಛೆಯನ್ನು ಪಾಪಕರ್ಮದಲ್ಲಿ ಎರಗಿಸಿ ಪಾಪ ಬುದ್ಧಿಯನ್ನು ಪುಣ್ಯ ಕರ್ಮದಲ್ಲಿ ಎರಗಿಸಿ, ಇವನನ್ನು ಶ್ರೀ ಹರಿಯು ಭ್ರಷ್ಟ ಸಂಕಲ್ಪನನ್ನಾಗಿ ಮಾಡುತ್ತಾನೆ– ಸುಳಾದಿ

*"ಹರಿ ಸತ್ಯ ಸಂಕಲ್ಪ ಅನಾದಿ ಸಿದ್ಧ ಕರ್ಮ
ಮರ್ಯಾದೆಯಿಂದ ಸಾಧನ ಮಾಡಿಸಿ
ಕರಣ ಶುದ್ಧವಾಗಲು ಗುರು ಉಪದೇಶದಿ ಜ್ಞಾನ
ಪ್ರಬಲವಿತ್ತು ಹರಿ ತನ್ನ ಖಂಡಾಖಂಡ ಧ್ಯಾನ
ಕ್ರಮದಿಂದ ದರ್ಶನ ಕೊಡುವನು."*

ಎಂತ ಅಪರೋಕ್ಷ ತಾರತಮ್ಯ ಸುಳಾದಿ.

ಅಂದರೆ ಹೊರಗೆ ಜ್ಯೋತಿರ್ಮಂಡಲದಲ್ಲಿ ಕಾಲ ಚಕ್ರವನು ತಿರಿಗಿಸುವ ಶಿಂಶುಮಾರ ದೇವರು ಹೇಗೆ ಸಂಚಾರ ಮಾಡುವರೋ ಹಾಗೆ ಈ ಶರೀರವೆಂಬ ಬ್ರಹ್ಮಾಂಡದಲ್ಲಿ ನಾನು ಕರ್ಮಾನುಕೂಲ ಬುದ್ಧಿಯನ್ನು ಕೊಡುವ ಸ್ವತಂತ್ರನಾದವನು ಹೌದೋ ಅಲ್ಲವೋ ನೋಡು, ಭ್ರಷ್ಟ ಸಂಕಲ್ಪನೆ ಎಂತೆಂದು ನನ್ನ ಪಾದವನ್ನು ಭಕ್ತಿಯಿಂದ ನಂಬಿದರೆ, ಉದ್ಧರಿಸದೆ ಬಿಡೆನೆಂಬ ಪರಮ ಕರುಣಾಳು ಈ ರೂಪನೇ ಸರಿ. ತನ್ನನ್ನು ಬಿಟ್ಟು ಈ ಜೀವನು ಸ್ವಾಮಿದ್ರೋಹಕ್ಕೆ ತಕ್ಕ ಶಿಕ್ಷೆ ರೂಪವಾಗಿ ಬಿಂಬಾಪರೋಕ್ಷವನ್ನು ಇವನಿಗೆ ನಾನು ಕೊಡಲಿಕ್ಕೆ ಪೂರ್ವದಲ್ಲಿ ಇವನ ಪ್ರಾರಬ್ಧಾನುಭವಕ್ಕೆ ನರಕ ಯಾತನೆ ಕೊಡುವೆನಾದುದರಿಂದ ಈ ಜೀವನನ್ನು ಆಳುವ ಮೂರ್ತಿಯಿದು ಒಂದೇಸರಿ. ಪರಮ ಪೂಜೆಗಳಲ್ಲಿಯೂ ಪಂಜೆಯಾಗಿ ಇವನಿಗಿಂತ ಇನ್ನೊಬ್ಬನು ಅಧಮನು ಇಲ್ಲವೆಂದು ಕರೆಸಿಕೊಳ್ಳುವ ಮಹಾಮಹಿಮನು. ಜೀವನಿಗಿಂತಲೂ ಕಡೆಯಾಗಿ ಜೀವ ಯತ್ನಾಂತರ್ಯಾಮಿಯು ಶ್ರೀಲಕ್ಷ್ಮೀ ನಾರಾಯಣ ಮೂರ್ತಿಯ ಯಜಮಾನ್ಯ ಭಯದಿಂದ ಅಳಕಿ ಕೊಂಡು ಹೃದಯದಲ್ಲಿ ಪರಮ ಧಿಗಲು ಕೊಟ್ಟು ವಸ್ತ್ರದಿಂದ ಮೂಗು ಮುಚ್ಚಿಕೊಂಡು ಶ್ವಾಸವನೂ ಕೂಡ ಬಿಡದೀ, ಅಪರೋಕ್ಷವು ವದಗುವುದಕ್ಕೆ ಬಹು ಕರ್ಮಗಳಲಿ ಧಾವತಿ ಧರಿಸುವನು. "ಭಕ್ತಿಸ್ಥಃ ಪರಮೋ ವಿಷ್ಣುಂ" ಎಂಬ ರೂಪದ ಚರ್ಯವೇ ಅತಿ ವಿಚಿತ್ರವು. ಪ್ರಮಾಣ

*"ಜಾನಾಮಿ ಧರ್ಮಂ ನಚ ಮೇ ಪ್ರವೃತ್ತಿಃ ಜಾನಾಮ್ಯಧರ್ಮ ನಚ ಮೇ ನಿವೃತ್ತಿಃ ॥ ಶ್ರೀ ವಾಸಿರೇವೇನ ಹೃದಿಸ್ಥಿತೇನ ಯಥಾ ನಿಯುಕ್ತೋಽಸ್ಮಿ ತಥಾ ಕರೋಮಿ."*

ಎಂತ ಹಾರೀಕ ಸ್ಮೃತಿಯು.

*"ನಿಜ ಶ್ವಾಸ ವಿಮೋಕ್ಷೇಪಿ ನಹ್ಯಸ್ಯಾಸ್ತ ಸ್ವತಂತ್ರತಾ ।*
*ಅಹೋಧಾರ್ಷ್ಟ್ಯ ಮಹೋಧಾರ್ಷ್ಟ್ಯಂ ಕಿಂ ವಯಂ ವರ್ಣಯಾಮಹೆ।*
*ಮಹೇಶ್ವರಸ್ಯ ವಸ್ತೂನಾಂ ಯದಹಂ ಮಮತಾ ನೃಣಾಂ ।*
*ಕಾಷ್ಠಾದಿ ಪುತ್ತಳೀ ಪ್ರಾಯೋ ವಿಥ್ಮಸ್ಮ ಪರಿ ಪಾಕವಾನ್ ।*
*ದೇಹೋಯಂ ದೃಷ್ಯತೇ ತಸ್ಮಿನ್ಪರತಂತ್ರೇಪ್ಯಹಂ ಮತಿಃ ।*
*ಪಚನಂ ಗಮನಂ ಭಕ್ಷ್ಯಂ ಭುಕ್ತಿರಿತ್ಯಾದಿ ಕರ್ಮಸು ।*
*ದೃಷ್ಯತೇ ಯತ್ನ ಸಾಧ್ಯತ್ವಂ ದೈವಂ ತತ್ರಾಪಿ ಚಿಂತಯೇತ್ ।*
*ಕರ್ತರಿಚ್ಛಾ ವಿಘಾತಾದ್ಯೈರ್ಲಿಂಗೈಃ ಸಮ್ಯಗ್ವಿವೇಕಿನಾ ॥ "*

ಎಂತ ವಿಷ್ಣುರಹಸ್ಯ ೨೧ನೇ ಅಧ್ಯಾಯ.

ಶ್ರೀ ಲಕ್ಷ್ಮೀ ನಾರಾಯಣನು ಉಪಾಸ್ಯ ಬುದ್ಧಿ ಪ್ರೇರಕನಾದುದರಿಂದ ಕ್ಷಣ ನಿಂತಲ್ಲಿ ನಿಲ್ಲದೆ "ಚಕ್ರವದ್ಭ್ರಮತೇ ಹರಿಃ" ಎಂತ ಹೇಳಿದುದರಿಂದ ಬ್ರಹ್ಮ ದೇವರಿಂದ ಉಪಾಸ್ಯನು ಎಂತ ಅಧ್ಯಾತ್ಮ ಮಾಲಾ.

ಜೀವನೆಂಬ ಕುದುರೆಗೆ ದತ್ತ ಸ್ವಾತಂತ್ರ್ಯವೆಂಬ ಕಡಿವಾಣವನ್ನು ಹಾಕಿ ವಾಹಕ ಪುರುಷನೆಂಬುವ ಲಕ್ಷ್ಮೀ ನಾರಾಯಣನು ಹೃದಯ ಜ್ಯೋತಿಯೆಂತ ಕರೆಸಿಕೊಳ್ಳುವುದರಿಂದ, ಜಗಜನ್ಮಾದಿ ಕರ್ಮ ನಡೆಸುವ ನವಗ್ರಹಗಳ ಜ್ಯೋತಿರ್ಮಂಡಲದಲ್ಲಿ ತಿರುಗಿಸಿ ಶಿಂಶುಮಾರನು, ತಾನು ಕೂಡ ಹ್ಯಾಗೆ ತಿರುಗುವನೋ ಹಾಗೆಯೇ ಜೀವನ ಇಚ್ಛಾ ಪ್ರಯತ್ನವನ್ನು ವ್ಯರ್ಥ ಮಾಡಿ ಪೂರ್ವ ಕರ್ಮಾನುಕೂಲವಾಗಿ ತನ್ನ ಮನಸ್ಸು ಬಂದ ಹಾಗೆ ಕಡಿವಾಣವನ್ನು ಹಿಡಿದು ಶೆಳೆಯುವುದರಿಂದ ಜೀವನ ಕರ್ತೃತ್ವ ಶಕ್ತಿ ಸ್ವಾತಂತ್ರ್ಯ ಶಕ್ತಿ ಎರಡರಲ್ಲಿ ಕಾರ್ಯಾನುಕೂಲ ಪ್ರಯತ್ನವು ತಲ್ಲಕ್ಷಣ ಕರ್ತೃತ್ವವು ವಾಯ್ವಧೀನ ಗಂಧದಂತೆ ಹ್ಯಾಗೆ ವಿಶ್ವಮೂರ್ತಿಯ ಅಧೀನವೋ ಹಾಗೆ ಯತ್ನವೇ ಕ್ರಿಯೆ ಆದುದರಿಂದ ಕ್ರಿಯಾ ಸ್ವತಂತ್ರ್ಯ ಶಕ್ತಿ ಎಂದರೆ ರಾಜನು ಹೇಗೆ ಭೃತ್ಯನ ಬುದ್ಧಿ ಪ್ರೇರಕನೋ ಹಾಗೆ ಜೀವಗೆ ಆಜ್ಞಾಪಿಸತಕ್ಕವನೇ ಶ್ರೀ ಲಕ್ಷ್ಮೀ ನಾರಾಯಣನು. ವ್ಯಜನಧಾರಿ ಪುರುಷನು, ವ್ಯಜನವನ್ನು ಬೆಸಿಯುವ ಪ್ರವೃತ್ತಿಯನ್ನುಂಟು ಮಾಡುವಂತೆ, ಈ ದತ್ತ ಸ್ವಾತಂತ್ರ್ಯವೇ ಈ ಪ್ರೇರಕ ಮೂರ್ತಿಯ ಅಧೀನವಾದುದರಿಂದ ಜೀವನಲ್ಲಿ ಇದ್ದಾಗ್ಯೂ ವ್ಯರ್ಥವಾಗಿ, ಅಜಾಗಳ ಸ್ತನದಂತೆ ಸುಖ ದುಃಖ ಭವಣೆಗೆ ಮಾತ್ರ ನಿಮಿತ್ತವಾಗಿರುವುದು.

"ಎನಗಾವ ಸ್ವಾತಂತ್ರ ಇದ್ದರಾದರೂ ಪ್ರಯೋಜನಕೆ ಬಾರದಿರೆ, ಇದ್ದರೂ ಇಲ್ಲವನ್ನಿ" ಎಂತ ವಿಜಯರಾಯರ ಉಕ್ತಿಯು.

ಈ ಮೂರ್ತಿಯ ತಾಯಿಯಂತೆ ಕರ್ಮಗಳನ್ನು ಕಲಸಿ ಉಣಿಸಿದರೆ, ಸ್ಥೂಲಾನ್ನವನ್ನು ಭೋಜನ ಮಾಡುವ ಮನುಷ್ಯನಲ್ಲಿ ಕೂಡ ಯತ್ನಾಂತರ್ಯಮಿ ವಿಶ್ವನು ತನಗೆ ಗುಣ ಪೂರ್ಣ ಚಿದಾನಂದಾತ್ಮಕ ದೇಹವಾದುದರಿಂದ ಪರಮ ಸೂಕ್ಷ್ಮ ಜೀವ ಸ್ವರೂಪ ಉಣದೆ ಈ ಸ್ಥೂಲಾನ್ನದಿಂದ ಶರೀರವು ದಪ್ಪನಾಗೋಣವೇ ಉಪಚಯಾಪಚಯ ಎಂದರೆ– ಅನ್ನರಸ ಹೊಂದದೆ ದೇಹಕಾರ್ಶ್ಯ ಈ ಎರಡು ಭಾವದಿಂದ ರಹಿತನಾದ ವಿಶ್ವ ಮೂರ್ತಿಯು, ರಾಮ ಕೃಷ್ಣಾದ್ಯವತಾರಗಳಂತೆ ಸ್ಥೂಲಾನ್ನವನ್ನು ಭೋಜನ ಮಾಡುವುದೇ ಸಿದ್ಧ. ಆ ಸ್ಥೂಲ ರಸಗಳು ಸ್ವಾಮಿಗೆ ಏನಾಗುತ್ತದೆ ಎಂದರೆ ಪರಮಾನ್ನಾದಿರಸಗಳು ತುಂಬಿರುವ ಪಾತ್ರೆಗಳು ಆ ರಸಗಳನ್ನು ಉಂಡು ಪಾತ್ರೆಗಳು ಶರೀರ ಪುಷ್ಠಯಾಗುವುದಿಲ್ಲವೋ ಆ ರೀತಿಯಿಂದ ನರಕಾನುಭವ್ಯ ಜೀವಿಗಳ ನೀಚ ರಸನಾದಿ ನೀಚ ಕ್ರಿಯೆಗಳಲ್ಲಿಯಾದರೂ, ಪೂರ್ಣ ನಿರ್ದೋಷನ ಸ್ವರೂಪ ಕ್ರಿಯೆಗಳಿಗೆ ಲೇಶವಾದರೂ ಬುದ್ಧಿ ಬರುವುದಿಲ್ಲ ಎಂತ ಸತ್ಯ ಸಿಧ್ಧಾಂತವು. ಪ್ರಮಾಣ

*"ತತ್ತದ್ವಸ್ತು ನಿಗಂಧಂ ಚ ಯೇಕಲ್ಯಾ ದೋಷ ಸಂಚಯಃ।*
*ತತ್ತದ್ವಿರುದ್ಧ ಸುಗುಣಾನಂತ ಪೂರ್ಣಮೀಳ್ದುಷಃ ।*
*ತದ್ದೋಷ ಗಂಧ ಲೇಶೋಽಪಿ ನ ವಿಷ್ಣೋರಿತಿ ನಿಶ್ಚಯಃ ।"*

ಎಂತ ಪ್ರಕಾಶ ಸಂಹಿತಾ ಸಿದ್ಧವು.

*ಗರ್ಭಿಣೀ ಸ್ತ್ರೀ ಉಂಡ ಭೋಜನ ಗರ್ಭಗತ ಶಿಶುವುಂಬತೆರದಲಿ ।*
*ನಿರ್ಭಯದಿ ತಾನುಂಡುಣಿಪನು ಎಲ್ಲ ಜೀವರಿಗೆ ।*
*ನಿರ್ಬಲತಿ ಪರುಮಾಣು ಜೀವರಿಗೆ ।*
*ಅಬ್ಬುವುದೆ ಸ್ಥೂಲಾನ ಭೋಜನವು ।*
*ಅರ್ಭಕರು ಹೇಳುವರು ಕೋವಿದರಿಂದನೋಡಂಬರು ॥*

ಅಂದರೆ ಜೀವ ಉಂಡು ಸೂಕ್ಷ್ಮ ಪರಮಾಣು ದಪ್ಪವಾಗುವುದಿಲ್ಲವಷ್ಟೆ ಯಂತ ತಾತ್ಪರ್ಯವು. ॥ ಉಪಚಯಗಳು ಇದರಿಂದ ಅಪಚಯಗಳಿಲ್ಲ ಎಂತ ಅಮೃತ

ಸಾರಸಿದ್ಧ. ಅಂದರೆ ಶ್ರೀ ಹರಿಗೆ ಎಂತ ಅರ್ಥವು. ಪ್ರಮಾಣವು "ವಿಶ್ವೋಹಿ ಸ್ಥೂಲಭುಕ್" ಎಂಬ ಮಾಂಡೂಕ ಶ್ರುತಿ.

*"ರಾಮ ಕೃಷ್ಣಾದಿವತ್ ಏಕಸ್ಯೈವ ವಿಶ್ವಸ್ಯ ನಿದ್ರಾವಪು ನ್ಯಾಯೇನ ಸ್ಥೂಲ ಭೋಕ್ತೃತ್ವಮ್ ॥*
*ಸರ್ವೈಶ್ವರ್ಯ ಭುಂಜತೇ ಚಾನ್ನಮ್ ತತ್ರ ತತ್ರ ಸ್ಥಿತೋ ವಿಭುಃ ।*
*ತತ್ತದ್ಭುಂಕ್ತೇ ಸ್ಥೂಲವಂಪಿ ಸ್ವಕೀಯೈರಿಂದ್ರಿಯೈಃ ಸದಾ ॥*
*ವಿಷ್ಣೋರ್ವಾ ಭಾರ್ಗವೋ ರಾಮಶ್ಚಕ್ಷುಃ ಕಪಾಲವಿವಚ ॥*
*ಇತ್ಯಾದೀಂದ್ರಿಯೈರಿತ್ಯರ್ಥಃ । "*

***ಮನುಷ್ಯಸ್ಥೋನ್ನ ಭೋಕ್ತಾ ಪಶ್ವಾದಿಸ್ಥಸ್ತೃಣಾದಿ ಭೋಕ್ತಾ ಸರ್ಪಸ್ಥೋ ವಾಯು ಭೋಕ್ತಾ ಮೇಧ್ಯಾದಿಸ್ಥೋ ಜಲ ಭೋಕ್ತಾ ದೇವಸ್ಥೋ ಅಮೃತ ಭೋಕ್ತಾ ಏವ ಸರ್ವ ಭೋಕ್ತಾ ಭೋಕ್ತೀಶಸ್ತೇನಾ ಭುಂಕ್ತಂ ನ ಕಿಂಚನ॥***
ಶ್ಲೋಕಗಳು ಸತ್ತತ್ತ್ವರತ್ನಮಾಲ ಮೂಲ ವಚನಗಳು ಆದರ ಟಿಪ್ಪಣಿ ವಾಕ್ಯವು.

ಇಂಥ ಚಿಂತನೆಗೆ ಕೊನೆ ವಾಕ್ಯವೇನೆಂದರೆ ಅಜ್ಞಾನಿಗಳಿಗೆ ಜ್ಞಾನ ವದಗ ಬೇಕಾದರೆ ಅಹಂ ಮಮ ಎರಡು ದೋಷಗಳಾದುದರಿಂದ ನಾನು ಎಂಬ ಸ್ವಾಮಿದ್ರೋಹ ಹೋಗದೆ ಹ್ಯಾಗೆ ಜ್ಞಾನ ಹುಟ್ಟುವುದು ? ಆ ಮಹಾಮಹಿಮನ ಪದಾರ್ಥಗಳಿಗೆ ಇವನು ಬಾಧ್ಯನಲ್ಲವು. ವೃತ್ತಿ ಜ್ಞಾನ ಜನ್ಯವಾದ ಭಗವದಾರಧನೆ ಮೊದಲಾದ ವೈಷಯಿಕ ಸುಖಗಳು ಮುಕ್ತಿಗೆ ಪೂರ್ವದಲ್ಲಿ ಶುದ್ಧ ಸ್ವರೂಪ ಸುಖವಲ್ಲ. ವೃತ್ತಿ ಜ್ಞಾನ ವೊದಲಾದ ಅನಾದಿಕರ್ಮಗಳು ಜಡೇಂದ್ರಿಯಾಂತಃಕರಣಗಳು ಸರ್ವವೂ ನನ್ನದು ಎಂಬ ಈ ಸ್ವಾಮಿದ್ರೋಹವು ಹ್ಯಾಗೆ ಎಂದರೆ – ಇವನ ಸೃಷ್ಟಿ ಪ್ರಾರಂಭ ಕಾಲ ಹಿಡಿದು ಆ ಸ್ವಾಮಿ ದ್ರೋಹಕ್ಕಿಂತಲೂ ಇದೇ ಬಲವಾಗಿ ಪರಮಾತ್ಮನು ಇರೋದು ಸುಳ್ಳು ಎಂತ ಅನಿಸಿದುದೇ ಇದು. ಆದುದರಿಂದ ಇದು ಹೋಗ ಬೇಕಾದರೆ, ಈ ದ್ರೋಹವೆಂಬ ವೃಕ್ಷಕೆ ದ್ರೋಹವೇ ಬೇರು. ಆದುದರಿಂದ ಆ ಬೇರು ಭಸ್ಮವಾದ ಕ್ಷಣವೇ ನನ್ನದು ಎಂಬ ಸ್ವಾಮಿದ್ರೋಹದ ಬೀಜ ಭಸ್ಮವಾದಾಗಲೇ ಇದು ಕೂಡ ಭಸ್ಮವಾಯಿತು ಎಂತ ನಿಶ್ಚಯವು. ಆದರ ಅನುಭವ ಹ್ಯಾಗೆ ಅಂದರೆ ಸುಳಾದಿ:

*"ನಿನ್ನ ಕಣ್ಣಿಂದಲಿ ನೋಡಿದೆ, ನೋಡಿದೆ ನಿನ್ನ*
*ಕರ್ಣದಿಂದ ಕೇಳಿದೆ ಕೇಳಿದೆ ನಿನ್ನ*
*ಪ್ರಾಣನಿಂದ ತರ್ಕೈಸಿದೆ ತರ್ಕೈಸಿದೆ ।*
*ನಿನ್ನ ನಿನ್ನ ಹಸ್ತದಲಿ ಪಿಡಿದೆ ಪಿಡಿದೆ ।*
*ನಿನ್ನ ಚರಣದಲ್ಲಿ ಯಾತ್ರೆಯ ಚರಿಸಿದೆ ।*
*ನಿನ್ನ ಆರಾಧನೆಗೆ ಶುಚಿಯಾಗೆ*
*ನಿನ್ನ ಪೂಜೆಪಾದರೆ ಅನುಕೂಲ ನನದೆ*
*ನಿನ್ನವ ನಿನ್ನವನೋ- ನಿನ್ನವನೆನುತ ಪಾ-*
*ವನ್ನನಾಗಲಿ ಬೇಕೋ ನೋಡಿದಲ್ಲಿ ಸತತ ।*
*ಬಿನ್ನ ತಿಳಿದು ಹರಿ ವಿಚಿತ್ರ ಶಕುತಿಗೆ*
*ಪನ್ನುತಿಸಿ ಸಾಕಲ್ಯ ತಿಳಿಯಾದಿದಕೋ ।*
*ಅಣೋರಣೀಯರೂಪ ಶ್ರೀ ವಿಜಯ ವಿಠಲ*
*ಅನುಗುಣ್ಯಕಾಣೋ । ನಮಗೆಲ್ಲ ಎನಲಿ ಬೇಕೋ"*

ಎಂತ ಕರಿ ತುರಗ ಗೋವು ಎಂಬ ಸುಳಾದಿ.

ಸಾಕಲ್ಯ ತಿಳಿಯದು ಎಂಬುದಕ್ಕೆ ವಿಚಿತ್ರ ಶಕ್ತಿಗೆ ಭಿನ್ನ ತಿಳಿದು ಎನ್ನುವುದಕ್ಕೂ ಕೂಡ ಏನು ಭಾವವೆಂದರೆ ಜೀವಚೇಷ್ಟಾಂತರ್ಗತ ಈ ಭಗವಜ್ಞೇಯ ಚಿಂತನೆಯಲ್ಲಿ ಜೀವ ನಿಷ್ಕ್ರಿಯನೆಂಬ ದ್ರೋಹ ಬಿಟ್ಟು ಸ್ವಾಮಿ ಅಲಗಾಡುವುದಕ್ಕೆ ಮೇಲೆ ಭಾಗ ರಮಾ ಬ್ರಹ್ಮಾದಿಗಳು ಕ್ರಿಯಾ ಸ್ವರೂಪರಾದುದರಿಂದ ಅಲ್ಲಿಯೂ ಅಂತರ್ಗತ ಭಗವತ್ಕ್ರಿಯೆ ಇದ್ದ ಪ್ರಯುಕ್ತ ಅಜಾಗಲ ಸ್ತನದಂತೆ ವ್ಯರ್ಥ ಕ್ರಿಯಾವಂತರನ್ನು ತಿಳಿದು ತೋಲಿಗೆ ಕೊಟ್ಟು ಇರುವ ಅಂಗಿಯ ಪದರಗಳಂತೆ ಕಾಗಿ ಬ್ಯಾಗಡೆಯಂತೆ ನವಕೋಟಿ ಪದರು ಉಳ್ಳ ಕವಚದಂತೆ ರಮಾದೇವಿಯರು ಶ್ರೀ ಹರಿಗೆ ಸೇರಿದ ಹಾಗೆ ಒಂದು ಪದರ ರೂಪಗಳಾದುದರಿಂದ ಮೇಲು ಭಾಗ ಸ್ಥೂಲದಲ್ಲಿ ಜೀವಗೆ ದತ್ತ ಚೇಷ್ಟೆ ಒಂದು ಇದರ ಮೇಲೂ ಪೂರ್ವೋಕ್ತ ಚೇಷ್ಟೆಗಳು ಕೂಡಾತಲೇಸಿಕೊಂಡು ಮತ್ತು ಪರಮ ಸೂಕ್ಷ್ಮ ಜೀವ ಚೇಷ್ಟಾಂತರ್ಗತ ಭಗವದ್ರಮಾ ಚೇಷ್ಟೆಗಳು, ಇದೇ ಪ್ರಕಾರ ಜೀವಾಭಿಮಾನಿಯಾದ ಅಹಂಕಾರಾದಿ ಸರ್ವ ಕಲ್ಯಾದಿ ತಾತ್ವಿಕ ದುರ್ಜನರ ಚೇಷ್ಟೆಗಳಲ್ಲಿಯೂ

*"ಜೀವಮಾನ್ಯುತ್ತಮೋ ಬ್ರಹ್ಮಾ ಮಧ್ಯಮಃ ಸಂಯಮೇವತು ।
ಅಧಮಃ ಕಲಿರುದ್ಧಿಶ್ಚಃ ।"* ಎಂಬ ಏಕಾದಶ ತಾತ್ಪರ್ಯದಿಂದ

ನಿತ್ಯ ಸಂಸಾರಿ ಶ್ರೇಷ್ಠ ಪುರಂಜನ ಜೀವನೂ ಕೂಡ ನಮ್ಮ ಸಂಶಯ ಜ್ಞಾನದಲ್ಲಿ ತಾತ್ವಿಕನಾದುದರಿಂದ ಶ್ರೀ ಭೂ ದುರ್ಗಾ ಚೇಷ್ಟ ಕ್ರಮದಿಂದ ಈ ಸರ್ವ ಚೇಷ್ಟೆಗಳಲ್ಲಿ ಮಧ್ಯೆ ಛಿದ್ರ ಬಿಡದೆ ಅಖಂಡರೂಪಾ ಕ್ರಿಯೆಗಳು ಅನಂತಗಳಾಗಿಯೂ ಒಂದೇ ಆಗಿದೆಯಾದುದರಿಂದ ಸಾಕಲ್ಯತಿಳಿಯದು. ಯಾಕೆಂದರೆ. ಹಾಗಾದರೆ ಈ ಪರಿಗಣನೆ ಮಾಡಿದ್ದೀರಲ್ಲಾ ಎಂದರೆ– ಈ ದೇವ ದೈತ್ಯರ ಅಂಗ ದೇಹಾವ್ಯಕ್ತ ಅನಿರುದ್ಧ ದೇಹಾದಿಗಳು ಕೂಡ ಸಾಂಶಗಳಾದದ್ದು ಚಿಂತಿಸಲಿಕ್ಕೆ ಪರಮ ಅಶಕ್ಯವು. ದೇವ ದೈತ್ಯರ ಲಿಂಗ ದೇಹಾದಿಗಳು ಅನಂತ ಸಾಂಶಗಳೆಂಬುದರಲ್ಲಿ ಜೀವಾಖ್ಯ ಸುಳಾದಿಯಿಂದ ತಿಳಿಯತಕ್ಕದ್ದು.

ಆಕ್ಷೇಪವು :– ಅಜಾಗಲಸ್ತನ ದೃಷ್ಟಾಂತದಿಂದ ಲಕ್ಷ್ಮೀ ಮುಕ್ತಾಮುಕ್ತ ಬ್ರಹ್ಮಾದಿ ಕಲಿಪರ್ಯಂತ ಕ್ರಿಯೆಗಳು ವ್ಯರ್ಥವಾದಾಗ್ಯೂ ಇರುವುದು ಸತ್ಯವಷ್ಟೆ– ಅದರಲ್ಲಿಯೂ ಅಂತರ್ಗತ ಹರಿಯ ಚೇಷೆಗಳನ್ನು ಚಿಂತಿಸಿದರೆ ಮುಂಚೆ ಶ್ರೀ ಹರಿಯನ್ನು ನೀಚ ಪುರುಷನೆಂತಲೂ, ಅವನೆ ತನಗೆ ತಾನೆ ದ್ವೇಷಿಯಾಗಿ ನೀಚ ಕ್ರಿಯಾರೂಪನಾಗಿ ಶಾಶ್ವತ ಶತ್ರು ಎಂತ ಪ್ರಥಮತಃ ಚಿಂತಿಸಿದ ಹೊರತು ಕಲಿಯನ್ನು ನೀಚನೆಂದು ಹೇಳುವುದು ಹ್ಯಾಗೆ, ಬ್ರಹ್ಮಾದಿಗಳನ್ನು ಉತ್ತಮರು ಎಂತ ಹ್ಯಾಗೆ ಹೇಳಬೇಕು.

*"ನಚ ಪುನರ್ವೈಷಮ್ಯಾದ್ಯಾ ಸಾ ತೇನ ದೋಷಃ । ತಾದೃಶ ವೈಷಮ್ಯಾದೇರುಪಲಭ್ಯಮಾನತ್ವಾತ್ ।।" ಎಂತ ಸೂತ್ರ ಭಾಷ್ಯ. ಅಂದರೆ ಅದು ಸತ್ತಾಪ್ರದ ಭಗವದ್ರೂಪನ ಚೇಷ್ಟೆಯಾದುದರಿಂದ ಈ ಕಲಿಯ ಸ್ವರೂಪವಾದ ತನ್ನ ದ್ವೇಷಿಯ ವೇಷಧಾರಿಯಾದ ಶ್ರೀಹರಿಗೆ ಅಚಿಂತ್ಯ ವಿಚಿತ್ರ ಶಕ್ತಿ ಮಹಿಮೆಯಿಂದಲೇ ಅಂಧಃ ತಮಸ್ಸಿನಲ್ಲಿ ಕೊಡಾ ಕಾದ ಕಂಚಿನ ಅಗ್ನಿಯಂತೆ ಕಲಿಗೆ ಅತಿ ವಿರುದ್ಧ ಪೂರ ಸುಖದಿಂದ ಕ್ರೀಡಿಸಿಕೊಂಡಿದ್ದಾನೆ. – ಸ್ವಭಾವ ಯೋಗ್ಯ ಕರ್ಮಗಳಲ್ಲಿ ಶ್ರೀ ಹರಿಯೇ ದುಷ್ಕರ್ಮನಾಗಿ ಇದ್ದಾನೆ. ಸುಳಾದಿ:*

*"ಹರಿ ಬಿಂಬನಾದೊಡೆ ಸಮಸ್ತ ಜೀವರ್ಗೆ*
*ನರಕ ಮುಕುತಿಯೆಂಬ ಭೇದವ್ಯಾತಕೆ ?*
*ನಿರಂತರ ಸುಖವೇ ಅಥವಾ ದುಃಖವಾದರೂ*
*ತೆರವಿಲ್ಲದೆ ಅನುಭವಿಸ ಬೇಕಾದದು ।*
*ಧರೆಯೊಳು ಈ ಬಗೆ ಸುಖ ದುಃಖ ಸಮವ್ಯಾಕೆ!"* ಎಂತಲೂ

ದುಃಖಾನುಭವ ಕೊಟ್ಟ ಬಳಿಕ ಯಾವ ಭಾಗ್ಯಕ್ಕೆ ಶ್ರೀ ಹರಿಯು ಜೀವರಲ್ಲಿ ಕೂತಿರ ಬೇಕು ಎಂದರೆ – ಮುಂದಿನ ಮಾತು. "ಹರಿಬಿಂಬನ್ಯಾತಕೆ ತಮ್ಮ ತಮ್ಮ ಸ್ವಾತಂತ್ರ್ಯ"

*ಪರವಾಗಿ ಕರ್ಮವ ಮಾಳ್ಪವರೆಂದನಬೇಕು ।*
*ಸರಿಯೇನೋ ಈ ಮಾತು ಸತ್ಯವಾದರೆ ಕೇಳಿ*
*ಎರಡಾರು ಸ್ತೋತ್ರದಲ್ಲಿ ಗುರು ಮಧ್ವ*
*ರಾಯರ ವಾಕ್ಯವೇ ಉಂಟು । "ನ ಚ ಕರ್ಮ ವಿಮಾ" ಎಂದು*

ಅಂದರೆ ಕರ್ಮಗಳು ವಿಮಾ ಎಂದರೆ ಅಜ್ಞಾನ ಮಲ ಅಂದರೆ ಪುಣ್ಯ ಪಾಪಗಳು ಧರ್ಮಾಧರ್ಮ ರೂಪವಾಗಿ ಸರ್ವವೂ ಜಡವಾದುದರಿಂದ ಚೇತನಗಳು ಕೂಡಾ ಅಸ್ವಾತಂತ್ರ್ಯಗಳಾದುದರಿಂದ ಶ್ರೀ ಹರಿಯುನ್ನು ಹೊರತು ಜಗತ್ತು ಅಲಗಲಾಡಲಾರದು. ಮುಂದಿನ ಮಾತು

ಸುರನರೋರಗ ತಲೆತೂಗತಲಿವೆ ಜವಿಗೂಡದಂತೆ ಅವರವರ ಕರ್ಮ ಹರಿತಾ ಪ್ರೇರಿಸಿ ಮಾಡಿಸುವನು. ಇಂಥ ಪರತತ್ವಾಪರತತ್ತ್ವ ತಿಳಿದು ಕೊಂಡಾಡಲು ನಿರಯದೂರನಾಗಿ ಶೇರುವ ಸದ್ಗತಿಗೆ ಉರಗಶಾಯಿ ನಮ್ಮ ವಿಜಯ ವಿಠಲರೇಯ ಸರ್ವರೊಳಗಿಪ್ಪ ತದ್ಭಿನ್ನ ತದ್ಗತನೋ ॥ ೪॥

ಏಕೆ:– ಎಲ್ಲ ಹರಿ ಬಿಂಬನಾಗಿದ್ದರೆ ನಿಂದೆ ಕರ್ಮ ಇಲ್ಲದೇ ಹೋಯಿತೆಂಬ ವಾರ್ತೆ ಉಂಟಾದದ್ದೇನೋ ॥ ಅಂದರೆ ತಾನೇ ತನ್ನ ಅರ್ಚಿಪನು ದ್ವೇಷಿಯು ಆಗಿರಬೇಕು ಎಂತ ಅರ್ಥವು. ಮುಂದಿನ ಮಾತು "ಬಲ್ಲಿದ ಹರಿಮೂರ್ತಿಯ ಬಿಂಬ ಚೇಷ್ಟೆಗೆ ಮಾತು ಸಲ್ಲುವುದೋ ಸ್ವಸ್ವಯೋಗ್ಯ

ವಂದನೆಗಳು, ಇಲ್ಲಿ ಪ್ರಮೇಯ ಕೇಳು ಮುಕುತಿ ಬ್ರಹ್ಮಾದಿಗಳಿಗಾ ಕಲ್ಯಾದಿಗಳು ತಮೋಯೋಗ್ಯರೆಂಬೋದೇ ನಿಜವೋ ಫುಲ್ಲ ಲೋಚನ ಇವರ ಸ್ವಭಾವ ಗುಣ ಕರ್ಮ ಬಲ್ಲ ಪ್ರಬಲವಂತ – ಅದರಂತೆ ಚಲಿಸಿ ಹೊಲ್ಲೆವಲಿತೆಗಳ ಎಲ್ಲ ಜೀವರಿಗುಳಿಸಿ ಕಡೆಗೆ ಎಲ್ಲೆಲ್ಲಿ ಇರುವರ ತಾನು ಸಂಗಡಾಲಿದ್ದು ಅಲ್ಲೆಕೊಡೋ (ಯದು) ಪೊಂದಿಸುವ ಸಮರ್ಥ, ಎಲ್ಲಿಂದ ಒಳಗೆ ಪೊಕ್ಕು ಅಂದಿನಾರಭ್ಯವಾಗಿ ನಿಲ್ಲದೆ ಕರ್ಮಗಳು ಮಾಡುತಿಪ್ಪ" ಎಂದರೆ, ಸೊಲ್ಲು ಮೆಚ್ಚುವುದೆಲ್ಲ ಅನಾದಿಯಿಂದ ಬಂದದ್ದಲ್ಲದೆ ಇದು ಮಧ್ಯದಲ್ಲಿ ಬಂದದ್ದುಂಟೆ। ಎಲ್ಲಕ್ಕೂ ಹರಿ ತಾನೆ ಚೇಷ್ಟಾಪ್ರದನಾಗಿದ್ದು, ಬಲ್ಲನುಕಾಣೋ ಸುಖ ದುಃಖಗಳು ಬೇರೆ ಹುಲ್ಲು ಮೊದಲಾದ ಅಣು ಮಹತ್ತುಗಳಷ್ಟು ಅಲ್ಲಾಡುವುದ ನಮ್ಮ ಹರಿ ವ್ಯಾಪಾರವೆನ್ನಿ. । ಬೆಲ್ಲ ಯಾತಕೆ ಸಿಹಿ ಎಂದರೆ ಉತ್ತರ ಉಂಟೆ, ಕಲ್ಲು ಮೃದು ಇಲ್ಲವೆಂದರೆ ಪರಿಹಾಸ್ಯ ಉಂಟೆ ? ಅಂದರೆ ಮುಕ್ತಿ ಯೋಗ್ಯರೇ ಬೆಲ್ಲ–ತಮೋಯೋಗ್ಯರೇ ಕಲ್ಲು "ಮುಂದಿನ ಮಾತು" ಬಲ್ಲವಲ್ಲಭಾ ತನ್ನ ಸ್ವರೂಪ ಕ್ರೀಡೆಯಲ್ಲಿ ಕ್ರೀಡಿಸುತಿಪ್ಪನು. ಗುಣರೂಪ ಕ್ರಿಯಾದಲ್ಲಿ ಉಲ್ಲಾಸನಾಗಿ ಮೊದಲು ಪೇಳಿದ ಕಾಲದೊಳಗೆ. ಅಂದರೆ ಕಮಲ ಪತ್ರ ಪುಷ್ಪಗಳನ್ನು ಸಾವಿರವು ಜೋಡಿಸಿ ಒಂದು ಕೈಯಲ್ಲಿ ಹಿಡಿದು ಇದು ತೀವ್ರದಲ್ಲಿ ಸೂಜಿಯಿಂದ ಕುಕ್ಕದ ಕಾಲದಲ್ಲಿಯೇ ಮೂರು ಸಾವಿರ ಕಾಲವಾಯಿತು. ಒಂದು ಸ್ಪರ್ಶಕಾಲ, ಒಂದು ಛೇದಿಸಿದ ಕಾಲ ಒಂದು ಆ ಸೂಜಿಯ ಕೊನೆ ಮುಂದೆ ಸಾಗಿದ ಕಾಲ, ಹಿಂದೆ ಮತ್ತೊಂದು ದಲ ಸ್ಪರ್ಶ ಕಾಲ ಭೇದನ ಕಾಲ ಬಿಟ್ಟ ಕಾಲ ಈ ಪ್ರಕಾರ ಬಾಯಲ್ಲಿ ಹೇಳತೀರದೆ ಚಿಂತಿಸತಕ್ಕ ಸೂಕ್ಷ್ಮ ಕಾಲ ಹಿಡಿದು ಕಾಲ ನಾಮಕನಾಗಿ ಅನಾದ್ಯನಂತ ಬ್ರಹ್ಮ ಕಲ್ಪಕ್ಕೂ ಕಾಲನಾಮಕನ್ನ ತಿಳಿಯುವುದಕ್ಕಾಗದು ಎಂತ ಮೊದಲು ಕಾಲದ ಅರ್ಥವು. ಆ ಪರಮ ಸೂಕ್ಷ್ಮ ಕಾಲಗಳು ಕೂಡಾ ಅವ್ಯಾಕೃತಾಕಾಶದ ತನಕ ವ್ಯಾಪ್ತಗಳಾಗಿವೆ. "ಸರ್ವೇ ವ್ಯಾಪ್ತಾ ಮದ್ಧೋತಾಃ" ಎಂತ ಸತ್ತತ್ವರತ್ನಮಾಲಾ. ಸುಳಾದಿ ಮುಂದಿನ ಮಾತು. ಉಲ್ಲಾಸವಾಗಿ ಮೊದಲು ಪೇಳಿದ ಕಾಲದೊಳಗೆ ಎಲ್ಲಿ ನಿಂತಾದರೂ ಹರಿ ಲೀಲೆ ತಿಳಿದವಸಲ್ಲುವನೋ ಸ್ವಸ್ವಯೋಗ್ಯ ಸ್ಥಾಪಕ ಮಲ್ಲವೈರಿ ನಮ್ಮ ವಿಜಯ ವಿಠಲರೇಯ ಎಲ್ಲ ಮಾಡುವ ಮಾಡಿಸುವ ಪ್ರೇರಿಸುವ. "ಜತೆ" ಬ್ರಹ್ಮಾಂಡದೊಳಗೆಲ್ಲ ಬಿಂಬ ಕ್ರಿಯ ತಿಳಿಯ ರಮ್ಯ ಅರಸ ಶೌರಿ ವಿಜಯ ವಿಠಲ ಕಾಣಿವ "ಎಂತ ಬಿಂಬ ಕ್ರಿಯಾ ಸುಳಾದಿ.

ಹಿಂದೆ ಹೇಳಿದ ದೃಷ್ಟಾಂತದಿಂದ ಒಬ್ಬ ಜೀವನ ಶರೀರದಲ್ಲಿ ನವಕೋಟಿ ದೇವತೆಗಳು ಕವಚಗಳ ಪದರಗಳಂತೆ ಅಲುಗಾಡತಕ್ಕವರು ಎನ್ನುವುದಕ್ಕೆ ಪ್ರಮಾಣ:–

***ಈಶಾಧೀನಾಶ್ಚಯೇ ಜೀವಾಃ ಕರ್ತಾರಶ್ಚ ಯಥಾರ್ಹತಃ ।***

ಎಂಬ ಅನುವ್ಯಾಖ್ಯಾನ ಮೊದಲಾದ ಪ್ರಮಾಣಗಳಿಂದ ಸರ್ವ ಜೀವರುಗಳಿಗೆ ಕರ್ತೃತ್ವವನ್ನು ಹೇಳಿದಾಗಲೇ ಪ್ರತ್ಯೇಕ ಪ್ರಮಾಣ ಕೆಲಸವಿಲ್ಲ. ಆದಾಗ್ಯೂ ಸತ್ತತ್ತ್ವರತ್ನಮಾಲಾ :–

"ಸರ್ವ ಪ್ರಾಣಿಷು ಸಂಸಸ್ಥಸ್ಸನ್ ಸರ್ವ ಜೀವ ಚೇಷ್ಟಾ ಪ್ರವರ್ತಕಃ ।" ಎಂತ ಋಜು ಪ್ರಕರಣದಲ್ಲಿ ಪ್ರಾಣದೇವರಿಗೆ ಜೀವ ಚೇಷ್ಟಕತ್ವ ಹೇಳಿದ ಮೇಲೆ ಬ್ರಹ್ಮ ದೇವರಿಗೂ ಜೀವ ಚೇಷ್ಟಕತ್ವವೇ – ಇದೇ ಪ್ರಮಾಣವೇ ಸರಿ, "ಸ್ವಭರ್ತಾಚ ಸದಾವ್ಯಾಪ್ತಾ" ಎಂಬ ಪ್ರಮಾಣದಿಂದ ಸರಸ್ವತೀ ಮತ್ತು ಭಾರತೀ ದೇವಿಯರಿಗೂ ಜೀವ ಚೇಷ್ಟಕತ್ವವನ್ನು ತೋರಿಸಿದೆ.

***"ಪುಷ್ಕರಾಂತ ಸುರಾಸರ್ವೇಪ್ಯಂಶಾನಂತ್ಯಯುತಾಃ ಕ್ರಮಾತ್ ।***
***ಅತೋಹ್ಯಣುನಾಮಪಿಹ್ಯೇಷಾಮನಂತ ದ್ರವ್ಯ ಗೌರವಂ ॥"***

ಎಂತ ನವಕೋಟಿ ಸುರರಿಗೂ ತಾಮ್ರಪರ್ಣೀಯ ಬೃಹತ್ತಾರತಮ್ಯದಿಂದಲೂ ಜೀವ ಚೇಷ್ಟಕತ್ವ ಕೂಡುತ್ತದೆ.

***"ವಾಯುರ್ಹಿ ಬ್ರಹ್ಮತಾಮೇತಿ ತಸ್ಮಾದ್ಬ್ರಹ್ಮೈವ ಸಂಸ್ಮೃತಃ ।"***
ಎಂತ ಋಜು ಪ್ರಕರಣ ಸಿದ್ಧವು.

ಲಕ್ಷ್ಮೀ ವಿಷಯ. "ಸರ್ವಾಕಾರವತೀ ತಸ್ಮಾತ್ತಥಾ ಸರ್ವಾಭಿಧಾಶುಭ ॥ ಏವಂ ಸರ್ವತ್ರಗಾಪ್ಯೇಕ್ಷಾ ನಿರ್ಲೇಪಾಹ್ಯವಿಕಾರಿನೀ ಎಂತಲೂ ಅನಂತ ಶೀರ್ಷಾಕ್ಷೀ ಮುಖ ಪಾದಾದಿ ಸಂಯುತಾ॥" ಎಂತಲೂ "ಸೈವ ಸರ್ವ ಕರ್ತ್ರೀಚ ವಸ್ವಾದಿ ಪ್ರಾಪ್ತಿಕಾ ಸದಾ" ಎಂತ ಲಕ್ಷ್ಮೀ ಪ್ರಕರಣ. ಇತ್ಯಾದಿ ಶೃತಿಗಳಿಂದಲೂ "ಅಹಂ ರುದ್ರೇ ಭಿರ್ವಸುಭಿಶ್ಚರಾಮ್ಯುಹಮಾದಿತ್ಯೈರುತ ವಿಶ್ವದೇವೈಃ" ಎಂಬ ಶೃತಿಗಳಿಂದಲೂ "ಅಹಮೇವ ವಾತ ಇವ ಪ್ರಮಾಮ್ಯಾರಭ ಮಾಣಾ ಭುವನಾನಿ

ವಿಶ್ವಾ'' ಇತ್ಯಾದಿ ಶೃತಿಗಳಿಂದಲೂ ರಮಾದೇವಿಯರು ಜೀವ ಚೇಷ್ಟಕರು. ಶ್ರೀ ನಾರಾಯಣ ಪ್ರಕರಣದಲ್ಲಿ "ಬ್ರಹ್ಮಾದಿ ತನ್ನ ಜಾನೀತಿ ಸಮ್ಯಗ್ವಿಶ್ವ ಕರ್ತೃತಾಂ।'' ಎಂತ ಹೇಳಿ

*"ಅನಂತಾನಂತ ರೂಪಾಣಿ ಕೃತ್ವಾ ಪೃಥುಗನಂತಶಃ ಯಃ ।*
*ಕರ್ಮಾಣಿ ಕುರ್ವಂಶ್ಚ ಶನೈಃ ವಿಕ್ರೀಡ್ಯ ಚ ಪರಸ್ಪರಂ ॥*
*ಸೂಕ್ಷ್ಮ ಸೂಕ್ಷ್ಮತಮೇ ಕಾಲೇಪ್ಯುಪಸಂಹರತೋ ಹರೇಃ ॥*
*ಚಿತ್ರಂ ಸ್ವಾಪೇಕ್ಷಯಾತ್ಯಲ್ಪ ಜಗನಿಯಮನಂ ಮಹತ್ ॥"*

ಎಂತ ಸತ್ತತ್ವರತ್ನಮಾಲಾ

ಅಂದರೆ ಪಿಪೀಲಿಕಾದಿ ಜೀವ ಚೇಷ್ಟೆಗಳಲ್ಲಿಯೂ ಬಹು ಸೂಕ್ಷ್ಮರೂಪಿಯಾದ ಭಗವಚ್ಚೇಷ್ಟೆಯನ್ನು ಬ್ರಹ್ಮದೇವರೂ ಕೂಡ ಸಾಕಲ್ಯೇನ ತಿಳಿಯಲಾರರು. ಕ್ಷಣ ಮಾತ್ರದಲ್ಲಿ ಉತ್ಪನ್ನವಷ್ಟೆ ಸೂಕ್ಷ್ಮ ದ್ರವ್ಯಗಳಲ್ಲಿ ಭಗವತ್ಕ್ರೀಡೆಯನ್ನು ಎರಡು ದೀಪಗಳು ಒದಗುವ ಪ್ರಕಾರ ಉಪಸಂಹಾರವನ್ನು ಶಕ್ತಿ ಇದ್ದ ಮಟ್ಟಿಗೆ ಚಿಂತಿಸತಕ್ಕದ್ದು ಎಂತ ಅರ್ಥವು. "ಈ ಪ್ರಕೃತದಲ್ಲಿ ಭಿನ್ನ ತಿಳಿದು ಹರಿಯ ವಿಚಿತ್ರ ಶಕ್ತಿಗೆ'' ಎಂಬ ಸುಳಾದಿ ಮಾತಿಗೆ ರಮಾ ಬ್ರಹ್ಮಾದಿಗಳ ಚೇಷ್ಟೆಗೆ ಪ್ರಮಾಣವನ್ನು ನಿರೂಪಿಸಿದೆ. ಸುಳಾದಿ:- ಜೀವ ಸಚ್ಚಿದಾನಂದ ಸ್ವರೂಪ ಪರಾಧೀನ ಆವಕಾಲಕ್ಕೂ ಆಗಿಪ್ಪೋನು ಜೀವಾಂಗುಷ್ಟ ವಿಶಿಷ್ಟ ಅಂತರಾತ್ಮ ಜ್ಞಾನಾತ್ಮ ಈ ವಿಧ ಮೂರುತಿಗಳುಂಟು. ಮಿಕ್ಕ ಠಾವಿನಲಿ ತತ್ತ್ವಸ್ಥಾನದಲಿ ಆ ವಿಶ್ವಾದಿಗಳುಂಟು ನಿಬಿಡವಾಗಿ "ಇದು ಸುಳಾದಿಯ ಮೊದಲ ಭಾಗವು.'' ಅಂತರಾತುಮ ಮೂರುತಿ ಜೀವರ ಸ್ವರೂಪದಂತೆ ಇಪ್ಪುದು ಕಾಣೋ ಎಲ್ಲೆಲ್ಲಿ ನೋಡಿದರೂ. ಅಂತ ಇಲ್ಲದೆ ನಿತ್ಯ ಅವರವರ ಚೇಷ್ಟೆಯಂತೆ ವ್ಯಾಪಾರವನ್ನು ಮಾಡಿ ಮಾಡಿಸುತಿಪ್ಪ. ॥ ಅಂದರೆ ಕಾರ್ಯ ಮಾಡುವ ರೂಪಗಳು ಹ್ಯಾಗೆ ಅಪರಿಮಿತವೋ ಅದಕ್ಕಿಂತಲೂ ಅಧಿಕವಾಗಿ ಭೃಹತ್ ರೂಪಗಳ ಧರಿಸಿ ಹರಿ ಕ್ರಿಯೆಗಳೇ ಇಪ್ಪಾದ ಬಳಿಕ ಪ್ರೇರಕ ಲಕ್ಷ್ಮೀ ನಾರಾಯಣನ ಘನತೆರವಾದ ಚೇಷ್ಟೆಗಳು ಆಬ್ರಹ್ಮಾದಿ ಕಲ್ಯಾದಿಗಳ ಸುಕರ್ಮ ದುಷ್ಕರ್ಮಗಳ ಮಾಡಿಸುವ ಕುತೂಹಲ ಯುಕ್ತ ಚೇಷ್ಟೆಗಳು ಮತ್ತು ಆಶ್ಚರ್ಯರೂಪ ಎಂತ ಅರ್ಥವು. ಸುಳಾದಿ ಮುಂದಿನ ಮಾತು. "ಅಂತರಂಗದೊಳಗಿತ್ತ ಮಾಹುತ ಪರಿ ಅನಂತ

ಮೂರಿತಿಗಳೊಂದೇ ಕಾಲದಲ್ಲಿ ನಿಂತು ಕುಳಿತು ಮಲಗಿ ನಾನಾ ಬಗೆಯಿಂದ ಸಂತತ ಸ್ವರೂಪ ಕರಣ ಮಿಶ್ರವಾಗಿ ಭ್ರಾಂತಿಗೋಳಿಪ ಕಾಯಾಂತದಾತ್ಮಕದಲ್ಲಿ ನಿಂತವರೋಳಗಿದ್ದು ಚರ್ಯ ಮಾಳ್ಪ ಲೀಲೆ । ಮುಂತ ತಿಳಿದು ಗುಣಿಸು ಈತನ ನಿರೀಕ್ಷಿಸದೆ ಸಂತರಿಗೆ ಗತಿ ಸೇರುವ ಬಗೆಯಿಲ್ಲ" ಎಂತ ಜೀವ ಸಚ್ಚಿದಾನಂದ ಸುಳಾದಿ ಸಿದ್ಧವು. ಸುಳಾದಿ "ಒಂದೆ ಪ್ರಂಯೋಜನ ಮಾಡಿದರೊಂದರಳು ಜೀವನ ಒಂದು ಚಲನ ಕ್ರಿಯೆ ಒಳಗೆ ಎಂತ ಅರ್ಥವು. ಮುಂದಿನ ಮಾತು" ಇಂದಿರಾ ಪತಿಯುಂಟು ಇಂದಿರೆಯುಂಟು ಒಂದೆರಡು ಗುಣವುಂಟು ಕಾಲ ಪ್ರಕೃತಿಯುಂಟು ವೃಂದಾರಕರುಂಟು ಕರ್ಮಾನುಸಾರದಿಂದ ಗಂಧ ರಸ ರೂಪ ಸ್ಪರ್ಶ ಶಬ್ದವುಂಟು. ಕುಂದದೆ ನಭ ವಾಯು ಅನಲಾಪಾವನಿ ಉಂಟು. ಇಂದ್ರಿಯಗಳುಂಟು. ಇನ್ನೊಂದು ಐವತ್ತು ವರ್ಣಗಳುಂಟು. ಶೃತಿ ಪುರಾಣಗಳುಂಟು. ಒಂದೊಂದು ಕರ್ಮ ಉತ್ಪತ್ಯಾದಿ ಸ್ವಾತಂತ್ರ್ಯ ಉಂಟು. ಪೊಂದಿ ದೈತ್ಯರು ಉಂಟು ಶುಭಾಶುಭಗಳುಂಟು ಒಂದು ಮೊದಲು ಮಾಡಿ ಕಡೆ ಭಾಗ ಪರಿಯಂತ ಸಂಧಿಸಿ ಕೂತಿಪ್ಪವು ಓಂಕಾರಸಹವಾಗಿ ಮಂದನಗದೆ ಇನಿತು ತಿಳಿದು ಪ್ರವರ್ತಿಸಲು ನಂದವಾಗುವುದು ತತ್ತತ್ಕಾಲ ಬಿಡದೆ ಹಿಂದೆ ಮಾಡಿದ್ದೆಲ್ಲಾ ಹರಿತಾನೇ ಮಾಡಿಸಿದನೆಂದು ನಿನ್ನೊಳು ನೀನು ತಿಳಿದು ದುಶ್ಚಿತ್ತ ಬಿಟ್ಟು ಇಂದಿನಾರಭ್ಯ ಅಲಕಾಲ ಮೊದಲು ಮಾಡಿ ನಿಂದಿರದೆಲ್ಲೆಲ್ಲಿ ಆವಾವ ಕರ್ಮವಾಗೆ ಇಂದಿರಾಪತಿ ತಾನು ಸರ್ವಾಧಿಕಾರನಾಗಿ ಛಂದ ಛಂದಾದ ಅಂದ ವ್ಯಾಪಾರ ಮಾಡಿಸುವ ವೊಂದು ಸಂಕಲ್ಪ ಮಾಡಿ ಆವಾಗಲಿಲ್ಲವೆಂದು ಸಂದೇಹದಿ ಸಂದೇಹವಂತನಾಗದಿರು ಮಂದರಧರನೊಲಿದು ಅವರು ಕಲ್ಪಿಸಿದಂದದಿ ಮಾಡುತಿರೆ ಹರಿ ಇತ್ತ ಸ್ವಾತಂತ್ರ್ಯದಿಂದ ಸಹಿತಲಿ ಸರ್ವೋತ್ತಮ ಜ್ಞಾನದಿಂದ ಉದ್ಧರಿಸುವ ಲೇಶ ದೋಷ ಬರಗೊಡ ಯಂದವರಿಗೆ ಜೀಯಾ ವಿಜಯ ವಿಠಲರೇಯಾ ತಂದೆಯಾಗಿ ಭಕ್ತರ ಬಳಿಯಲ್ಲಿ ತಿರುಗುವ ಕಮಲದೊಳಗೆ ಕಮಲ ಇದ್ದಂತೆ ಇರೋ ಹೃತ್ಕಮಲದೊಳಗೆ ವಿಜಯ ವಿಠಲನ ಪೂಜಿಪದೋ॥ ಕಮಲ ಎಂದರೆ ಕೆಸರು. ನಿನ್ನ ಕಣ್ಣಿಂದ ನೋಡಿದ ಎಂಬ ಕರಿ ಉರಗ ಗೋವು ಎಂಬ ಸುಳಾದಿ. ಮುಂದಿನ ತಾಳ – ನದೀ ಜಲಾಧಿಕವಾಗಿ ಬಂದ ಬಂದಂತೇವೆ ನದಿಯ ವಳಗಿದ್ದ ತಗ್ಗು ಮಿಟ್ಟೆ ಪಾಷಣ ಹುದಗಿಪೋಗಲು ಸಂಪೂರ್ಣ ಪ್ರವಾಹದಿ ಅದರೊಳಗೆ ಏನೇನ ಇದ್ದದ್ದೆಲಾ ಬದಿಯಲಿ ನಿಂದರು

ಕಾಣಿಸದಿಪ್ಪದು. ಇದರಂತೆ ವಾಸುದೇವನ ಪಾದ ಪದುಮವ ವದಗಿ ಭಕುತಿಯಿಂದ ಧ್ಯಾನಿಸಲು ನಿರಂತರ ಜ್ಞಾನವೆಗ್ಗಳವಾಗಿ ನಿನ್ನ ಅಂಗದಲ್ಲಿಂದ ಹೋಂದಿಪ್ಪ ಅಜ್ಞಾನ ಅಡಗುವುದು ಮುದದಿ । ಮಾನವ ಈ ಪರಿ ಇದ್ದರೆ ಸಂಸಾರದಲ್ಲಿ ಇರನ್ಯಾಕೆ ನದೀ ಪ್ರವಾಹದಂತೆ ನಿಜ ಜ್ಞಾನ ಸ್ವರೂಪಾಧಿಕವಾಗುವುದೈಯ್ಯ ಲೇಶ ಕಡಿಮೆಯುಂಟೆ ವಿಧಿ ಪತಿ ವಿಜಯ ವಿಠಲರೇಯನ ದಿವ್ಯವಾದ ಮಹಿಮೆಯನ್ನು ಪೊಗಳಿದವನೆ ಧನ್ಯ ॥ ಅಂದರೆ ಶ್ರೀ ಹರಿಯ ಕಣ್ಣಿಂದ ನಾವು ನೋಡೋಣ, ಆತನ ಪಾದದಿಂದ ನಾವು ನಡೆಯೋಣ ಆತನ ಮನಸ್ಸು ಸಕಲ ದೇಹೇಂದ್ರಿಯಗಳಿಂದಲೂ ಶ್ರೀ ಹರಿ ಅಪ್ರಾಕೃತ ಮಹಿಮನ ಹೃದಯದಲ್ಲಿ ಈ ಜೀವನು ಪರಮ ಸೂಕ್ಷ್ಮವಾಗಿ ತಗಲಿಕೊಂಡಿದ್ದಾನಾದುದರಿಂದ ಹೀಗೆ ತಾನು ಮೊದಲಾಗಿ ಸಕಲ ಜೀವ ಜಡಗಳಲ್ಲಿಯೂ ಶ್ರೀಹರಿ ರೂಪವನ್ನಾಗಿ ನೋಡುವವನಿಗೆ ಚಿಂತನಯೇ, ನದಿ ಪ್ರವಾಹದ ಪ್ರಯುಕ್ತ ಜ್ಞಾನಿಗಳು ಮನುಷ್ಯನನ್ನು ಮನುಷ್ಯ ಮಾತ್ರ ಎಂತ ತಿಳಿದು ಕೊಂಬುವರಲ್ಲರಾದುದರಿಂದ ನದೀ ಪಾತ್ರದೊಳಗಿನ ಪಾಷಾಣಗಳು ಪೂರ್ಣ ಚಿಂತೆಯ ಪ್ರವಾಹದಲ್ಲಿ ಕೆಳಗೆ ಹೇಗೆ ಅಡಗುವುದೋ ಹಾಗೆ "ವಾಜಿ ಕಟ್ಟಿದ ತೇರು ಬಂದರದರ ಪೆಸರು ವಾಜಿಗೆ ಪೇಳರು ಬಂತೆಂಬೋರು ತೇರು" ಎಂತ ಮಾನಸ ಪೂಜೆ ಮಾಡು ಎಂಬ ಸುಳಾದಿ ಪ್ರಕಾರ, ಅಮುಖ್ಯವಾದ ಜಗತ್ತಿನ ಜ್ಞಾನವೇ ಮರೆಯಾಗಿ "ಹೃದಯ ಗ್ರಂಥಿ ಕರಣಾಭ್ಯೋ ಬಂಧಃ" ಎಂಬ ಏಕಾದಶ ತಾತ್ಪರ್ಯ ಮೂಲ ವಚನದ ರೀತಿಯಿಂದ ಈ ಚಿಂತನೆಯ ಬಾಹ್ಯಾಂತಃಕರಣವನ್ನು ದಹಿಸಿಬಿಡುವುದಕ್ಕೂ ಸ್ವರೂಪಾಂತಃಕರಣವನ್ನು ಅಭಿವೃದ್ಧಿ ಮಾಡುವುದಕ್ಕೂ ಕೇವಲ ಮುಖ್ಯ. ಈ ಚಿಂತನೆಯಿಂದ ಈ ಪುರುಷನು ಉನ್ಮತ್ತನಾಗದೆ "ನಿನ್ನ ಪೂಜಿಪುದಕೆ ಅನುಕೂಲ ನಾನಾದೆ" ಎಂತ ಈ ಸುಳಾದಿಯ ಹಿಂದಿನ ತಾಳದ ಮಾತಿನ ಪ್ರಕಾರ ವೈರಾಗ್ಯದ ಅನುಭವವೇನೆಂದರೆ, ಜೀವಸ್ವರೂಪಿ ಚಿದಾನಂದಾದಿ ಗುಣ ಧರ್ಮಗಳನ್ನು ವ್ಯತಿರಿಕ್ತಾಶೇಷ ಜಡಗಳಲ್ಲಿ ರಥದಲ್ಲಿ ಕೂತಂಥಾ ಶ್ರೀಹರಿಯ ಅರ್ಚಕಗೆ ಆ ರಥ ಹ್ಯಾಗೆ ತಾನಲ್ಲವೋ ಆ ರಥವನ್ನು ಸೆಳೆಯುವ ಕರ್ಮ ಹ್ಯಾಗೆ ತನ್ನದಲ್ಲವೋ ಆ ರಥವನ್ನು ಸೆಳೆಯುವ ಪ್ರಜೆಗಳ ಹಾಗೆ ಕರ್ಮವನ್ನು ನಡಿಸತಕ್ಕ ನವಕೋಟಿ ತಾತ್ವಿಕರು ಈ ಅರ್ಚಕನ ಅಧೀನರಲ್ಲವಾದುದರಿಂದ ರಥವನ್ನು ಸೆಳೆಯುವ ಹಗ್ಗವೆಂಬೋ ಮನಸ್ಸು

ಮೊದಲಾದ ಇಂದ್ರಿಯಗಳಿಗೆ ಅರ್ಚಕನು ಹ್ಯಾಗೆ ದೂರನೋ ಹಾಗಾಗಿ ಇಂತಹ ಸರ್ವರೂಪನು ನೀನೆಂದು ಮಹಾಮಹಿಮನ ಭಕ್ತಿ ಪೂರ್ವಕವಾಗಿ ಇವನು ನಿರುಪಾಧಿಕ ಆರಾಧನೆಯ ದೀಕ್ಷೆಯಲ್ಲಿ ಬದ್ಧಕಂಕಣನಾಗ ಬೇಕು. ಇದೇ ವೈರಾಗ್ಯ ಭಾವ.

ಹಾಗಾದರೆ ಈ ಜ್ಞಾನ ಬಂದ ಬಳಿಕ ಇವನ ಇಚ್ಛಾನುಕೂಲ ದುರ್ವಿಷಯಗಳನ್ನು ಅನುಭವಿಸಿದರೆ ಏನು ಬಾಧಕ, ಅಥವಾ ಅವಧೂತನೋಪಾದಿಯಲ್ಲಿ ಸರ್ವವನ್ನೂ ಪರಿತ್ಯಾಗ ಮಾಡಲಿ. ಈ ಅಧಿಕಾರಿಗೆ ಗೃಹಸ್ಥಾಶ್ರಮ ಧರ್ಮವೇ ಶುದ್ಧ ಬ್ರಹ್ಮಚರ್ಯ ನಿಯಮ ಯಥಾರ್ಥವೆಂಬ ಹರಿ ವಾಯುಗಳ ಶಾಸನವಿದ್ದ ಕಾಲದಲ್ಲಿಯೂ "ಅಘಬದ್ಧ ಮಾರ್ಗವ ವಲ್ಲೆ ನಿನ್ನ ಇದಿರೊಳಗವರು ಸಲ್ಲವಭಿಮಾನಿಗಳು ತದ್ಗತರಾಗಿಹರು । ಎಲ್ಲರ ಕಾರುಣ್ಯ ಪಡೆದು ಭಕುತಿಯಿಂದ" ಎಂತ ಸುಳಾದಿ ಉಕ್ತಿ ಇದ್ದರೂ ಶಾಸನವನ್ನು ತಪ್ಪಿ ನಡೆದರೆ ದ್ರೋಹಿಯಾದೇನೆಂಬ ಭಯದಿಂದ ಪ್ರವರ್ತಿಸಬೇಕು. "ಕ್ಷಿತಿಯೊಳು ಕೇವಲ ಕಲಿಗೆ ಆಶ್ರಯವೆನ್ನಿ" ಎಂತ ಸುಳಾದಿ. ಹರಿಗುರುಗಳ ಶಾಸನ ಅತ್ಯುತ್ತಮವಾದಾಗ್ಯೂ ವ್ಯಾಪಾರವು ಕಲಿಯ ಅಧೀನವಾದದ್ದೆ. ಆದುದರಿಂದ ರಥದಲ್ಲಿ ಇದ್ದ ಅರ್ಚಕನ ಆರಾಧನೆಯನ್ನು ಬೆಕ್ಕಿನಂತ ಕಲಿಯು ಹೊಂಚುಹಾಕಿ ಕೆಡಿಸದೆ ಬಿಡನು. ಆದುದರಿಂದ ಗ್ರುಹಸ್ಥಾಶ್ರಮದ ವ್ಯವಸ್ಥೆ ಏನೆಂದರೆ, ಪರಮ ದುರ್ಲಭನಾದ ಸುಜನ ಮನುಷ್ಯನು ಕರ್ಮಾದಿಗಳೆಂಬ ಮಹಾಸಾಮರ್ಥ್ಯದಿಂದ ಬಲಿಷ್ಟ ಶ್ರಮಗಳನ್ನು ಒಂದು ಕ್ಷಣಮಾತ್ರದಲ್ಲಿ ಅದಕ್ಕೆ ತಕ್ಕ ಬಲಿಷ್ಟರ ಬಲವಿದ್ದು ಆಗಿನಮಟ್ಟಿಗೆ ಗೆದ್ದ ಕಾಲಕ್ಕೂ ಪುನಶ್ಚ ಆ ಶತ್ರುಗಳು ಈ ಪರದೇಶಿಯನ್ನು ಕಪಿಯಂತೆ ಶೆಳಕೊಂಡು ಹೋಗಿ ಈ ಸಾಧುಜೀವಿಯಿಂದ ತನ್ನ ಪಾದ ಸೇವೆ ಮಾಡಿಸಿಕೊಂಬುವುದೇ ನಿಶ್ಚಯವು. ಆದುದರಿದ ವಿವೇಕಿಯಾದ ದುರ್ಬಲನು ಈ ಶತ್ರುಗಳ ಮಹಾಪಟ್ಟಣದಲ್ಲಿ ಹೋಗಿ ಅಡಗಿದ್ದು ಕ್ರಮದಿಂದ ಮೆಲ್ಲ ಮೆಲ್ಲಗೆ ಅವರ ಬುದ್ಧಿ ಭ್ರಮೆ ಹುಟ್ಟಿಸಿ ಬೇರಾಕುಯಿದು ಓಡಿಸಿದ ಹಾಗೆ ಗೃಹಸ್ಥಾಶ್ರಮ ಧರಿಸಿ ಈಗ ಹೇಳಿದ ಸೂಕ್ಷ್ಮ ವಿರಕ್ತಿ ಭಾವ ಸಾಧಿಸಿ ರಥದ ವಳಗಿನ ಅರ್ಚಕನಂತೆ ಆಗಬೇಕು. ಪ್ರಮಾಣಃ-

*ಷಟ್ಸಪತ್ನಾನ್ ಜಿಗೀಷುಶ್ಚ ಗೃಹೀನಿರ್ವೃತ್ಯ ಸಂಯತೇತ್ ।*
*ಯಥಾ ದುರ್ಗಂ ಸಮಾಶ್ರಿತ್ಯ ದುರ್ಬಲೋ ಜಯತಿಹ್ಯರೀನ್ ॥*

*ಕ್ರಮಾಜ್ಜಿಗೀಷುರ್ವಿಷಯಾನ್ ಶನ್ಯೈಃ ಕ್ಷೇಮಾಯ ಕಲ್ಪ್ಯತೇ ।*
*ಕ್ಷೇಮಾಯ ಮೋಕ್ಷಾಯ ಸಮರ್ಥೋ ಭವತೀತಿ ತದ್ವ್ಯಾಖ್ಯಾನೋಕ್ತಿ॥*
*ತೂರ್ಣಂ ವೈಜಯತಃ ಪುಂಸಃ ಸಮಾಕರ್ಷತಿ ವೈಬಲಾತ್ ।*
*ತಾನಿ ಜಿತ್ವಾ ಕ್ರಮೇಣೈವ ಯೋಗೀಯೋಗಿತ್ವಮಾಪ್ನುಯಾತ್ ॥*

ಎಂತ ಶಾಂಡಿಲ್ಯತತ್ತ್ವ ಸಿದ್ಧವು.

ವಿರಕ್ತಿ ಭಾವವನ್ನು ನಿರೂಪಿಸಿದೆ.

## ಭಗವದ್ರೂಪ ಚಿಂತನ

### (ಜೀವಾಂತರ್ಯಾಮಿಯಾಗಿ ೮೦೭೨೫ ಲಕ್ಷ್ಮೀ ಸಹಿತ ನರಸಿಂಹ ರೂಪಗಳು)

ಉಪಸನಾರ್ಥವಾಗಿ ಭಗವದ್ಭಕ್ತಿ ದಾರ್ಢ್ಯಾರ್ಥವಾಗಿ ತಿಳಿದಷ್ಟು ಭಗವದ್ರೂಪವನ್ನು ಹೇಳುತ್ತೇನೆ.

ಜೀವನ ಸ್ವರೂಪವನ್ನು ಪೂರ್ವದಲ್ಲಿ ನಿರೂಪಿಸುವುದರಲ್ಲಿ ಜೀವನ ಸ್ವರೂಪಭೂತವಾದ ಜೀವನ ಹೃದಯ ಕಮಲದಲ್ಲಿ ಜೀವನಸ್ವರೂಪಾಂಗುಷ್ಠ ಪರಿಮಿತ ವಾಸುದೇವ ಮೂರ್ತಿಯೇ ವಳಗಿನ ಬಿಂಬರೂಪೀ ಶುಕ್ಲ ವರ್ಣ "ಕೋಮಲಾ ಸ್ವಸ್ವರೂಪಕಂ" ಏಂತ ಮುಖ್ಯ ತತ್ವ.

*"ಶ್ವೇತೋತ್ಯಂತ ಸುನಿರ್ಮಲಃ ।*
*ಶ್ವೇತಾಬ್ಜಸ್ಥಂ ಪದ್ಮಕರಶ್ಚಕ್ರ ಶಂಖ ಗದಾಧರಃ ।*
*ಸರ್ವ ದೇವೈಃ ಸ್ತೂಯಮಾನೋ ಜೀವ ಹೃತ್ಕಮಲ ಸ್ಥಿತಃ ॥"*

ಎಂತ ಜೀವಾಂತರ್ಯಾಮಿಗಳಾಗಿ ಬ್ರಹ್ಮಾದಿ ಸಕಲ ಮುಕ್ತ ದೇವತೆಗಳೂ ಉಂಟು ಎಂಬ ಜೀವಾಖ್ಯ ಸುಳಾದಿಗೆ ಈ ಪ್ರಮಾಣ ಒಂದೇ ಆಧಾರವಾಗಿದೆ ಹೊರ್ತು ಅನ್ಯತ್ರ ಗ್ರಂಥ ಸಮ್ಮತಿಗೆ ಅವಕಾಶವಿಲ್ಲ. ಸುಳಾದಿಯಲ್ಲಿ ಸ್ಪಷ್ಟವಾಗಿ ಹೇಳಿರುವುದರಿಂದ ಪ್ರಕಾಶ ಸಂಹಿತೆಯನ್ನು ಶೋಧಿಸಬೇಕು. ಸುಳಾದಿ : ಅಧಿದೈವ

ಮೊದಲಾದ ಮುಕ್ತ ಜನರ, ಅದೇ ತನ್ನ ಸ್ವರೂಪ ಅವಲಂಬಿಸಿದೆ. " ಎಂಬ ಸುಳಾದಿ ವಚನವೇ ಸಿದ್ಧಾಂತವು. ಮತ್ತು ಪರಮಾತ್ಮನ ಸ್ವರೂಪ ಸಾರಭೋಜನದ ಹಾಗೆ ಲಕ್ಷ್ಮೀ ಸ್ವರೂಪ ಸಾರವನ್ನ ಈ ಮುಕ್ತ ಸಾತ್ವಿಕರ ಸ್ವರೂಪ ಸಾರರೂಪವಾದ ಈ ಪ್ರಕಾರ ತ್ರಿವಿಧ ಭಕ್ಷ್ಯ ಭೋಜ್ಯಗಳನ್ನು ಶ್ರೀ ಹರಿಯು ಸಾಕ್ಷಾತ್ತು ಭೋಜನ ಮಾಡುವುದರಿಂದಲೂ ಅಂಗ ಸಾಯುಜ್ಯದ ಮಹಾಮಹಿಮೆಯಿಂದಲೂ, ಈ ದಿಂದಲೂ ಸುಳಾದಿ ವಚನಕ್ಕೆ ನಮಗೆ ವಿಶೇಷ ಪ್ರಮಾಣ ದೊರಕಲಿಲ್ಲ. ಒಂದು ಅರ್ಥ ಸಂಕೋಚ ಮಾಡಕೂಡದು. ಜೀವಾಂಗುಷ್ಟ ಮೂರ್ತಿಗೆ ಪ್ರಮಾಣ –

*" ದೇಹಾಂಗುಷ್ಟಮಿತೋ ದೇಹೇ ಜೀವಾಂಗುಷ್ಟ ಮಿತೋ ಹೃದಿ ।*
*ಜೀವಸ್ಥಃ ಸ್ತು ವಿಜ್ಞೇಯೋ ಜೀವಾದ್ಭೇದೇನ ಮುಕ್ತಯ । "*

ಎಂತ ಕಾಠಕ ಭಾಷ್ಯ ಸಿದ್ಧ.

ಈ ದೇವರು ಕರ್ಣಿಕೆಯ ಮೇಲಿನ ಪ್ರಭುವಾದುದರಿಂದ ಆ ಕರ್ಣಿಕೆಯ ಬುಡದಲ್ಲಿ ಜೀವಂಗುಷ್ಟಾಗ್ರ ಪರಿಮಿತ ಸಂಕರ್ಷಣರೂಪವು ಆ ದೇವರ ಕೆಳಗೆ ಮುಂಬಾಗದಲ್ಲಿ ಅದೆ. ಈ ಎರಡು ರೂಪಗಳ ಹಿಂದೆ ಜೀವನ ಸ್ವರೂಪ ಪ್ರಾದೇಶ ಪರಿಮಿತ ಪುರುಷನಾಮಕ ನಾರಾಯಣನು ಜೀವನ ಕರ ಚರಣಗಳಿಗೆ ಸಮಾನಾಕರವಾಗಿ ಈ ಮೂರು ರೂಪಗಳು ಜೀವ ಹೃದಯದಲ್ಲಿ ಎದುರಿಗೆ ಅಭಿಮುಖದಿಂದ ಪ್ರಾದೇಶ ಮಾತ್ರ ನಿಂತಿರೋಣ. ಮುಂದಿನ ಎರಡು ರೂಪಗಳು ಕೂತು ಇರೋಣ ಈ ಮೂರು ರೂಪ ಹೊರತು ಜೀವನ ನಖ ಶಿರ ಪರ್ಯಂತ ಸ್ತ್ರೀ ಜೀವರಲ್ಲಿಯೂ ಪುರುಷ ಜೀವರಲ್ಲಿಯೂಅ ಅದೇರೀತಿ ಇದು ಒಂದು ಸಮಾನಾಕಾರ ಭಗವದ್ರೂಪ. ಇದು ಜೀವಗೆ ಅಭಿಮುಖವಲ್ಲ. ಆ ಮೂರು ರೂಪಗಳು ಹೊರತು ಜೀವಾಂತರ್ಯಾಮಿ ರೂಪಗಳು ಒಂದೂ ಅಭಿಮುಖಗಳಲ್ಲ. ಹಾಗಾದರೆ ಅಲ್ಲಿ ಎಷ್ಟು ರೂಪವೆಂದರೆ, ಎಂಬತ್ತು ಸಾವಿರದ ಏಳುನೂರ ಇಪ್ಪತ್ತೈದು (೮೦೭೨೫)ನರಸಿಂಹ ರೂಪಗಳಿವೆ. ಪ್ರಮಾಣ :

*"ಅಶೀತಿ ಸಹಸ್ರ ಸಪ್ತಶತ ಪಂಚಸುವಿಂಶತಿರೂಪಂ ಧೃತ್ವಾ ನರಸಿಂಹೋಪ್ಯಸ್ತಿ ಜೀವಸ್ವರೂಪಕೆ ॥ ಜೀವಸ್ಯಾಗಮ ಮೃತ್ಯೋನಾಂ ಮೃತ್ಯುರೂಪೋಪ್ಯಹನೀಶಂ ॥"* ತತ್ವ ಎಂತ ಮುಕ್ತಿ ಸಿದ್ಧವು.

ಹರಿಕಥಾಮೃತಸಾರದಲ್ಲಿ ಜಗನ್ನಾಥದಾಸರು ವಿಸ್ತಾರವಾಗಿ ಈ ಅರ್ಥವನ್ನು ಹೇಳಿದ್ದಾರೆ. ಪರಮ ಸೂಕ್ಷ್ಮ ಲಿಂಗದೇಹದಲ್ಲಿ "ಏಕೈಕಸ್ಮಿನ್ ಪರಿಚ್ಛೇದೇಪ್ಯನಂತಾಃ ಪರಮಾಣವಃ" ಎಂತ ಜಡದಲ್ಲಿಯೂ ಅಚಿಂತ್ಯ ಶಕ್ತಿ ತೋರುವಾಗ ಅನಂತ ರೂಪವುಳ್ಳ ಶ್ರೀ ಹರಿಯಲ್ಲಿ ಇದು ಸರ್ವಥಾ ಆಶ್ಚರ್ಯವಲ್ಲ. ಈ ತದಾಕರ ಮೂರ್ತಿಯು ಪ್ರದ್ಯುಮ್ನ ಮೂರ್ತಿಯು, ಅನಂತರ ಜೀವನಾಮಕ ಅನಿರುದ್ಧನು. ಸ್ವಯಂ ಕೇಶವಾದಿ ಚತುರ್ವಿಂಶತಿ ರೂಪಗಳ ಧರಿಸಿ ಬ್ರಹ್ಮ ರುದ್ರಾದಿ ತಾತ್ವಿಕರ ನಾಮದಿಂದ ಸ್ವರೂಪದ ನೇತ್ರ ಶ್ರೋತ್ರಾದಿಗಳಲ್ಲಿ ಕುಳಿತು ಇದ್ದಾನೆ. ಪ್ರಮಾಣ :-

*"ಜೀವಾಂಗುಷ್ಠ ಪ್ರಮಾಣೇನ ವಾಸುದೇವಃ ಸುನಾಮಕಃ ।*
*ಅಂತರಾತ್ಮಾ ಬಿಂಬರೂಪೀ ಮುಕ್ತೌ ಬಿಂಬತ್ವಮಾಪ್ಯತೆ ।*
*ಜೀವಾಂಗುಷ್ಠ ಸಂಕಾಶೋ ಮೂರ್ತಿಮಾನ್ ಜೀವರೂಪಕೆ ॥*
*ಜೀವಾಕಾರೋಸ್ತಿ ಪ್ರದ್ಯುಮ್ನೋ ಜೀವೇಯಂ ಜೀವನಾಮಕಃ ।*
*ಜೀವ ಸ್ವರೂಪೇಂದ್ರಿಯೇಷು ನಿಯಂತಾಹ್ಯನಿರುದ್ಧಕಃ॥*
*ಅಶೀತಿ ಸಹಸ್ರ ಸಪ್ತ ದಶ ಶತ ಪಂಚಸು ವಿಂಶತಿ*
*ರೂಪಂ ಧೃತ್ವಾ ನಾರಸಿಂಹೋಪ್ಯಸ್ತಿ ಜೀವ ಸ್ವರೂಪಕೆ ॥"*

ಎಂತ ಮುಕ್ತಿ ತತ್ತ್ವವು

ಸುಳಾದಿ:-

*ಜೀವಾಂಗುಷ್ಠಾಗ್ರ ಮೂರ್ತಿ ಜೀವಾಂಗುಷ್ಠ ಮೂರ್ತಿ*
*ಜೀವಾಕಾರ ಮೂರ್ತಿ ಪುರುಷ ಮೂರ್ತಿ ।*
*ಜೀವೇಂದ್ರಿಯಗಳಲ್ಲಿ ತತ್ಸ್ಥಾನವಾದ*
*ಅವಾವರೂಪದಂತೆ ಇಪ್ಪ ಮೂರ್ತಿ ಎಂತಲೂ*
*ಶ್ರೀ ವಾಸುದೇವ ಸಂಕರ್ಷಣ ಪ್ರದುಮ್ನ*
*ಜೀವನಾಮಕ ಅನಿರುಧ್ಧ ಮೂರ್ತಿ ಎಂತ ಜೀವಾಖ್ಯ ಸುಳಾದಿ ॥*

"ಜೀವ ಪ್ರಾದೇಶ ಮೂರ್ತಿ ಜೀವಾಕಾರ" ಎಂತ ಹರಿಕಥಾಮೃತಸಾರ ಸಿಧ್ಧ.

ಈ ಸರ್ವರೂಪಗಳು ಲಕ್ಷ್ಮೀ ಸಹಿತವು "ದೇವೀಸಹಿತವಾಗಿ ಇನಿತು ಒಪ್ಪುವ" ಎಂತಲೂ ಹೇಳಿದ್ದಾರೆ. ಶುಕ್ಲ ವರ್ಣಗಳು (ಸಾತ್ವಿಕ ಜೀವರಲ್ಲಿ?) ರಾಜಸ ಜೀವರಲ್ಲಿ ರಕ್ತ ವರ್ಣಗಳು, ತಾಮಸ ಜೀವರಲ್ಲಿ ಕರಿಯ ವರ್ಣಗಳು. ಕುಬೇರನಾಮಕ ಹರಿ ಎಂತ ಹರಿಕಥಾಮೃತಸಾರ ಸಿಧ್ಧವು. ಈ ಸ್ಥೂಲದೇಹದಲ್ಲಿಯಾದರೋ ಎಂಟರಲ್ಲಿ ಒಂದು ಭಾಗ ತೇಜಸ್ಸು ಬೆರೆಸಿಕೊಂಡು ಇದೆಯಾದುದರಿಂದ, ವಿದ್ಯುತ್ಪಾಶದ ಹಾಗೆ ಜಡ ಜ್ಯೋತಿರ್ಮಯಗಳಾಗಿ ಸಿಧ್ಧವಾಗಿರುವ ನಾಡಿಗಳು, ಮೂವತ್ತುನಾಲ್ಕು ಕಮಲಗಳು– ಆ ಕಮಲಗಳಲ್ಲಿ ಮಂಡಲಗಳು, ಪ್ರಣವಾಕಾರ ವಿಮಾನಯುಕ್ತ ದಿವ್ಯ ಸೂರ್ಯ ಪ್ರಕಾಶವಾಗಿ ವಿದ್ಯುತ್ಪಾಶ ಸಂಬಂಧ ಜಡ ತೇಜೋ ದ್ರವ್ಯಗಳ ಮಧ್ಯದಲ್ಲಿ ನಮ್ಮ ಸ್ಥೂಲ ಮನಸ್ಸಿಗೆ ಈ ಜ್ಯೋತಿರ್ಮಯ ಪದ್ಮಾದಿಗಳ ದರ್ಶನ, ಯೋಗಾಭ್ಯಾಸವಿಲ್ಲದ ಪ್ರಯುಕ್ತ ಧ್ಯೇಯ ವಾಸನಾಮಯ ಮೂರ್ತಿಯಂತೆ ಜ್ಯೋತಿರ್ಮಯದ ಹಾಗೆ ವಾಸನಾಮಯ ಕಮಲ, ಕೇಸರಿ ಕರ್ಣಿಕೆಗಳು. ಸ್ವಪ್ನ ದೃಷ್ಟ ಪದಾರ್ಥಗಳಂತೆ ವಾಸನೆ ಎಂಬ ತೇಜೋ ದ್ರವ್ಯಗಳು– ಸುಳಾದಿ:

***ವದಗಿ ವಾಸನಾಮಯ ಜಡದಿಂದ ನಿರ್ಮಾಣ ।***
***ಹೃದಯದೊಳಗೆ ವೇಗ ಮಾಡಿಕೊಂಡು***
***ಆದನೆ ಪೂಜಿಸಬೆಕು. ಮರಳಿ ಮರಳಿ ಚಿತ್ತದಲ್ಲಿ ನಿಂದಲ್ಲಿ***

ಎಂತ ಸಾಮಾನ್ಯ ಧ್ಯಾನ ಸುಳಾದಿ.

"ಮನೆಯೆಂಬೋ ಧಾಮದಲಿ ಪೂಜೆ ಮಾಡಿ ನಲಿದಾಡೋ(ಮಾನಸ ಪೂಜೆ)" ಎಂತ ವೈರಾಗ್ಯ ಸುಳಾದಿ.

"ನಿರ್ಮಲ ಮನಃ ಕಮಲಾಂಢನ ಮಾಡಿ" ಎಂತ ಅಭಿನವ ದಾಸರ ಉಕ್ತಿ "ಮನಕಂಜಿ ಮೂಲದಲ್ಲಿ ದುರ್ಗಾ ಭೂಮಧ್ಯದಲ್ಲಿ ಕೊನೆ ನಾಳ. ಶ್ರೀ ಭಾಗ ವೇದಗಳಿವು." ಎಂತ ಮತ್ತೊಬ್ಬ ದಾಸರ ಉಕ್ತಿ. ಅತಏವ ಕಮಲಾಕಾರ ಎಂತ ಹೇಳತಕ್ಕದ್ದು. "ಮನಃ ಪಂಕಜೇ ಚಿಂತಯೇ ದೇವ ಸದಾಮನ್ಮನಂ ಪಂಕಜಾಂತೇ ಚಿರಂ ಸ್ಥಾಪಯಾನಂತ ಶಕ್ತೇ" ಎಂತ ಶ್ರೀಮುಷ್ಣ ಹಯಗ್ರೀವ ದಂಡಕ ಸಿದ್ಧ. ಕಮಲ ಹೊರತು ಯೋಗಧಾರಣೆಯಿಂದ ಒಳಗಿನ ನಾಡಿಗಳನ್ನೂ ಕಮಲಗಳನ್ನೂ ಸ್ಥೂಲದೇಹವನ್ನೋಪಾದಿ ಯಾವಚ್ಛರೀರಿಭಾವಿ ವಸ್ತುಗಳಿಗೆ

ಸಮವನ್ನಾ ಕಂಡಿರತಕ್ಕವರುಂಟು. ಆದುದರಿಂದ ಮನೋವಾಸನಾತ್ಮಕ ಒಂದು ಶರೀರದ ಅಷ್ಟಮಾಂಶದ ತೇಜೋ ಭಾಗ ಈ ಉಭಯ ವಿಧ ತೇಜಸ್ಸುಗಳನ್ನು ಅಂಗೀಕರಿಸಬೇಕು. ಈ ಎರಡು ಪ್ರಕಾರ ಹೊರತು ಹೊರಗಿನ ಕಮಲ ಪುಷ್ಪದಂತೆ–ಹೃದಯದಲ್ಲಿ ಮಾತ್ರ ಒಂದು ಪಾರ್ಥಿವ ಪುಷ್ಪವನ್ನು ಪ್ರತ್ಯಕ್ಷ ಯಜ್ಞ ಪಶು ಹಿಂಸಾ ಮಾಡಿ ಮಾಂಸ ವಿಕೃತ ಅಧೋಮುಖ ಕಮಲವನ್ನು ಜನಗಳು ನೋಡಿದ್ದಾರಾದಾಗ್ಯೂ ಅಪ್ರತಿಹತ ಪರಮ ಸೂಕ್ಷ್ಮ ತೇಜೋ ನಾಡಿಗಳಿಗೆ ವ್ಯತಿರಿಕ್ತ ಸ್ಥೂಲ ನಾಡಿಗಳು ಹೇಗೆ ಅಕಾರ್ಯಕಾರಿಯೋ ಈ ಪಾರ್ಥಿವ ಕಮಲ ಮಂತ್ರಧ್ಯಾನದಲ್ಲಿ ಅಕಾರ್ಯ ಕಾರಿಯೇ ಸರಿ.

*"ಬ್ರಹ್ಮ ನಾಡೀತಿಸಾಕೇಶಂ ಕೃತ್ವಾ ಭಾಗಾನ್ ಸಹಸ್ರಶಃ ।*
*ಏಕ ಭಾಗ ಪ್ರಮಾಣಸಾ ಸಚ್ಛಿದ್ರಾ ಸೂಕ್ಷ್ಮ ರೂಪಿಣೀ ॥*
*ಏಕೈಕ ನಾಡ್ಯಾಮೇಕೈಕ ಪದ್ಮಾನಿ ಕ್ರಮಶೋಸ್ತಿಹಿ ॥" ಎಂತ ಮುಕ್ತಿ ತತ್ತ್ವ ಸಿಧ್ಧವು.*

"ಎಪ್ಪತ್ತೆರಡು ಸಾವಿರ ನಾಡಿ ಅತೀಂದ್ರಿಯ" ಎಂತ ನಾಡೀ ಪ್ರಕರಣ ಎರಡನೇ ಸುಳಾದಿ. ಆದರೆ ಜೀವಪ್ರಾದೇಶ ಜೀವಾಂಗುಷ್ಟ ಜೀವಾಂಗುಷ್ಠಾಗ್ರ ಈ ಮೂರು ರೂಪಗಳಂತೆ ಸ್ಥೂಲ ದೇಹಾಂಗುಷ್ಠ ಪರಿಮಿತಿ ಬಂದು ಈತಗೆ ಪ್ರಾಜ್ಞ ಮೂರ್ತಿ ಎಂತಲೂ, ಬಿಂಬ ಮೂರ್ತಿ ಎಂತಲೂ ರುದ್ರನೆಂತಲೂ ಹೆಸರು. ಇದು ಕಾಠಕ ಭಾಷ್ಯ ಸಿದ್ಧ. ಇದು ಸರ್ವ ತ್ರಯಾತ್ಮಕಾಂಗುಷ್ಠ ಪರಿಮಾಣ. ಈ ಮೂರುತಿ ಕೂಡುಇರತಕ್ಕದ್ದು. ಕೂತ ಭಾವಕ್ಕೆ ಕಿರೀಟ ಪರಿಮಾಣ ವ್ಯತಿರಿಕ್ತ ಶಿರಃ ಪರ್ಯಂತ ಪರ್ವದ್ವಯಾತ್ಮಕ ಅಂಗುಷ್ಠ ಪರಿಮಿತವಾಯಿತು. "ಯಾವದಂಗುಷ್ಠ ಪರಿಮಿತಂ" ಎಂತ ಪ್ರಮೇಯ ಕಾರಕ ವಚನ. ಈ ಮೂರ್ತಿಯ ಮುಂದೆ, ಕೆಳ ಭಾಗ ಕರ್ಣಿಕಾ ಮೂಲದಲ್ಲಿ ಅಂಗುಷ್ಠಾಗ್ರ ಪರಿಮಿತ ಮೂಲೇಶ ಮೂರ್ತಿ ವಿಜ್ಞಾನಾತ್ಮಕ ಎಂತ ಒಂದು ಹೆಸರುಳ್ಳವ ಕೂತು ಇದ್ದಾನೆ. ಈ ಮೂರುತಿ ನಿಂತ ಭಾವಕ್ಕೆ ಎಣಿಸಿದರೆ, ಸ್ಥೂಲಾಂಗುಷ್ಠಾಗ್ರದ ಏಕಾವರ್ತ ಪರಿಮಿತ ಕೂತಿರುವುದಾದುದರಿಂದ ತದರ್ಧ ಪರಿಮಿತವಾಗಿ ಅದೆ. ಈ ಎರಡು ರೂಪದ ಹಿಂಭಾಗ ಪ್ರಾದೇಶ ಎಂದರೆ ದಶಾಂಗುಲ ಪರಿಮಿತ ಮೂರ್ತಿಯು

*"ತನ್ಮಧ್ಯೇ ಭಗವಾನ್ವಿಷ್ಣುರ್ದಶಾಂಗುಲ ಸಮೋನ್ನತಃ ।*
*ಮುಖ್ಯಪ್ರಾಣಾಂತರ್ಗತಸ್ಥ ಪ್ರಾದೇಶ ಪರಿಮಾಣತಃ । "*

ಎಂತ ಭಾವ ಪ್ರಕಾಶಿಕಾ ಸಿದ್ಧ.

ಈ ಮೂರ್ತಿಯು ಜೀವ ಪ್ರಾದೇಶನಂತೆ ಜೀವಾಕಾರ ಅಲ್ಲ. ಸ್ಥೂಲದೇಹದ ಆಕಾರವೂ ಅಲ್ಲ. ಏಕೆಂದರೆ ಕೇಚಿತ್ಸ್ವದೇಹಾಂತರ್ಹೃದಯಾವಕಾಶೇ ಪ್ರಾದೇಶ ಮಾತ್ರಂ ಪುರುಷ ವಸಂತ ಎಂತ ದ್ವಿತೀಯ ಸ್ಕಂಧದಲಿ ಚತುರ್ಭುಜದ ಲಕ್ಷಣವನ್ನು ಹೇಳಿ ಇದ್ದಾರೆ. –

*"ಪ್ರಥಮಂ ಮಹತಃ ಸೃಷ್ಟಾಃ ದ್ವಿತೀಯತ್ವಂಡ ಸಂಸ್ಥಿತಂ ।*
*ತೃತೀಯಂ ದೇಹಿನಾಂ ದೇಹೇ"*

ಎಂತ ಈ ಪ್ರಾದೇಶ ರೂಪವನ್ನು ಹೇಳತಕ್ಕ ಪ್ರಮಾಣವನ್ನಾಗಿ ತತ್ತ್ವ ನಿವೃತ್ತಿ ಸಿದ್ಧವು.

*"ಹೃದಯೀ ಸರ್ವಶೋವ್ಯಾಪೀ ಪ್ರಾದೇಶಂ ಪುರುಷೋತ್ತಮಃ ।*
*ಜೀವಾನಾಂ ಸ್ಥಾನಮುದ್ದಿಷ್ಟಂ ಸರ್ವದೈವ ಸನಾತನಃ"* ಎಂತ ಐತರೇಯ ಭಾಷ್ಯ – ಇದು ಪ್ರಾದೇಶ ರೂಪವನ್ನೇ ಹೇಳತಕ್ಕದ್ದು.

*"ಹೃತ್ಕರ್ಣಿಕಾ ಮೂಲಗತಃ ಸೋಂಗುಷ್ಠಾಗ್ರ ಪ್ರಮಾಣಕಃ ।*
*ಮೂಲೇಶ ಇತಿ ನಾಮಾಸ್ಮಿನ್ ಸರ್ವೇ ಜೀವಾ ಪ್ರತಿಷ್ಠಿತಾಃ ॥ "*

ಎಂತ ಬೃಹದ್ಭಾಷ್ಯ.

ಇದರಲ್ಲಿ "ಪ್ರತಿಷ್ಠಿತಾಃ" ಪದವಿದೆ. ಐತರೇಯ ಭಾಷ್ಯದಲ್ಲಿ ಸ್ಥಾನಂ ಎಂಬ ಪದವಿದೆ. ಅದಕ್ಕೆ ತಾತ್ಪರ್ಯ "ಸ್ಥಾನಮಾಯತನಂ ಪ್ರೋಕ್ತಂ ಪ್ರತಿಷ್ಠಾಧಾರಕಃ "ಪುಮಾನ್" ಎಂತ ಭಾವ ಪ್ರಕಾಶಿಕಾ ವಳಗೆ ಇದರ ಅರ್ಥವನ್ನು ಯೋಜನೆ ಮಾಡಿ ಇದ್ದಾರೆ. ಈ ಪ್ರಾದೇಶ ಮೂರ್ತಿ ರೂಪನೇ ಜೀವನಿಗೆ ಮನೆಯಂತೆ ಆಧಾರ ಮೂರ್ತಿಯು. ಈ ಮೂಲೇಶ ಮೂರ್ತಿಯು ಧಾರಕ ಎಂದರೆ ಜಾಗ್ರದ್ಸ್ವಪ್ನಸುಷುಪ್ತಿಗಳಿಗೆ ಜೀವನಿಗೆ ಬುದ್ಧಿ ಪ್ರೇರಿಸಿ ಈ ಜೀವನ ಪ್ರಕಾಶ ವಿಶೇಷವನ್ನು ಚಕ್ಷುಃ ಸ್ಥಾನದಲ್ಲಿದ್ದು ವಿಶ್ವ ಮೂರ್ತಿಯ ಸಮೀಪಕ್ಕೂ ಕಂಠಸ್ಥ ತೈಜಸ ಮೂರ್ತಿಯ ಸಮೀಪಕ್ಕೂ ಕೊಟ್ಟುಕಳುಹಿಸುವ ಭಗವದ್ರೂಪ

"ಸರ್ವೇ ಜೀವಾಃ ಹೃತ್ಕಮಲ ಕರ್ಣಿಕಾ ಮೂಲಗತ ಮೂಲೇಶಾಖ್ಯ ಭಗವತಾ ಜಾಗ್ರತಾದ್ಯವಸ್ಥಾಸು ಪ್ರೇರಿತಾಃ । ಹೃದಯಾಕಾಶಸ್ಥ ಪ್ರಾದೇಶ ಪರಿಮಿತ ಪುರುಷಾಖ್ಯ ಶೇಷಶಾಯೀ ಭಗವತ್ಪಾದಾಬ್ಜ ಸಂಸ್ಥಿತಾಭವಂತಿ." ಎಂತ ಇದು ತತ್ತ್ವ ವಿವೃತ್ತಿಕಾರರ ಸ್ವವಚನವು. ಇದೇ ಪ್ರತಿಷ್ಠಾ ಶಬ್ದದ ಅರ್ಥವು.

ವಿಶ್ವ ತೈಜಸ ಎರಡು ರೂಪಗಳಿಗೆ ೧೯ ಮುಖಗಳು ಎರಡು ಪಾರ್ಶ್ವಗಳಲ್ಲಿಯೂ ಒಂಬತ್ತೊಂಬತ್ತು ಮನುಷ್ಯ ಮುಖಗಳು ಮಧ್ಯದಲ್ಲಿ ಗಜ ಮುಖ, ನಾಲ್ಕು ಹಸ್ತ ಎರಡು ಪಾದ, ಒಂದು ಸೊಂಡಿಲು, ಎರಡೂ ರೂಪಗಳಿಗೂ ಒಂದೇ ಲಕ್ಷಣವು. ಪ್ರಮಾಣ :-

*"ಏಕೋನವಿಂಶತಿಮುಖಾ ವಿಶ್ವತೈಜಸ ನಾಮಕಾ ।*
*ಸವ್ಯಾಪಸವ್ಯಗಾನ್ಯೇವ ಪುರುಷಸ್ಯಾನಿ ಮಧ್ಯಗಂ ।*
*ಗಜಾಭಂತು ತಯೋರ್ಮಧ್ಯೆ ಮುಖಾನಾಂ ಪ್ರತ್ಯಮಪ್ಯುತ ॥ "*

ಎಂತಲೂ ಈ ಎರಡೂ ರೂಪಗಳ ಮುಖಗಳಿಗೆ ಪ್ರಕಾಶ ಸಂಹಿತೆಯಲ್ಲಿ ಕೃತ್ಯ ನಿರೂಪಿಸಿ ಇದ್ದಾರೆ. ವಿವರ :- ನವಕೋಟಿ ತತ್ವೇಶರಿಗೆ ಮೊದಲು ಮುಖಜಾಗ್ರತ್ಪ್ರದ. ಕರ್ಮಜಾದಿ ಋಷಿ ಗಂಧರ್ವರಿಗೆ ನಾಲ್ಕನೇ ಮುಖ ಮನುಷ್ಯಗಂಧರ್ವಾದಿ ನರಾಂಶರಾದ ತೃಣ ಜೀವಾಂತ ಮುಕ್ತಿಯೋಗ್ಯರಿಗೆ ಏಳನೇ ಮುಖ ಜಾಗ್ರತ್ಪ್ರದವು. ಇದೇ ಪ್ರಕಾರ ನಿತ್ಯ ಸಂಸಾರಿ ಉತ್ತಮ ಮಧ್ಯಮಾಧಮ ಜೀವರಿಗೆ ಎರಡನೇ ಐದನೇ ಮತ್ತು ಎಂಟನೇ ಮುಖಗಳು ಜಾಗ್ರತ್ಪ್ರದಗಳು- ಕಲ್ಯಾದಿ ನವಕೋಟಿ ತಾತ್ವಿಕ ತಮೋಯೋಗ್ಯರಿಗೂ ಮಧ್ಯಮರಿಗೂ, ನಿರಂಶ ನೀಚ ಜೀವರಿಗೂ ಮೂರು ಆರು ಮತ್ತು ಒಂಬತ್ತನೇ ಮುಖಗಳು ಜಾಗ್ರತ್ಪ್ರದಗಳು. ಇದೇ ಪ್ರಕಾರದಿಂದ ವಾಮ ಪಾರ್ಶ್ವದ ಒಂಬತ್ತು ಮುಖಗಳಿಂದ ಇವರ ಸ್ತ್ರೀಯರುಗಳಿಗೆ ಜಾಗ್ರದವಸ್ಥೆಯನ್ನು ಕೊಡೋಣ. ಸ್ವಪ್ನ ಪ್ರವರ್ತಕ ತೈಜಸನೂ ಇದೇ ಪ್ರಕಾರವು.

*"ನಿರಂಶಾನಾಂ ಚ ದೇವಾನಾಂ ಜಾಗೃತಾಂ ಸಂಪ್ರವರ್ತಕಃ ।*
*ಪುಂಸಾಮೇವಂ ವಾಮಗಾಸ್ಯೈಃ ಸ್ತ್ರೀಣಾಮೇವಂ ಕರಿಷ್ಯತಿ ।"*

ಇತ್ಯಂತ ಶ್ಲೋಕಗಳಿಂದ ಪ್ರಕಾಶ ಸಂಹಿತೆಯಲ್ಲಿ ವಿಸ್ತರಿಸಿ ಅದೆ. ಈಗ ಹೇಳಿದ ಮೂಲೇಶನ ಪಾದ ಸಮೀಪದಲ್ಲಿ ಮುಖ್ಯಪ್ರಾಣದೇವರು ಹಸ್ತಗಳನ್ನು ಮುಗಿದುಕೊಂಡು ತಾವು ಪೂರ್ವಾಭಿಮುಖವಾಗಿ ಈ ಮೂಲೇಶಾಗ್ರೇಶ ಪ್ರಾದೇಶ ಈ ಮೂರು ಪಶ್ಚಿಮಾಭಿಮುಖಗಳಾದುದರಿಂದ ಈ ಪ್ರಾಣದೇವರು ಅರ್ಚಕರಾದ ಪ್ರಯುಕ್ತ ಎದುರಾಗಿ ನಿಂತು ಇದ್ದಾರೆ. ಜೀವನು ಈ ಪ್ರಾಣದೇವರ ಪಾದದ ಬುಡ ಭಾಗದಲ್ಲಿ ಒಂದು ಧೂಳಿನಂತೆ ಪ್ರಾಣದೇವರಂತಯೇ ಅಂಜಲಿ ಬದ್ಧನಾಗಿ ಈ ಜೀವನೂ ಕೂಡ ಪೂರ್ವಾಭಿಮುಖವಾಗಿ ಈ ಮೂರು ರೂಪಗಳ ಎದುರಾಗಿ ನಿಂತಿದ್ದಾನೆ. ಸುಳಾದಿಯನ್ನು ಇದರ ಪ್ರಮಾಣವನ್ನು ಮುಂದೆ ಬರೆಯುತ್ತೇನೆ. ಈ ಪ್ರಾಣದೇವರು ಒಂದೊಂದು ಪುಷ್ಪಗಳನ್ನಾಗಿ ತೆಗೆದು ಇಡುವ ಹಾಗೆ ಶ್ರೀ ಹರಿಯ ಚರಣದಲ್ಲಿ ಒಂದೊಂದು ಶ್ವಾಸವನ್ನಾಗಿ ಸಮರ್ಪಣೆ ಮಾಡೋಣ ವೀಣಾಧ್ವನಿಯೊಳಗೆ ಅಕ್ಷರಗಳು ಹೊರತರುತ್ತದೋ ಹಾಗೆ ಈ ಒಂದು ಶ್ವಾಸದ ವಳಗೆ "ಹಂಸಸೋಹಂಸ್ವಾಹಾ" ಎಂಬ ಮಂತ್ರಜಪವನು ೨೧೬೦೦ ಹೊರಡಿಸಿ ಇಂತಹ ಹಂಸ ಮಂತ್ರಜಪವನ್ನು ತಾನು ಒಂದು ಘಳಿಗೆಗೆ ೩೬೦ ಪ್ರಕಾರ ಅಹೋರಾತ್ರಿಯೂ ಜಪಿಸಿ ಈ ಜೀವನಲ್ಲಿಯೂ ತಾವಾಗಿ ಅನುಗ್ರಹ ಮಾಡಿ ಅವನ ಕೈಯಿಂದಲೂ ಈ ಜಪವನ್ನು ಮಾಡಿಸಿ – ಭಗವದಾಜ್ಞೆಯಿಂದ ಈ ಜೀವನಿಂದ ನಡೆಯತಕ್ಕ ನಿಷ್ಕಾಮಾರಾಧನೆಗೆ ಪ್ರತಿಬಂಧಕ ಮಾಡದೆ, ಸಹಾಯ ಭೂತರಾಗಿ ಎಂತ ದೇವತೆಗಳಿಗೆ ಪ್ರಾಣದೇವರು ಆಜ್ಞಾಪಿಸುತ್ತಾರೆ.

## ಜೀವಾಕಾರ ಪ್ರದ್ಯುಮ್ನ ರೂಪ

ಇಂತಹ ಜೀವಾಂತರ್ಯಾಮಿಯ ರೂಪವಿಶೇಷಗಳನ್ನು ನಿರೂಪಿಸಿ ಇದ್ದೇನಷ್ಟೆ. ಆ ಕೊನೆಯಲ್ಲಿ ಹೇಳಿದ ಜೀವಾಕಾರ ಪ್ರದ್ಯುಮ್ನನಿಗೆ ನವನಾರೀಕುಂಜರದಂತೆ ಶಿರಸ್ಸೇ ವಾಸುದೇವ ಮೂರ್ತಿ, ಅಂಗಾರದಲ್ಲಿ ವ್ಯಾಪ್ತವಾದ ಅಗ್ನಿಯಂತೆ ಜೀವನ ಶಿರಸ್ಸಿನಲ್ಲಿಯೇ ಅದು ವ್ಯಾಪ್ತ. ಮುಂದೆ ಸರ್ವಾವಯುವದಲ್ಲಿಯೂ ಈ ಅನಲಾಂಗಾರ ದೃಷ್ಟಾಂತವನ್ನೇನೆ ತೆಗೆದುಕೊಳ್ಳತಕ್ಕದ್ದು. ಆ ಪ್ರದ್ಯುಮ್ನ ಮಧ್ಯ ದೇಹವೇ ನಾರಾಯಣ. ಅದೇ ಜೀವನ ಮಧ್ಯದೇಹದಲ್ಲಿ ಸ್ವಾಮಿಯ ಹಸ್ತ ಸಹಿತ ಸಕಲ ಬಲ ಪಾರ್ಶ್ವವೂ ಪ್ರದ್ಯುಮ್ನ ಮೂರ್ತಿ. ಅದೇ ಜೀವನ ಸಕಲ ಬಲ ಪಾರ್ಶ್ವದಲ್ಲಿ. ಹೀಗೆಯೇ

ಸ್ವಾಮಿಯ ಎಡಪಾರ್ಶ್ವ ಸಮಸ್ತವೂ ಅನಿರುದ್ಧರೂಪ. ಆದೇ ಜೀವನ ಎಡ ಪಾರ್ಶ್ವದಲಿ ಆ ಸ್ವಾಮಿಯ ಪಾದಗಳೇ ಸಂಕರುಷಣ ಮೂರ್ತಿ. ಅದೇ ಜೀವನ ಪಾದದಲ್ಲಿ ಅನಲಂಗಾರ ದೃಷ್ಟಾಂತವು. ಇದೇ ಪ್ರಕಾರ ಪರಮಾತ್ಮನ ವಾಕ್ ಪರಶುರಾಮನೇ ಜೀವನ ವದನದಲ್ಲಿ, ಸ್ವಾಮಿಯ ಘ್ರಾಣವೇ ನರಸಿಂಹ- ಜೀವನ ಘ್ರಾಣದಲ್ಲಿ ಹರಿಯ ನೇತ್ರಕಪಿಲನೆ ಜೀವನ ಕಣ್ಣಿನಲ್ಲಿ, ಭಗವಜ್ಜಿಹ್ವ ಕೂರ್ಮ ರೂಪಗಳೇ ಜೀವನ ಜಿಹ್ವೆಯಲಿ.

*"ಶಿರೋ ನಾರಾಯಣಃ ವಕ್ಷೋ ದಕ್ಷಿಣಃ ಸವ್ಯ ಏವಚ-*
*ಪ್ರದ್ಯುಮ್ನಶ್ಚಾನಿರುದ್ಧಶ್ಚ ಸಂದೋಹೋ ವಾಸುದೇವಕಃ ।*
*ನಾರಾಯಣೋಥಸಂದೋಹೇ ವಾಸುದೇವ ಶಿರೋ ಏವಾ।*
*ಪುಚ್ಛಂ ಸಂಕರ್ಷಣಃ ಪ್ರೋಕ್ತಃ । ಏಕ ಏವತು ಪಂಚಧಾ ॥"*

ಎಂತ ಭಾಷ್ಯ ವಚನವು. "ವಿಷ್ಣೋರ್ವಾಗ್ಭಾರ್ಗವೋ ರಾಮಃ" ಇತ್ಯಾದಿ ಪ್ರಮಾಣಗಳು. "ಕಪಿಲಾತ್ಮನಾ ದಿವ್ಯೇನ ಚಕ್ಷುಷಾತ್ವಂ ವಿಲೋಕಯಾ । ಇತ್ಯಾದಿ ಪ್ರಮಾಣ ಸಿಧ್ಧವು." ವಾಸುದೇವನೇ ಹರಿಗೆ ಶಿರವೆನಿಪ. ಆ ಶಿರವು ಈ ಶರೀರಿಗೆ ಶಿರವು । ನಾರಾಯಣ ಭಾವಿಸುವ ಮಧ್ಯ ದೇಹದೊಳಿಹುದು ಪ್ರದ್ಯುಮ್ನ ಶ್ರೀಶನ ಬಲ ಭಾಗ ಬಲದೊಳಗಿಹುದು. ವಾಮಗನಿರುದ್ಧ ಜೀವನೆಡದಲ್ಲಿಹುದು. ಸ್ವಾಮಿಪದ ಸಂಕರುಷಣ ಇದರೊಳಗಿಹುದು, ರಾಮ ವಾಗಿಂದ್ರಿಯ ದೇವಗೆ- ವಾಗ್ದೊಳಿಹ ನರಹರಿ ಶ್ರೀಮನೋರಮಗೆ ಘ್ರಾಣ ಜೀವ ಘ್ರಾಣ. ಹರಿನೇತ್ರ ಕಪಿಲ. ಜೀವನ ಕಣ್ಣಿನಲ್ಲಿಹನು. ವಿವರ ತಿಳಿವದು ಜೀವನಂಗಧರ್ವಣೆ ॥ ಅಂದರೆ- ಇದು ಸರ್ವವೂ ಜೀವನ ಸ್ವರೂಪಾನುಕೂಲ ಎಂತ ಅರ್ಥವು. ಪರಮ ರಮ್ಯವಾದ ಜೀವನ ಹೃತ್ಕಮಲ ಶ್ವೇತವರ್ಣಾಷ್ಟ ಪತ್ರವುಳ್ಳದ್ದು ತಿಳಿವುದು. ಎಂತ ಹೇಳಿ ಇದ್ದಾರೆ. ಅಲ್ಲಿದ ಸ್ವರೂಪಾಂಗುಷ್ಠಾಂತರಾತ್ಮ ಬಿಂಬವನ್ನು ಹಿಡಿದು ಈ ರೂಪಗಳನ್ನೆಲ್ಲ ಮರಿಯದೆ ಚಿಂತಿಸುವುದಕ್ಕೋಸ್ಕರ- ಜೀವಾಖ್ಯ ಸುಳಾದಿ. ಪ್ರಕಾಶಸಂಹಿತೋಕ್ತಿ ಕ್ರಮಕ್ಕೆ ಯಥಾಶಕ್ತಿ ನಿರೂಪಿಸುತ್ತೇನೆ.

## ಜೀವನ ಮೇಲೆ ಇರತಕ್ಕ ಲಿಂಗದೇಹದಲ್ಲಿ ಭಗವನ್ಮೂರ್ತಿ ವಿವರಣವು

ಕಡಲೆಗೆ ಕಡಲೆ ಹೊಟ್ಟು ಅವರೆಗೆ ಅವರೆ ಹೊಟ್ಟಿನಂತೆ ಇದ್ದ ಕವಚಕ್ಕೆ ಬಿಳಿಯ ಅರಿವೆಯ ಮೇಲೆ ಕೆಂಪು ಅರಿವೆ ಅದರ ಮೇಲೆ ಕರೀದು ಅರಿವೆ, ಹೀಗೆ ಮೂರು ಪದರು ವಿಶಿಷ್ಟ ಎಂತ ಪೂರ್ವದಲ್ಲಿ ಹೇಳಿದ್ದೇನೆ. ಈ ಜೀವನನ್ನು ನೂತನ ಸೃಷ್ಟಿಗೆ ತರತಕ್ಕ ಬ್ರಹ್ಮ ಕಲ್ಪದ ಪೂರ್ವ ರಾತ್ರಿ ವಟಪತ್ರಶಯನ ಕಾಲದಲ್ಲಿ ಲಿಂಗ ಶರೀರದಲ್ಲಿ ಜೀವರು ಹುಟ್ಟಿ ಕಾಠಿಣ್ಯ ಭಾವವನ್ನು ತಪ್ಪಿಸಿ ಶಿಥಿಲ ಭಾವ ಬಂದು ಆಸನ್ನ ಮರಣಾವಸ್ಥೆ ಒಳಗೆ- ಶ್ರೀಹರಿಯು ಇಚ್ಛಾಮಾತ್ರದಿಂದ ಆ ರಾತ್ರಿಯೇ ಬಿಂದುಗಳ ಕಲಸದೆ ತೀರದು ಎಂತ ಪ್ರಕಾಶ ಸಂಹಿತೆಯನ್ನು ಮುಂದೆ ನಿರೂಪಿಸುತ್ತೇನೆ. ಕಲಸುವ ವಿಷಯದ ಅನುಭವಕ್ಕೆ ಜೀವನಿಗೆ ಎಡಪಾರ್ಶ್ವದಲ್ಲಿ ಏಕದೇಶದಲ್ಲಿ ಬುದ್ಧಿಸ್ಥವಾದ ಮೂರು ಪದರದಲ್ಲಿ ಮಧ್ಯ ರಜಃ ಪರಿಚ್ಛೇದದಲ್ಲಿ ಭೂದೇವಿಯು ತನ್ನ ಪರಿಚ್ಛೇದಗತ ಅನಂತಾನಂತ ಪರಮಾಣುಗಳೊಳಗೆ ಹತ್ತು ರಜೋ ಬಿಂದುಗಳನ್ನು ಉದರಿಸಿ ತನ್ನ ಬಲದ ಪಾರ್ಶ್ವ ಶ್ರೀದೇವಿಯಿಂದ ಅಭಿಮನ್ಯಮಾನವಾದ ಸತ್ವ ಪರಿಚ್ಛೇದಕ್ಕೆ ನೂಕಲು ರಾತ್ರಿ ಬ್ರಹ್ಮ ಶತ ವರ್ಷಾ ವಟ ಪತ್ರ ಶಯನ ಮುಗಿಯೋತನಕ ಅನಂತ ಸತ್ವ ಪರಮಾಣುಗಳಲ್ಲಿ ಹತ್ತು ರಜೋ ಬಿಂದು ಸಂಬಂಧ ಪಾರ್ಶ್ವದಲಿ ಮಾತ್ರ, ಅಕ್ಷತೆಗೆ ಸ್ವಲ್ಪ ಸುಣ್ಣದಿಂದ ರಕ್ತ ವರ್ಣದ ಹಾಗೆ ಸ್ವತಏವ ಶುಕ್ಲವರ್ಣವಾದರೂ ಒಂದೊಂದು ರಜೋ ಬಿಂದು ನೂರು ನೂರು ಸತ್ವ ಬಿಂದುಗಳನ್ನು ರಕ್ತ ಮಾಡಿದ ಪ್ರಯುಕ್ತ ರಾಜಸ ಸಾತ್ವಿಕ ಬಿಂದುಗಳ ಸಹಸ್ರ ಸಂಖ್ಯಾಕಗಳಾದವು. ಅದರಲ್ಲಿ ಸಹಸ್ರನಾಮಕ ಪ್ರತಿಪಾದ್ಯ ಸಹಸ್ರ ಭಗವದ್ರೂಪಗಳು ಅವೆ. ಪ್ರಲಯ ಕಾಲ ಪರ್ಯಂತರವು ಹೀಗೆ ಇದ್ದು ಸೃಷ್ಟಿ ಕಾಲಕ್ಕೆ ಶ್ರೀದೇವಿಯು ಈ ಸಾವಿರವನ್ನು ರಜಃ ಪರಿಚ್ಛೇದಕ್ಕೆ ನೂಕುತ್ತಾಳೆ. ಇದು ಹ್ಯಾಗೋ ಹಾಗೆ ರಜಸ್ಸಿನ ಎಡ ಭಾಗದಲ್ಲಿ ಇದ್ದ ತಮಃ ಪರಿಚ್ಛೇದಕ್ಕೂನೂ ಒಂದು ರಜೋ ಬಿಂದು ಉದರಿ ಪ್ರಳಯ ಪರ್ಯಂತ ಸೇರಿದ್ದು ಸೃಷ್ಟಿಯಲ್ಲಿ ದುರ್ಗಾರೂಪದಿಂದ ನೂಕಿಸಿ ಕೊಂಡು ರಜಸ್ಸಿಗೆ ಸೇರುವಾಗ ಒಂದು ತಮೋ ಬಿಂದುವಿನ ಶತಾಂಶಾಧಮಾತ್ಯಲ್ಪ ತಮೋ ಬಿಂದುವನ್ನು ಕಲ್ಪಾಂತರವೂ ರಕ್ತ ವರ್ಣ ಮಾಡಿಕೊಂಡು ರಜಃಪರಿಚ್ಛೇದಕ್ಕೆ ರಜಸ್ಸು ಕರಕೊಂಡು ಸೃಷ್ಟಿಯಲ್ಲಿ ಬಂದು ಸೇರುತ್ತದೆ.

ಪ್ರಮಾಣ:-

*"ಲಿಂಗ ದೇಹಸ್ಯ ಮಧ್ಯಸ್ಥೋ ರಜೋ ಭಾಗಃ ಪ್ರಕೀರ್ತಿತಃ ।*
*ಭೂರ್ನಾಮಿಕೇಂದಿರಾ ತತ್ರ ಚೇಷ್ಟಿಕಾ ತಸ್ಯ ಮಾನಿನೀ ॥*
*ತದ್ದಕ್ಷಿಣೇ ತತ್ವ ಭಾಗಃ ತತ್ರ ಶ್ರೀಶ್ಚೇಷ್ಟಿಕಾಮತಾ ।*
*ತದ್ವಾಮೇ ತು ತಮೋ ಭಾಗಃ ತತ್ರ ದುರ್ಗಾಭಿಮಾನಿನೀ ।*
*ಸತ್ವ ಭಾಗ ಸ್ಪೃಷ್ಟ ರಜಃ ಪಾರ್ಶ್ವಗಾ ರಾಜಸಾರ್ಣವಃ ।*
*ದಶ ಪ್ರಲಯ ಕಾಲೇತು ಭೂಮ್ಯಾ ಸತ್ವಸ್ಯ ಪಾರ್ಶ್ವಗಾಃ ।*
*ಭವಂತಿ ಲಯ ಕಾಲಾಂತಂ ತತ್ರ ತಿಷ್ಟತಿ ಸರ್ವಶಃ ॥*
*ರಾಜಸಾಣುಃ ಸಾತ್ವಿಕಾಂಶಂ ಗತಸ್ತ್ವೇಕೈಕಶಃ ಪೃಥಕ್ ।*
*ವಶೇವ ತಾದೃಶಾ ಏಕೇ ಮಿಲಿತ ದ್ವಾದಶಾರ್ಣವಃ ।*
*ರಜಃ ಪರಿಚ್ಛೇದಗತೋ ರಾಜಸಾಣುರ್ಲಯೇತು ಯಃ ॥*
*ರಜೋ ಮಧ್ಯೇ ವಕ್ತಿಮೇರೆ ಸೃಷ್ಟಿ ಕಾಲ ಉಪಾಗತೆ ॥ "*

ಅಂದರೆ – ಮಧ್ಯ ರಜಃ ಪರಿಚ್ಛೇದದಲ್ಲಿ ಒಂದು ರಜೋ ಬಿಂದು ಉದುರಿ ತಿರುಗಿ ಅಲ್ಲೇವೆ ಸಕ್ತವಾಗಿ ಇದ್ದದ್ದು ಸೃಷ್ಟಿಯಲ್ಲಿ ವ್ಯಕ್ತವಾದ ಪ್ರಯುಕ್ತ ೧೨ ಆಯಿತು. ಮುಂದಿನ ಪ್ರಮಾಣ:-

*ಸಾತ್ವಿಕಾಣೂನ್ ಶತಮಿತಾನ್ ರಕ್ತ ವರ್ಣಾಂ ಕರೋತ್ಯಲಂ।*
*ಸ್ವಭಾವತಃ ಸತ್ವ ಭಾಗಃ ಶುಕ್ಲಸ್ಥೇ ಸತ್ವ ಸಂಸ್ಥಿತಾಃ ।*
*ರಕ್ತಾಃ ಸಹಸ್ರ ಸಂಖ್ಯಾಕ ದಶಭಿಃ ರಾಜಸಾಣುಭಿಃ ॥*
*ಭವಂತಿ ಚ ರಜಃ ಸ್ಪೃಷ್ಟ ಸತ್ವ ಭಾಗ ಗತಾ ಲಯೇ ।*
*ಏವಮೇಕೋ ರಾಜಸೋಣು ರಾಜಸಾಂಶಸ್ಯ ಸವ್ಯಗಂ ।*
*ತಾವಾಂಶಂ ಭುವನೀತಃ ಸ್ವಶತಾಂಶಂತು ತಾಮಸಂ ।*
*ಅತ್ಯಲ್ಪಂ ನೀಲ ವರ್ಣಂತು ರಕ್ತೋ ರಕ್ತೀ ಕರೋತ್ಯಲಂ ।*
*ಏಕಃ ಶುದ್ಧೋ ರಾಜಸಾಂಶ ಪರಿಭೇದೇತು ರಾಜಸೆ ।*
*ಮಧ್ಯೇ ತಿಷ್ಠತ್ಯಪಿ ಲಯೇ ರಾಜಸಾಣು ಸಮಾ ಇಮೆ ॥*

ಇದರಲ್ಲಿ ಹತ್ತು ಬಿಂದು ಸೇರಿ ಒಂದು ಒಂದೇ ನೂರು ಸತ್ವವನ್ನು ಕೆಂಪಗೆ ಮಾಡಿದ್ದು ಸರಿಯಾಗಿ ಸಹಸ್ರವಾಗಿ ಅದೆ ಅಷ್ಟೆ. ಸತ್ವದಲ್ಲಿ ಕೂಡಿದ್ದು ಇದು ಹ್ಯಾಗೋ ಹಾಗೆ ತಮಸ್ಸಿನಲ್ಲಿ ಕೂಡಿದ ಒಂದು ರಜಸ್ಸಿನಲ್ಲಿ ಸ್ವಧಮ ಶತಾಂಶನ್ಯೂನ ತಮಸ್ಸನ್ನ ರಕ್ತ ಮಾಡಿದ ಪ್ರಯುಕ್ತ ಆ ಅತ್ಯಲ್ಪ ರಜೋ ಜನಕ ಏಕ ರಜಸಿಗೆ ಶತಾಧಿಕ್ಯ ಬಂದದ್ದರಿಂದ ಪೂರ್ವೋತ್ತರ ಸಹಸ್ರ ಬಿಂದುಗಳಿಗೂ ಏತಾದೃಶ ಸೂಕ್ಷ್ಮ ಸಂಖ್ಯಾ ವಿವಕ್ಷೆಯಿಂದ ಲಕ್ಷ ಸಂಖ್ಯೆಯೇ ಆ ಲಿಂಗ ಶರೀರದ ಪದರಗಳಲ್ಲಿಯೇ ಸಕ್ತವಾಗಿ ಕೂತಿದ್ದು ಬಾಹ್ಯ ಜಡ ಪ್ರಕೃತಿ ಜನ್ಯಗುಣತ್ರಯ ರಾಶಿಗಳ ಬಿಂದುಗಳು ಕೂಡಿದ ಹೊರತು ವ್ಯಕ್ತವಾಗಲಾರದು. ಪ್ರಮಾಣ:-

*ಮಿಳಿತಾ ದ್ವಾದಶಾಣವಃ ರಾಜಸಾಸ್ತಾಮಸಾತ್ಯಲ್ಪ ಪರಮಾಣು ಪ್ರಮಾಣತಃ।*
*ಅಧಿಕಾಗುಣಿತತಾಸ್ತತ್ರ ಶತದ್ವಾದಶ ಸಂಮಿತಾಃ ॥*
*ದಶ ರಾಜಸ ಯುಕ್ತಾಃ ಸಹಸ್ರಂ ಸಾತ್ವಿಕಾಣವಃ ॥*
*ಲಕ್ಷಂ ಭವಂತಿ ಕಾರ್ಯೋಪಯುಕ್ತಾ ಏತೇ ಭವಂತಿ ಹಿ ॥*
*ತಮಸಾತ್ತು ಪರಿಚ್ಛೇದಾ ದ್ವಿಗುಣಃ ಸಾತ್ವಿಕಃ ಸ್ಮೃತಃ ।*
*ಏಕೈಕಸ್ಮಿನ್ ಪರಿಚ್ಛೇದೇಪ್ಯನಂತಾಃ ಪರಮಾಣವಃ ॥*
*ಸಂತಿ ತತ್ರ ನಿಯಂತಾ ಚೋ ವಿಷ್ಣು ಬ್ರಹ್ಮ ಶಿವಾತ್ಮಕಃ ।*
*ನಾರಾಯಣೋನಂತಗುಣೋ ಶ್ರೀ ಸ್ತ್ರೀರೂಪಾಭಿಮಾನಿನೀ ।*
*ಸತ್ವಂ ರಜಸ್ತಮಃ ಸೃಷ್ಟಂ ವಿಷ್ಣು ಬ್ರಹ್ಮ ಶಿವಾತ್ಮಕಂ ॥*
*ಶ್ರೀ ಭೂದುರ್ಗಾ ಪತಿರ್ವಿಶ್ವ ತೈಜಸಃ ಪ್ರಾಜ್ಞನಾಮಕಃ ॥*
*ಶುಕ್ಲ ರಕ್ತಾತ್ಮಕಾ ನೀಲಾನಾದಾಯಾನಂತರೂಪಕಾಃ ।*
*ತತ್ತತ್ಸೂಕ್ಷ್ಮ ಶರೀರಸ್ಥಾನ್ ಸ್ಥಾನತ್ರಯಗತೋ ಹರಿಃ ॥*
*ದದಾತ್ಯವಸ್ಥಾತ್ರಿಕಂ ॥* ಎಂತ ಪ್ರಕಾಶ ಸಂಹಿತಾ ಅಷ್ಟಮಾಧ್ಯಾಯಃ.

ಈಗ ಹೇಳಿದ್ದು ರಾಜಸ ಸಾತ್ವಿಕ ಸಾವಿರ ರಾಜಸ ತಾಮಸ ಅತ್ಯಲ್ಪ ಶುದ್ಧ ರಜಸ್ಸು ಹನ್ನೆರಡು. ಇಷ್ಟೂನೂ ರಾಜಸವೇ. ಆದ ಪ್ರಯುಕ್ತ ಸತ್ವದ ಸಮಾಚಾರವೇನೆಂದರೆ- ಪೂರ್ವೋಕ್ತ ಸತ್ವ ಪರಿಚ್ಛೇದದಲ್ಲಿ ಪ್ರವಿಷ್ಟವಾದ ಹತ್ತೇ ರಜಸ್ಸು ಸಾವಿರ ರಜಸ್ಸನ್ನು ರಕ್ತವನ್ನು ಮಾಡಿ ಕರೆದುಕೊಂಡು ಬಂದದ್ದು

ಹೊರತು ಪ್ರತ್ಯೇಕವಾಗಿಯೂ ಹತ್ತೇ ರಜಸ್ಸಿಗೆ ಸಮವಾದ ಹತ್ತೇ ಸತ್ವವನ್ನು ಸತ್ವ ಪರಿಚ್ಛೇದದಿಂದ ಕರೆದುಕೊಂಡು ಸೃಷ್ಟಿಯಕಾಲಕ್ಕೆ ರಜ ಪರಿಚ್ಛೇದಕ್ಕೆ ಕೊಡುತ್ತದೆ. ಇದೇ ಪ್ರಕಾರ ತಮ ಪ್ರವಿಷ್ಟ ಒಂದು ರಜಸ್ಸು ಕೂಡಾ ತಾನು ರಜಸ್ಸನ್ನಾಗಿ ಮಾಡಿಕೊಂಡು ಪರಮ ಸೂಕ್ಷ್ಮ ತಮಸ್ಸಿನ ಹೊರತಾಗಿ ತನಗೆ ಸಮಾನವಾಗಿದ್ದ ಒಂದು ತಮ ಬಿಂದುವನ್ನು ತಮಃ ಪರಿಛೇದದಿಂದ ಕರಕೊಂಡು ಸೃಷ್ಟಿ ಕಾಲದಲ್ಲಿ ರಜಃ ಪರಿಛೇದದಲ್ಲಿ ಕೊಡುತ್ತದೆ. ಏತೇನ ತಮೋ ಬಿಂದು ಒಂದು ಸತ್ವ ಬಿಂದು ಹತ್ತು ರಜೋಬಿಂದು ಹನ್ನೆರಡು ರಾಜಸ ಸಾತ್ವಿಕ ಸಾವಿರ, ರಾಜಸ ತಾಮಸ ಅತ್ಯಲ್ಪ ಇದು ಇಷ್ಟೂನೂ ಮೂರು ಪರಿಛೇದ ಬಿಂದುಗಳೇ ಹೊರತು ಹೊರಗಿನ ಗುಣತ್ರಯ ರಾಸಿಬಿಂದುಗಳು ಕಲೆಸಿದ್ದು ಅಲ್ಲವಾದ್ದರಿಂದ ಈ ಬಿಂದುಗಳು ನಿತ್ಯವೇ ಸರಿ. ॥ ಪ್ರಮಾಣ:-

*ಗುಣತ್ರಾಣವಃ ಪೂರ್ವಃ ಸಂಖ್ಯಾನಿಯಮತಃಸ್ಥಿತಾಃ ।*
*ಯಾವಂತಸ್ತೇ ಸದಾ ನಿತ್ಯಾಸ್ತೇಷಾಂ ನಾಶೋನವಿದ್ಯತೆ ॥*

ಎಂತ ಪ್ರಕಾಶ ಸಂಹಿತಾ

ನಿತ್ಯ ಹ್ಯಾಗೆಂದರೆ, ಜಡ ಪ್ರಕೃತಿಗೆ ಸಮ ಮಾಹಾತ್ಮ್ಯೆಯುಳದ್ದು. ಪ್ರಕೃತಿಯಲ್ಲಿ ಲಯವನ್ನು ಹೇಳದೆ ಮುಕ್ತರ ಪೂರ್ವ ಲಿಂಗದೇಹಗಳೆಲ್ಲಾ ಹೊರಗೆ ವಿರಜೆಯಲ್ಲಿ ತೇಲುತ್ತದೆ. ಎಂತ ಪ್ರಕಾಶ ಸಂಹಿತೋಕ್ತಿಯೇ ಯುಕ್ತಿಗೆ ಅನುಕೂಲವು. "ಸತ್ವಭಾಗಸ್ತು ಸತ್ವೇಸ್ಯಾಲ್ಲೀನಸ್ತಮಸಿ ತಮಸಃ ।" ಎಂತ ವಿಷ್ಣುರಹಸ್ಯದಲ್ಲಿ ಅದೇ ಪರಿಛೇದಗಳ ಪರಸ್ಪರ ವಿಭಾಗ ಪೂರ್ವಕ ಸೂಕ್ಷ್ಮ ರೂಪಕ್ಕೆ ನಿತ್ಯವು ವಿರೋಧವೇ ಸರಿ. ವಿರಜೆಯಲ್ಲಿ ತೇಲುವ ಪ್ರಮಾಣ ಯುಕ್ತ್ಯನುಕೂಲ. ಸೃಷ್ಟಿ ಕಾಲದಲ್ಲಿ ಯಾವ ಕ್ಷಣದಲ್ಲಿ ಮೂರು ಪರಿಛೇದದ ಬಿಂದುಗಳು ಮಧ್ಯ ಪರಿಛೇದಕ್ಕೆ ಸೇರುವುದೋ ಅದೇ ಕ್ಷಣದಲ್ಲಿ ಹೊರಗಿನ ಜಡಪ್ರಕೃತಿಜನ್ಯ ಗುಣತ್ರಯ ರಾಶಿಗಳಿಂದ, ಹತ್ತು ಬಿಂದುಗಳೂ ರಜೋ ರಾಶಿಯಿಂದ ಹನ್ನೆರಡು ಬಿಂದುಗಳೂ, ತಮೋ ರಾಶಿಯಿಂದ ಒಂದು ಪರಿಛೇದದಲ್ಲಿ ಕೂಡಾ ಪೂರ್ವೋಕ್ತ ಪರಿಛೇದ ಬಿಂದುಗಳು ಇಪ್ಪತ್ತು ಮೂರು ಕಲೆಸಿ ಸಂಖ್ಯೆಗಳ ವಿಂಗಡಿಸಿ ನಲವತ್ತಾರು ಆಗದೆ ಕಲೆಸಿದ ಪ್ರಯುಕ್ತ ಇಪ್ಪತ್ತು ಮೂರೇ ಆಗಿ ಆ ಹತ್ತು ಸತ್ವದಲ್ಲಿ ಮತ್ಸ್ಯಾದಿ ಭಗವದ್ರೂಪಗಳು ಒಂದು

ತಮೋ ಬಿಂದುವಿನಲ್ಲಿ ಜನಾರ್ದನ ರೂಪ ಹನ್ನೆರಡು ರಜೋ ಬಿಂದುಗಳಲ್ಲಿ ಶ್ರೀದೇವಿ ಹನ್ನೊಂದು ಶಕ್ತಿ ಪ್ರತಿಷ್ಠಾದಿ ರೂಪಗಳು, ಒಂದು ಬಿಂದುವಿಗೆ ಬ್ರಹ್ಮ. ಪ್ರಮಾಣ :-

*"ಯಲ್ಲಿಂಗ ಬದ್ಧಸ್ಯ ಯದಾ ಸೂಕ್ಷ್ಮ ದೇಹಾಪ್ತಿರಿಷ್ಯತೇ ।*
*ತತಃ ಸುರ್ವೇಕ್ಷಣೆ ಲಿಂಗ ಗುಣ ವೈಷಮ್ಯ ಮಿಷ್ಯತೆ ।"*

ಹೀಗೆ ಪ್ರಲಯ ವಿಷಯದಲಿಯೂ

*"ಯಸ್ಮಿನ್ ಕಾಲೇ ಯಸ್ಯ ಸೂಕ್ಷ್ಮನಾಶೋಭವತಿ ವಿಷ್ಣುನಾ ।*
*ಅನಿರುದ್ಧೇನ ತನ್ನಿತ್ಯಂ ಕ್ರಮಕೊಂಡಾಂತರೆಬಹಃ ॥*
*ತದುತ್ತರಕ್ಷಣೆ ಲಿಂಗದೇಹೇಚ ಗುಣ ಸಾಮ್ಯತಾ"*

ಎಂತ ಪ್ರಕಾಶ ಸಂಹಿತಾ.

ಸುಳಾದಿ:- ಗುಣ ಸಾಮ್ಯ ವಾದಾಗ್ಯೆ ರಜೋ ಬಿಂದು ಹನ್ನೆರಡು ಮಿನುಗುವ ಸತ್ವದಲ್ಲಿ ಹತ್ತು ವೊಂದೆಸೆ ಮಿಳಿತ, ಅಂದರೆ ಮಧ್ಯ ಲಿಂಗ ರಜಃ ಪರಿಭೇದದಿಂದ ಒಂದೆಶೆ ಎಂದ್ರೆ, ಒಂದೇ ಕ್ಷಣ ಭೇದದಿಂದ ಎಂತ ತೋರಿಸಿದರು. ಮುಂದಿನ ಮಾತು- "ವೆನಿಸುವುದು ತವೋ ಭಾಗದಲಿ ಬಿಂದು ಒಂದನೆ ಪೇಳುವುದು ತನ್ನಯ ಸ್ವರಾಶಿಯಲ್ಲಿಯೂ। ಇನಿತು ಬಿಂದುಗಳಿಗೆ ಶಕ್ತ್ಯಾದಿ ಹನ್ನೊಂದು ಚಿನುಮಯಾದೇವಿ ಸಿರಿ ಲಕುಮಿಗೆ ಇದೇ ಹೆಸರು. ಗುಣ ವೈಷಮ್ಯವಾಗೆ ಎರಡು ರಾಶಿಯಲಿದ್ದ ಅಣು ಬಿಂದು ಹನ್ನೊಂದು ತತ್ತದ್ರಾಶಿಯಲಿ ಉಳ್ಳ ಮಣಿ ವಜ್ರ ಪ್ರಕಾಶ ಭಾಗದಿಂದಲಿ ಮತ್ತೆ ಅನುವಾಗಿ ರಜೋ ಬಿಂದು ಈರೈದು ಬರುವಾಗ ವಿನಯದಿಂದ ತತ್ಪರಿಮಿತ ಬಿಂದುಗಳು, ಗುಣ ತತ್ವ ಸ್ಥಳದಿಂದ ಹತ್ತು ಹೊರಡಿಸಿಕೊಂಡು ಜಿನಗು ಒಂದೊಂದಕೆ ಹತ್ತು ಯುಕ್ತವಾಗಿವೆ. ಎಣಿಕೆ ನೋಡುವುದು. ತಮದಲ್ಲಿ ಇದ್ದು ಒಂದನೇ ಬಿಂದು ಕೊಂಡು ತನ್ನಲ್ಲಿ ಪ್ರವೇಶಿಸಿತು. ವನಜರಾಗ ಪರಿಭೇದದಲ್ಲಿ ಸೂಚನೆ:- ಸತ್ವ ಬಗೆಯ ಬಿಂದು ಹತ್ತು ತವೋ ಬಿಂದು ಒಂದು ಇನಿತ ಈರೈದೊಂದು ಸ್ವರಾಶಿಯವು ಹನ್ನೆರಡು ಗುಣ ವೈಷಮ್ಯನೆಂದು ಲಿಂಗದಲ್ಲಿ ಆಯಿತು ಗುಣವಂತ ವಿಜಯವಿಠಲರೇಯ ಅಲ್ಲಲ್ಲಿ ನಿಯಾಮಕನಾಗಿಪ್ಪ ಮತ್ಸ್ಯಾದಿರೂಪದಲ್ಲಿ." ಎಂತ ಜೀವಾಖ್ಯ ಸುಳಾದಿಯು. "ಸತ್ವಾಣುವೊಂದಾಧಿಕ್ಯಂ ಯಾಂತ್ಯೇವೋಪಚಿತೇ

ಸತಾಂ'' ಎಂತ ಪ್ರಕಾಶ ಸಂಹಿತೆಯಿಂದಲೂ ಸುಳಾದಿಯಿಂದಲೂ ಸೃಷ್ಟಿಯಲ್ಲಿ ಇಪ್ಪತ್ತು ಮೂರು ಬಿಂದುಗಳಿಂದ ಗೋಡೆಗೆ ಪ್ರತ್ಯೇಕ ಮಣ್ಣು ವರದಂತೆ ಲಿಂಗ ದೇಹ ಉಪಚಿತವಾಗಿ ದ್ವಿತೀಯ ಕ್ಷಣದಲ್ಲಿ ಮುಂದಿನ ದೇಹ ಬೆಳೆದು ಬಂತು ಎಂತ ಹೇಳೀದ್ದಾರೆ. ಆ ಬಿಂದುಗಳು ಹ್ಯಾಗಿವೆ ಎಂದರೆ, ಬೀಜದ ಭತ್ತ ಮೊಳಕೆ ಆದ ರೀತಿಗೆ ಇಪ್ಪತ್ತು ಮೂರು ಮೊಳಕೆಯಾಗಿ ಸೃಷ್ಟಿಯಲ್ಲಿ ಜೀವ ಪ್ರಕಾಶವು ಸಂಗಡಲೇ ಕೂಡಿಬಂದಿದೆಯಷ್ಟೆ- ಭೂಮಿಯ ಒಳಗಿನ ಬೀಜವೇ ಮಣ್ಣು ನೀರಿನ ಸಂಬಂಧದಿಂದ ಮೊಳಕೆ ಹ್ಯಾಗೆ ಎದ್ದು ಬರುತ್ತದೋ ಹಾಗೆ ಇಪ್ಪತ್ತು ಮೂರು ಮೊಳಕೆಗಳಲ್ಲಿ ಹತ್ತು ಸತ್ವವು ಒಂದೊಂದೇ ಪುನಃ ಹತ್ತು ಮುಖ ವಡೆದು ಕಣಗಿಲೆ ಮೊಗ್ಗಿನಂತೆ ಬೇರೆ ಬೇರೆ ಹತ್ತು ಹತ್ತು ಮುಖವಾಗಿದ್ದು ಅದೇ ಮುಂದಕೆ ನೂರಾಗೋಣವು ಲಿಂಗದೇಹದಂತೆ ಇದಕ್ಕೂ ಹದಿಮೂರು ಬಿಂದು ಕೂಡೋಣವು ನೂರಹದಿಮೂರು ಬಿಂದು ವಿಶಿಷ್ಟ ಅವ್ಯಕ್ತ ದೇಹವೆ. ಆ ಲಿಂಗದ ಮೇಲೆ ಸೃಷ್ಟವಾಯಿತು. ಒಳಗೆ ಜೀವನು ಸ್ಥೂಲದೇಹಾಭಿಮಾನದಂತೆ ಇಲ್ಲಿ ಮಾತ್ರ ಗರ್ಭವಾದರೆ, ಅಲ್ಲಿ ಅವ್ಯಕ್ತದ ಮೇಲೆ ಅನಿರುದ್ಧ ದೇಹವು- ಅನಿರುದ್ಧ ದೇವರ ಗರ್ಭದಲ್ಲಿ ಬೆಳೆದು ಮುಂದೆ ಆತನ ದೇಹದ ಕೂದಲು ಗುಣಗಳಿಂದ ಹೊರಗೆ ಬಂದಂತೆ ಬ್ರಹ್ಮಾಂಡದ ಹೊರಗೆ ಸರ್ವ ಜೀವರಿಗೂ ಅನಿರುದ್ಧ ದೇಹವೆನಿಸುತ್ತದೆ. ''ಅವ್ಯಕ್ತ ದೇಹದಲ್ಲಿ ಪುರುಷನಾಮಕ ಹರಿ ರೂಪಗಳು ಕೊತಿವೆ. ವರ ವಿಶ್ವ ಅನಿರುದ್ಧ ನಾರಾಯಣಾದಿ'' ಎಂತ ಜೀವಾಖ್ಯ ಸುಳಾದಿ. ವಿಶ್ವ ತೈಜಸ ಪ್ರಾಜ್ಞ ತುರೀಯ ಆತ್ಮಾಂತರಾತ್ಮ ಪರಮಾತ್ಮ ಜ್ಞಾನಾತ್ಮ ರೂಪಗಳು ಎಂಟು ಅನಿರುದ್ಧ ಪ್ರದ್ಯುಮ್ನ ಸಂಕರ್ಷಣ ವಾಸುದೇವ ನಾರಾಯಣ ಐದು ''ನಾರಾಯಣೊ ನರಃ ಶೌರಿ'' ಇತ್ಯಾದಿ ನೂರು ರೂಪ ಅಂತು ೧೧೨ ರೂಪಗಳಲ್ಲಿ ಸತ್ವದಲ್ಲಿ ಒಂದೊಂದು ಬಿಂದುಗಳೇ ಪ್ರತ್ಯೇಕ ಸಾವಿರ ಬಿಂದುಗಳಿಂದ ಕಣಗಲೆ ಮೊಗ್ಗಿನ ಗುಂಪಿನಂತೆ ವಿಂಗಡಸದ ಹಾಗೆ ನೂರು ಗುಂಪಾಗಿ ಅವ್ಯಕ್ತ ದೇಹದಲ್ಲಿ ೧೧೩ ಎಂತ ಹೇಳಿಸಿಕೊಂಡು ಹನ್ನೆರಡು ರಜಸ್ಸು ಕೂಡಾ ಒಂದೊಂದು ಸಾವಿರ ಮುಖವಾಗಿದೆ. ಅದು ವಿಂಗಡಿಸಿಕೊಳ್ಳಲಿಲ್ಲ. ಒಂದು ತಮೋ ಬಿಂದು ಹತ್ತು ಮುಖವಾಗಿದೆ. ಅದೂನೂ ವಿರಳವಾಗದೆ. ಅವ್ಯಕ್ತ ದೇಹವೆನಿಸಿಕೊಂಡಿದ್ದು ಅನಂತರ ಸೂಕ್ಷ್ಮ ದೇಹವು ಮುಂದೆ ಬೆಳೆದು ಬಂದು ಬಿಂದುಗಳು ವಿರಳವಾಗಿ ಅನಿರುದ್ಧ ದೇಹವೆನಿಸಿಕೊಂಡಿತು. ಬೆಳಿಯೋಣ ಎಂದರೆ ಪ್ರದ್ಯುಮ್ನನ ಸೃಷ್ಟಿಯಲ್ಲಿ ಅವ್ಯಕ್ತ

ದೇಹಕ್ಕೂ ಅನಿರುದ್ಧ ಸೃಷ್ಟಿಯಲ್ಲಿ ಅನಿರುದ್ಧ ದೇಹಕ್ಕೂ, ಪ್ರತ್ಯೇಕ ಪ್ರತ್ಯೇಕವಾಗಿ ಹೊರಗಿನ ರಾಶಿ ಬಿಂದುಗಳು ಒಂದುಕೂಡಿ ಪೂರ್ವ ಸೃಷ್ಟ ದೇಹವೇ ಎರಡನೇ ದೇಹಕ್ಕೆ ಬೀಜರೂಪ.

*"ಪ್ರದ್ಯುಮ್ನ ರೂಪಃ ಸ್ವಾಂಗೇಶು ಬೀಜತ್ವೇನಾ ಸೃಜತ್ಸ್ಯಯತಾಃ।*
*ಸರ್ವಾಃ ಅನಿರುದ್ಧಾಖ್ಯಃ ಇತ್ಯಾದಿ ವಿಷ್ಣುರಹಸ್ಯ."*

## ಅನಿರುದ್ಧ ರೂಪಿ ಭಗವಂತನ ಚಿಂತನ

ಅನಿರುದ್ಧ ದೇಹಕ್ಕೆ ಲಕ್ಷ ಬಿಂದು ಸತ್ವ ೧೨೦೦ ರಜಸ್ಸು ೧೦ ತಮೋ ಬಿಂದು. ಅಂತು ಲಕ್ಷದ ಸಾವಿರದ ಇನ್ನೂರ ಹತ್ತು ಸತ್ವ ಬಿಂದು ಒಂದು ಲಕ್ಷಕ್ಕೆ ನೂರು ಸಹಸ್ರನಾಮದ ಭಗವದ್ರೂಪಗಳು ನಾರಾಯಣಾದಿ ಹನ್ನೆರಡು ನೂರು ಭಗವದ್ರೂಪಗಳು ರಜೋ ಬಿಂದುಗಳಲ್ಲಿ ಅದೆ. ಹತ್ತು ತಮೋ ಬಿಂದುಗಳಲ್ಲಿ ಹತ್ತು ಜನಾರ್ದನ ರೂಪಗಳು ಲಿಂಗ ಶರೀರದ ಮೂರು ಪರಿಛೇದಗಳಲ್ಲಿ ವಿಶ್ವ ತೈಜಸ ಪ್ರಾಜ್ಞರೂಪಗಳು- ಸುಳಾದಿ:- "ವರ ವಿಶ್ವ ತೈಜಸ ಪ್ರಾಜ್ಞ ಮೂರು ಮೂರುತಿ ಅವತರಿಸಿದವು ಮೂಲದಿಂದಲಿತನಕ." ಎಂತ ಜೀವಾಖ್ಯ ಸುಳಾದಿ. ಮೂರು ರೂಪಗಳೇ ಬ್ರಹ್ಮ ವಿಷ್ಣು ರುದ್ರ ನಾಮಕ ಶ್ರೀ ಭೂ ದುರ್ಗಾಪತಿ ಪೂಜಕರು ಬ್ರಹ್ಮ ವಾಯು ಸರಸ್ವತೀ ಭಾರತೀ ಮನಸ್ಸು ೧, ಜ್ಞಾನೇಂದ್ರಿಯ ಐದು, ಕರ್ಮೇಂದ್ರಿಯ ಐದು ಶಬ್ದಾದಿ ವಿಷಯಗಳು ಐದು. ಅಂತು ಹದಿನಾರು ಇವುಗಳಲ್ಲಿ ಕೇಶವ ನಾರಾಯಣಾದಿ ಅನಿರುದ್ಧ ಮೂರ್ತಿ ಪರ್ಯಂತ ಹದಿನಾರು ಭಗವದ್ರೂಪಗಳು; ಕೊನೆಯ ಪರಿಛೇದದಲ್ಲಿ ಅಜ್ಞಾನ ೧, ಮೋಹ ಮಹಾಮೋಹ ತಾಮಿಸ್ರ ಅಂಧತಾಮಿಸ್ರ ಇವು ಅಜ್ಞಾನ ಪ್ರಭೇದಗಳು, ಅನಾದಿ ಕಾರಣ ರೂಪಗಳು, ಪಾಪ ಬುದ್ಧಿ ಜನಕಗಳು ಅಲ್ಲಿ ಐದು ಭಗವದ್ರೂಪಗಳು ಕೃದ್ಧೋಲ್ಕ ಮಹೋಲ್ಕ, ವೀರೋಲ್ಕ, ದ್ಯುಲ್ಕ ಸಹಸ್ರೋಲ್ಕ ನಾಮಕಗಳು ವಿಶಿಷ್ಟ ಲಿಂಗದೇಹಕ್ಕೆ ಜಾನರ್ದನ ಮೂರ್ತಿ- ಸುಳಾದಿ:- ವೂತರೆ ವಿಶಿಷ್ಟ ಲಿಂಗದೇಹಕೆ ಖಳರ ಘಾತಿಸುವ ಮೂರ್ತಿ ಜನಾರ್ದನನೆನ್ನಿ. ದೈತೇಯ ಗಣದ ಪ್ರಸಂಗವೇ ಇಲ್ಲ. (?). ಅಂದರೆ ಲಿಂಗದೇಹದಲ್ಲಿ ರುದ್ರಾದಿಗಳು ಕಲ್ಯಾದಿಗಳು ಇಲ್ಲವೆಂದರ್ಥವು. ಪ್ರಮಾಣ:-

*ಅಜ್ಞಾನಂಚ ತಥಾ ಮೋಹೋ ಮಹಾಮೋಹಸ್ತಥೈವಚ ॥*
*ತಾಮಿಸ್ರಾಂಧತಾಮಿಸ್ರೋಹ್ಯವಿದ್ಯಾ ಪಂಚ ಪಾರ್ವಿಕಾ ॥*
*ತಮಃ ಎಂದರೆ ಅಜ್ಞಾನ ತಮಸ್ಥ ಶಾರ್ವರಂ ಪ್ರೋಕ್ತಂ*
*ಮೋಹೋ ಅಜ್ಞಾನ ವಿಪರ್ಯಯಾ ತದಾಗ್ರಹೋ ಮಹಾಮೋಹಾ*
*ಮೋಹಸ್ತಾಮಿಸ್ರಃ*
*ಕ್ರೋಧ ಉಚ್ಯತೇ ಮರಣಂತ್ವಂಧತಾಮಿಸ್ರೋಹ್ಯವಿದ್ಯಾ ಪಂಚ ಪರ್ವಕಾ।*
ಎಂತ ವಿಷ್ಣುರಹಸ್ಯ.

ತಮಃ ಅಂದರೆ ಮರಣ ಮೋಹವೆಂದರೆ ಅನ್ಯಥಾಜ್ಞಾನ ಮಹಾಮೋಹವೆಂದರೆ ಅಂತಹ ಅನ್ಯಥಾಜ್ಞಾನದ ದಾರ್ಢ್ಯ. ಅಂದರೆ ರಜ್ಜು ಸರ್ಪವೇ ಸರಿ, ತಕ್ರ ಕ್ಷೀರವೇಸರಿ, ಎನ್ನುವುದು. ತಾಮಿಸ್ರ ಅಂದರೆ ಕ್ರೋಧ. ಅಂದರೆ ತಾನು ಇಚ್ಛಿಸಿದ್ದುವದಗದೇ ಇದ್ದರೆ ಆ ಇಚ್ಛೆಗೆ ಕ್ರೋಧ ಎಂತ ಹೆಸರು. ಮರಣಂತ್ವಂಧತಾಮಿಸ್ರಃ। ಅಂದರೆ ತತ್ಕಾಲ ಪ್ರಾಪ್ಯವಾದ ಅಜ್ಞಾನವು. ಲಿಂಗದೇಹದಲ್ಲಿ ಕಾರಣ ರೂಪಗಳು. ಇವುಗಳು ಕಾರ್ಯ ರೂಪಗಳು ಹಾಗೆ ಎರಡು ಪ್ರಕಾರವೆಂತ ಪೂರ್ವದಲ್ಲಿಯೇ ಹೇಳಿ ಇದ್ದೇನೆ. ಈಗಿನ ಅಜ್ಞಾನವನ್ನು ಚಿಂತಿಸಿ ನೂಕ ಬಹುದು. ಆ ಕಾಲದ ಅಜ್ಞಾನವನ್ನು ಶ್ರೀಶನೇ ಪರಿಹರಿಸಬೇಕು. ಇವನ ಯತ್ನಕ್ಕೆ ಅಸಾಧ್ಯ.

*"ಜ್ಞಾನಿನಾಂ ಕರ್ಮ ಯುಕ್ತಾನಾಂ ಕಾಯತ್ಯಾಗಕ್ಷಣೆ ಯದಾ ।*
*ವಿಷ್ಣು ಮಾಯಾಂತದಾರೇಷಾಂ ಮನೋ ಬಾಹ್ಯಂ ಕರೋತಿಹಿ ॥"*
ಎಂತ ಗೀತಾ ಭಾಷ್ಯ ಪ್ರಮಾಣ–

ಆ ಕಾಲದಲ್ಲಿ ಜ್ಞಾನಿಗಳಿಗೆ ಮಾತ್ರ ಗರ್ಭವನ್ನು ಅನುಭವಿಸತಕ್ಕ ದುಷ್ಕರ್ಮ ಪ್ರಾರಬ್ಧ ಇರತಕ್ಕವರಿಗೆ ಸರ್ವದಾ ನಾಮಸ್ಮರಣೆಯನ್ನು ಮಾಡೋದ್ದಾದರೂ ಒಂದೇ ಕ್ಷಣದಲ್ಲಿ ಮನಸ್ಸಿಗೆ ಅಂಧತಾಮಿಸ್ರ ಅಜ್ಞಾನವನ್ನು ಶ್ರೀ ಹರಿ ಇಚ್ಛೆಯು ತಂದು ಹಾಕಿ ಕೆಡಿಸುತ್ತದೆ. "ನಾವು – ಆಗಲೇ ಕಾಯ ಬೇಕು ಅಂಬುಜಾಕ್ಷ ಎನ್ನನು । ಈಗ ನೀಕಾಯಿದರೇನು ಕಾಯದಿದ್ದರೆ ಏನು॥" ಎಂತ ಪುರಂದರ ದಾಸರ ವಚನವು. ಅಜ್ಞಾನಗಳು ಹ್ಯಾಗೆ ಐದು ಪ್ರಕಾರವೋ ಹಾಗೆ ಪ್ರಥಮ ಪರಿಚ್ಛೇದದಲ್ಲಿರತಕ್ಕ ಒಂದು ಮನಸ್ಸೇನೇ ಐದು ರೂಪವಾಗಿ

ಜ್ಞಾನಾಕಾರವಾಗಿ ಅದೆ. . . . ವಿವರ :– ಮನಸು ಬುದ್ಧಿ ಚಿತ್ತ ಅಹಂಕಾರ ಚೇತನ ಅಂತ ಐದು. ಮನಸ್ಸು ಅಂದರೆ ಸಂಕಲ್ಪ ವಿಕಲ್ಪಾತ್ಮಕಂ ಮನಃ । ಅದೋ ಇದೋ ಹಾಗೋ ಹೀಗೋ ಎಂಬ ಸಂಶಯ ಜ್ಞಾನವೇ ಮನಸ್ಸು– ಈ ಮನಸ್ಸಿನ ಧರ್ಮವೇ ಇಚ್ಛಾ, ಇದೇ ಕಾಮ. ಇಂದ್ರ ಕಾಮರು ಇದಕ್ಕೆ ಅಮುಖ್ಯಾಭಿಮಾನಿಗಳು. ರುದ್ರ ದೇವರು ಮುಖ್ಯಾಭಿಮಾನಿಗಳು. ಗೋಡೆಗೆ ಮೇಲೆ ಮಣ್ಣು ಹಚ್ಚಿ ನಯ ಮಾಡಿದ ಹಾಗೆ ಭುಕ್ತವಾದ ಅನ್ನರಸವೇ ಕ್ಷೀರದಿಂದ ಘೃತವು ಹುಟ್ಟಿದ ಹಾಗೆ ಮನೋರೂಪ ತೇಜಸ್ಸಾಗಿ ಪೂರ್ವ ಮನಸ್ಸಿಗೆ ಉಪಾಧಾನವಾಗುತ್ತದೆ. ಆಹಾರವಿಲ್ಲದ ಮನಸ್ಸು ಮಳೆಯಿಂದ ಮಣ್ಣು ಗೋಡೆ ಕರಗುವ ಹಾಗೆ ಕರಗಿ ಜಠರಾಗ್ನಿಯೇ ಮನಸ್ಸಿನ ಕಳೆಯನು ಹೀರುತ್ತದೆ. ಸುಳಾದಿ:– ಕೇಳುವುದುಂಡನ್ನ ಮೂರು ಭಾಗವಾಗಿ ಸ್ಥೂಲ ಭಾಗ ಪುರೀಷ ಮಧ್ಯ ಭಾಗ ಮಾಂಸ ಮೇಲು ಸೂಕ್ಷ್ಮ ಭಾಗ ಮನಸ್ಸಿಗೆ ಉಪಾದಾನವಾಗಿ ಲಯವುಂಟು. ಮತ್ತು ಉದಕ ಮೂರು ಭಾಗ ಸ್ಥೂಲ ಭಾಗ ಮೂತ್ರ, ಮಧ್ಯ ಭಾಗ ರಕ್ತ ಮೇಲು ಸೂಕ್ಷ್ಮ ಭಾಗ ವಾಕ್ಕಿಗೆ ಉಪಾದಾನ. ಅಂದರೆ ನಾಲಿಗೆ ಒಣಗುವುದಕ್ಕೆ ಎಂತ ಅರ್ಥ. ಮುಂದಿನ ಮಾತು "ವಾಲಾಯವುಂಟು ಕೇಳು, ಘೃತ ಮೂರು ಭಾಗವಾಗಿ ಸ್ಥೂಲ ಭಾಗವೇ ಅಸ್ಥಿ, ಮಧ್ಯ ಭಾಗ ರೇತಸ್ಸು ಮೇಲು ಸೂಕ್ಷ್ಮ ಭಾಗ ಶ್ವಾಸೋಚ್ಛ್ವಾಸ ಕಾರಣ" ಎಂತ ಪ್ರಾಣಾಹುತಿ ಸುಳಾದಿ ಸಿದ್ಧ. ಬುದ್ಧಿ ಎಂದರೆ ನಿಶ್ಚಯ ಜ್ಞಾನವು. ಅಂದರೆ ಇದು ಹೀಗೆಯೇ ಸರಿ ಎಂಬ ನಿಶ್ಚಯ. ಇದು ಹ್ಯಾಗೆ ಹುಟ್ಟುತ್ತದೆ ಎಂದರೆ, ಚಿತ್ತದಿಂದ ಹುಟ್ಟುತ್ತದೆ. ಚಿತ್ತ ಎಂದರೆ ಸಂಶಯ ಪರಿಹಾರಾರ್ಥವಗಿ ವಿವೇಕ ಮಾಡತಕ್ಕ ಮನಸ್ಸು ಮಥನ ಮಾಡಿ ಪೂರ್ವೋಕ್ತ ಸ್ಮರಣೆಯಿಂದ ನಿಶ್ಚಯ ಮಾಡಿ ಬುದ್ಧಿಯನ್ನು ಹುಟ್ಟಿಸುತ್ತದೆ. ಬುದ್ಧ್ಯಭಿಮಾನಿ ಉಮಾದೇವಿಯರು, ಈಕೆ ಅಮುಖ್ಯಾಭಿಮಾನಿ ಭಾರತೀ ದೇವಿಯರು ಮುಖ್ಯಾಭಿಮಾನಿಗಳು. ಚಿತ್ತಾಭಿಮಾನಿ ಗರುಡ ದೇವರು. ಆಹಂಕಾರವೆಂದರೆ "ಅಸ್ಮಾಧೀನೆ ಸ್ವತಂತ್ರ ಬುದ್ಧಿರಹಂಕಾರ" ಅಂದರೆ, ಎದ್ದೇನು ಕೂಡೇನು ಇತ್ಯಾದಿ ಅಪೇಕ್ಷೆಗಳಿಗೆ, ಅಹಂಕಾರವು ಬಂದು ವದಗದ ಹೊರತು ಅಣು ಮಾತ್ರ ಕಾರ್ಯವಾಗದು. ಆತಏವ ಯತ್ನವೇ ಇದರ ಧರ್ಮವಾಗಿ ಅಹಂಕಾರವೇ ಯಜಮಾನ ತತ್ವರೂಪ. ಇದೇ ಜ್ಞಾನಾಜ್ಞಾನ ಉಭಯ ಮಿಶ್ರ ರೂಪವಾಗಿ ಅಜ್ಞಾನ ಪರಿಹಾರವನ್ನು ಶ್ರೀ ಹರಿಯು ಮಾಡಿಸಿದರೆ, ಸಂಪೂರ್ಣ ಭಕ್ತ್ಯುದ್ರೇಕಕ್ಕೆ ಸಾಧಕವಾಗುತ್ತದೆ. ಈ ಅಹಂಕಾರಾಭಿಮಾನಿಗಳು ರುದ್ರ ದೇವರು.

ಇವರೇ ನಿಷ್ಕಾಮ ಭಗವದಾರಾಧನೆಯಲ್ಲಿ ಈ ಅಧಿಕಾರಿಗೆ ದೀಕ್ಷೆ ಹುಟ್ಟಿಸಿ ವಿರಕ್ತರನ್ನು ಮಾಡಿ ಬ್ರಹ್ಮ ವಾಯುಗಳು ತಮ್ಮ ಸಮೀಪಕ್ಕೆ ಕರಕೊಳ್ಳತಕ್ಕ ಈ ಅಧಿಕಾರಿಯ ದೀಕ್ಷೆಯಲ್ಲಿ ಅಂತರ್ಗತರಾಗಿರುತ್ತಾರೆ. ಅಹಂ ಮಮೇತ್ಯಾದಿ ಸ್ವಾಮಿದ್ರೋಹಕ್ಕೂ ಇದೇ ಮುಖ್ಯ ಕಾರಣವು. ಇದರ ದೋಷಗಳು ಹೋಗಬೇಕಾಗಿ ಇದೇ ಗುಣಗಳಿಂದಲೇ ಮುಕ್ತಿ ಬಂದ ಅನಂತರದಲ್ಲಿಯೂ ಜೀವರುಗಳು ನಿರುಪಾಧಿಕ ಭಗವದಾರಧಕರಾಗುತ್ತಾರೆ.

*"ರಸಾಘನ ರಸಾನಲ ಅನಿಲ ವಿಯದ್ವಿವಸ್ವದ್ವಿಧು ಪ್ರಯಷ್ಟು ಘನಿವಿಷ್ಟಮಿತ್ಯಜ ಭಜಾಮಿಮೂರ್ತ್ಯಷ್ಟಕಂ ।"*

ಎಂತ ಶಿವ ಸ್ತುತಿಯಲ್ಲಿ

"ಭೂಮಿಯಲ್ಲಿ ಉದಕದಲ್ಲಿ ಅಗ್ನಿಯಲ್ಲಿ ವಾಯುವಿನಲ್ಲಿ ಆಕಾಶದಲ್ಲಿ ಸೂರ್ಯನಲ್ಲಿ ಚಂದ್ರನಲ್ಲಿ ಪ್ರತ್ಯದಲ್ಲಿ ಪ್ರತ್ಯತದಲ್ಲಿ ಬೇಕಾದದ್ದು ಪ್ರಯಷ್ಟುಷು ಅಂದರೆ ಮಖ ಮಿಗಿಲಾದ ಕರ್ಮಕ್ಕೆ ಶಕುತಿ ಕೊಡುವ" ಎಂತ ಬಿಂಬ ಕ್ರಿಯಾಸುಳಾದಿ ಪ್ರಕಾರ ದೀಕ್ಷಿತರಲ್ಲಿ ರುದ್ರ ದೇವರ ಸನ್ನಿಧಾನವನ್ನು ತತ್ವ ಪ್ರಕಾಶಿಕೆಯಲ್ಲಿಯೂ ನಿರೂಪಿಸಿದ್ದಾರೆ. ೪. ಚೇತನ ಅಂದರೆ –ಪ್ರವಾಹರೂಪವಾದ ವೃತ್ತಿ ಜ್ಞಾನ. ಇದೇ ಶಾಸ್ತ್ರ ಜನ್ಯ. ಶಾಸ್ತ್ರ ಶ್ರವಣದಿಂದ ಪಂಚಭೇದ ತಾರತಮ್ಯಾದಿ ತತ್ವಗಳ ನಿಶ್ಚಯ ಜ್ಞಾನ– ಇದು ಜೀವನ ಸ್ವರೂಪವಲ್ಲವಾದುದರಿಂದ ನಿದ್ರೆವಳಗೆ ಇವಗೆ ಇದರ ಅನುಭವವಿಲ್ಲ. ಈ ಚೇತನಾ ಎಂಬ ಜಡಕ್ಕೆ ಅಭಿಮಾನಿ ಶೇಷದೇವರು– ಮುಖ್ಯಾಭಿಮಾನಿಗಳು ಬ್ರಹ್ಮವಾಯುಗಳು. ಪ್ರಮಾಣ :–

*"ಮನಸೀಂದ್ರ ಉಮಾಕಾಮಃ ಅಹಂಕಾರೇ ಮಹೇಶ್ವರಃ ।*
*ಚಿತ್ತೇ ಖಗಶ್ಚೇತನೇತು ಶೇಷಃ ।"* ಎಂತ ಅಧ್ಯಾತ್ಮ ಮಾಲಾ ಸಿದ್ಧ.

ಆದರೆ ಈ ಚೇತನ ಬುದ್ಧಿಗಳಿಗೆ ಒಂದು ನಿಶ್ಚಯ ಜ್ಞಾನವೇ ಗುಣವಾದುದರಿಂದ ಭೇದವೆಂದರೆ, ಪೂರ್ವದಲ್ಲಿ ಅರ್ಥ ನಿಶ್ಚಯಗೊಂಡು "ತತ್ರೈವ ಸರ್ವಂ ಸಂಸ್ಕಾರಾಃ" ಎಂಬ ಗೀತಾ ತಾತ್ಪರ್ಯ ವಚನದಿಂದ ಮನಸ್ಸು ಎಂಬ ಪಾತ್ರೆಯಲ್ಲಿ ನಿಶ್ಚಯ ಜ್ಞಾನ ಬೀಜಗಳನ್ನು ತುಂಬಿ ಕೊಂಡಿದ್ದಾನಾದುದರಿಂದ ಅನಿಶ್ಚಯ ಬೀಜಗಳೇವೇ ಕೆಂಡದಿಂದ ಜ್ವಾಲೆಯಂತೆ

ನಿದ್ರೆಯನ್ನು ಮಾಡಿ ಏಳುವ ಕಾಲದಲ್ಲಿ ಘಟ ಪಟಾದಿಗಳನು ನೋಡಿ ಇದು ಏನು ಅದು ಏನು ಎಂಬ ಸಂಶಯವಿಲ್ಲದೆ ಆಲೋಚನೆಯನ್ನು ಹೊರತು ತಿಳಿದಷ್ಟು ಜ್ಞಾನವು ಸ್ವತಏವ ದೀಪದ ಹಾಗೆ ಪ್ರಜ್ವಲಿಸೋಣವೆ ಚೇತನವೆನಿಸಿಕೊಳ್ಳುತ್ತದೆ. "ಸಾಚೇತನಾಗೂಢತನುಃ ಸದೈವ" ಎಂತ ತಾತ್ಪರ್ಯ ನಿರ್ಣಯ, ೨೯ನೇ ಅಧ್ಯಾಯ ಶಾಂತಿ ಪರ್ವ, ಭೀಮಸೇನ ದೇವರ ವಚನವು. ಬುದ್ಧಿಯಾದರೋ ನೂತನವಾಗಿ ತಿಳಿಯದಿದ್ದದ್ದು ತಿಳಕೊಂಡು ನಿಶ್ಚಯ ಮಾಡಿಕೊಳ್ಳತಕ್ಕದ್ದು. ಇದೇ ಭೇದವು. ಈ ಐದು ಜ್ಞಾನಗಳು ಜಡಗಳೇಸರಿ. ಜೀವ ಸ್ವರೂಪ ಜ್ಞಾನ ಇವುಗಳಲ್ಲಿ ಹೇಗೆ ಹೇಗೆ ಮಿಶ್ರವಾಗುವುದೋ ಅಂಥಂಥಾ ಇಚ್ಛೆಗಳು ಹುಟ್ಟುತ್ತವೆ. ಇವುಗಳು ವಿರಜಾಸ್ನಾನದ ತನಕ ಇದ್ದು ನಿವೃತ್ತವಾಗುತ್ತವೆ. ಪ್ರಮಾಣಃ–

*ಪ್ರಾಕೃತಾಂತಃಕರಣಜಂ ಜ್ಞಾನಮಸ್ತ್ರಂ ಶೃತಿಚ್ಛಿದಂ ।*
*ತದೆವ ತೇನ ಸಂಭೇದ್ಯಂ ಚಿತ್ತಂ ಪ್ರಕೃತಿ ಸಂಭವಂ।*
*ತೇನೈವ ಸಹ ಸಂತ್ಯಾಜ್ಯಂ ನೈವಪೂರ್ವಂ ಕಥಂಚನ ॥*
*ಜ್ಞಾನಂ ಪ್ರಕೃತಿಜಂ ಚಾಪಿ ಮೂಲನಾಶೋ ವಿನಶ್ಯತಿ ॥*

ಅಂದರೆ ಪುಷ್ಪದಲ್ಲಿ ವಾಸನೆಯಂತೆ ಈ ಪಂಚ ವೃತ್ತಿಗಳು ಜ್ಞಾನೇಂದ್ರಿಯ ಕರ್ಮೇಂದ್ರಿಯಗಳಿಗೆ ಮೂಲವಾದ ಪುಷ್ಪವೆಂಬ ಲಿಂಗ ದೇಹನಾಶ ಹೊರತು ಈ ಜ್ಞಾನಾದಿಗಳ ನಾಶಕ್ಕೆ ಮಾರ್ಗವಿಲ್ಲವೆಂದು ಅರ್ಥವು. ಪ್ರಮಾಣ :–

*ತತಃ ಪರಂ ಸ್ವರೂಪೇಣ ಜ್ಞಾನೇನೈವ ಜನಾರ್ದನಂ ।*
*ವ್ಯಕ್ತಿ ಮುಕ್ತೀ ತಥಾತ್ಮಾನಂ ಜೀವಾನನ್ಯಾಂಶ್ಚ ಸರ್ವಶಃ ॥*

ಇತಿ ಮಾಹಾತ್ಮ್ಯೇ ಎಂತ ಏಕಾದಶ ತಾತ್ಪರ್ಯ ತ್ರಯೋದಶೋಧ್ಯಾಯ.

ಈ ಪಂಚ ವೃತ್ತಿ ಮನಸ್ಸುಗಳಲ್ಲಿ ಮಹತತ್ವ ಅಹಂಕಾರತತ್ವ ಮನಸ್ತತ್ವ ಇವು ಮೂರೂ ೨೪ಕ್ಕೆ ಉಳಿದ ೨೧ಕ್ಕೆಅವ್ಯಕ್ತ ಬಂದು ಈ ಜ್ಞಾನವೇ ಮಹತತ್ವವೆಂತ ಕರೆಸಿಕೊಂಡು ಸತ್ವ ಜನ್ಯವಾದ ಕಡೆಯಿಂದ ಬಲಾತ್ಕಾರವಾಗಿಯೂ ಇದೆ. ಭಾವದ್ರವ್ಯಕ್ರಿಯಾತ್ಮಕಃ । ಎಂತ ಅಹಂಕಾರ ತತ್ವವನ್ನು ಹೇಳಿರುವುದರಿಂದ, ಅವ್ಯಕ್ತ ಮಹದಾದಿಗಳಿಗೂ ಕ್ರಿಯಾತ್ಮಕತ್ವ ಉಂಟು.

*"ಮೂಲಾ ಚ ಪ್ರಕೃತಿಃ ಸರ್ವಕಾರ್ಯೇಷು ವಿತತಾಸದಾ ।"*

ಎಂತ ಸತ್ತತ್ತ್ವರತ್ನಮಾಲಾ.

ಅವ್ಯಕ್ತ ಅಂದರೆ ಅದೇ ಸತ್ವಗುಣ ರಜೋಗುಣ ತಮೋಗುಣ ಎಂತ ಮೂರು ರೂಪಗಳು. ಜ್ಞಾನಜನ್ಯವಾದ ಆನಂದವೂ, ಅವ್ಯಕ್ತ ತತ್ವವೆನಿಸಿಕೊಳ್ಳುತ್ತದೆ. ಇದು ಶೃತ್ಯರ್ಥಾನುಭವಾನಂದ ಆರಾಧಿತ ಭಗವದ್ದರ್ಶನಾನಂದ ಜ್ಞಾನಿಗಳ ಸಂದರ್ಶನ ಪಾದಸ್ಪರ್ಶನಾದಿ ಜನ್ಯಾನಂದವೇ ಆನಂದಮಯಾಖ್ಯ ಕೋಶ ಜಡರೂಪ. ಅದರ ಮೇಲೆ ವಿಜ್ಞಾನಮಯಕೋಶವೂ ಜಡ. ಅದೇ ಮಹತ್ತತ್ತ್ವ. ಅದರ ಮೇಲೆ ಮನೋಮಯಕೋಶವದೆ. ಇದರಲ್ಲಿ ಕರ್ಮೇಂದ್ರಿಯ ಹೊರತು ಶ್ರೋತ್ರ ತ್ವಕ್ ಚಕ್ಷು ಜಿಹ್ವಾ ಘ್ರಾಣ ಇವು ಐದು ಶಬ್ದ ಸ್ಪರ್ಶ ರೂಪ ರಸ ಗಂಧಗಳು ಐದು ಮನಸ್ಸು ಸಹಿತ ಹನ್ನೊಂದು ಇದೇ ಮನೋಮಯಕೋಶವೆನಿಸಿಕೊಳ್ಳುತ್ತದೆ. ಅದರ ಮೇಲೆ ಪ್ರಾಣಮಯಕೋಶದಲ್ಲಿ ಪಂಚ ಪ್ರಾಣಗಳು ವಾಕ್ಪಾಣಿಪಾಯೂಪಸ್ಥಗಳು ಕೂಡಿಅದೆ. ಆಕಾಶ ವಾಯುಗಳು ಇದಕ್ಕೆ ಸೇರಿದವು. ಅಗ್ನಿ ಜಲ ಪೃಥಿವೀ ಇವು ಮೂರೂ ಒಂದಾಗಿ ಪ್ರಾಣಮಯದ ಮೇಲೆ ಅನ್ನಮಯಕೋಶ. ಅನ್ನಮಯಕೋಶವು ತ್ವಕ್ ಚರ್ಮ ಮಾಂಸ ರುಧಿರ ಮೇಧಸ್ಸು ಎಂದರೆ ಬಿಳಿಯ ಚರ್ಮ– ಮಜ್ಜಾ ಅಂದರೆ ಕೀವು. ಅಸ್ಥಿ ಈ ಸಪ್ತ ಧಾತುಗಳು ಕೂಡಿ ನಾಡಿ ರೋಮ ಸಹಿತ ಅನ್ನಮಯಕೋಶವಾಗಿ ಅದೆ. ಹೀಗೆ ಅನ್ನಮಯ ಚೀಲದಲ್ಲಿ ಪ್ರಾಣಮಯ ಚೀಲ, ಅವುಗಳೇ ಕೋಶಗಳೆನಿಸಿಕೊಳ್ಳುವವು. ಅನ್ನಮಯವೆಂದು ಅನಿರುದ್ಧ ಮೂರ್ತಿಗೆ ಹೆಸರು. ಭಗವದ್ರೂಪಗಳಿಗೂ ಹೀಗೆ ಹೆಸರು. ಆನಂದಮಯಾಖ್ಯ ನಾರಾಯಣನೇ ವಿಜ್ಞಾನಮಯಾಖ್ಯ ವಾಸುದೇವನೇ ಕವಚರೂಪ. ಆ ರೂಪಕ್ಕೆ ಮನೋಮಯಾಖ್ಯ ಸಂಕರ್ಷಣನೇ ಕವಚ. ಪ್ರಾಣಮಯಾಖ್ಯ ಪ್ರದ್ಯುಮ್ನ ಅನ್ನಮಯಾಖ್ಯ ಅನಿರುದ್ಧ ಹೀಗೆ ಒಂದಕ್ಕೆ ಒಂದು ಕವಚಗಳು. ಈ ಭಗವದ್ರೂಪಗಳು ಹ್ಯಾಗೆಂದರೆ ಈ ಜಡಕೋಶಗಳ ಒಳಗೆ ೨೪ ತತ್ವಾಭಿಮನಿ ದೇವತೆಗಳು ತಂತಮ್ಮ ತತ್ವಗಳಲ್ಲಿ ವ್ಯಾಪ್ತವಾಗಿರತಕ್ಕವರಲ್ಲಿ ಭಗವದ್ರೂಪಗಳು ವ್ಯಾಪ್ತವಾಗಿ ಒಂದು ದೇಹವು ಅಲಗಾಡಿದರೆ ೨೪ ತತ್ವಗಳು ನವಕೋಟಿ ದೇವತೆಗಳು ರಮಾರೂಪಗಳು ಅನಂತಾನಂತ ಶ್ರೀಹರಿಯ ರೂಪಗಳು ಅಷ್ಟೂ ಒಟ್ಟಿಗೆ ಅಲಗಾಡುತ್ತವೆ. ಪೂರ್ವೋಕ್ತ ಅವ್ಯಕ್ತ ತತ್ವಕ್ಕೆ ಲಕ್ಷ್ಮೀದೇವಿಯರು

ಮುಖ್ಯಾಭಿಮಾನಿಗಳು. ಅಮುಖ್ಯಾಭಿಮಾನಿಗಳು ಸರಸ್ವತೀ ಭಾರತೀ ರೂಪಗಳು. ಮಹತ್ತತ್ವಕ್ಕೆ ಬ್ರಹ್ಮ ವಾಯುಗಳು. ಅಹಂಕಾರಕ್ಕೆ ಗರುಡಶೇಷ ರುದ್ರರು. ಮನಸ್ತತ್ವಕ್ಕೆ ಇಂದ್ರ ಕಾಮರು. ಶ್ರೋತ್ರಾದಿ ಜ್ಞಾನೇಂದ್ರಿಯ ಪಂಚಕಕ್ಕೆ ದಿಗ್ದೇವತೆಗಳು. ಆಹಂಕಾರಿಕ ಪ್ರಾಣ ಸೂರ್ಯ ವರುಣ ಅಶ್ವಿನೀ ದೇವತೆಗಳು ಕರ್ಮೇಂದ್ರಿಯ ಐದಕ್ಕೆ ವಹ್ನಿ ದಕ್ಷಪ್ರಜೇಶ್ವರ ಜಯಂತ ಮಿತ್ರ ಎಂಬ ಸೂರ್ಯ ಸ್ವಾಯಂಭುವ ಮನು. ೫. ಶಬ್ದಾದಿ ಐದಕ್ಕೆ ಶಬ್ದಾಭಿಮಾನಿಗಳು ಬೃಹಸ್ಪತಿ ಪ್ರಾಣಗಳು ಎಂತ ೨, ರೂಪ ಸ್ಪರ್ಶ ರೂಪರಸ ಗಂಧಕ್ಕೆ ಅಪಾನ ವ್ಯಾನ ಉದಾನ ಸಮಾನ ಈ ನಾಲ್ಕು ರೂಪಗಳು. ಆಕಾಶಕ್ಕೆ ಮಹಾಗಣಪತಿ. ಇದು ಬ್ರಹ್ಮಚಾರಿ ರೂಪವಲ್ಲ. ಈತನ ಪುತ್ರರು ಬಹು ಜನ ಆಕಾಶಾಭಿಮಾನಿಗಳು. "ವಿನಾಯಕಾಸಾಧ್ಯಗಣ ವಿನಾಯಕಂ" ಎಂತ ಗರುಡ ಶೇಷ ಮಾರ್ಗಲಯ ಪ್ರಕರಣ ಶ್ಲೋಕ. ಸತ್ತತ್ವರತ್ನಮಾಲಾ ಟಿಪ್ಪಣಿಯಲ್ಲಿ ಉದಾಹೃತ. ವಾಯುವಿಗೆ ಪ್ರವಾಹವಾಯು ವಾಯುಮಾತಿಗೆ ಪಾಲಕನು ಆಗಿ ಮತ್ತೊಂದು ರೂಪ ಧರಿಸಿ ಇರುವನು. ಈತನು ಅಪರೋಕ್ಷ ಸಾಧಿಸಿಕೊಂಡು ಹೋಗತಕ್ಕವರು. ಮೊದಲು ಅಗ್ನಿ ಪುತ್ರ "ಅರ್ಚಿಚಾರ್ತಿ" ಎಂಬ ಎರಡು ರೂಪವುಳ್ಳ ಪ್ರಥಮ ಲೋಕದ ಮೇಲೆ ಈತನನ್ನು ಏರಿ ಮುಂದಿನ ಲೋಕಗಳ ಮಾರ್ಗ ಹಿಡಿಯತಕ್ಕದ್ದು. ಈ ಅತಿ ವಾಹಿಕ ವಾಯುವೇ ಕೋಣಾಧಿಪ ಎಂತ ಗರುಡ ಪುರಾಣ ಬ್ರಹ್ಮ ಕಾಂಡ. ಅಗ್ನಿ ತತ್ವಕೆ ಅಗ್ನಿಯು ಜಲಕ್ಕೆ ಮುಖ್ಯ ವರುಣನು (?). ಅಮುಖ್ಯ ಬುಧನು. ಪೃಥಿವಿಗೆ ಭೂದೇವಿ ಇದು ರಮಾರೂಪವಲ್ಲ. ಶತಸ್ಥ ದೇವತೆಗಳಲ್ಲಿ ಸೇರಿದ್ದು. ಈ ಗ್ರಂಥದಲ್ಲಿ ದೇವತೆಗಳ ತಾರತಮ್ಯ ನಿರೂಪಿಸುವುದಕ್ಕೂ ದೈತ್ಯ ತಾರತಮ್ಯವನ್ನು ಗರುಡ ಪುರಾಣ ಬ್ರಹ್ಮ ಕಾಂಡದಲ್ಲಿ ಹೇಳಿದ್ದಾರೆ. ಇಲ್ಲಿ ನಿರೂಪಿಸಲಿಕ್ಕೂ ಋಷಿ ಗಂಧರ್ವಾದಿ ತೃಣಾಂತ ಜೀವ ತಾರತಮ್ಯವನ್ನು ಅವರವರ ಸಾಧನವನ್ನೂ ಕಾಲನಿಯಮಗಳನ್ನೂ ಅರ್ಚಿರಾದಿ ಧೂಮಾದಿ ಮಾರ್ಗಗಳನ್ನೂ ಚತುರ್ವಿಧ ಪ್ರಲಯಗಳನ್ನೂ ಗರುಡ ಶೇಷ ಮಾರ್ಗಗಳನ್ನೂ ಪೂರ್ವ ಪರಾರ್ಧ ದ್ವಿತೀಯ ಪರಾರ್ಧ ಕಾಲ ವಿವರ ಸೃಷ್ಟಿ ವಿವರಗಳನ್ನೂ ನವಾವರಣ ಬ್ರಹ್ಮಾಂಡ ಭೂಗೋಳ ಖಗೋಳ ಪಾತಾಲಾದಿ ಗರ್ಭೋದಕ ಮೊದಲಾದವನ್ನು ಗ್ರಂಥ ಬಾಹುಲ್ಯ ಭಯದಿಂದ ನಿರೂಪಿಸುವುದಿಲ್ಲ. ಈ ಪಂಚ ಭೂತಗಳಲ್ಲಿ ಒಂದೊಂದರಲ್ಲಿ ಪಂಚ ಭೂತ ಬೆರಿಸೋಣವೇ ಪಂಚೀಕರಣವು. ಈ ಪಂಚೀಕರಣದಿಂದ ಮನಸ್ಸು ಮೊದಲಾದ ಹತ್ತು

ಇಂದ್ರಿಯಗಳು ವಿಷಯಗಳು ಆಗಿವೆ. ಪುನಶ್ಚ ಆ ಪಂಚೀಕೃತ ಭೂತಗಳಲ್ಲಿ ತ್ರಿವೃತ್ತೀಕರಣ ಮಾಡಿ ಆ ತ್ರಿವೃತ್ಕರಣ ಮಾಡಿದ ರಾಶಿಗಳು ಭಗವದುದರದಲ್ಲಿ ಜೀವರ ಪೂರ್ವೋಕ್ತ ದೇಹಗಳು ಬೆಳೆದು ಬಂದ ರೀತಿಯಿಂದ ಲಕ್ಷ್ಮಿಯ ಉದರದಲ್ಲಿ ಈ ಜಡ ರಾಶಿಗಳು ಬ್ರಹ್ಮಾಂಡ ಸೃಷ್ಟಿಗೆ ಪೂರ್ವದಲ್ಲಿ ಪ್ರವಿಷ್ಟವಾಗಿದ್ದು ಆಕೆಯ ಉದರದಲ್ಲಿದ್ದ ತೇಜೋ ರಾಶಿಯ ಅಂಶ ವಿಭಾಗದಿಂದ ಬ್ರಹ್ಮಾಂಡ ಸೃಷ್ಟವಾಗಿ ಆ ವಿಷ್ಣು ರೂಪಗಳೆರಡು ಅಂಡ ಪ್ರವೇಶ ಮಾಡಿದ ತರುವಾಯ ಜೀವರಾಶಿಗಳನ್ನು ಶ್ರೀ ಹರಿಯು ತನ್ನ ದೇಹದಿಂದ ಹೊರಗೆ ಬಿಡುವಾಗ ಶ್ರೀ ದೇವಿಯು ಜಡರಾಶಿಯನ್ನು ಹೊರಗೆ ಬಿಟ್ಟು ಕಣ್ಣಿಗೆ ಕಾಣುವಂಥ ಪೃಥ್ವೀ ಪದಾರ್ಥ ಜಲ ಪದಾರ್ಥಗಳು ಭೂಲೋಕ ಮೇಘ ಲೋಕ ಸ್ವರ್ಗ ಲೋಕಗಳಾಗಿ ಅಲ್ಲಲ್ಲಿ ಸ್ಥೂಲ ದೇಹಗಳಾಗುವುದು. ಮನುಷ್ಯ ದೇಹಕ್ಕೆ ಅರ್ಧ ತೂಕ ಪೃಥಿವೀ ಉಳಿದುದರಲ್ಲಿ ಮೂರು ಭಾಗ ಉದಕ. ಒಂದು ಭಾಗ ತೇಜಸ್ಸು. ಮೇಘಮಂಡಲಕ್ಕೆ ಅರ್ಧ ಭಾಗ ಉದಕ ಉಳಿದುದ್ದರಲ್ಲಿ ಮೂರು ಪೃಥಿವೀ. ಒಂದು ಭಾಗ ತೇಜಸು. ಸ್ವರ್ಗ ಶರೀರದಲ್ಲಿ ಅರ್ಧ ಭಾಗ ತೇಜಸ್ಸು ಮೇಲಿನ ಮೂರು ಭಾಗ ಜಲ ಒಂದು ಭಾಗ ಪೃಥ್ವೀ ಇದೇ ತ್ರಿವೃತ್ತೀಕರಣ ಸೂತ್ರ ಭಾಷ್ಯ ಸಿದ್ಧವು. ಭೌತಿಕಾತ್ಮ ದೇಹವೆಂಬ ಸ್ಥೂಲ ಶರೀರ ಸುಳಾದಿ ಸಿದ್ಧ.

## ತ್ರಿವೃತ್ಕರಣ ಪಂಚೀಕರಣ ಪ್ರಮಾಣ

*"ಸ ವೀಷ್ಣುಃ ಕಮಲಾಕಾಂತೋ ಲೀಲಯೈವ ತದಾ ಕ್ರಮಾತ್ ।*
*ಆಕಾಶೆಯೋಜಯಾಮಾಸ ಶತಾಂಶೇನ ಸಮೀರಣಂ ॥*
*ತಾದೃಶಾಕಾಶತೋ ವಾತಾ ವಾಯೋಸ್ತೇಜಸಿಚಾರ್ಪಯೇತ್ ।*
*ಅಪಾಂ ತೇಜಸಿ ತೋಯೇ ಚ ತೇಜಸಾಂಶ ಮಯೋ ಜಯತ್।"*

ಅಂದರೆ ಸರ್ವತ್ರ ಶತಾಂಶ ವಿಭಾಗದಿಂದಲೇ ಕೂಡಿಸೋಣ ಅಂತ ಅರ್ಥವು

*"ಏವಂ ಪಂಚಾಂ ಸಂಸೃಜ್ಯ ಭೂತಾನಿಸ ಮಹೇಶ್ವರಃ ।*
*ಆಪ್ಯತೇಜಸ ಭೌಮಾನಾಂ ಪದಾರ್ಥಾನಾಂ ಚ ಸೃಷ್ಟಯೇ ।*
*ತ್ರಿವೃತಂ ತ್ರಿವೃತಂ ಚಕ್ರೇ ಪೃಥ್ವೀ ಸಲಿಲ ತೇಜಸಾಂ ।*
*ಚತ್ವಾರಃ ಪೃಥ್ವೀ ಭಾಗ ಏಕಸ್ತೇಜಸ ಏವಹಿ ।*

*ತ್ರಯಾಂಶಾಃ ಸಲಿಲಸ್ಯೈವ ಪಾರ್ಥಿವಂ ರಾತಿ ಮತನೋತ್ ॥"*

ಎಂತಲೂ

*"ನಿರ್ಮಮೇ ತೇಜಸೋ ರಾಶೇರಂಡಂತದುದರೆ ಹರಿಃ ॥"*

ಇತ್ಯಾದಿಗಳಿಂದ ವಿಸ್ತಾರವಾಗಿ ವಿಷ್ಣುರಹಸ್ಯದಿಂದ ತಿಳಿಯತಕ್ಕದ್ದೇ. ಈಗ ಸ್ಥೂಲ ತತ್ತ್ವಗಳನ್ನು ನಿರೂಪಿಸಿತು. ಪೂರ್ವೋಕ್ತ ಲಿಂಗದೇಹದಲ್ಲಿ ಬ್ರಹ್ಮ ವಾಯು ಸರಸ್ವತೀ ಭಾರತೀ ದೇವಿಯರು ಹೊರತು ರುದ್ರಾದಿಗಳಲ್ಲಿ ಅವ್ಯಕ್ತ ದೇಹದಲ್ಲಿಯೂ ಇದೇ ಪ್ರಕರಣವು. ಅದರ ಹೊರಗೆ ಅನಿರುದ್ಧ ದೇಹದ ಒಳಗೆ ಮಧ್ಯದಲ್ಲಿ ಜೀವಾಚ್ಛಾದಿಕ ಪರಮಾಚ್ಛಾದಿಕ ಎಂಬ ಎರಡು ತೆರೆಗಳು ಅವೆ. ಅವುಗಳಲ್ಲಿ ಕಲಿಯ ಪತ್ನಿಯು ಕಲಿಯ ಸಹಿತ ಎರಡು ತಮೋಯೋಗ್ಯ ಸ್ತ್ರೀ ಜೀವರು ಹಿಂದಿನ ಬ್ರಹ್ಮ ಕಲ್ಪದಲ್ಲಿಯೇ ಹರಿ ದ್ವೇಷ ಸಾಧನ ಮಾಡಿ ಬಿಂಬಾಪರೋಕ್ಷ ಜೀವಾಪರೋಕ್ಷಗಳಿಗೆ ಪ್ರತಿಬಂಧಕವಾಗಿ ಭುಜಗಳನ್ನು ಹೊರತು ರುದ್ರಾದಿ ಸಕಲ ಜೀವರಲ್ಲಿಯೂ ಕೂತಿದ್ದಾರೆ. ಗರುಡ ಪುರಾಣ ಬ್ರಹ್ಮ ಕಾಂಡದಲ್ಲಿ "ಪ್ರೇರಕಾಸ್ತು ತಯೋರ್ದೇವ್ಯೋಹ್ಯಹ ಮಧ್ಯಾಃ ಸುಖಾತ್ಮಿಕಾಃ" ಎಂತಲೂ. "ಅಜಾಂಜಹಿ ಮಹಾಭಾಗ, ಯೋಗ್ಯನಾಂ ಮುಕ್ತಿಮಾವಹ" ಎಂಬ ಅಧ್ಯಾಯದಲ್ಲಿ ಲಕ್ಷ್ಮೀ ಸರಸ್ವತೀ ಉಮಾ ಶಚೀ ಇವರಿಗೆ 'ಅಜಾ' "ಅಜಾ"' ಎಂತ ಹೆಸರುಗಳು. ಭಾಗವತ ಶೃತಿಗೀತೆಯಲ್ಲಿ ಪ್ರಸಿದ್ಧ. ಸುಳಾದಿ:– ಪ್ರಕೃತಿ ಎರಡೆಂದು ಕುಂದಾದೆ ಪೆಸರುಂಟು– ಜೀವಾ ಪರಮಾಚ್ಛಾದಿಕಾ । ಎಂದೆಂಬೋ ನಾಮಗಳು– ಜಡ ತಾಮಸ ವರ್ಣ ಸಂಧಿಸದೆ ಲಿಂಗ ಅನಿರುದ್ಧಾದಮಾಧ್ಯಬಾಧಕಾ ದುಷ್ಟಜನ ಅಲ್ಲಲ್ಲಿ ಅಂದರೆ ಲಿಂಗ ಶರೀರದಲ್ಲಿ ಎಂತರ್ಥ. ಮುಂದಿನ ಮಾತು ಇಂದಿರೆ ಅಜ ವಾಯು ಇವರ ಹೆಂಡರು ಆನಂದಾಭಿಮಾನಿಗಳು. ಲಕುಮೀ ನಿತ್ಯಾ ಸಂದೇಹಗೊಳಸಲ್ಲ. ಅನಿರುದ್ಧ ದೇಹದಲ್ಲಿ ಪ್ರವೇಶವಾದರೂ ತತ್ವೇಶರು ಒಂದೊಂದು ಪ್ರಕೃತಿಯು ಇದಕಾವರಕವಾಗಿ ಛಂದದಲ್ಲಿ ಇದೆ. ಇಲ್ಲಿ ದುಷ್ಟ ಮಂದಿಗಳಿಬ್ಬರು ಸ್ತ್ರೀಯರು ವಂಚಕರ್ಯೆಯ್ಯಾ ಅಂದಗೆಡಿ ಪರಭಿಮಾನಿಗಳಾಗಿ ಸುಂದರ ಗುಣವುಳ್ಳ ವಾಣೀ ಭಾರತೀ ಗಿರಿಯನಂದನೆ ಶಚೀ ಇವರು ಪ್ರೇರಕರೋ । ಹಿಂದಿನ ಪರಮೇಷ್ಟಿಕಲ್ಪದಿಂದಲಿ ಅಗುಣದಿಂದ ಇವರು ಸಾಧನ ಮಾಡಿ ಬಂದು ದ್ವಂದ್ವಾಚ್ಛಾದಕದಲ್ಲಿ ಸ್ತ್ರೀಯರು ನಿಂದು ನಿಂತವರಿಗೆ ಪ್ರತಿಕೂಲರಿವರು." ಎಂತ

ಹೇಳಿ- ಮುಂದಿನ ಮಾತು "ಇದು ಮೂಲ ಕಾರಣ ಅವಿದ್ಯಾ ಧರ್ಮವು. ಇದೇ ಕಲಿ ಇರಲಿಕ್ಕೆ ಅವಸ್ಥಾನವಾಗಿದೆ. ಇದು ಮಹಾ ಪ್ರಬಲವು. ಸೂಚಕ ಪ್ರಾರಬ್ಧ ವದಗಿ ಬರಿದೇವಾಗಲು ಕಲಿಯುವಡಗೂಡಿ ಅಧಿಕಾಧಿಕವಾಗಿ ವ್ಯಥೆಪಡಿಸುವುದು. ಮುದದಿಂದ ಬೊಮ್ಮಾಂಡ ಬಾಹ್ಯದಲ್ಲಿ ಇದು ತ್ರಿದಶದಲ್ಲಿವರಕಾರ್ಯವೆಕೊಳದು । ಪದುಮ ಕಲ್ಪದಲ್ಲಿ ಪದುಮಜಾನಿಂದ ಹುಟ್ಟಿದ ಜೀವ ರಾಶಿಗೆ ವ್ಯಧಿಕರಣವೆನ್ನಿ ಎಂತಲೂ, ಜೀವನಿಗೆ ಪ್ರತಿಬಂಧಕವಾಗಿದ್ದ ಜನರಿವರು ದೇವೇಶ ವಿಜಯವಿಠಲನಿಂದ ತೊಲಗುವರು. ಅದರೆ ಬ್ರಹ್ಮಾಂಡದ ಹೊರಗಿನ ಆವರಣದೇವತೆಗಳಿಗೆ ರಾಶ್ಯಾಭಿಮಾನಿ ದೇವತೆಗಳ ಎರಡು ಸಮೂಹದಲ್ಲಿಯೂ ಇವರ ಕಾರ್ಯ ನಡಿಯದು. ಎಂದರೆ ಬ್ರಹ್ಮಾಂಡದ ಒಳಗೂ ತತ್ವಾಂತರ್ಯಾಮಿ ದೇವತಾರೂಪ ಹೊರತು ಕೈಲಾಸ ವಾಸಾದಿ ರೂಪಗಳಿಗೆ ಮಾತ್ರ ಕಲ್ಯಾವೇಶವಾದುದರಿಂದ- ಹಾಗೇ ಯೋಗ್ಯಾಪರೋಕ್ಷಿಗಳಿಗೆ ಬ್ರಹ್ಮಾಂಡದ ಮೇಲೆ ಕಲ್ಯಾವೇಶವಿಲ್ಲವೆಂತ ಅರ್ಥವು. ಮುಖ್ಯ ತಾತ್ಪರ್ಯ ಜೀವಾಚ್ಛಾದಿಕಕ್ಕೆ ವ್ಯಾಘುಟ್ಟಿನ ಅಂದರೆ ಸಂಹಾರ ಆ ತೆರೆಯು ಹೋಗೋಣ. ಆ ತಮೋಯೋಗ್ಯಳು ಮೃತಳಾಗಿ ತಮಸ್ಸಿಗೆ ಸೇರೋಣ ಎಂತ ಭಾವವು. ಪರಮಾಚ್ಛಾದಿಕಕ್ಕೆ ಹೀಗೆ ಅಲ್ಲ. ಹ್ಯಾಗೆಂದರೆ ಅದರೊಳಗೂ ತಮೋಯೋಗ್ಯ ಸ್ತ್ರೀ ಮಾತ್ರ ಮೃತಳಾಗೋಣ, ಆ ತೆರೆಯು ಹೋಗತಕ್ಕದಲ. ಆದಕ್ಕೆ ಅಪಸರಣವು, ಅಂದರೆ ಗುಡಿವಳಗೆ ದೇವರ ದರ್ಶನ ಮಾಡುವುದಕ್ಕೆ ತೆರೆ ತೆಗೆದು ಪುನಶ್ಚ ಹೇಗೆ ತೆರೆಯನ್ನು ಅಡ್ಡಹಾಕುವರೋ ಹಾಗೆ ಪರಮಾಚ್ಛಾದಿಕಾ. ಜಡಕ್ಕೂ ಅದರೊಳಗಿನ ದೇವತಾ ಸ್ತ್ರೀಯರುಗಳಿಗೂ ಬ್ರಹ್ಮಕಲ್ಪಾಂತವೂ ನಾಶವಿಲ್ಲದೆ ಮುಕ್ತಿಯಾದ ಮೇಲೆ ಕ್ಷಣವಾದರೂ ಹರಿಯ ಮರೆಯಾಗುವುದಿಲ್ಲ. ಅಲ್ಲಿಯೂ "ಚಿನ್ಮಾತ್ರೊಪಾಶಕ್ತರ್ನ್ಯೆವಾಧಿಕ ಗುಣೋತ್ತರೈ" ಎಂತಲೂ "ಮುಕ್ತಾಶಕ್ತಿಸ್ತು ತಾದೃಶೀ" ಎಂತಲೂ ಪ್ರಕಾಶ ಸಂಹಿತಾ. ಅಂದರೆ ಜೀವನ ಯೋಗ್ಯತೆಯನ್ನು ಮೀರಿ ಅಧಿಕಗುಣ ಧ್ಯಾನವು, ಅಧಿಕ ಗುಣದರ್ಶನವೂ ಇಲ್ಲ. ಅತಃ ಸ್ವಯೋಗ್ಯ ಗುಣ ಸ್ಪಷ್ಟ ದರ್ಶನವೇಸರಿ.

*"ಪರಮಾಛ್ಛಾದಿಕಾಯಸ್ಮಾನ್ನಿತ್ಯ ಸಂಸಾರಿಣೀ ಯತಃ ॥*
*ಅತ ಏವಚ ನಿತ್ಯತ್ವಾತ್ತಸ್ಮಾತ್ತದಪಸಾರಿಣೀ ಕುರುದೇವ ॥"*

ಎಂತ ಗರುಡ ಪುರಾಣ ಬ್ರಹ್ಮ ಕಾಂಡ

ಮುಕ್ತಿಯಲ್ಲಿ ಇದರ ವಿಷಯ ಹಿರಿಯರಿಂದ ತಿಳಿಯಬೇಕು.

ಇದರ ಹೊರಗೆ ಅನಿರುದ್ಧ ಶರೀರ ೨೪ ಪದರು ಉಳ್ಳಾದ್ದಾಗಿ ಅವ್ಯಕ್ತಾದಿ ಪೃಥ್ವೀ ತತ್ವದ ತನಕ ಮೇಲು ಮೇಲಾಗಿ ಸುತ್ತಿಕೊಂಡು ಅದೆ. ಆದಾಗ್ಯೂ ಈ ಪದರುಗಳು ಹರವಿ ಇದ್ದಾಗ್ಯೂ ಮಧ್ಯದಲ್ಲಿ ಇದರ ಬೀಜಗಳ ಹಾಗೆ ಹೃದಯ ಮಧ್ಯ ಬ್ರಹ್ಮ ನಾಡಿ ಮಧ್ಯ ಪರಮ ಸೂಕ್ಷ್ಮ ರಂಧ್ರದಲ್ಲಿ ಒಂದು ಲಕ್ಷವೂ ಸಾವಿರದ ಇನ್ನೂರು ಹತ್ತು ಬಿಂದುಗಳು ಕೂಡಾ ಕಣ್ಣಿಗೆ ಕಾಣದಂಥ ಸೂಕ್ಷ್ಮ ಪ್ರದೇಶದಲ್ಲಿ ಆ ಬಿಂದುಗಳು ವಿಶಿಷ್ಟ ದೇಹವು ಅಡಗಿಕೊಂಡು ಇದೆ. ಹೊರಗೂ ೧೪ ದಳಾಕಾರವಾಗಿ ಇದೆ. ಸುಳಾದಿ:– "ಹದಿನಾಲಕು ದಳವುಳ್ಳ ಪೊಳೆವ ರಕುತಾವರ್ಣ" ಎಂತಲೂ ಎರಡ್ಯೆದಾವರಣ ಅನಿರುದ್ಧ ಪ್ರಕೃತಿಯಲಿ ಚತುರವಿಂಶತಿ ತತ್ವಜಾಂಡದಂತೆ ಗುರುತು ಮಾತ್ರ. ಈ ಕಾಯದ ಬಿಂದುಗಳು ತರುವಾಯ ತರುವಾಯ ಅರಿವು ಕಾಣೆ । ಎಂತ ಸ್ಥೂಲ ದೇಹವ ತಿಳಿ ಅಬ್ಜನಿಂದ. ಎಂತಲೂ, ಜೀವಾಖ್ಯ ಸುಳಾದಿಯಲ್ಲಿ ಆ ಪದ್ಮದಿಂದಲೇ ೧೪ ಲೋಕಾತ್ಮಕ ಸ್ಥೂಲದೇಹವುಂಟಾಯಿತೆಂದು ನಿರೂಪಿಸಿದರು. ಆ ಸೂಕ್ಷ್ಮ ದೇಹ ಅತೀಂದ್ರಿಯ. ಹೊರಗಿನ ಪಂಚ ಭೂತಗಳು ಕೂಡಿದ ದೇಹವೇ ಕಣ್ಣಿಗೆ ಕಾಣದಷ್ಟು ಸೂಕ್ಷ್ಮವಾಗಿ ಇರುತ್ತದೆ. ಆದುದರಿಂದ ಈ ಸ್ಥೂಲ ಶರೀರಕ್ಕೆ ತಕ್ಕ ಹಾಗೆ ದೀಪ ಜ್ವಾಲೆಯ ಹಾಗೆ ದೀಪ ಹಿಡಿದಿರುವ ಬತ್ತಿಯ ಹಾಗೆ ಬಿಂದುಗಳನ್ನು ಅದರ ಜ್ವಾಲೆ ಹಾಗೆ, ಅದರ ಪದರಗಳ ಪ್ರಕಾಶವುಂಟು. ಇದೇ ಪ್ರಕಾರ ಲಿಂಗದೇಹವೂಕೂಡ ಜೀವಾಕಾರದ ಮೇಲೆ ಪರಮ ಸೂಕ್ಷ್ಮ ಮೇಲಿನ ಅಕವಚವಾದಾಗ್ಯೂ ಅದರ ಮೇಲು ಭಾಗ ಮೂರು ರಂಧ್ರಗಳು ತೆಂಗಿನಕಾಯಿ ರಂಧ್ರದ ಹಾಗೆ ಆಗಿ ರಮಾದೇವಿಯರು ಪಾದದಿಂದ ಆ ರಂಧ್ರಗಳನ್ನು ಮುಚ್ಚಿಕೊಂಡಿದ್ದಾರೆ. ಇವನಿಗೆ ಜ್ಞಾನ ಹುಟ್ಟೋಣ ಆ ಪಾದ ಮೇಲೆ ತೆಗೆದರೆ ಅಜ್ಞಾನ ಹೀಗೆ ಆಗಿ, ಆ ಲಿಂಗದೇಹ ಪರಮ ಸೂಕ್ಷ್ಮವಾದರೂ ಅನಿರುದ್ಧದೇಹಕ್ಕೆ ದೃಷ್ಟಾಂತ ಹೇಳಿದ ಹಾಗೆ ದೀಪದ ಜ್ವಾಲೆಯ ಹಾಗೆ, ಹೊರಗಿನ ದೇಹಾನುಕೂಲ ಜ್ಯೋತಿರೂಪವಾಗಿ ಅದೆ. ಸುಳಾದಿ :– "ಜ್ಯೋತಿರ್ಮಯವಾದ ಅನಾದಿ ಬದ್ಧ ಲಿಂಗ" ಎಂತಲೂ, "ಜ್ಯೋತಿಗೆ ಪ್ರತಿಬಂಧಕ ದ್ವಯಾಚ್ಛಾದಕ ಜಡ ದೀಪ" ಎಂತಲೂ ಜೀವಾಖ್ಯ ಸುಳಾದಿ. ನೆತ್ತಿಯ ದ್ವಾರವನ್ನು ಪಾದದಿಂದಲಿ ಮುಚ್ಚಿ ವೃತ್ತಿ ಜ್ಞಾನ ಕೊಡುತಿಪ್ಪಳು" ಎಂತ ಲಿಂಗದೇಹ ಸುಳಾದಿ. ಪ್ರಮಾಣ

*"ನಾರಿಕೇಳಫಲೀಕಾರ ಲಿಂಗದೇಹ ಸ್ತ್ರಿವೃನ್ಮತಃ ।*
*ಮೂರ್ಧ್ನಿ ಛಿದ್ರಯಂತೋಗರ್ಭಾವತೇಶ ತಲಿತಃ ಸದಾ ।*
*ಅಂತರ್ನಿಬದ್ಧಾ ಜೀವಾಸ್ತು ತ್ರಿಧಾ ಅಪಿ ಮೋಚನೇ।*
*ನಶಕ್ತಾ ರಮಯಾ ಛನ್ನ ಮೂರ್ಧ್ನಿ ಛಿದ್ರೇವಸಂತ್ಯಲಂ ॥"* ಎಂತ
*ಪ್ರಕಾಶ ಸಂಹಿತಾ.*

ಈ ಅನಿರುದ್ಧ ದೇಹದಲ್ಲಿ ರುದ್ರಾದಿಗಳು ಬ್ರಹ್ಮಾದಿಗಳು ಕಲ್ಯಾದಿಗಳು ಎಲ್ಲರಿಗೂ ತಮ್ಮ ತಮ್ಮ ಅನಿರುದ್ಧ ಸ್ಪಷ್ಟ ಸೂಕ್ಷ್ಮದೇಹದಿಂದಲೇ ವಾಸ. ಸ್ಥೂಲ ದೇಹದಲ್ಲಿ ದೇವ ದೈತ್ಯರು ಸ್ಥೂಲದೇಹದಿಂದಲೇ ವಾಸ. ಪರಮ ಸೂಕ್ಷ್ಮ ಜೀವಗೆ ತಕ್ಕ ಸೂಕ್ಷ್ಮ ಕವಚಗಳೆಂಬ ಲಿಂಗ ಅವ್ಯಕ್ತ ಅನಿರುದ್ಧ ಈ ಮೂರು ದೇಹಗಳಲ್ಲಿ ಲಿಂಗಾವ್ಯಕ್ತಗಳ ಹೊರಗೆ ಅನಿರುದ್ಧ ದೇಹದ ಒಳಗೆ ಪರಮ ಸೂಕ್ಷ್ಮ ಬೀಜ ರೂಪಗಳಾಗಿ ಜೀವಾಚ್ಛಾದಿಕ ಪರಮಾಚ್ಛಾದಿಕ ಎರಡು ಕೂತು ಇದ್ದರೂ ಜಡ ಜ್ಯೋತಿರ್ಮಯಾಗಳದ ನಾರಿಕೇಳದ ಹಾಗೆ ಲಿಂಗ ಜ್ವಾಲೆಯು ೧ಳ ದಳಾತ್ಮಕವಾಗಿ ಹ್ಯಾಗೆ, ಪರಸ್ಪರ ಅಪ್ರತಿಹತ ಎಂದರೆ, ಕಡೆ ಇಲ್ಲದ ಅನಿರುದ್ಧ ದೇಹ, ಜ್ಯೋತಿ ವಿಕೃತಿರೂಪವೋ ಹಾಗೆ, ಬೀಜರೂಪವಾದ ಎರಡು ತೆರೆಗಳಿಗೂ ತಡೆ ಇಲ್ಲದೆ ಸ್ಥೂಲದೇಹಾಂಗುಷ್ಟ ಪರಿಮಿತ ಪ್ರಾಜ್ಞ ದರ್ಶನ ಪ್ರತಿಬಂಧಕ ಸ್ಥೂಲ ಅಂತರಪಟದ ಹಾಗೆ ಕರಿಯ ತೇಜಸ್ಸು ಬೆಳೆದು ಬಂದು ಅದೆ. ಹೀಗೆ ಹೇಳದೆ ಇದ್ದರೆ, ಅಪಸರಣಾರ್ಹವಾದ ಅಂತರ್ಪಟಾನುಭವ ಬರಲಾರದು. ಸ್ಥೂಲ ದೇಹದ ಆತ್ಮ ಬಿಂಬಮೂರ್ತಿ ದರ್ಶನಕ್ಕೆ ಪರಮಾಚ್ಛಾದಿಕ ಬಂಧಕವಾಗದೆ ಹೋಗ ಬೇಕು. ಅನಿರುದ್ಧ ದೇಹವೇ ಪ್ರತಿಬಂಧಕವಾಗ ಬೇಕು ಎಂಬ ಶಾಸ್ತ್ರ ವಿರುದ್ಧ ಅನುಭವ ಬಂದೀತೆಂದು ತೋರಿಸಿದೆನು. ಅಧ್ಯಾತ್ಮಮಾಲೆಯಿಂದಲೂ ಅಧ್ಯಾತ್ಮ ಸುಳಾದಿ ಮೊದಲಾದುದರಿಂದಲೂ., ಸ್ಥೂಲದೇಹದಲ್ಲಿ ಯಥೋಚಿತ ವಿಶಿಷ್ಟ ಭಗವದ್ರೂಪಗಳು ತಿಳಿಯತಕ್ಕದ್ದು. ಎಪ್ಪತ್ತೆರಡು ಸಾವಿರ ನಾಡಿಗಳಲ್ಲಿ ಬಲಗಡೆ ಮೂವತ್ತಾರು ಸಾವಿರ ಪರಮಾತ್ಮನ ಪುರುಷರೂಪಗಳು, ಎಡದಲ್ಲಿ ಮೂವತ್ತಾರುಸಾವಿರ ಪರಮಾತ್ಮನ ಸ್ತ್ರೀರೂಪಗಳು ಲಕ್ಷ್ಮೀಗೂ ಇಷ್ಟು ರೂಪ. ಪ್ರಾಣದೇವರಿಗೂ ಇಷ್ಟು ರೂಪ. ಸುಳಾದಿ:- ಎಪ್ಪತ್ತೆರಡು ಸಾವಿರಮೇಲೆ ನಾಡಿಗಳುಂಟು. ಮುಪ್ಪುರವೈರಿ ಬ್ರಹ್ಮ ಇದಕ್ಕೆ ಮಾನಿಗಳೆನ್ನಿ, ತಪ್ಪದೆ ತಮ್ಮ ತಮ್ಮ ತತ್ವಾತ್ಮಕರೊಡಗೂಡಿ

ಕಂದರ್ಪನಯ್ಯನಿಪ್ಪನರ್ಧಾರ್ಧ ಮೇಲೊಂದು ಒಪ್ಪುತಿಹಳು ಲಕ್ಷ್ಮೀ ಪ್ರಾಣೇಶರಿಪ್ಪು ರೂಪ ಸಪ್ತಧಾತು ಉಳ್ಳ ತುರೀಯದಲ್ಲಿ ಎಂತ ಜೀವಾಖ್ಯ ಸುಳಾದಿ. ಈ ಭಗವದ್ರೂಪಗಳು ಬೃಹತೀ ಸಹಸ್ರ ಸ್ಪರ್ಶ ಋಗ್ವಾಚ್ಯಗಳು. ಅಂದರೆ ಒಂದು ಋಚಕ್ಕೇ ೩೬ ಅಕ್ಷರಗಳುಳ್ಳದ್ದಾದರೆ ಆ ಶೃತಿ ಬೃಹತೀ ಛಂದಸ್ಸು ಇಂತಹ ಸಹಸ್ರ ಋಕ್ಕುಗಳ ವರ್ಣಗಳಿಗೆ ಪ್ರತಿಪಾದ್ಯ ಪುರುಷ ರೂಪಗಳು ಮೇಲೆ ಅರ್ಧ ಸ್ತ್ರೀರೂಪಗಳು ಅವೆ. ಅಕ್ಷರಗಳಳ್ಳಿದ್ದ ನಾದ ಸ್ವರ ವ್ಯಂಜನ ಬಿಂದುಗಳಿಂದ ಕರೆಸಿಕೊಳ್ಳುತ್ತದೆ. ಅಂದರೆ ದೀರ್ಘ ಕೊಂಬು ಗುಡಿಸು ಸೊನ್ನೆ ಉದಾತ್ತಾನುದಾತ್ತಾದಿ ಸ್ವರಗಳಿಂದ ಎಂತ ಅರ್ಥವು.

***"ಬೃಹತೀ ಸಹಸ್ರ ಸ್ಪರ್ಶಾನಾಂ ಋಚಾಂ ವಾಚ್ಯೋತ್ರ ಕೇಶವಃ ।"***
ಎಂತ ತಂತ್ರಸಾರೋಕ್ತಿಯು.

***"ಷಟ್ತ್ರಿಂಶದ್ವರ್ಣ ಬೃಹತೀ ಛಂದೋಽಸ್ಥ ಪ್ರತಿಪಾದಕೆ ತಾವದ್ವರ್ಣ ಸ್ಥಿತೇರ್ನಾದ ಸ್ವರ ವ್ಯಂಜನ ಬಿಂದುಭಿಃ। ಸ್ತ್ರೀ ರೂಪಾಣಿ ಹರೇರ್ವಾಚ್ಯಾಪ್ಯಾಸಂಶ್ಚ ಪುರುಷಾಯುಶಃ ।"*** ಎಂತ ಅಧ್ಯಾತ್ಮ ಮಾಲಾ. ***"ಅಂಡಾದ್ದಕ್ಷಿಣ ಭಾಗಸ್ಥ ನಾಡಿ ಸ್ಥಾನಗಥೋ ಹರಿಃ"*** ಎಂತಲೂ ಅಲ್ಲಿಯೇ ಹೇಳಿದ್ದಾರೆ. ಆದುದರಿಂದ ಇದು ನೂರು ವರ್ಷದ ಅಹಸ್ಸುಗಳಿಗೆ ಸತ್ಕರ್ಮ ನಿಯಾಮಕ ಪುರುಷರೂಪಗಳು. ರಾತ್ರಿಯ ಸತ್ಕರ್ಮಗಳಿಗೆ ಸ್ತ್ರೀರೂಪಗಳು ಎಂತ ಅರ್ಥವು.

## ನಾಡೀ ಪ್ರಕರಣವು

ಪಾರ್ಥಿವ ನಾಡಿಗಳಲ್ಲಿ ಪರಮ ಸೂಕ್ಷ್ಮಗಳಾದ ಅಪ್ರತಿಗಳಾದ ಜ್ಯೋತಿರ್ಮಯಗಳಾದ ಜಲಸೂತ್ರದ ಹಾಗೆ ೭೨೧೦೧ ನಾಡಿಗಳ ವಿವರವು – ಅಂಡ ಗುದಗಳ ಮಧ್ಯದಲ್ಲಿ ಎರಡು ಅಂಗುಲ ಉನ್ನತ ನಾಲ್ಕು ಬೆರಳು ಅಗಲ ಗುಂಡು ಪೀಠದಂತೆ ಇಷ್ಟು ನಾಡಿಗಳಿಗೂ ಆಧಾರವಾದ ಗಡ್ಡೆ ಅದೆ. ದೇಹಕ್ಕೆ ಆಧಾರ ಪೀಠ ಎನಿಸಿಕೊಳ್ಳುತ್ತದೆ. ಆ ಆಧಾರ ಪೀಠವನ್ನು ಹಿಡಕೊಂಡು ಶಿರಸ್ಸಿನತನಕ ಮಧ್ಯೆ ಮಧ್ಯೆ ಸೊಟ್ಟಿಲ್ಲದೆ ಇರತಕ್ಕದು ಸುಷುಮ್ನಾ ಎಂಬುದೇ ಪಂಚ ಸುಷುಮ್ನಾ ಎನಿಸಿಕೊಳ್ಳುತ್ತದೆ. ಅದು ಒಂದರಲ್ಲಿಯೇ ಪೂತಂತಿಗಳ

ಹಾಗೆ ಪೂರ್ವ ಪ್ರಕಾಶಿನೀ ಎಂತಲೂ ನಂದಿನೀ ಎಂತಲೂ ಧಾರಣಾ ಎಂತಲೂ ಮೂರು ಹೆಸರು. ದಕ್ಷಿಣ ವೈದ್ಯುತ ನಾಡಿಗೆ ಪಿಂಗಳಾ ಎಂತಲೂ ಎರಡು ಹೆಸರು. ಪಶ್ಚಿಮ ವಜ್ರಿಕಾ ಎಂತ ಒಂದೇ ಹೆಸರು. ಉತ್ತರ ಆರ್ಯಕಾ ನಾಡಿಗೆ ಇಡಾ ಎಂತಲೂ ಎರಡು ಹೆಸರು. ಮಧ್ಯ ಬ್ರಹ್ಮ ನಾಡಿ ಎಂಬುದರಿಂದ ಪಂಚ ಸುಷುಮ್ನಾ. ಇದರಲಿ ನಾಲ್ಕು ದಿಕ್ಕಿನ ನಾಲ್ಕು ನಾಡಿಗಳಿಗೆ ಒಂದೊಂದಕ್ಕೆ ತನ್ನ ಬಲಕ್ಕೆ ೧೨ ಎಡಕ್ಕೆ ೧೨ ತಾವೂ ಕೂಡಿ ೨೫ ಹೀಗೆ ನಾಲ್ಕು ನಾಡಿಗಳಿಗೂ ಮಧ್ಯ ಬ್ರಹ್ಮ ನಾಡೀ ಸಹಿತ ೧೦೧. ಇಷ್ಟೂ ಕೂಡಾ ಆಗಡ್ಡೆಯಿಂದ ಹಿಡಿದು ಶಿರಃ ಪರ್ಯಂತ ೧೦೧ ತಂತಿಗಳ ಹಾಗೆ ಮಧ್ಯ ಸೊಟ್ಟು ಇಲ್ಲ. ಇದು ಹೊರ್ತು ಇದರ ಶಾಖಾನಾಡಿಗಳಿಗೂ ಪ್ರತಿ ಶಾಖಾನಾಡಿಗಳು ಎಲ್ಲವೂ ಆಗಡ್ಡೆ ಸ್ಥಲದಲ್ಲಿ ಮಾತ್ರ ಹುಟ್ಟಿ ಸವ್ಯದಿಂದ ಅಪಸವ್ಯ ಅಪಸವ್ಯದಿಂದ ಸವ್ಯ ವಿಂಗಡಿಸಕೊಡದೆ ಬೆರಸಿಕೊಂಡು ವಸ್ತ್ರದಲ್ಲಿ ದಾರದಂತೆ ಓತಪ್ರೋತಗಳಾಗಿ ಅಶ್ವತ್ಥದಎಲೆ– ಅದು ಕೊಳಿತು ಅದರ ಸೂಕ್ಷ್ಮ ನರಗಳ ಹಾಗೆ ಅವೆ. ***"ಯಥಾ ಅಶ್ವತ್ಥದಲೆ ಸ್ಥೂಲಾಃ ಸೂಕ್ಷ್ಮಶ್ಚೈವ ಪೃತಗ್ವಿಧಾಃ ಸಂಖ್ಯಾತುಂ ನೈವ ಶಕ್ಯಂತೇ"*** ಎಂತ ತತ್ತ್ವ ವಿವೃತ್ತಿಯಲ್ಲಿ ಉದಾಹೃತ. ಪಂಚರಾತ್ರದ ಉಕ್ತಂಚ ಬ್ರಹ್ಮಣಾಂ ಪ್ರತಿಭಗವತಾ ಎಂಬ ವಚನವು. ಆ ನೂರಒಂದು ಮುಖ್ಯನಾಡಿಗಳಿಗೆ ಶಾಖಾ ನಾಡಿಗಳ ವಿವರ. ಒಂದೊಂದಕ್ಕೆ ಪುನಶ್ಚ ನೂರು ನೂರು ಶಾಖೆಗಳು ಇವುಗಳು ಹತ್ತುಸಾವಿರದ ನೂರಕ್ಕೂ ಪ್ರತ್ಯೇಕ ಪ್ರತ್ಯೇಕ ಪುನಶ್ಚ ಪ್ರತಿ ಶಾಖಾ ನಾಡಿಗಳು ಎಷ್ಟು ಎಂದರೆ ೬೧೬೦೦ ಹ್ಯಾಗೆಂದರೆ, ನಿಧಾನಿಸಿ ನೋಡಿದರೆ, ಮಧ್ಯ ಬ್ರಹ್ಮ ನಾಡಿಯ ನೂರು ಶಾಖೆಗಳಿಗೆ ಮಾತ್ರ ಹತ್ತು ಹತ್ತು ಪ್ರತಿ ಶಾಖೆಗಳು. ಒಂದೊಂದು ಶಾಖೆಗೆ ಆಗಿ ಇದೆ. ಮಧ್ಯಮ ಪಶ್ಚಿಮ ವಜ್ರಕ ನಾಡಿಯ ನೂರು ಶಾಖೆಗಳಿಗೆ ಮಾತ್ರ ಒಂದೊಂದು ಶಾಖೆಗೆ ಒಂಬತ್ತು ಒಂಬತ್ತು ಪ್ರತಿ ಶಾಖೆಗಳು ಮಧ್ಯಕ್ಕೆ ಉತ್ತರ ಪೂರ್ವ ದಕ್ಷಿಣಗಳ ಆರ್ಯಾ ಪ್ರಕಾಶಿನೀ ವೈದ್ಯುತಾ ಎಂಬ ಮೂರು ನಾಡಿಗಳ ೩೦೦ ಶಾಖೆಗಳಿಗೂ ಒಂದೊಂದು ಶಾಖೆಗೆ ಎಂಟೆಂಟು ಪ್ರತಿಶಾಖೆಗಳಾಗಿವೆ. ೧೦೧ಕ್ಕೆ ಇವು ಹೋಗಿ ಉಳಿದ ೯೬ ಮುಖ್ಯ ನಾಡಿಗಳಿಗೆ ಒಂದೊಂದಕ್ಕೆ ನೂರು ನೂರಾಗಿರತಕ್ಕ ಶಾಖೆಗೆ ೯೬೦೦ ಆಗುತ್ತದೆಯಾದುದರಿಂದ, ಪ್ರತಿ ಶಾಖೆಗಳು ಒಂದೊಂದು ಶಾಖೆಗೆ ಆರು ಆರು ಆಗಿವೆ. ಅಂತೂ ಪ್ರತಿ ಶಾಖೆಗಳು ಮಾತ್ರ ಏತೇನ ಬ್ರಹ್ಮ ನಾಡಿ ಒಂದು ಎಂದರೆ, ಸಾವಿರದ ನೂರು ಒಂದು ಅದರ ಪಶ್ಚಿಮ ವಜ್ರಕಾ

ನಾಡಿ ಒಂದು ಎಂದರೆ ೧೦೦೧ ಎಂದು ಅರ್ಥ. ಮಧ್ಯಕ್ಕೆ ಉತ್ತರ ಪೂರ್ವ ದಕ್ಷಿಣಗಳ ಮೂರು ನಾಡಿ ಎಂದರೆ ಒಂದೊಂದು ನಾಡಿಯೇ ೯೦೧ ಆಗುತ್ತದೆ. ಆದುದರಿಂದ ೨೭೦೩ ಎಂತ ಅರ್ಥವು. ಉಳಿದ ೭೯ ಎಂದರೆ ಅದರ ಶಾಖಾ ಪ್ರತಿಶಾಖಾಗಳು ಕೂಡಿ "೫೭೨೭೯" ಎಂತ ಅರ್ಥವು. "೭೨೦೧೦೧" ಎಂಬುದೇ ನಿಶ್ಚಯವು. ಸುಳಾದಿ ಹತ್ತೈದು ವಿಂಶತಿ ಮೇಲೆರಡು ಸಾವಿರ ಮತ್ತೆ ನೂರೊಂದು ನಾಡಿ ದೇಹದವಳಗೆ ಎಂತ ವಿಜಯರಾಯರ ಸುಳಾದಿ.

***ಪ್ರಮಾಣ :- ಅಸ್ಮಿನ್ ಸ್ಥೂಲ ಶರೀರೇ ಚ ವೃಷಣಾಸನಯೋರಪಿ । ಮಧ್ಯೇಕಂದಂ ವಿಜಾನೀಯಾದ್ವರ್ತುಲಂ ದ್ವಯಾಂಗುಲೋ ಛ್ರಿತಂ । ಚತುರಾಂಗುಲ ವಿಸ್ತಾರೋ ದೇಹಧಾರಂ ಮಹತ್ತರಂ। ಆಸ್ಥಾನಾಂ ಸರ್ವ ನಾಡೀನಾಂ ಎಂತ ಮುಕ್ತಿ ತತ್ತ್ವ "ಅತ್ರೈಕಶತಂನಾಡೀನಾಂ ತಾಸಾಂ ಶತಂ ಶತಮೇಕ್ಕೈಕಸ್ಯ ದ್ವಾಸಪ್ತತಿಂ ಪ್ರತಿಶಾಖಾಂ ಸಹಸ್ರಾಣಿ ಆಸು ವ್ಯಾವಶ್ಚರತಿ ॥*** ಎಂತ ಷಟ್ಪ್ರಷ್ಣೋಪನಿಷತ್, ತಂತ್ರಸಾರದಲ್ಲಿ ವಿಸ್ತರಿಸಿದ್ದಾರೆ.

ಪ್ರತ್ಯೇಕ ಪ್ರಮಾಣ:- "ಏಕೋತ್ತರ ಶತಂ ನಾಡ್ಯಃ ಶರೀರೇಸ್ಮಿನ್ಸಮೋಹಿತಾಃ ತಾಸು ಪಂಚ ಪ್ರಭೇದಾಸ್ಯುಃ ಪಿಂಗಳೇಡಾಚ ನಂದಿನೀ" ಸುಷುಮ್ನಾ ವಜ್ರಕಾಚೇತಿ ಶತಸ್ತ್ರೋದಿಕ್ಷು ಸಂಸ್ಥಿತಾಃ ॥ ಚತುರ್ಷ್ವಪಿ ಸ್ಥಿತಾ ಮಧ್ಯೆ ಸುಷುಮ್ನಾಕಾ ಪ್ರಧಾನತಃ । ಶತಂ ಶತಂ ಪುನಸ್ತಾಸಾಂ ಶಖಾನಾಡ್ಯಾಃ ಪ್ರಕೀರ್ತಿತಾಃ ॥ ತತ್ರ ಸುಷುಮ್ನ ಶಾಖಾನಾಂ ಪ್ರತಿಶಾಖಾದಶಾಂತಿ ಮಾನವ। ಶಾಖಾಚ ತಿಸ್ರೋಣಾಮಕ್ಷಾ ಶಾಖಾಷಡ್ವೈವತು। ಶಿಷ್ಟ ಷಣ್ಣವತೀನಾಂತು ದ್ವಾಸಪ್ತತಿರಿಮಾಮತಾಃ ॥ ಎಂತ ನಾಡೀ ಕಲ್ಪಲತಾ ಪ್ರಮಾಣ ಸಿದ್ಧ. ಇದರೊಳಗೆ ಪಂಚ ನಾಡಿಗಳಲ್ಲಿ ಆಗಡ್ಡೆ ಎಂಬ ಮೂಲಾಧಾರ ಸ್ಥಾನ ೧, ನಾಭಿಸ್ಥಾನ೧, ಹೃದಯಸ್ಥಾನ೧, ವಕ್ಷಸ್ಥಳ ೧ ಅದರ ಮೇಲಿನ ಕಂಠ ಗುಣಿ ಸ್ಥಾನ೧, ಮಧ್ಯ ಕಂಠದ ಇಂದ್ರಯೋನಿ೧, ಭ್ರೂಮಧ್ಯಸ್ಥಾನ ಒಂದು, ಅದರ ಮೇಲೆ ವಾಸುದೇವಮೂರ್ತಿ ಇರತಕ್ಕ ಸಹಸ್ರದಳ ಕಮಲವು ಶಿರಸ್ಸನ್ನು ಬಿಟ್ಟು ೧೨ ಅಂಗುಲದ ಮೇಲಿನ ಆಕಾಶದಲ್ಲಿ ಅಂತ ಕೆಲವರ ಸಂಪ್ರದಾಯ. ಮುಖ್ಯ ಶ್ರೀಮುಷ್ಣ ಮೊದಲಾದವರ ಸಂಪ್ರದಾಯದಲ್ಲಿ ಶಿರಸ್ಸಿನಲ್ಲಿಯೇ ಎಂತ ನಿಶ್ಚಯಿಸಿದ್ದಾರೆ. ತಂತ್ರಸಾರದಲ್ಲಿ ಸಹಸ್ರದಳ ಕಮಲವನ್ನು ಹೇಳಲಿಲ್ಲವಲ್ಲ

ಎಂದರೆ ಛಲಾರಿಯವರ ದೈನಂದಿನ ಸದಾಚಾರ ದರ್ಪಣದಲ್ಲಿ ಯೋಗ ಲಕ್ಷಣ ವೊದಲಾಗಿ ಇದನ್ನು ನಿರೂಪಿಸಿ ಇದ್ದಾರೆ. ದಲ್ಲಿ ವಿಸ್ತರಿಸಿ ಇದ್ದಾರೆ. ಶಿರಸ್ಸಿನಲ್ಲಿಯೇ ಸಹಸ್ರ ದಲ ಕಮಲವದೆ ಎಂದು ವಿಜಯರಾಯರ ಸುಳಾದಿ. ಇದರಲ್ಲಿ ವಿವರ " ಆರು ಸ್ಥಾನಗಳಲ್ಲಿಯೂ ಪಂಚ ನಾಡಿಗಳಲ್ಲಿ ಬಿದಿರುಗಳು ಗಳಹಾಗೆ ಒಂದೊಂದು ನಾಡಿಯಲ್ಲಿ ಒಂದೊಂದು ಸ್ಥಾನದಲ್ಲಿ ಒಂದೊಂದು ಕಮಲವು. ಆ ಕಮಲಗಳ ಮೇಲೆ ಒಂದೊಂದು ಮಂಡಲಗಳು. ಅಲ್ಲಿ ಒಂದೊಂದು ಭಗವದ್ರೂಪಗಳು ಇರುವುದೇ ಸಿದ್ಧ. ಇದರಲ್ಲಿ ಬ್ರಹ್ಮ ನಾಡಿಯಲ್ಲಿ ಮಾತ್ರ ವಿಶೇಷವೇನೆಂದರೆ, ಈ ಆರು ಸ್ಥಾನಕ್ಕಿಂತ ಹೆಚ್ಚಾಗಿ ವಕ್ಷಸ್ಥಲದಲ್ಲಿ ಒಂದು ಕಮಲವು ಕಂಠದ ಮುಂದಿನ ಗುಣಿಯ ಸಮದೇಶದಲ್ಲಿ ಒಂದು ಕಮಲವು ಶಿರಸ್ಸಿನಲಿ ಒಂದು ಸಹಸ್ರದಳ ಕಮಲವೂ ಈ ಮೂರೂ ಕಮಲಗಳು ಅಧಿಕವಾಗಿವೆ ಅಂತು "೩೩" ಕಮಲಗಳಾಯಿತು.

## ಬ್ರಹ್ಮನಾಡಿಯರೀತಿ

ಈಗ ಹೇಳಿದ ಪಂಚ ಸುಷುಮ್ನೆಯು ಹೊಂದಿಕೊಂಡು ಗುದಸ್ಥಾನ ಪ್ರಾರಂಬಿಸಿ ಶಿರಸ್ಸಿನ ತನಕ ಬೆನ್ನಿನ ಕಂಬದಲ್ಲಿ ಬಗ್ಗಿದರೆ ಬಿಲ್ಲಿನ ಹಾಗೂ ನೆಟ್ಟಗೆ ಕೂತರೆ ಕಂಬವಾಗಿಯೂ ಇರತಕ್ಕ ಧೀರ್ಘಾಕಾರದ ಅಸ್ಥಿಯನ್ನೇ ಈ ಪಂಚ ಸುಷುಮ್ನೆಯು ಹೊಂದಿಯಿದೆಯಾದುದರಿಂದ ಈ ಮಧ್ಯ ಹೃದಯ ಗುಂಡಿಗೆಗೆ ಸಮಸ್ಥಾನದ ಬ್ರಹ್ಮ ನಾಡಿಯು ಬೆನ್ನಿನ ಕಂಬಕ್ಕೆ ಸೇರಿಕೊಂಡಿದೆ. ಅದೇ ಸ್ಥಾನದಲ್ಲಿ ಜೀವನು ಮಧ್ಯ ನಾಡಿಯಲ್ಲಿ ಇದ್ದಾನೆ. ಸುಳಾದಿ:- ಹೃದಯ ನಿಮ್ನದ ಮಧ್ಯ ಮದ್ಯ ನಾಡಿಯ ಮಧ್ಯೆ ಹುದುಗಿಪ್ಪನಿರುದ್ಧ ದೇಹವದಕೆ ಹದಿನಾಲ್ಕು ದಳವುಳ್ಳ ಪೊಳೆವ ರಕುತಾವರ್ಣವಿದೆ. ಅಷ್ಟದಳವೆಂದು ಕರೆಸುತಿದೆಕೋ । ಅದರ ಕರ್ಣಿಕೆ ಮೇಲೆ ರಮಾ ಮೂರ್ತಿಗಳುಂಟು. ಮೊದಲಾಗ್ರ ಮಧ್ಯ ಮೂಲೇಶ ಭಗವಾನ್ ಎಂತ ಜೀವಾಖ್ಯ ಸುಳಾದಿ. ಮತ್ತೊಂದು ಸುಳಾದಿಯ ಮಾತು. "ಸ್ಥೂಲಾಂಗುಷ್ಟ ಪ್ರಮಾಣ ಮೂರ್ತಿ ಪ್ರಾಜ್ಞ ಮೂಲೇಶ ಅಂಗುಷ್ಟಾಗ್ರ ಪರಿಮಿತ ಕೇಳಿ ಪ್ರಾದೇಶ ಪರಿಮಿತ ಪುರುಷನಾಮಕ ಕಾಲಕಾಲಕೆ ಬಿಡದೆ ಪೂಜಾರ್ಹರು."

ನಾಡಿ ಒಂದು ಎಂದರೆ ೧೦೦೧ ಎಂದು ಅರ್ಥ. ಮಧ್ಯಕ್ಕೆ ಉತ್ತರ ಪೂರ್ವ ದಕ್ಷಿಣಗಳ ಮೂರು ನಾಡಿ ಎಂದರೆ ಒಂದೊಂದು ನಾಡಿಯೇ ೬೦೧ ಆಗುತ್ತದೆ. ಆದುದರಿಂದ ೨೭೦೩ ಎಂತ ಅರ್ಥವು. ಉಳಿದ ೬೯ ಎಂದರೆ ಅದರ ಶಾಖಾ ಪ್ರತಿಶಾಖಾಗಳು ಕೂಡಿ "೫೭೨೬" ಎಂತ ಅರ್ಥವು. "೭೨೦೧೦೧" ಎಂಬುದೇ ನಿಶ್ಚಯವು. ಸುಳಾದಿ ಹತ್ತೈದು ವಿಂಶತಿ ಮೇಲೆರಡು ಸಾವಿರ ಮತ್ತೆ ನೂರೊಂದು ನಾಡಿ ದೇಹದವಳಗೆ ಎಂತ ವಿಜಯರಾಯರ ಸುಳಾದಿ.

*ಪ್ರಮಾಣ :- ಅಸ್ಮಿನ್ ಸ್ಥೂಲ ಶರೀರೇ ಚ ವೃಷಣಾಸನಯೋರಪಿ । ಮಧ್ಯೇಕಂದಂ ವಿಜಾನೀಯಾದ್ವರ್ತುಲಂ ದ್ವಯಾಂಗುಲೋ ಛ್ರಿತಂ । ಚತುರಾಂಗುಲ ವಿಸ್ತಾರೋ ದೇಹಧಾರಂ ಮಹತ್ತರಂ। ಆಸ್ಥಾನಾಂ ಸರ್ವ ನಾಡೀನಾಂ ಎಂತ ಮುಕ್ತಿ ತತ್ತ್ವ "ಅತ್ರೈಕಶತಂನಾಡೀನಾಂ ತಾಸಾಂ ಶತಂ ಶತಮೇಕೈಕಸ್ಯ ದ್ವಾಸಪ್ತತಿಂ ಪ್ರತಿಶಾಖಾಂ ಸಹಸ್ರಾಣಿ ಆಸು ವ್ಯಾವಶ್ಚರತಿ ॥* ಎಂತ ಷಟ್ಪ್ರಷ್ನೋಪನಿಷತ್, ತಂತ್ರಸಾರದಲ್ಲಿ ವಿಸ್ತರಿಸಿದ್ದಾರೆ.

ಪ್ರತ್ಯೇಕ ಪ್ರಮಾಣ:- "ಏಕೋತ್ತರ ಶತಂ ನಾಡ್ಯಃ ಶರೀರೇಸ್ಮಿನ್ಸಮೋಹಿತಾಃ ತಾಸು ಪಂಚ ಪ್ರಭೇದಾಸ್ಯುಃ ಪಿಂಗಳೇಡಾಚ ನಂದಿನೀ" ಸುಷುಮ್ನಾ ವಜ್ರಕಾಚೇತಿ ಶತಸ್ರೋದಿಕ್ಷು ಸಂಸ್ಥಿತಾಃ ॥ ಚತುರ್ಷ್ವಪಿ ಸ್ಥಿತಾ ಮಧ್ಯೆ ಸುಷುಮ್ನಾಕಾ ಪ್ರಧಾನತಃ । ಶತಂ ಶತಂ ಪುನಸ್ತಾಸಾಂ ಶಖಾನಾಡ್ಯಾಃ ಪ್ರಕೀರ್ತಿತಾಃ ॥ ತತ್ರ ಸುಷುಮ್ನ ಶಾಖಾನಾಂ ಪ್ರತಿಶಾಖಾದಶಾಂತಿ ಮಾನವ। ಶಾಖಾಚ ತಿಸ್ರೋಣಾಮಕ್ಷಾ ಶಾಖಾಷಡ್ಕೈವತು। ಶಿಷ್ಟ ಷಣ್ಣವತೀನಾಂತು ದ್ವಾಸಪ್ತತಿರಿಮಾಮತಾಃ ॥ ಎಂತ ನಾಡೀ ಕಲ್ಪಲತಾ ಪ್ರಮಾಣ ಸಿದ್ಧ. ಇದರೊಳಗೆ ಪಂಚ ನಾಡಿಗಳಲ್ಲಿ ಆಗಡ್ಡೆ ಎಂಬ ಮೂಲಾಧಾರ ಸ್ಥಾನ ೧, ನಾಭಿಸ್ಥಾನ೧, ಹೃದಯಸ್ಥಾನ೧, ವಕ್ಷಸ್ಥಳ ೧ ಅದರ ಮೇಲಿನ ಕಂಠ ಗುಣಿ ಸ್ಥಾನ೧, ಮಧ್ಯ ಕಂಠದ ಇಂದ್ರಯೋನಿ೧, ಭ್ರೂಮಧ್ಯಸ್ಥಾನ ಒಂದು, ಅದರ ಮೇಲೆ ವಾಸುದೇವಮೂರ್ತಿ ಇರತಕ್ಕ ಸಹಸ್ರದಳ ಕಮಲವು ಶಿರಸ್ಸನ್ನು ಬಿಟ್ಟು ೧೨ ಅಂಗುಲದ ಮೇಲಿನ ಆಕಾಶದಲ್ಲಿ ಅಂತ ಕೆಲವರ ಸಂಪ್ರದಾಯ. ಮುಖ್ಯ ಶ್ರೀಮುಷ್ಣ ಮೊದಲಾದವರ ಸಂಪ್ರದಾಯದಲ್ಲಿ ಶಿರಸ್ಸಿನಲ್ಲಿಯೇ ಎಂತ ನಿಶ್ಚಯಿಸಿದ್ದಾರೆ. ತಂತ್ರಸಾರದಲ್ಲಿ ಸಹಸ್ರದಳ ಕಮಲವನ್ನು ಹೇಳಲಿಲ್ಲವಲ್ಲ

ಎಂದರೆ ಭಲಾರಿಯವರ ದೈನಂದಿನ ಸದಾಚಾರ ದರ್ಪಣದಲ್ಲಿ ಯೋಗ ಲಕ್ಷಣ ವೊದಲಾಗಿ ಇದನ್ನು ನಿರೂಪಿಸಿ ಇದ್ದಾರೆ. ದಲ್ಲಿ ವಿಸ್ತರಿಸಿ ಇದ್ದಾರೆ. ಶಿರಸ್ಸಿನಲ್ಲಿಯೇ ಸಹಸ್ರ ದಲ ಕಮಲವದೆ ಎಂದು ವಿಜಯರಾಯರ ಸುಳಾದಿ. ಇದರಲ್ಲಿ ವಿವರ " ಆರು ಸ್ಥಾನಗಳಲ್ಲಿಯೂ ಪಂಚ ನಾಡಿಗಳಲ್ಲಿ ಬಿದಿರುಗಳು ಗಳಹಾಗೆ ಒಂದೊಂದು ನಾಡಿಯಲ್ಲಿ ಒಂದೊಂದು ಸ್ಥಾನದಲ್ಲಿ ಒಂದೊಂದು ಕಮಲವು. ಆ ಕಮಲಗಳ ಮೇಲೆ ಒಂದೊಂದು ಮಂಡಲಗಳು. ಅಲ್ಲಿ ಒಂದೊಂದು ಭಗವದ್ರೂಪಗಳು ಇರುವುದೇ ಸಿದ್ಧ. ಇದರಲ್ಲಿ ಬ್ರಹ್ಮ ನಾಡಿಯಲ್ಲಿ ಮಾತ್ರ ವಿಶೇಷವೇನೆಂದರೆ, ಈ ಆರು ಸ್ಥಾನಕ್ಕಿಂತ ಹೆಚ್ಚಾಗಿ ವಕ್ಷಸ್ಥಲದಲ್ಲಿ ಒಂದು ಕಮಲವು ಕಂಠದ ಮುಂದಿನ ಗುಣಿಯ ಸಮದೇಶದಲ್ಲಿ ಒಂದು ಕಮಲವು ಶಿರಸ್ಸಿನಲಿ ಒಂದು ಸಹಸ್ರದಳ ಕಮಲವೂ ಈ ಮೂರೂ ಕಮಲಗಳು ಅಧಿಕವಾಗಿವೆ ಅಂತು "೩೩" ಕಮಲಗಳಾಯಿತು.

## ಬ್ರಹ್ಮನಾಡಿಯರೀತಿ

ಈಗ ಹೇಳಿದ ಪಂಚ ಸುಷುಮ್ನೆಯು ಹೊಂದಿಕೊಂಡು ಗುದಸ್ಥಾನ ಪ್ರಾರಂಬಿಸಿ ಶಿರಸ್ಸಿನ ತನಕ ಬೆನ್ನಿನ ಕಂಬದಲ್ಲಿ ಬಗ್ಗಿದರೆ ಬಿಲ್ಲಿನ ಹಾಗೂ ನೆಟ್ಟಗೆ ಕೂತರೆ ಕಂಬವಾಗಿಯೂ ಇರತಕ್ಕ ಧೀರ್ಘಾಕಾರದ ಅಸ್ಥಿಯನ್ನೇ ಈ ಪಂಚ ಸುಷುಮ್ನೆಯು ಹೊಂದಿಯಿದೆಯಾದುದರಿಂದ ಈ ಮಧ್ಯ ಹೃದಯ ಗುಂಡಿಗೆಗೆ ಸಮಸ್ಥಾನದ ಬ್ರಹ್ಮ ನಾಡಿಯು ಬೆನ್ನಿನ ಕಂಬಕ್ಕೆ ಸೇರಿಕೊಂಡಿದೆ. ಅದೇ ಸ್ಥಾನದಲ್ಲಿ ಜೀವನು ಮಧ್ಯ ನಾಡಿಯಲ್ಲಿ ಇದ್ದಾನೆ. ಸುಳಾದಿ:- ಹೃದಯ ನಿಮ್ನದ ಮಧ್ಯ ಮದ್ಯ ನಾಡಿಯ ಮಧ್ಯೆ ಹುದುಗಿಪ್ಪನಿರುದ್ಧ ದೇಹವದಕೆ ಹದಿನಾಲ್ಕು ದಳವುಳ್ಳ ಪೊಳೆವ ರಕುತಾವರ್ಣವಿದೆ. ಅಷ್ಟದಳವೆಂದು ಕರೆಸುತಿದೆಕೋ । ಅದರ ಕರ್ಣಿಕೆ ಮೇಲೆ ರಮಾ ಮೂರ್ತಿಗಳುಂಟು. ಮೊದಲಾಗ್ರ ಮಧ್ಯ ಮೂಲೇಶ ಭಗವಾನ್ ಎಂತ ಜೀವಾಖ್ಯ ಸುಳಾದಿ. ಮತ್ತೊಂದು ಸುಳಾದಿಯ ಮಾತು. "ಸ್ಥೂಲಾಂಗುಷ್ಟ ಪ್ರಮಾಣ ಮೂರ್ತಿ ಪ್ರಾಜ್ಞ ಮೂಲೇಶ ಅಂಗುಷ್ಟಾಗ್ರ ಪರಿಮಿತ ಕೇಳಿ ಪ್ರಾದೇಶ ಪರಿಮಿತ ಪುರುಷನಾಮಕ ಕಾಲಕಾಲಕೆ ಬಿಡದೆ ಪೂಜಾರ್ಹರು."

ಮೂಲ ಮುಖ್ಯ ಗುರು ಪವಮಾನ ದೇವತೆ ಮೂಲೇಶ ಪಾದ ಬಳಿಯವಾಸ । ವಾಲಗವ ಮಾಳ್ಪನು ಸರ್ವ್ವೊಗವಾಗಿ ಹೀಯಾಳಿಯಿಂದಲಿ ಕರವಮುಗಿದು ನಿಂದು । ಬಾಳುವ ಜೀವನು ಪ್ರಾಣನಂಘ್ರಿಯ ರೇಣುವ ತಾಳಿ ಆತನ ಪಾದ ಸಮೀಪದಿ । ಎಂತ ಅಧ್ಯಾತ್ಮ ಸುಳಾದಿ.

"ಮುದದಿಂದ ಮೂಲೇಶನ ಪಾದಾಂಗುಷ್ಟದಲ್ಲಿ ವಿಧಿ ಘಟ್ಟಕೆ ಸಾರುವ ಪ್ರಾಣ ವಾಸ. ಇದನೆ ಗ್ರಹಿಸು ಈತನ ಪಾದ ಮೂಲಾಶ್ರಯ ಕದಲದಂತೆ ಜೀವ ಇಪ್ಪ ನೋಡು." ಎಂತ ಜೀವಾಖ್ಯ ಸುಳಾದಿ.

ಅಂದರೆ ಈ ದೇಹದಲ್ಲಿ ಪ್ರಾದೇಶ ಅಗ್ರೇಶ ಮೂಲೇಶ ಈ ರೂಪಗಳು ಪಶ್ಚಿಮಾಭಿ ಮುಖಗಳು. ಪ್ರಾಣದೇವರು ಜೀವನ ಸಹಿತವಾಗಿ ಪೂರ್ವಾಭಿಮುಖರು. ಎನ್ನುವುದಕ್ಕೆ ಪ್ರಮಾಣ.

*ಸ್ಥೂಲಾಂಗುಷ್ಟ ಪ್ರಮಾಣೇನ ಬಿಂಬ ಮೂರ್ತಿರ್ವಿರಾಜತೆ ।*
*ಸಏವ ಪರಮಾತ್ಮಾಪಿಹ್ಯಗ್ರೇಶ ಇತಿ ನಾಮಕಃ।*
*ಪ್ರಾಜ್ಞಃ ಸ ಸರ್ವ ಜೀವಾನಾಂ ಸುಷುಪ್ತ್ಯಾದಿಪ್ರದೋನಿಶಂ ।*
*ತತ್ಕರ್ಣಿಕಾ ಮೂಲ ದೇಶೇಸ್ಥೂಲಾಂಗುಷ್ಟಾಗ್ರಮಾನತಃ।*
*ಮೂಲೇಶ ಇತಿ ವಿಖ್ಯಾತೋ ನಾರಾಯಣ ಪದೋ ಹರಿಃ ।*
*ತಸ್ಯ ಪೃಷ್ಠ ಪ್ರದೇಶೇತು ಪ್ರಾದೇಶ ಪರಿಮಾಣತಃ।*
*ಪ್ರಾದೇಶ ನಾಮಾ ಜೀವಾನಾಂ ದೇಹಾನಾಮಾಶ್ರಯಃ ಸದಾ।*
*ನಾರಾಯಣಃ ಪುರುಷಾಖ್ಯೋ ವರ್ತತೇತ್ರ ತಥೈವಚ ।*

ಎಂದರೆ ಪ್ರಾದೇಶಗೆ ಪುರುಷ ಎಂತಲೂ ಮೂಲೇಶಗೆ ವಿಜ್ಞಾನಾತ್ಮ ಎಂತಲೂ ಹೆಸರು. ಮುಂದಿನ ಪ್ರಮಾಣ:-

*"ವಿಷ್ಣುರ್ಮೂಲೇಶ ಇತಿತು ವಿಜ್ಞಾನಾತ್ಮೇತಿ ತಂ ವಿದುಃ ।*
*ತಸ್ಮಾದಗ್ರೇಶ ಮೂಲೇಶ ಪ್ರಾದೇಶ ಇತಿ ನಾಮಕಃ।*
*ಮೂರ್ತಯಃಸಂತಿ ಹೃತ್ಪದ್ಮೇ ತ್ರಯ ಆನಂದರೂಪಿಣಃ।*
*ವರ್ತತೇ ಮೂಲೇಶ ಪಾದ ಸನ್ನಿಧೌ ಪ್ರಾಣ ನಾಮಕಃ।*
*ಬದ್ಧಾಂಜಲಿಶ್ಚ ರೂಪಾಣಾಂ ತ್ರಯಾಣಾಂ ಪುರತಃ ಸದಾ ।*

***ಪೂರ್ವಾಭಿಮುಖತಶ್ಚೈವ ವರ್ತತೇ ಜೀವ ಏವತು ।***
***ಮುಖ್ಯ ಪ್ರಾಣ ಪದಾಂಭೋಜ ಸನ್ನಿಧೌ ತದ್ವದೇವಹಿ॥" ಎಂತ.***

ಆದರ ವಿವೇಕ ಸುಳಾದಿ ಮಾತು. "ಮುದದಿಂದ ಮೂಲೇಶನ ಪಾದಾಂಗುಟದಲಿ ವಿಧಿಪದಕೆ ಸಾರುವ ಪ್ರಾಣ ವಾಸ।" ಅಂದರೆ ಹೃದಯ ಮಧ್ಯ ಪಂಚನಾಡಿ ಮಧ್ಯ ಬ್ರಹ್ಮ ನಾಡಿಯ ಮಧ್ಯದಲ್ಲಿ ೧೪' ದಳವಿಶಿಷ್ಟ ಅನಿರುದ್ಧ ದೇಹವೆಂದು ಸುಳಾದಿಯಲ್ಲಿ ಹೇಳಿದ್ದಾರಷ್ಟೆ- "ಚತುರ್ದಳಾತ್ಮಾಸಾವನಿರುದ್ಧಾಖ್ಯ ದೇಹಕಃ । ಅನಿರುದ್ಧಾಪ್ತ ದೇಹತ್ವಾದ್ದೇಹಸ್ಥ ಶಬ್ದ ವಾಚಕಃ। ಎಂತ." ವಿಶಾಲಂದಶದಿಕ್ ಪೂರ್ಣಂ ಎಂಬ ಪ್ರಮಾಣವು ಇದೇ ಗ್ರಂಥದಲ್ಲಿ ತೆಗೆದಿದ್ದಾರೆ. ಇದು ಪರಮ ಹಂಸ ಸಂಹಿತೆ ಎಂತ ಪುರಂದರ ದಾಸರ ಹೃದಯ ಕಮಲ ಸುಳಾದಿಯಲ್ಲಿ ಉದಹರಿಸಿ ಇದ್ದಾರೆ. ಕೆಳಭಾಗ ಆರು ದಳ ಆದರಮೇಲೆ ಎಂಟು ದಳವಾದುದರಿಂದ, ಆ ಪದ್ಮದ ಆರು ದಳಗಳಲ್ಲಿ ಎದುರು ದಳದಲ್ಲಿದ್ದು ಮೊದಲು ದಳದ ಕೊನೆಯಲ್ಲಿ ಪ್ರಾಣದೇವರು ಜೀವನು ವಾಸ ಮಾಡುತ್ತಾರೆ. ಹೀಗೆ ಎನ್ನುವುದರಿಂದ ಕೆಳಗಿನ ಐದು ದಳಗಳು ಆದರ ಮೇಲಿನ ಅಷ್ಟದಳಗಳೂ ಕೂಡ ಈ ಜೀವ ಪ್ರಾಣರುಗಳಿಗೆ ಹರಿಯ ಪೂಜಾಪೀಠದ ಹಾಗೆ ಮುಂದೆ ಮಾಡಿಕೊಂಡು ಇರುವುದೇ ಸಿದ್ಧವು ಎಂದು ಸುಳಾದಿಯ ಭಾವ. ಮಧ್ಯ ಬ್ರಹ್ಮ ನಾಡಿಯು ಬೆನ್ನಿನ ಕಂಬಕ್ಕೆ ಸೇರಿರುವುದರಿಂದ ಜೀವ ಪ್ರಾಣದೇವರು ಮಾತ್ರ ಬ್ರಹ್ಮ ನಾಡಿಯ ಕೇವಲ ಮಧ್ಯ ದೇಶದಲ್ಲಿ ನಿಂತು ಒಂದು ದಳಾಗ್ರ ವ್ಯತಿರಿಕ್ತ ಆ ಪದ್ಮದ ೧೨ ದಳವು ಪೂರ್ವಕ್ಕೆ ಬಗ್ಗಿ ಬೆನ್ನು ಕಂಬದಿಂದ ಹೃದಯಕ್ಕೆ ಆದರ ಎಂಟು ದಳಗಳು ಮಾತ್ರ ಅಧೋಮುಖವಾಗಿ ಕದಳೀ ಪುಷ್ಪದ ಮೂತಿಯಂತೆ ದಳವಾದುದರಿಂದ ಈ ಮೂರು ಭಗವದ್ರೂಪಗಳಿಗೂ ಹೃದಯವೇ ಮುಖ್ಯ ಸ್ಥಾನ ಹೊರತು ಬ್ರಹ್ಮನಾಡಿ ಮುಖ್ಯಸ್ಥಾನವಲ್ಲ- ಮುಂದೆ ವಿಸ್ತರಿಸುತ್ತೇನೆ. "ಕಾಲಕಾಲಕೆ ಬಿಡದೆ ಪೂಜಾರ್ಹರು ಎಂತ ಅಧ್ಯಾತ್ಮ ಸುಳಾದಿಯಿಂದ ಪ್ರಾಣದೇವರಿಂದ ಮೂರು ರೂಪಗಳು ಪೂಜಿಸಿಕೊಂಡು ಕಮಲದ ಹಾಗೆ ಇರುತ್ತದೆ. ಹಾಗಾದರೆ "ಕರ್ಣಿಕಾಗ್ರಸ್ಥಿತಹತಾ ಪ್ರವಿಶಂತಿ ಸುಷುಪ್ತಿತು" ಎಂಬೀತ್ಯಾದಿ ಪ್ರಮಾಣಗಳಿಂದ "ಹೃದಯಸ್ಥಾತ್ ಪರೋಜೀವೋ ದೂರಸ್ಥೋ ಜಾಗ್ರದೇಷ್ಯತಿ । ಸಮೀಪಸ್ಥ ಸ್ತಥಾಸ್ವಪ್ನಂ ಸ್ವಪಿತ್ಯಸ್ಮಿನ್ ಲಯಾವ್ರಜಣ್" ಇತ್ಯಾದಿ ಶೃತಿಗಳಿಂದಲೂ ಜೀವನಿಗೆ

ಸಂಚಾರ ಹೇಳಬೇಕಷ್ಟೆ- ಎಂದರೆ –ಜೀವನ ಪ್ರಕಾಶವಿಶೇಷಕ್ಕೆ ಸಂಚಾರ ಹೇಳಬೇಕೇ ಹೊರತು ಜೀವನ ಸ್ವರೂಪಕ್ಕೆ ಸರ್ವಥಾ ಸಂಚರವು ಇಲ್ಲ. ಅತಏವ "ಈಶನ ಪಾದ ಮೂಲಾಶ್ರಯ ಕದಲದಂತೆ ಜೀವ ಇಪ್ಪ ನೋಡು" ಎಂತ ಹೇಳಿದರು. ಈ ತೇಜೋಮಯಕಮಲವನ್ನು ಜ್ಞಾನಾರ್ಕದಿಂದ ಮನುಷ್ಯರು ವಿಕಾಸ ಮಾಡದೇ ಇದ್ದರೆ ಇವರಿಗೆ ಉಪಾಸನಾ ಒದಗುವುದಿಲ್ಲ. ಪ್ರಾಣದೇವರ ಉಪಾಸನೆಗೆ ಇದು ಪ್ರತಿಬಂಧಕವಾಗುವುದಿಲ್ಲ. ಕಮಲ ಅಧೋಮುಖ. ಕಮಲ ಕದಳೀ ಪುಷ್ಪದಂತೆ ಎಂತ ಪುರಂದರ ದಾಸರ ಸುಳಾದಿ.

ಹೃದಂಯು ಕಮಲ ಪ್ರಕರಣ :- "ಕನಕ ವರ್ಣದ ಕದಳೀ ಕುಸುಮದಂತೆವೊಪ್ಪುತಾ ವೊನೆ ಅಧೋಮುಖವಾಗಿ" ಎಂತಲೂ, "ಹೃದಯಾಂಬರದಲ್ಲಿ ಅಧೋಮುಖವಾಗಿದ್ದು ಪದುಮ ಎತ್ತುವುದೊಂದು ವಿಧಿಯ ಗ್ರಹಿಸಿ" ಎಂತ ಮನಮೂರ್ತಿ ಸುಳಾದಿ. "ಮರಕತಮಯ ಎಂಟು ದಳ ಅಧೋಮುಖವಾಗಿ" ಎಂತ ಯೋಗ ಸುಳಾದಿ. "ಹದಿಮೂರು ದ್ವಾರಾಷ್ಟ ಪತ್ರದ ವಿಮುಖವಾದ ಹೃದಯ ವಿಚಾರ ಅಗಣಿತ" ಎಂತ ಜಗನ್ನಾಥದಾಸರ ಶಿಷ್ಯರ ವಚನವು.

*"ಪದ್ಮ ಕೋಶ ಪ್ರತೀಕಶಂ ಹೃದಯಂಚಾಪ್ಯಧೋಮುಖಮ್ ।*
*ಅಧೋನಿಷ್ಟ್ಯಾ ವಿತಸ್ತ್ಯಾಂತೇ ನಾಭ್ಯಾಮುಪರಿತಿಷ್ಠತಿ ।*
*ಜ್ವಾಲಮಾಲಾ ಕುಲಂಭಾತಿ ವಿಶ್ವಸ್ಯಾಯತನಂ ಮಹತ್ ।"*

ಎಂತ ನಾರಾಯಣೋಪನಿಷತ್.

ಅಂದರೆ ವಿತಸ್ತಿ ಎಂದರೆ ೧೨ ಅಂಗುಲ ನಾಭಿಯಿಂದ ಹೃದಯಕ್ಕೆ ಹತ್ತು ಅಂಗುಲ ಪರ್ಯಂತ ನಾಲವು. ಎರಡು ಅಂಗುಲಕ್ಕೆ ದಳಗಳಿಗೆ ಆಧಾರ ಕೈಯು. ಅದಕ್ಕೆ ತಕ್ಕ ಸ್ಥೂಲವಾದ ಕರ್ಣಿಕೆಯಾ ವಿಶಾಲವಾಗಿ ತೇಜೋಮಯವಾಗಿ ಇರುವುದೇ ಸಿದ್ಧ. ಅಧೋಮುಖವೆಂಬ ಈ ವಚನಗಳಿಗೆ ನಾನೇ ತಿಳಿದಿರುವುದೇನೆಂದರೆ ೧೪' ದಳಗಳಲ್ಲಿ ಈಗಿನ ಆರುದಳಗಳು ಹೊರತು ಅದರ ಮೇಲಿನ "೮" ದಳಗಳು ಮಾತ್ರ ಜೀವ ಸ್ಥಾನವನ್ನು ಬಿಟ್ಟು ಜೀವಗೆ ಪೂರ್ವ ಭಾಗ ಬಿಂಬ ಪೀಠ ಸ್ಥಾನವಾದಾಗ್ಯೂ ಅದರ ಮೇಲಿನ ಕರ್ಣಿಕೆಯು ಅಧೋಮುಖವಾಗಿದೆ. ಈ ಕರ್ಣಿಕೆಯನ್ನು ಮುಚ್ಚಿಕೊಂಡಿದ್ದ ದಳಗಳ ಕೊನೆಗಳು

ಒಂದಾಗಿಕೊಂಡಿದ್ದ ಕೊನೆ ಮಾತ್ರ ಪೂರ್ವ ಭಾಗ ಹೃದಯದಲ್ಲಿ ಗಿಣಿಯ ಮೂತಿಯ ಹಾಗೆ ಬಗ್ಗಿ ಎಂತ ತಿಳಿದು ಇದ್ದೇನೆ.

"ಕಿಂಚಿತ್ಕುಂಚಿತ ಪತ್ರಾಗ್ರ" ಎಂತ ಛಲಾರಿ ತಂತ್ರಸಾರ ಟಿಪ್ಪಣಿಗೆ ಕರ್ಣಿಕಾ ಅಧೋಮುಖವಲ್ಲ. ಸಾಕಲ್ಯೇನ ದಳಗಳು ಅಧೋಮುಖವಾಗಲಿಕ್ಕೆ ನಿರವಕಾಶ ಪ್ರಯುಕ್ತ ಯದ್ಯಪಿ ಅಷ್ಟದಳಗಳು ಪ್ರತ್ಯೇಕ ಪ್ರತ್ಯೇಕ ಅಂತಃಕುಂಚಿತಗಳಾಗಿ ಬಾಳೇಹುವ್ವಿನ ಎಸಳುಗಳು ಸುರಟಿಕೊಂಡು ಇದ್ದ ಹಾಗೆ ಹೇಳ ಬೇಕು. "ಅಧೋಮುಖಂ ಹೃತ್ಕಮಲಂ ವಾಯು ಬೀಜೇನ ಸನ್ಮುಖಂ । ಕಾರ್ಯೋತ್ತರೋ ಅಸ್ಯಮುಕುಳಂ ಜ್ಞಾನಾರ್ಕೇಣ ವಿಕಾಸಯೇತ್ ॥" ಇತ್ಯಾದಿ ಪ್ರಮಾಣಗಳಿಂದ ವಾಯುಬೀಜ ಕುಂಭಕದಿಂದ ಊರ್ಧ್ವ ಮುಖವನ್ನು ಮಡುವುದಕ್ಕೂ ಅನಂತರ ವಿಜ್ಞಾನ ಸೂರ್ಯನಿಂದ ಅರಳಸೋದಕ್ಕೂ ಎರಡು ಭಾವನೆಗೂ ಅನುಕೂಲ. ಅಂತಃಕುಂಚಿತ್ ಪತ್ರಾಗ್ರ ಪಕ್ಷದಲ್ಲಿ ವಿಕಾಸ ಒಂದೇ ಪ್ರಯೋಜನ ಹೊರತು "ವಾಯುಬೀಜೇನ ಸನ್ಮುಖಂ ಎಂಬುದಕ್ಕೂ ಅಧೋಮುಖವಾದ ಕಮಲವನ್ನು ಊರ್ಧ್ವಮುಖವಾಗಿ ಚಿಂತಿಸಿ" ಇತ್ಯಾದಿ ಪ್ರಾಕೃತ ಮಾತಿನ ಗ್ರಂಥಗಳಿಗೂ ಅನುಭವ ಸಂಕೋಚವಾಗುತ್ತದೆ. ಸ್ವತಏವ ಅದರ ಕರ್ಣಿಕೆ ಊರ್ಧ್ವಮುಖವಾಗಿ ಇರುತ್ತದೆ. ಎಂತ ಯಾವ ಪ್ರಮಾಣವನ್ನೂ ಕಾಣೆ ॥ ಒಂದುವೇಳೆ ಕರ್ಣಿಕೆ ಅಧೋಮುಖವಾಗಿದ್ದ ಕಾಲಕ್ಕೆ ದೀಪದ ಬತ್ತಿಯನ್ನು ಯಾವಯಾವ ಭಾಗವನ್ನು ತಿರಿಗಿಸಿದಾಗ್ಯೂ ಆ ದೀಪದ ಜ್ವಾಲೆ ಮಾತ್ರ ಹೇಗೆ ಊರ್ಧ್ವಮುಖವೋ ಹಾಗೆ ಬಿಂಬ ಮೂರ್ತಿಯು ಮಂಡಲತ್ರಯ ದಿವ್ಯ ರಥ ಮಹಾ ಮಂಟಪದೊಳಗಿನ ಲಕ್ಷ್ಮೀ ಸ್ವರೂಪಭೂತ ಸುವರ್ಣವರ್ಣದ ಕಮಲಕ್ಕೂ ಆ ಮಹಾ ಮಂಟಪದೊಳಗಿನ ಜಡ ಜ್ಯೋತಿಮಯ ೧೪' ದಳ ರಕ್ತ ವರ್ಣ ಹೃದಯ ಕಮಲಕ್ಕೂ ಚಿನ್ನ ಕಬ್ಬಿಣ ವ್ಯತ್ಯಾಸವಾದುದರಿಂದ ಇವನು ಅದನ್ನು ಊರ್ಧ್ವಮುಖವನ್ನು ಮಾಡಿ ಅರಸಲಿಕ್ಕಿಂತ ಪೂರ್ವದಲ್ಲಿ ಆ ಕರ್ಣಿಕೆಯೇ ಅಧೋಮುಖವಾಗಿದ್ದರೂ ಬಂಧಕ ತೋರುವುದಿಲ್ಲ. ಹಿರಿಯರು ಕರ್ಣಿಕೆ ಅಧೋಮುಖಯೆಂತ ಅರ್ಥಮಾಡಲಿಲ್ಲವಾದುದರಿಂದ ನಾನು ನನ್ನ ಮನಸ್ಸಿನ ಕಳಂಕವನ್ನೇ ಬರೆದುಕೊಳ್ಳತಕ್ಕವನು. ಹಿರಿಯರಿಂದಲೇ ಇದು ನಿಶ್ಚಯವಾಗತಕ್ಕದ್ದು. ಧ್ಯಾನ ಪ್ರಕರಣ ಸುಳಾದಿಯಲ್ಲಿ "ವಾರಿಜ ಮಿಗಿಲಾದ ದ್ವಯಂಗಳ ಚಿಂತಿಸಿ ಎಂತ ಪ್ರಾದೇಶ ಮೂಲೇಶರುಗಳಿಗೂ ಕಮಲ ಪೀಠದ್ವಯಗಳಿರುವುದರಿಂದ

ನಿರ್ಬಾಧೆಯೇ ಸರಿ. ಆದುದರಿಂದ ಕಮಲ ಊರ್ಧ್ವಮುಖವನ್ನು ಚಿಂತಿಸಿ ಅರಳಿಸಿ ಕೆಳಗಿನ ಆರುದಳ ಹಿಡಿದು ಪ್ರಾದೇಶ ಮೂರ್ತಿಯು ಪ್ರಾಜ್ಞನಿಗೆ ಹಿಂಭಾಗದಲ್ಲಿ ನಿಂತು ಇದ್ದಾನೆ. ಈ ಪ್ರಾಣದೇವರು ನಿಂತ ಸ್ಥಳಕ್ಕೆ ಮೇಲಿನ ಅಷ್ಟದಳದ ಮುಂಭಾಗ ಮೂಲೇಶ ಮೂರ್ತಿ ಇದ್ದಾನೆ. ಅದರ ಮೇಲಿನ ಕರ್ಣಿಕಾಗ್ರದಲ್ಲಿ ಮಹಾವೈಭವದಿಂದ ಬಿಂಬಮೂರ್ತಿ ಇದ್ದಾನೆ. ಅದನ್ನೇ ವಿಸ್ತಾರಿಸಿ ಹೇಳುವುದಕ್ಕೋಸ್ಕರ ಮೂಲಾಧಾರಾದಿಗಳನ್ನು ನಿರೂಪಿಸುತ್ತೇನೆ. ಅದರಲ್ಲಿಯೂ ಮಧ್ಯ ಬ್ರಹ್ಮ ನಾಡಿಯ ವಿಶಯದಲ್ಲಿ ಸುಳಾದಿ" ಮೂಲಾಧಾರದಲ್ಲಿ ಚತುರ ದಳ ಪದುಮ ಪ್ರವಾಳ ಮಣಿವರ್ಣದಂತಿಪ್ಪೋದು। ಏಳು ಮರುತ ಜನ ಅಲ್ಲಿ ವಾಸ। ನಾಲಕು ವೇದಗಳು ಒಂದೊಂದು ದಳದಲ್ಲಿ ಮೇಲಾಗಿ ಇರುತಿಪ್ಪವು ಪೊಳೆವುತಲಿ । ವಾಸ ಬೃಹಸ್ಪತಿ– ಸೋಮ ಸೋಮಜ ಶನಿ ಕಾಲ ಪೋಗಾಡದೆ ನಿರುತದಲ್ಲಿ ಶೀಲ ಗುಣರಾಗಿ ಭಗವಧ್ಯಾನ ಮಾಳ್ಪರೋ। ಆಳುಗಳಾಗಿ ತಮ್ಮಿಂದುತ್ತಮರಿಗೆ ಶ್ರೀಲೋಲ ಅನಿರುದ್ಧ ನಿಯಾಮಕನಿಹ ನೀಲವರ್ಣದ ಮೂರ್ತಿ ಅಲ್ಲಿ ಉಂಟು । ಕಾಲಚಕ್ರದಂತೆ ಜಡವಾಯು ಸಂಚಾರ ಮೇಲಧೋ ಭಾಗಬಿಡದೆ ತಿರುಗುವುದೋ ಹೇಳುವೆ ಸ್ವಾಯಂಭುವ ಅಭಿಮಾನಿಯಾಗಿ ವಿಶಾಲ ಚಿತ್ತನಾಗಿ ಅನಿರುದ್ಧನ್ನ । ಆಲಸವಿಲ್ಲದೆ ಆರಾಧಿಸುವ ಕರುಣ । ಲೀನ ಭಕುತಿಯಿಂದ ಲೋಲ್ಯಾಡುತಾ । ಬಾಲಗೋಪಾಲ ಶ್ರೀ ವಿಜಯವಿಠಲರೇಯ ಪಾಲಸಾಗರ ಶಾಯಿ ಅಪ್ರತಿಹತನಯ್ಯ॥ ೧॥

*"ಏತತ್ಪಂಚಸು ನಾಡೀಷು ಮೂಲಸ್ಥಾನೇಷು ಸರ್ವದಾ*
*ಏಕೈಕ ನಾಡ್ಯಾಮೇಕೈಕ ಕಮಲಂಚ ಕ್ರಮಾದಿಹ ।*
*ಪಂಚ ಪದ್ಮಾನಿ ಸಂತ್ಯದ್ಧಾ ಚತುರ್ದಲವ್ಯೈದೋನಿಚೇ*
*ತದ್ದಳೇಷು ಚತುರ್ವೇದಾಃ ದಳೇಕೈಕ ಕ್ರಮಾತ್ಸ್ಥಿತಾಃ॥*
*ಏವಂ ಬೃಹಸ್ಪತಿಃ ಸೋಮೋ ಬುಧಃ ಶನೈಶ್ಚರಸ್ತಥಾ ।*
*ತಿಷ್ಟತಿ ತದ್ಗ ಶ್ರೀಸಸ್ಯ ಸ್ವರೂಪಾಣಿ ಸ್ಮರಂತಿಹಿ.*
*ಏವಮಶೇಷಸಾನ್ಯತ್ರ ಬೀಜ ವರ್ಣಾನಿ ಸಂತಿವೈ.*
*ಚತುಸ್ಸಂಖ್ಯಾನಿ ಪತ್ರೇಷು ಚತುರ್ಷುಕ್ರ ವಶಸ್ತಥಾ ॥*
*ತತ್ಪಂಚ ಪದ್ಮಕೇಚೈವ ವಾಸುದೇವಾದಿಕಾನಿಚ ।*
*ಪಂಚ ರೂಪಾಣಿಚೇಕೈಕ ಕ್ರಮಾದತ್ರ ವಸಂತಿಹಿ।*

*ಪದ್ಮೇಷ್ವೇಕೈಕ ರೀತ್ಯಾತು ವಹ್ನಿಮಂಡಲ ಪಂಚಕಂ।*
*ತ್ರಿಕೋಣಂ ವರ್ತತೇ ತೇಷುಹ್ಯನಿರುದ್ಧೋ ನಿಯಾಮಕಃ ।*
*ಸ್ವಾಯಂಭುವಶ್ಚಾಭಿಮಾನೀಹ್ಯನಿರುದ್ಧಮುಪಾಸತೆ ।*
*ಕಾಲಚಕ್ರಮಿವೋರ್ಧ್ವಾಧಂ ಚರಂತೀಹ ಜಡಾನಿಲಾಃ ।*
*ಸೋ ಅಪಾನವಾಯುಸ್ತತ್ರಾಸ್ತೆ ಸರ್ವೋ ಜಾಗರ್ತಿ ಕುಂಡಲೀ ।*
*ಮರುತಃ ಸಪ್ತಸಂತ್ಯತ್ರ ಲಕ್ಷ್ಮೀ ರೂಪಾಣಿ ಸಂತಿಹಿ ।*
*ಪುತ್ರಯುಕ್ತಾಶ್ಚ ಸಂತ್ಯತ್ರ ದೇವಾ ದೇವಾಜ್ಞಯಾಯುತಾಃ ।*
*ಮೂಲಸ್ಥಾನಸ್ಥ ಪದ್ಮಾನಾಮಿತಿಚೋಕ್ತಂ ಹಿ ಲಕ್ಷಣಂ ।*

ಆದರೆ ಈ ದೆಹದೊಳಗಿನ ಭಗವದ್ರೂಪಗಳು ಈ ಮೂವತ್ತು ಮೂರು ಕಮಲದ ಭಗವದ್ರೂಪಗಳು. ವಿಶಿಷ್ಟವೂ ಪೂರ್ವಾಭಿಮುಖವಾಗಿವೆ. ಪ್ರಾದೇಶ ಅಗ್ರೇಶ ಮೂಲೇಶ ಮೂರು ವ್ಯತಿರಿಕ್ತ ಎಂತ ಪ್ರಮಾಣವನ್ನು ಹಿಂದೆ ಹೇಳಿ ಆದೆ. ಮಧ್ಯ ನಾಡಿಯ ಕಮಲದಲ್ಲಿ ನಾರಾಯಣನು ರಕ್ತವರ್ಣನು. ಪಶ್ಚಿಮ ವಜ್ರಕದೊಳಗೆ ಪ್ರದ್ಯುಮ್ನಮೂರ್ತಿ ಅರಶಿನ ವರ್ಣ, ಉತ್ತರ ಅನಿರುದ್ಧಮೂರ್ತಿ ನೀಲ ವರ್ಣ, ಪೂರ್ವ ವಾಸುದೇವ ಶುಕ್ಲವರ್ಣ–ದಕ್ಷಿಣ ಸಂಕರ್ಷಣ ಪಿಂಗಳವರ್ಣ. ಕಪ್ಪು ಕೂಡಿದ ಕೆಂಪು. ಈ ಐದು ಮೂರುತಿಗಳು ಈ ಮೂಲಾಧಾರ ಸ್ಥಳದಲ್ಲಿ ಹ್ಯಾಗೆ ಹ್ಯಾಗೆ ಶಿರಸ್ಸಿನತನಕ ಆರು ಸ್ಥಾನಗಳಲಿಯೂ ಒಂದೇ ಪ್ರಕಾರ ತಿಳಿಯತಕ್ಕದ್ದು. ಈ ಸಪ್ತ ಧಾತು ವಿಶಿಷ್ಟ ದೇಹ ಒಂದು ಹೊರತು. ಒಳಗಿನ ತೇಜೋ ನಾಡಿ ಕಮಲ ಮಂಡಲ ಮೊದಲಾಗಿ ಜೀವ ದೇವತೆಗಳು ಲಕ್ಷ್ಮೀ ಶ್ರೀ ಹರಿಯ ತನಕ ಸರ್ವವೂ ಅಪ್ರತಿಹತಗಳು. ಪ್ರಮಾಣ:– "ಹರಿರ್ನೀಲಸಿತೋ ಪಿಂಗೋ ಲೋಹಿತಶ್ಚಾತ್ರ ಕೇಶವಃ । ಪ್ರದ್ಯುಮ್ನಾದಿ ಸ್ವರೂಪೇಣ ಧ್ಯೇಯಃ ಸಿದ್ಧಿಮಭೀಪ್ಸಿತಾ ।" ಎಂತ ತಂತ್ರಸಾರ ಸಿದ್ಧ. ಹರಿತ್ ಎಂದರೆ ಹರಿದ್ವರ್ಣ ಪ್ರದ್ಯುಮ್ನಮೂರ್ತಿ ಎಂತ ಅರ್ಥ.

## ನಾಭಿ ಚಕ್ರ ಲಕ್ಷಣ

ಸುಳಾದಿ :– "ಪ್ರೊಕ್ಕಳ ಭಾಗದಲ್ಲಿ ಆರುದಳ ಕಮಲ ರತ್ನ ನೀಲ ವರ್ಣ। ಸಪ್ತಧಾತುಗಳಲ್ಲಿರತಕ್ಕವರು ಆರುಜನ ಹರಿಯ ರಾಣಿಯರು । ಮುಕ್ಕಣ್ಣನ

ಪುತ್ರ ಗಣಪತಿ ಅಭಿಮಾನಿ ಚಿಕ್ಕನೆ ವಿಶ್ವಮೂರ್ತಿಯ ಪೂಜಿಸುವನೋ। ಲಕುಮೀ ರಮಣ ಪ್ರದ್ಯುಮ್ನ ನಿಯಾಮಕನೋ ರಕ್ಕಸ ರಿಪು ಶಿರಿ ವಿಜಯವಿಠಲರೇಯ ಪಕ್ಷಿ ಹಾರುವ ದೇಶವನು ನಿರ್ಮಿಸಿ ಇಪ್ಪ ।" ಪ್ರಮಾಣ:-

*" ತದೋರ್ಧ್ವಂ ನಾಭಿದೇಶೇತು ಪಂಚ ನಾಡಿಷು ಸಂತಿವೈ।*
*ಷಡ್ದಳಾನಿ ರಕ್ತ ನೀಲವರ್ಣಾನ್ಯತಿ ಮೃದೂನಿಚ।*
*ಏಕೈಕ ನಾಡ್ಯಾಮೇಕೈಕ ರೀತ್ಯಾ ಪಂಚಾಬ್ಜಕಾನಿಚ।*
*ತೇಷಾಂ ಷತ್ಪತ್ರಕೇಚೈವ ಹರೇಃ ಷಡ್ಭಾರ್ಯಾಕಾಃ ಕ್ರಮಾತ್ ।*
*ನೀಲಾ-ಭದ್ರಾ-ಮಿತ್ರವಿಂದಾ-ಕಾಲಿಂದೀ-ಜಾಂಬವತ್ಸುಕಾ।*
*ಲಕ್ಷಣೇತ್ಯೇವ ಸಂತ್ಯೇತಾಃ । ಸಸೀತಾಶ್ಚಾಕ್ಷರಾಣಿಚ॥*
*ವರೇಮಯೋರಲೇ ಬೀಜಾನೇತಾದ್ಯತ್ರಲಸಂತಿಹಿ।*
*ತತ್ಪಂಚ ಪದ್ಮಕೇಷೋಕ್ತ ವಾಸುದೇವಾದಿಕಾನಿಚ।*
*ಪಂಚರೂಪಾಣಿ ಚ ಏಕೈಕ ಪ್ರಕಾರೇಣ ವಸಂತಿಚ।*
*ತಥೈಕೈಕ ಪ್ರಕಾರೇಣ ವಾಯು ಮಂಡಲ ಪಂಚಕಂ।*
*ಷಟ್ಕೋಣಂ ವರ್ತತೇ ಪಾಪಪುರುಷಸ್ಯ ಪ್ರಶೋಷಕಂ ।*
*ಮರುತಃ ಸಪ್ತ ಸಂತ್ಯತ್ರಹ್ಯಭಿಮಾನೀ ವಿನಾಯಕಃ।*
*ಉಪಾಸತೇ ವಿಶ್ವಮೂರ್ತೇಃ ಪ್ರದ್ಯುಮ್ನೋ ಅತ್ರನಿಯಾಮಕಃ ।*
*ಪಾಪಪುರುಷಂ ಶೋಷಯನ್ಸಃ ಪ್ರದ್ಯುಮ್ನ ಪಂಚಸು ಸ್ಥಿತಃ ॥*
*ಸಾಯುಧೋ ದ್ವಾದಶಾರ್ಕಸ್ಥೋ ದಿನಾನಾಮಭಿಮಾನಿನಃ ।*
*ಷಷ್ಟ್ಯಧಿಕ ತ್ರಿಶತಾನಾಂಚ ದೇವಾನ್ ಪಾಲಯತಿ ಧ್ರುವಂ ॥*
*ನಿಷಾದ ರೂಪಾನ್ಯೇತ್ಯಾಂಶ್ಚ ತತ್ಸಮಾನಾನ್ ಹರತ್ಯಸೌ ॥*
*ನಾಭಿದೇಶೇಪಿಚಾಕಾಶೋ ವರ್ತತೇ ಅತ್ರಾಪಿ ಸರ್ವದಾ ।*
*ಸಮಾನ ನಾಮಾ ವಾಯುಶ್ಚ ಸರ್ವದಾಚಾಗ್ರತೋಹ್ಯಸೌ।*
*ಇತಿ ನಾಭಿಸ್ಥ ಪದ್ಮಾನಾಂ ಲಕ್ಷಣಂತೋಕ್ತಮಂಜಸಾ ॥ "*

"ಹೃದಯ ಚಕ್ರ ಸುಳಾದಿ:- ಹೃದಯದಲಿ ಎಂಟು ದಳದ ಕಮಲ ಉಂಟು. ಉದಯಾದಿತ್ಯವರ್ಣದಂತಿಪ್ಪೋದು । ಅದರಲಿ ಅಷ್ಟವಸು

ದಿಕ್ಪಾಲಕರುಂಟು ಮುದದಿಂದ ಸಪ್ತ ಸಮೀರ ವಾಸ ।ತ್ರಿದಶಾನಾಯಕ ಇದಕೆ ಅಭಿಮಾನಿಯಾಗಿ ನಿತ್ಯದಲಿ ಉಪೇಂದ್ರನನ್ನು ಪೂಜಿಸುವ. ಇದರ ನಿಯಾಮಕ ಸಂಕರ್ಷಣನೆನಿ । ಪದೋಪದಿಗೆ ಖಳನ ದಹಿಸುವನು। ಸದಮಲನಾಗಿ ಲಕುಮೀನಾರಾಯಣ ಎದುರೀಲಿ ಇಪ್ಪ ಪ್ರಾಜ್ಞನೆಂಬೋ ರುದ್ರ ಸುದರ್ಶನ ಶಂಖಧರಿಪ ಚತುರ ಹಸ್ತ ಹದುಳ ಕೂಡುತಲಿಪ್ಪ ಭಕ್ತಜನಕೆ । ಪದವೀಗೆ ಈತನ ಅಪರೋಕ್ಷವಾಗದೆ ಬಿಂಬನ್ನಕಾಂಬೋ ಮಾರ್ಗವಿಲ್ಲ." ಅಂದರೆ ಲಕ್ಷ್ಮೀನಾರಾಯಣ ರೂಪ ಅಷ್ಟಬಾಹು ಅಷ್ಟಾಯುಧ ಧಾರಿಯಾಗಿ ಹೃದಯದಳಗಳಲ್ಲಿ ಚಕ್ರದಂತೆ ತಿರುಗ ತಕ್ಕ ರೂಪ ಒಂದು ಎಂತ ಮನಮೂರ್ತಿ ಸುಳಾದಿಯಲ್ಲಿಯೂ ಗುಪ್ತಾರ್ಚನೆ ಸುಳಾದಿಯಲ್ಲಿಯೂ ಅಷ್ಟದಳ ಸುಳಾದಿಯಲ್ಲಿಯೂ ವಿಸ್ತಾರವಾಗಿ ಹೇಳಿರುವುದರಿಂದ ಇಲ್ಲಿ ಲಕುಮೀನಾರಾಯಣ ಎಂತ ಹೆಸರು ಮಾತ್ರ ತೆಗೆದರು. "ಚಕ್ರವತ್ ಭ್ರಮತೇ ಹರಿಃ" ಎಂಬ ಪ್ರಮಾಣವನ್ನು ಈ ಪ್ರಕರಣದ ಆದಿಯಲ್ಲಿಯೇ ನಿರೂಪಿಸಿ ಇದ್ದೇನೆ. ಸುಷುಪ್ತ್ಯವಸ್ಥಾಪ್ರದನಾದ ಕಠಕೋಪನಿಷದ್ಪ್ರತಿಪಾದ್ಯನಾದ ಕರ್ಣಿಕಾಗ್ರ ಗತನಾದ ಸ್ಥೂಲಾಂಗುಷ್ಟ ಪ್ರಮಾಣ ಪ್ರಾಜ್ಞಮೂರ್ತಿಯೇ ರುದ್ರ ಎಂತ ಕರೆಸಿಕೊಳ್ಳುತ್ತಾನೆ. "ವಿಷ್ಣು ಬ್ರಹ್ಮ ಶಿವಾತ್ಮಕಃ ನಾರಾಯಣೊ ಅನಂತಗುಣಃ ॥" ಎಂಬ ಪೂರ್ವೋಕ್ತ ಪ್ರಕಾಶ ಸಂಹಿತಾನುಕೂಲವಾಗಿ ಸುದರ್ಶನ-ಶಂಖ-ವರ -ಅಭ್ಯ ಚತುರ ಹಸ್ತ ಎಂತ ರುದ್ರವ್ಯಾವೃತ್ತಿ ಹುಟ್ಟಿಸಿದ್ದಾನೆ. ಈತನ ಅಪರೋಕ್ಷ ಹೊರತಾಗಿ ಬಿಂಬಾಪರೋಕ್ಷವಿಲ್ಲ. ಅಂದರೆ ಅದರ ತಾತ್ಪರ್ಯ ಮನಮೂರ್ತಿ ಸುಳಾದಿಯ ಮರ್ಮ. ಹೃದಯಾಂಬರದಲ್ಲಿ ಅಧೋಮುಖವಾಗಿದ್ದ ಪದುಮ ಎತ್ತುವುದೊಂದು ವಿಧಿಯುಗ್ರಹಿಸಿ । ಮುದದಿಂದ ಪ್ರಾಣವನ್ನು ಉದರದಲ್ಲಿ ತುಂಬಿ ಉದಯಾರ್ಕನೆಂಬೋ ಜ್ಞಾನದಲ್ಲಿ ಬೆಳಕು ಮಾಡಿ ಅದರ ತರುವಾಯ ವದಗಿ ಗಾಳಿಯು ಪದುವನಿಮ್ಮವಾಗಿದ್ದದ್ದೇ ಸರಳ ಮಾಡಿ ಸದಮಲ ಬಿಂಬನೇ ಇದೆ ಅವಸ್ಥಾ ಪ್ರೇರಕ-

*"ಹೃದಯಸ್ಥಃ ಹರೇರ್ಮೂರ್ತಿಃ ಜೀವೋಯತ್ಪ್ರತಿಬಿಂಬಕಃ ।*
*ಯದ್ವಶೇ ವರ್ತತೇ ಜೀವಃ ಸಾತು ಜೀವಕಲಾಸ್ಮೃತಾ॥"*

ಎಂತ ಮನಮೂರ್ತಿ ಸುಳಾದಿ ಸಿದ್ಧವು.

ಇದರೊಳಗಿನ ಪ್ರಮಾಣವು:– "ಜೀವಕಲಾಯಸ್ಯಾಃ ಸಾಜೀವಕಲಾ ಭಗವನ್ಮೂರ್ತಿಃ ।" ಎಂಬ ಈ ಸ್ವವಚನವು ಎರಡೂ ಕೂಡಾ ಏಕಾದಶ ೨೭ನೇ ಅಧ್ಯಾಯ ತಾತ್ಪರ್ಯ ವಚನವು. "ಸದಮಲ ಬಿಂಬನೆ ಇದೇ ಅವಸ್ಥಾಪ್ರೇರಕ" ಎಂದರೆ ಈ ಜೀವಾಂತರ್ಯಾಮಿಯೇ ಬಾಹ್ಯ ಸ್ಥೂಲಾಂಗುಷ್ಟ ಮೂರ್ತ್ಯುಪಾಸನಾ ಪ್ರೇರಕ ಎಂತ ಅರ್ಥ. ಆದುದರಿಂದ ಈ ಪ್ರಾಜ್ಞ ಪರೋಕ್ಷಹೊರತು ವಿರಜಾಸ್ನಾನ ಪೂರ್ವಕ ಜೀವಾಂತರ್ಯಾಮಿಯ ಅಪರೋಕ್ಷಕ್ಕೆ ಮಾರ್ಗವಿಲ್ಲ ಎಂತ ಈ ಎರಡು ಸುಳಾದಿಮಾತಿಗೆ ಭಾವವು. ಪೂರ್ವಕಮಲ ಸುಳಾದಿಯ ಮುಂದಿನ ಮಾತು "ಇದೇ ಮೂರುತಿ ಮುಕ್ತಿಯೋಗ್ಯನ ಸ್ವರೂಪ ತದನಂತರದಲಿ ತನ್ನಾಕಾರವ । ಎಂದರೆ ಜೀವಾಂತರ್ಯಾಮಿ ಜೀವ ಪ್ರಾದೇಶನೇ ಜೀವಾಕಾರ ಮೂರ್ತಿಎಂತ ಅರ್ಥವು. ಮುಂದಿನ ಮಾತು" ತನ್ನಾಕಾರವ ಹೃದಯದೊಳಗೆ ಒಳಗೊಳಗೆ ಪೊಳೆದು ಸನ್ನಿಧಿಯಾಗಿಪ್ಪನೋ ಲಿಂಗದೊಳಗೆ। ಇದು ಪೋಗಲು ವಿರಜಾನದಿಯ ಸ್ನಾನದಿಂದ ವದಗಿ ಜೀವನಂತೆ ದೇವನಿಪ್ಪ ಪದುಮನಾಭನೇ ವಿಜಯ ವಿಠಲರೇಯ ತ್ರಿದಶ ಲೋಕದಲ್ಲಿ ಸುರರ ಕೂಡಿಯಾಡಿಪ. ॥೨॥ ಪ್ರಮಾಣ:–

*ಹೃದಯಾಖ್ಯನಗರಸ್ಯಾಂತಃ ಪಂಚಮನಾಡಿಷು ಸಂತಿಹಿ।*
*ಪಂಚ ಪದ್ಮಾನಿ ದಿವ್ಯಾಷ್ಟದಳವಂತಿ ಮೃದೋನಿಚ।*
*ಏಕೈಕ ನಾಡ್ಯಾಮೇಕೈಕ ರೀತ್ಯಾ ಪದ್ಮಾನಿ ಸಂತಿಹಿ ।*
*ತೇಷುಸ್ಥಿತಾಷ್ಟಸಂಸ್ಥೇಷು ದಳೇಶ್ವೇತಾನಿ ಸಂತಿಹಿ ।*
*ಕಾದಿಟಾಂತ್ಯಾನ್ಯಕ್ಷರಾಣಿ ಬೀಜರೂಪಾಣಿ*
*ದ್ವಾದಶ ದಿಗ್ದಳೇಷು ದ್ವಯಂತ್ವನ್ಯದಳೇಷ್ವೇಕೈಕಶೋಸಿ ಹಿ॥*
*ತೇಷ್ವಷ್ಟದಿಕ್ಪಾಲಕಾಸ್ತು ತಿಷ್ಟಂತೀತಿ ವಿಚಿಂತಯೇತ್ ।*
*ತತ್ಪ್ರಾಪ್ಯಷ್ಟ ಸಂಖ್ಯಾಕಾವಸವಶ್ಚ ವಸಂತಿಹಿ।*
*ಈದೃಕ್ಪಂಚಸು ಪದ್ಮೇಷು ವಾಸುದೇವಾದಿಕಾನಿಚ॥*
*ಉಕ್ತವರ್ಣಾ ನಿರೂಪಾಣಿ ಸಂತ್ಯೇಕೈಕ ಕ್ರಮಾದಿಹ।*
*ಯಥೈಕ ಪ್ರಕಾರೇಣ ವಹ್ನಿ ಮಂಡಲ ಪಂಚಕಂ।*
*ತ್ರಿಕೋಣಂ ವರ್ತತೇ ಪಾಪಪುರುಷಸ್ಯ ಪ್ರದಾಹಕಂ।*
*ತೇಷು ಸಂಕರ್ಷಣೋ ನಾಮ ನಿಯಾಮಕತಯಾಸ್ಥಿತಃ।*

*ಪ್ರತಿಕ್ಷಣಂ ಪಾಪಪುರುಷಂ ದಹ್ಯೇವಂ ನಸಂಶಯಃ ।*
*ಪದ್ಮೇಷ್ವಿಂದ್ರೋ ಅಭಿಮಾನೀಸ್ಯಾದಿಂದ್ರೋಪೇಂದ್ರಮುಪಾಸತೇ॥*
*ಮರುತಃ ಸಪ್ತಸಂತ್ಯತ್ರ ಶ್ರೀರೂಪಾಣಿಚ ಸಂತಿಹಿ।*
*ಏವಂ ತತ್ಪಂಚ ಪದ್ಮಾನಾಂ ಲಕ್ಷಣಮಿದಮೇವಹಿ॥*

ಈ ಪ್ರಕಾರ-ಮೂಲಾಧಾರಾದಿ ಸಹಸ್ರದಳ ಕಮಲ ಪರ್ಯಂತ ಹೇಳುವುದರಲ್ಲಿ ಶಿರಸ್ಸಿನ ತನಕ ಸರ್ವಸ್ಥಾನದಲ್ಲಿಯೂ ಸ್ಥಾನನಾಮಕ ಭಗವದ್ರೂಪಗಳು ಪ್ರತ್ಯೇಕ ಪ್ರತ್ಯೇಕವಾಗಿ ಸ್ಥಾನಾಭಿಮಾನಿ ಸ್ವಾಯಂಭುಮನು, ಗಣಪತಿ, ಇಂದ್ರ ರುದ್ರ ಶೇಷ ಗರುಡ ಬ್ರಹ್ಮದೇವರುಗಳಿಂದ ಪ್ರತ್ಯೇಕ ಪ್ರತ್ಯೇಕ ಉಪಾಸ್ಯ ಭಗವದ್ರೂಪಗಳು ಅನಿರುದ್ಧ ಪ್ರದ್ಯುಮ್ನ ಸಂಕರ್ಷಣ ಹರಿ ಕೃಷ್ಣ ತುರೀಯ ನಾಮಕನಿಂದ ವಾಸುದೇವಮೂರ್ತಿತನಕ ವಿವರ ಮಾಡಿ ಅಲ್ಲಲ್ಲಿ ವಿಭವಗಳನ್ನು ವಿಸ್ತಾರ ಮಾಡುತ್ತಾರೆ. ಈ ೩೩' ಕಮಲಗಳನ್ನು ತಂತ್ರಸಾರದಲ್ಲಿ ಹೇಳಲಿಲ್ಲವಲ್ಲ ಎಂದರೆ, ತತ್ವವಿವೃತ್ತಿವೊಳಗೆ "ಉರುಸ್ಥಾನಂ ಪರಿತ್ಯಜ್ಯ ತಂತ್ರಸಾರೇ ಸ್ಥಾನ ಷಟ್ಕಮುಕ್ತಂ॥ ಕುತಃ ಇತ್ಯುಕ್ತಾ । ಉರುಸ್ಥಾನ ವ್ಯತಿರಿಕ್ತ ಮೂಲಾಧಾರಾದಿ ಷಟ್ಕ ಪಂಚ, ಪಂಚ ಪದ್ಮಾನಿ ಸಂತೀತಿ ಕಥನಸೌಕರ್ಯಾಯ ಉರುಸ್ಥಾನಸ್ಥಿತ ಪದ್ಮಸ್ಯ ಏಕತ್ವಾತ್, ಅಲ್ಪತ್ವ ವಿವಕ್ಷಯನೋಕ್ತಂ॥" ಎಂತ ಹೇಳಿರುತ್ತಾರಾದ್ದರಿಂದ "೩೩" ಕಮಲಗಳು ಇರುವುದೇ ಸಿದ್ಧ.

ಆಕ್ಷೇಪ:- ಈಕ್ತಕಾಧಾರ ಸ್ಥಾನಗಳಲ್ಲಿಯೂ ಒಂದೊಂದು ಸ್ಥಾನದಲ್ಲಿ ಪ್ರದ್ಯುಮ್ನ ಅನಿರುದ್ಧ ಸಂಕರ್ಷಣ ವಾಸುದೇವ ನಾರಾಯಣ ಈ ಐದು ಭಗವದ್ರೂಪಗಳು ಶಿರಸ್ಸಿನ ತನಕ ಒಂದೊಂದು ಕಮಲಗಳಲ್ಲಿ ಒಂದೊಂದು ಮೂರ್ತಿಯಾಗಿ ಜೀವನಂತೆ ಪೂರ್ವಾಭಿಮುಖಗಳಷ್ಟೆ. ಇದರಲ್ಲಿ ಹೃದಯ ಪಂಚಪದ್ಮಗಳ ಮಧ್ಯ ಬ್ರಹ್ಮ ನಾಡೀ ಪದ್ಮ ಬಿಂಬಮೂರ್ತಿಯು ಪೀಠಾಧಾರವಲ್ಲವಷ್ಟೆ. ಆ ಕಮಲದಲ್ಲಿ ಇರತಕ್ಕ ರಕ್ತವರ್ಣ ನಾರಾಯಣ ಮೂರ್ತಿಯ ಷಡಾಧಾರ ಮೂರ್ತಿಗಳ ಸಂಖ್ಯೆಗೆ ಸೇರಿಸಿ ಇರುವುದು ತಂತ್ರಸಾರ ಸಿದ್ಧವಷ್ಟೆ-.

*ಕೃತೇಶ್ವೇತಂ ವಿಜಾನೀಯಾತ್ತ್ರೇತಾಯಾಂ ರಕ್ತ ವರ್ಣಕಂ ।*
*ದ್ವಾಪರೇ ಪೀತವರ್ಣಂತು ಕೃಷ್ಣವರ್ಣಂ ಕಲೌಯುಗೆ ।* ಎಂತಲೂ

"ಶ್ರೀ ಹರಿರ್ಮಹದ್ಬ್ರಹ್ಮ ಹೃತ್ಪದ್ಮ ಕರ್ಣಿಕಸ್ಥೋತಿ ಸುಂದರಃ। ಪದ್ಮಾಸನ ಸಮಾಸೀನ ಇಂದ್ರ ನೀಲಸಮದ್ಯುತಿಃ । ಇತ್ಯಾದಿ ಮದ್ಬಿಂಬೋನಿತ್ಯ ಚಿತ್ಸುಖಃ। ಎಂಬ ಆದಿತ್ಯ ಪುರಾಣದಿಂದಲೂ ಎದುರಲ್ಲಿ ಇಪ್ಪ ಪ್ರಾಜ್ಞನೆಂಬ ರುದ್ರ" ಇತ್ಯಾದಿ ಬಹು ಸುಳಾದಿಗಳಿಂದಲೂ ಪೂರ್ವೋಕ್ತ ದಿಂದಲೂ ಈ ಬಿಂಬ ಮೂರ್ತಿಯ ಮುಂಭಾಗ ಮೂಲೇಶ, ಹಿಂಭಾಗ ಪ್ರಾದೇಶ, ರೂಪಗಳೆಂದು ಹೇಳಿರುವುದಕ್ಕೆ ಒಂದೇ ಮಧ್ಯ ಬ್ರಹ್ಮ ನಾಡಿಯ ಹೃದಯಾಷ್ಟದಳದ ಕಮಲದಲ್ಲಿ ಒಂದು ಸಿಂಹಾಸನ ಪೀಠದಲ್ಲಿ ಇಬ್ಬರು ದೊರೆಗಳು ಎದುರು ಎದುರಿಗೆ ತಮ್ಮ ವಿಶಿಷ್ಟ ಸಾಮ್ರಾಜ್ಯ ವೈಭವದಿಂದ ಒಂದು ಕರೀಯ ಒರೆಯೊಳಗೆ ಎರಡು ಕತ್ತಿಗಳನ್ನು ಪ್ರವೇಶ ಮಾಡಿಸುವ ಹಾಗೆ ಎರಡು ರೂಪಗಳು ಕೊಡಿರತಕ್ಕ ಪರತತ್ತ್ವವೇ ಧರ್ಮ ಸಂಕಟವಾಯಿತಲ್ಲ ಎಂಬ ಆಕ್ಷೇಪಕ್ಕೆ ಸಮಾಧಾನವು. ಹ್ಯಾಗೆಂದರೆ ಹೃದಯದಲ್ಲಿ ಪಂಚನಾಡಿಯ ಪಂಚ ಕಮಲ ಮಧ್ಯ ಬ್ರಹ್ಮ ನಾಡಿಯ ಅಷ್ಟದಳ ಕಮಲದಲ್ಲಿ ಮಾತ್ರ ಮತ್ತೊಂದು ಮಹಾ ಕಮಲ ಹುಟ್ಟಿ ಇರುವುದರಿಂದ ಅತ್ಯಂತ ಆಶ್ಚರ್ಯಕರವಾಗಿದೆ. ಪ್ರಮಾಣಃ-

***ಏತತ್ಪಂಚ ಪದ್ಮಾನಾಂ ಲಕ್ಷಣಂ ತ್ರಿದಮೇವಹಿ ।***
***ಅಸ್ಮಿನ್ಮಧ್ಯೆ ಬ್ರಹ್ಮನಾಡೀಸ್ಥಿತ ಪದ್ಮೇ ಅಸ್ತಿವೈಭವಂ।***
***ಮಹದ್ವೈಚಿತ್ರ್ಯಮಸ್ತ್ಯತ್ರ ತತ್ಕಿಮುಚ್ಯತೇಧುನಾ ।***
***ಕದಳೀ ಪುಷ್ಪ ಸಂಕಾಶಂ ಚಂದ್ರಕಾಂತಿ ಸಮಪ್ರಭಂ।***
***ವಿಶಾಲಂ ದಶದಿಕ್ಪೂರ್ಣಂ ಚಾರುಹಾಸಂ ಸುನಿರ್ಮಲ ।***
***ಪದ್ಮಕಿಂಚಿಲ್ಕ ಸದೃಶಂ ತಪ್ತಕಾಂಚನ ಸನ್ನಿಭಂ।***
***ಭೂಮಿರ್ನಾಲೇಭಿಮಾನೀಸ್ಯಾದ್ದುರ್ಗಾ ಮಾಲಾಭಿಮಾನಿನೀ।***
***ಏತತ್ಪದ್ಮೋದರಂ ದಿವ್ಯಸಂಪುಟಂತತ್ರತಕ್ಷತೀ ॥***

ಎಂತ ಇಂತಹ ಹೃದಯಕಮಲವು ಎಲ್ಲಿಂದ ಹುಟ್ಟಿಬಂದಿತು ಎಂದರೆ- ಹೃದಯಮಧ್ಯೆ ಬ್ರಹ್ಮನಾಡೀ ಕಮಲ ಮಧ್ಯದಲ್ಲಿಯೇ ಕರ್ಣಿಕೆಗೆ ಸೇರಿದ ಬುಡದ ಭಾಗದ ದಳಗಳು ಅಂತಹ ಗೆಡ್ಡೆಯಿಂದ ಕೇಸರಿಗಳು ಹ್ಯಾಗೆ ಹೊರಡುತ್ತವೋ ಹಾಗೆ ನಾಳವು ಹುಟ್ಟಿ ಬೆನ್ನಿನ ಕಂಬಕ್ಕೆ ಸೇರಿದ ಸೂಕ್ಷ್ಮ ಬ್ರಹ್ಮನಾಡೀ ಸ್ಥಾನದಿಂದ ವಿಶಾಲವಾಗಿ ಹೃದಯಕ್ಕೆ ಬಂದು ಹರವಿಕೊಂಡಿದೆ. ಎಂದು ಮುಂದಿನ ಮುಕ್ತಿತತ್ವ- ಪ್ರಮಾಣಃ-

" ಹೃತ್ಕರ್ಣಿಕಾಯಾಂ ಬ್ರಹ್ಮಾಭಿಮನ್ಯಮಾನಾಚ್ಚಕಂಧರಃ।
ಸಮುತ್ಥಿತಂ ಜ್ಞಾನಮಾನೀ ಪ್ರಾಣಮಾನ್ಯಷ್ಟ ಪಂಚಕಂ।
ಚಿತ್ಪ್ರಕುತ್ಯಭಿಮಾನೀ ಶ್ರೀ ಕೇಸರಂ ಭಾಸ್ವರಂ ಶುಭಂ।
ಅಷ್ಟೈಶ್ವರ್ಯ ರಮಾರೂಪಮಷ್ಟ ಪತ್ರಾಕೃತಿಂ ಸ್ಮರೇತ್ ।"

ಅಧೋಮುಖಂ ಹೃತ್ಕಮಲಂ ಸಮ್ಮುಖೀಕೃತ್ಯ ವಾಯುನಾ ।
ಪ್ರಣವೇನ ಸಮುಧೃತ್ಯ ವಿಸ್ತಾರ್ಯ ಜ್ಞಾನಭಾಸ್ವತಂ।
ವೋಚಯಿತ್ವಾ ಸ್ವಾಂತರಾಂಶ್ಚಂ ಕೋಟಿಚಂದ್ರ ಸಮುದ್ಭವಸಮಪ್ರಭಂ।
ಕಂದಾತ್ಮಮಾಸ್ಥಿತಂ ರಾಜನ್ ಜ್ಞಾನ ನಾಳಾದಿಕ ನಿರ್ಮಲಂ।
ಅಷ್ಟೈಶ್ವರ್ಯದಳೋಪೇತಂ ರಮ್ಯಂ ಪ್ರಕೃತಿಕರ್ಣಿಕಂ ।
ವಿದ್ಯಾ ಕೇಸರಸಂಯುಕ್ತಂ ಭಾವಯೇದ್ಧೃದಯಾಂಬುಜಂ॥ ಎಂತ ಸಿದ್ಧ.

ಇಲ್ಲಿ "ಕಂದಾತ್ಮಸ್ಥಿತ" ಎಂದರೆ ಹೃದಯ ಕಮಲದ ನಾಳಾಧಾರದ ಗೆಡ್ಡೆಯು ನಾಭಿ ಸ್ಥಾನದಲ್ಲಿಯೂ, ನಾಭಿಸ್ಥಾನದ ಕಮಲಧಾರದ ಗೆಡ್ಡೆ ಮೂಲಾಧಾರದಲ್ಲಿ ಹೋಗಿ ಶಿರಸ್ಸಿನ ತನಕ ನಿಬಂಧನವಾದುದರಿಂದ ಹೃದಯದಲ್ಲಿಯೇ ಕರ್ಣಿಕಾಧಾರದ ಗೆಡ್ಡೆ ಅಲ್ಲವಾದುದರಿಂದ ಕುಂದಾತ್ಮ ಎಂದು ಹೆಸರು. ಗೆಡ್ಡೆ ಎಂತ ಇದಕ್ಕೆ ಉಪಚಾರದ ಹೆಸರು ಎಂತ ಅರ್ಥ. ಹಾಗಾದರೆ ಮೂಲನಾಭಿಯಿಂದ ಹೃದಯ ಪರ್ಯಂತ ನಾಳ ಎಂತ ಈ ಸುಳಾದಿ ಮೊದಲಾದ ಗ್ರಂಥಗಳಿಗೆ ಏನು ಹೇಳಬೇಕು ಎಂದರೆ– ನಾಭಿಯಿಂದ ದಶಾಂಗುಲದ ನಾಳವು ಹೃದಯ ಕಮಲಕ್ಕೂ ಆ ಕಮಲದಿಂದ ಹುಟ್ಟತಕ್ಕ ಬಿಂಬ ಕಮಲ ನಾಳಕ್ಕೂ ಉಭಯಾಧಾರವಾದ ಪ್ರಯುಕ್ತ ಸ್ಥೂಲಾಕಾರವಾಗಿ, ಒಂದೇನಾಳವಾಗಿ ಅದೆ ಎಂತ ಅರ್ಥ. ಹೃದಯ ಪ್ರಕರಣ ಮುಂದೆ ಹೇಳುತ್ತೇನೆ. ಕಮಲ ಸುಳಾದಿ ಮುಂದಿನ ತಾಳ ಝಂಪೆ. "ಉದರದಲ್ಲಿ ದ್ವಾದಶದಳವುಳ್ಳ ಸರಸಿಜ ಮಿನಗುತಿದೆ ನೋಡಿ ಮುತ್ತಿನ ವರ್ಣದಲ್ಲಿ. ಉರುಕ್ರಮ ಸಹಿತ ದ್ವಾದಶಾಂಶ ಮೂಲಗಳು, ಮರುತ ಜನ ಸಪ್ತರು ಮಹರುದ್ರ ಅಭಿಮಾನೀ ನರಸಿಂಹ ಮೂರುತಿಯ ಪೂಜೆಯ ಮಾಡುತಲಿಪ್ಪ ಗಿರಿಜಾ ಸಮೇತದಲ್ಲಿ ಮುಂದೆ 'ಹ್ರೀ' ಪತಿಯೆಂದು ಹರಿ ನಾಮಕ ಪರಮಾತ್ಮ ನಿಯಾಮಕನಿಹ ಸುರರು ವಾಲಗದಿಂದ ಜಯ ಜಯ ಜಯವೆಂದು ಮೆರೆವ ವೈಭವದಿಂದ

ವಿಜಯವಿಠಲ ಮಹಾ ಧರಣಿಗೊಡೆಯನಾಗಿ ಗತಿಯ ಕೊಡುವ ನಮಗೆ.''
ಪ್ರಮಾಣ:-

*''ಹೃದಯಾದೂರ್ಧ್ವ ಭಾಗೇಪಿ ಹ್ಯುರಸ್ಥಾನೇತು ವರ್ತತೇ।*
*ಮೃದು ಮುಕ್ತಾಭಿಮೇಕಂ ಚ ಸು ದ್ವಾದಶ ದಳಂಚ ತತ್।*
*ದ್ವಿಷಟ್ಪತ್ರೇಷು ಸಂತಿ ದ್ವಾದಶ ಸೂರ್ಯಾಶ್ಚ ಸರ್ವದಾ।*
*ತತ್ಪದ್ಮೇಚೋಕ್ತ ವರ್ಣಾನಿ ವಾಸುದೇವಾದಿತಾನಿಚ ॥*
*ರೂಪಾಣಿ ಸಂತಿ ಮಾರುತಃ ಸಪ್ತ ಸಂಖ್ಯಾಶ್ಚ ಸಂತಿ ಹಿ॥''* ಎಂತ .

ಸುಳಾದಿ:- ''ಇಂದ್ರ ಯೋನಿಯಲ್ಲಿ ಷೋಡಶದಳವುಳ್ಳ ಅರವಿಂದ ಧವಳ ವರ್ಣದಂತಿಪ್ಪೋದು ಚಂದ್ರಕಲಾಭಿಮಾನಿಗಳು ಅಲ್ಲಿ ವಾಸ. ಮುಂದೆ ದಧಿವಾಮನನ ಧ್ಯಾನಿಸುವ। ಅಂದವಾಗಿ ಸಪ್ತ ಮರುತಗಳುಂಟು ಫಣೀಂದ್ರ ಅಭಿಮಾನಿ ಆಸ್ಥಾನದಲಿ ನಂದ ಮೂರುತಿ ಲಕುಮಿ ರಮಣನನ್ನು ಪೂಜಿಸುವ ನಂದಗೋಪಿಯ ಕಂದ ವಿಜಯ ವಿಠಲರೇಯ ಎಂದೆಂದಿಗೂ ನಿತ್ಯತೃಪ್ತ ಜನರಲಿ ವಾಸ. ॥'' ದಲ್ಲಿ ಉರ ಸ್ಥಾನದಲ್ಲಿ ರುದ್ರದೇವರನ್ನು ಹೇಳದೆ ತಂದ ಮುಂದಿನ ಗುಂಡಿಗೆ ಸಮಸ್ಥಾನದಲ್ಲಿ ರುದ್ರದೇವರ ವಿಭವಗಳನ್ನು ಒಂದೇ ಕಮಲದಲ್ಲಿ ಹೇಳಿ ಮಧ್ಯೆ ಕಂಡ ಇಂದ್ರಯೋನಿಯಲ್ಲಿ ಪಂಚ ಕಮಲವನ್ನು ಶೇಷದೇವರ ವೈಭವವನ್ನು ಹೇಳುತ್ತಾರೆ. ಸುಳಾದಿಯಲ್ಲಿ ಕಂಠದಲ್ಲಿ ಸ್ಥಾನ ದ್ವಯವನ್ನು ಹೇಳಿ ಅದೇ ಪಕ್ಷದಲ್ಲಿ ರುದ್ರದೇವರ ವೈಭವವನ್ನು ಹೇಳಿದರು. ಇದರಲ್ಲಿ ಸುಳಾದಿಯ ಪಕ್ಷವೇ ಉತ್ತಮ. ಏಕೆಂದರೆ ಹರಿ ಮೂರ್ತಿಯು ಮಹರ್ಲೋಕ ಮೂರ್ತಿಯಾದ ಕಡೆಯಿಂದ ''ಶ್ರೀ ಲೋಲನ ಕಕ್ಷಗಳಲ್ಲಿ ಸೇರಿ ಇಹದು ಮಹರ್ಲ್ಲೋಕಗಳು.'' ಎಂತ ಪುರಂದರದಾಸರ ಹೃದಯ ಕಮಲ ಸುಳಾದಿ. ಈ ಸುಳಾದಿ ಗಳು ತಂತ್ರಸಾರಕ್ಕೆ ಭ್ರೂಮಧ್ಯ ಸ್ಥಾನ ಲಕ್ಷಣ ವಿರೋಧ ಬರುತ್ತದೆ. ಆದರೆ ಪದ್ಮ ವ್ಯತಿರಿಕ್ತ ಸಕಲ ವೈಭವ ಜ್ಞಾನಾರ್ಥವಾಗಿ ನಿರೂಪಿಸುತ್ತೇನೆ.

*''ತದೂರ್ಧ್ವ ಕಂಠದೇಶೇತು ಬ್ರಹ್ಮನಾಡ್ಯಂತರೇ ಅಸ್ತಿಹಿ ।*
*ಪದ್ಮಮೇಕಂ ಸೀಧವಳ ವರಂ ಷೋಡಶ ಪತ್ರಕಂ।*
*ಅ (ಆದ್ಯಃ)ಕಾರ ವರ್ಣಾಂತಃ ಬೀಜ ವರ್ಣಾನಿ ಷೋಡಶ ।*

*ಸಂತಿ ಪತ್ರೇಷ್ವಿಂದುಕಲಾಮಾನಿ ದಿಗ್ದೇವತಾಸ್ತ್ವಿಹಿ।*
*ಸಂತಿ ಷೋಡಶ ರೂಪಾಣಿ ದಧಿವಾಮನ ರೂಪಕಂ।*
*ಪೂಜಯಂತಿ ತಥಾ ಪದ್ಮೇ ವಾಸುದೇವಾದಿ ಪಂಚಕಂ।*
*ರೂಪಮಸ್ತಿ ತಥಾ ಸಪ್ತ ಮರುತಃ ಸಂತಿ ಸರ್ವದಾ।*
*ಪಾರ್ವತೀ ಸಹಿತೋ ರುದ್ರೋ ನಿಯಾಮಕತಯೋ ಅಸ್ತಿಹಿ॥*
*ನರಸಿಂಹಮುಪಾಸ್ತೇಯಾನೂ ಪುಂಶೇಷತ್ವಮಂತತಾः।*
*ಹರಿಸ್ತತ್ರ ನಿಯಂತಾಚ ಬ್ರಹ್ಮಾದ್ಯಾಶ್ಚ ಸಭಾರ್ಯಕಾः।*
*ಸ್ತುವಂತಿ ವೇದ್ಯೈः ಶ್ರೀಶಂತಂ ತ್ವಮುತ್ಕರ್ಷೋ ಭವೇತಿಚ।*
*ತದೂರ್ಧ್ವಂ ತಾಲು ಮೂಲಸ್ಥ ಪಂಚ ನಾಡಿಷು ಸಂತಿಚ॥*
*ಪಂಚ ಪದ್ಮಾನಿ ಶುಕ್ಲಾನಿ ಚತುರ್ದಳ ಮೃದೂನಿಚ।*
*ಏಕೈಕ ನಾಡ್ಯಾಮೇಕೈಕ ರೀತ್ಯಾ ಪದ್ಮಾನಿ ಸಂತಿಚ।*
*ಏಕೈಕ ಪತ್ರೇಷು ಚತುರ್ಷ್ವಪಿ ಕ್ರಮಾಸ್ಥಿತಾः ॥*
*ಚತುರ್ವೇದಾः ಪಂಚ ಪದ್ಮೇಷ್ವಿಂದು ಮಂಡಲ ಪಂಚಕಂ।*
*ವರ್ತತೇಚೋಕ್ತ ಶ್ರೀವಾಸುದೇವಾದ್ಯಾ ಹರಿ ರೂಪಕಾः।*
*ಪಂಚ ಸಂತ್ಯೇಕ ರೀತ್ಯಾ ಮರುತಶ್ಚಾತ್ರ ಸಂತಿಹಿ।*
*ನಾರಾಯಣೋ ನಿಯಂತಾತ್ರ ಗುಣೈः ಸರ್ವಂ ಸುರಕ್ಷತಿ ।*
*ತಾಲು ಮೂಲೇಪ್ಯುದಾನಾಖ್ಯಂ ಪ್ರಾಣೋಯಂ ಭಾರ್ಯಯಾಸಹ।*
*ಹಂಸರೂಪಮುಪಾಸ್ತೇತ್ರ ಸಲಿಲಾದ್ಯವ ಕೇಶವಾನ್।*
*ಸ್ವಯಮುಚ್ಚಾರ್ಯ ಶಬ್ದಾಂಶ್ಚ ಜೀವಾನಪಿ ತಥೈವಚ ।*
*ಶಬ್ದೋಚ್ಚಾರಣಯುಕ್ತಾನ್ ಪಂಕೇರೋತ್ಯೇವ ನಿರಂತರಂ॥*
*ಶೇಷಾಭಿಮಾನೀ ಭಕ್ತ್ಯಾ ಶ್ರೀರಮಣಂ ತಮುಪಾಸತೆ ॥"* ಎಂತ

ಭ್ರೂಮಧ್ಯ ವಿಷಯ ಸುಳಾದಿ. "ದ್ವಿದಳ ಉಂಟಾದ ಕಮಲ ಭ್ರೂಮಧ್ಯದಿ" ತಂತ್ರಸಾರದಲ್ಲಿ ಚತುರ್ದಳ ಕಮಲ ಎಂತ ಹೇಳಿದ್ದಾರೆ. "ಹುಬ್ಬುಗಳ ಮಧ್ಯದಲ್ಲಿ ಶುಭ್ರ ನಾಲ್ಕು ದಳ ಕಮಲ" ಎಂತ ರಾಜರ ಉಕ್ತಿ. ಸುಳಾದಿ ಮುಂದಿನ ಮಾತು. ಮಧು ಪುಷ್ಪದಂತಿಪ್ಪೋದು ಆವಾಗ ಪದ್ಮ ಸಂಭವ ವಾಯುವಾಸದ್ವಯ ಭಾಗ ಪದುಮನಾಭನ ವಾಹನ ಅಲ್ಲಿ ಅಭಿಮಾನಿ। ಸದರವಿಲದಲೆ ಕೃಷ್ಣನ್ನ ಧ್ಯಾನಿಸುವ ಜ್ಞಾನದಲಿ ಕೊಂಡಾಡುತ ಸಪ್ತ ಮಾರುತ

ಜನ ಮೊದಲಾದವರು ಸೇವಿಸುವರು ಹರಿ ಪಾದ। ಇದರ ನಿಯಾಮಕ ಕೃಷ್ಣನೆಂಬೋ ಮಾರುತಿ, ಅದುಭುತ ಮಹಿಮನೆ ವಿಜಯವಿಠಲರೇಯ । ಉದಯ ಭಾಸ್ಕರನಂತೆ ಮನಕೆ ಮೆಚ್ಚಿಪೊಳೆವಾ ॥೬॥ ಸಾಸಿರ ದಳವುಳ್ಳ ಕಮಲ ಶಿರಸ್ಸಿನಲ್ಲಿ ಲೇಸಾಗಿ ಒಪ್ಪುತಿದೆ. ವಜ್ರ ಪ್ರಕಾಶದಂತೆ ವಿಶ್ವಾದಿ ರೂಪಗಳು ಒಂದೊಂದು ದಳದಲ್ಲಿ ವಾಸವಾಗಿಪ್ಪೋವು ।ತನ್ನಾಮಕ ಪ್ರಾಣಸೋಸಿದ ಭಕುತಿಯಿಂದ ಭಜನೆಯ ಮಾಡುವ । ವಾಸವಾದ್ಯದಿಂದ ಕೂರಿಸಿಕೊಳುತ। ಲೇಶಬಿಡದೆ ಸತ್ಯ ಲೋಕೇಶ ಅಭಿಮಾನಿ। ಮೀಸಲಮನದಲ್ಲಿ ರಂಗನ್ನ ಧ್ಯಾನಿಸುವ। ವಾಸುದೇವ ನಾಮಕ ಪರಮಾತ್ಮ ನಿಯಾಮಕ। ದಾಸೋಹಂ ಎಂದವರಿಗೆ ಸರ್ವ ದಳದಲ್ಲಿ ಪೊಳೆವ । ವಾಸುಕಿಶಯನ ನಮ್ಮ ವಿಜಯವಿಠಲರೇಯ ಮೋಸವಿಲ್ಲದ ಸ್ಥಾನದಲ್ಲಿ ಇಷ್ಟು ಪೊರೆವ ॥೭॥ ಜತೆ– "ಬ್ರಹ್ಮನಾಡೀವಳಗೀಪರಿ ವಿಧವುಂಟು. ಬ್ರಹ್ಮಾತೀತ ನಮ್ಮ ವಿಜಯವಿಠಲ ಸ್ವಾಮಿ" ಎಂತ ಸುಳಾದಿಯಲ್ಲಿಕೇವಲ ಬ್ರಹ್ಮನಾಡಿಯ ವಿಭವವನ್ನು ನಿರೂಪಿಸಿದ್ದಾರೆ ಹೊರತು ಪಾರ್ಶ್ವನಾಡೀ ನಾಲುಕು ಬಿಟ್ಟು ಇದ್ದಾರೆ

*ತದೂರ್ಧ್ವಂ ಭ್ರೂಮಧ್ಯ ದೇಶೇ ಪಂಚನಾಡಿಷು ಸಂತಿಚ ।*
*ಪಂಚ ಪದ್ಮಾನಿ ಶುಕ್ಲಾನಿ ದ್ವಿದಳಾನಿ ಮೃದೂನಿಚ ।*
*ಏಕೈಕಬ್ಜಸ್ಥ ದಳಯೋರಭಿಮಾನಿತಯಾಸ್ಥಿತಾ॥*
*ಬ್ರಹ್ಮ ವಾಯುತಯಾ ಬೀಜವರ್ಣಾಹ್ಯಬ್ಜ ಪಂಚಸು।*
*ಏಕೈಕಾಬ್ಜೇಕೈಕ ರೀತ್ಯಾ ವಾಸುದೇವಾದಿ ಪಂಚಕಂ।*
*ರೂಪಮಸ್ತ್ಯೇವಮೇವಾತ್ರಹ್ಯಗ್ನಿ ಮಂಡಲ ಪಂಚಕಂ।*
*ತ್ರಿಕೋಣಂ ವರ್ತತೇ ತೇಷು ಶ್ರೀಕೃಷ್ಣೋ ಅಸ್ತಿ ನಿಯಾಮಕಃ ।*
*ಗರುಡೋತ್ರ ಅಭಿಮಾನೀಚ ಶ್ರೀ ಕೃಷ್ಣಂ ತಮುಪಾಸತೇ।*
*ಏತದ್ರೂಪಾನಿ ಪಶ್ಯಂತಿ ತಪಃ ಶೀಲಾಂಶ್ಚ ಸರ್ವದಾ।*
*ಲಕ್ಷ್ಮೀರೂಪಾಣಿ ಸಂತ್ಯತ್ರ ಮರುತಃ ಸಪ್ತ ಸಂತಿಹಿ ।*

ಇತಿ ಭ್ರೂಮಧ್ಯ ಲಕ್ಷಣಂ

*ತದೂರ್ಧ್ವ ತದ್ಬ್ರಹ್ಮರಂದ್ರ ಶಿರೋ ಭಾಗಸ್ಥ ಪಂಚಸು।*
*ನಾಡೀಷ್ವಪಿ ಶಿರೋಬದ್ಧ ಪಂಚ ಪದ್ಮಾನಿ ಸಂತಿವೈ।*

*ಏಕೈಕ ನಾಡ್ಯಾಮೇಕೈಕ ರೀತ್ಯಾ ಶುಕ್ಲ ಮೃದೋನಿಚ ।*
*ದ್ವಿಪತ್ರತ್ರಾಣಿ ಪದ್ಮೇಷು ಚಂದ್ರ ಮಂಡಲ ಪಂಚಕಂ ।*
*ವರ್ತುಲಂ ವರ್ತತೇ ವಾಸುದೇವಾದಿ ಪಂಚಕಂ ।*
*ರಂಗಮೂರ್ತಿರ್ನಿಯಂತಾತ್ರತ್ವಭಿಮಾನೀ ಏವತು ।*
*ರಂಗನಾಥಮುಪಾಸ್ತೇತ್ರ ಸ- ಭಕ್ತ್ಯಾಯುಕ್ತೋ ನಿರತರಂ। ।*
*ತದೂರ್ಧ್ವಮಸ್ತಕಾದೂರ್ಧ್ವಾ ದಶಾಂಗುಲ ಸಂಮಿತೇಃ ।*
*ಬ್ರಹ್ಮ ನಾಡೀ ಸಮೇ ದೇಶೇ ವರ್ತತೇ ವಜ್ರಕಾಂತಿಮತ್।*
*ಸಹಸ್ರ ಪತ್ರಮೇಕಾಬ್ಜಂ ತತ್ಪತ್ರೇಷು ವಸಂತಿಹಿ।*
*ವಿಶ್ವಾದಿ ಹರಿ ರೂಪಾಣಿ ಸಹಸ್ರಾಣಿ ತಥೈವಚ ।*
*ಓಂಕಾರ ವರ್ಣ ಬೀಜಂಚ ಶ್ರೀರೂಪಾಣಿ ವಸಂತಿಹಿ।*
*ವಾಯುರ್ವಿಶ್ವಾನಿ ರೂಪಾಣಿ ಸಹಸ್ರಾಣು ಧಾರಯನ್।*
*ಉಪಾಸ್ತೇ ಹರಿ ರೂಪಾಣಿ ನಿತ್ಯಂ ಭಕ್ತಿ ಸಮನ್ವಿತಃ।*
*ನವಕ್ತುಮೇತನ್ಮಾಹಾತ್ಮ್ಯಂ ರುದ್ರಾದ್ಯೈಃ ಶಕ್ಯತೇ ಕ್ವಚಿತ್।*
*ಅತ್ರಾಬ್ಜಿ ವಾಸುದೇವಾಖ್ಯೋ ನಿಯಾಮಕತಯಾ ಸ್ಥಿತಂ।*
*ತುರೀಯರೂಪೋ ಭಗವಾನ್ ಭಕ್ತಾನಾಂ ಮುಕ್ತಿದೋಪ್ಯಸೌ।*
*ಸಾಧನಂತ್ವತ್ರೋಕ್ತ ರೀತ್ಯಾ ಯಃಕರೋತಿ ನಿರಂತರಂ।*
*ತಸ್ಯ ತುಷ್ಟೋ ರಮಾನಾಥಃ ಸ್ವಲೋಕಂದಾಸ್ಯತಿ ಧ್ರುವಂ ॥*

ಹೃದಯ ಪ್ರಕರಣ ಸುಳಾದಿ. ಹೃದಯೊಬ್ಬ ಪಟ್ಟಣಕ್ಕೆ ಐದು ಬಾಗಿಲು ಉಂಟು. "ತದುಪರಿ ದ್ವಾರಪಾಲಕರಿಪೋರೋ" ಎಂತ ಜೀವಾಖ್ಯ ಸುಳಾದಿ.

*ನಾಭಿಮಾರಭ್ಯತತೋ ದಶಾಂಗುಲಾದೊರ್ಧ್ವಂ ಹೃದಾಕಾಶೋಹಿ ವರ್ತತೆ।*
*ಹೃದಯೇ ನಗರೋಪ್ಯಸ್ತಿ ಪ್ರಾಕಾರಾದಿ ಸಮನ್ವಿತಃ।*
*ಹೃದಾಖ್ಯ ನಗರಸ್ಯಾಸ್ಯ ಚತುರ್ದ್ವಾರಾಣಿ ಸಂತಿವೈ।*
*ಏಕಸ್ಯೈಕಸ್ಯ ಚತ್ವಾರಿ ದ್ವಾರಾಣಿ ಸುಮಹಂತಿಚ।*

ಇತ್ಯಾದಿ ದಿಂದಲೂ ಅಧ್ಯಾತ್ಮ ಮಾಲಾದಿಂದಲೂ, ಹೃದಯ ಪ್ರಾಕಾರ ಯುಕ್ತ ಚತುರ್ದ್ವಾರ ಲಕ್ಷಣ ತಿಳಿದುಕೊಳ್ಳತ್ತಕ್ಕದ್ದು. ಉದಯ ದಳದಲ್ಲಿ ಮೂರು ಬಾಗಿಲು ಪ್ರಥಮದಲ್ಲಿ ರಮಾ ಅದರ ತರುವಾಯ ರವಿನಾಮಕ ಪ್ರಾಣ

ಪದುಮಾಕ್ಷಿ ಭಾರತೀ ದ್ಯುನಾಮದಿಂದಿಹಳಲ್ಲಿ। ತುದಿಯ ಬಾಗಿಲಿಗೆ ಜಯ ವಿಜಯರಿಹರು. । ಯಮ ದಿಶೆಗೆ ಮೂರು ಕದ ಮೊದಲು ಶ್ರೀ ಎರಡರೊಳು ತಮಿಪಾಖ್ಯ ವ್ಯಾನ ದಿಜ್~ನಾಮ ಭಾರತೀ। ಅಮಲ ಬಲ ಪ್ರಬಲ ಮೂರನೇ ದ್ವಾರಕಿಹರು। ಪಶ್ಚಿಮ ದ್ವಾರ ಮೂರರೊಳಗಿಹರ ಪೇಳೆ। ಪ್ರಥಮೋ 'ಮಾ'. ದ್ವಿತೀಯದಲಿ ಶಿಖಿ ನಾಮಕಾಪಾನ ಪೃಥಿವೀ ನಾಮಕ ಭಾರತೀ। ಕುಮುದರು ತೃತೀಯದಲಿಹರು ಉತ್ತರಕ್ಕೆ. ಮೂರು ದ್ವಾರಗಳು।ಸತತಲ್ಲಿ ನೆಲಿಸಿ ಹರಪೆಸರ ಕೇಳಿ ಒಂದರೊಳು ಶ್ರೀ ದ್ವಿತೀಯಸಾರಪ ನಾಮಕ ಸಮಾನ, ಇಂದುಮುಖೀ ಭಾರತೀ ವಿದ್ಯುನ್ನಾಮ್ನೀ। ನಂದ ಸುನಂದ ಮೂರನೇ ಬಾಗಿಲಲಿಹರು। ಒಂದು ಕದ ಮೇಲು ಭಾಗದಲಿಹುದು ಅಲ್ಲಿ ಆಕಾಶ ನಾಮಕಳು ಲಕ್ಷ್ಮೀ ಉದಾನ ಚಲ್ವೆ ಭಾರತೀಯು ವಾಜ್~ ನಾಮದಲಿಹಳು।। ಮಲ್ಲರಿಪು ಅಷ್ಟಪತ್ರದೊಳಗೆ, ದ್ವಿಷಡ್ರೂಪ ಅಲ್ಲಿಹ ವಿವರ ಕೇಳಿ। ಅದರಲ್ಲಿ ಎರಡೆರಡು ದಿಕ್ಕಿನಲ್ಲಿ ಎರಡೈದು ಒಂದು ಸ್ತ್ರೀ ಒಂದು ಪುರುಷ ಪರಮ ಪಾವನವಾದ ಈ ಹನ್ನೆರಡು ರೂಪ ಗುರು ಮಧ್ವರಾಯರು ವರ್ಣಿಸಿಹರು. ಅಂದರೆ– "ತಾನ್ನಾಮ್ನೈಕಾದಶೈವತು" ಎಂತ ತಂತ್ರಸಾರದಲ್ಲಿ ಶಕ್ತ್ಯಾದಿ ೧೨ ತತ್ವಗಳು ಎಂತ ಅರ್ಥವು. ಈ ನಾಲ್ಕು ದ್ವಾರದ ಒಳಗೂ ಆಧ್ಯಾತ್ಮಮಾಲೆಯಿಂದ ಒಂದು ಪಾರ್ಶ್ವಕ್ಕೆ ನಾಲ್ಕು ದ್ವಾರಗಳನ್ನು ಹೇಳಬೇಕಷ್ಟೆ ಎಂದರೆ–ಎರಡನೆಯ ಪ್ರಾಕಾರವನ್ನೂ ಮೂರನೇ ಪ್ರಾಕಾರವನ್ನೂ ಒಂದಾಗಿ ಕೂಡಿಸಿದ ಪ್ರಯುಕ್ತ ಊರ್ಧ್ವ ದ್ವಾರ ಸಹಿತ ೧೨ ದ್ವಾರವಾಯಿತು.

*" ಹೃದಯಾಕಾಶ ದೇಶಸ್ಯ ವಾಸುದೇವೋ ನಿಯಾಮಕಃ ।*
*ಪೂರ್ವದ್ವಾರೇ ವಾಸುದೇವಃ ಯಾಮ್ಯೇ ಸಂಕರ್ಷಣಾಸ್ತಥಾ*
*ಪ್ರದ್ಯುಮ್ನಸ್ತು ಪ್ರತೀಚ್ಯಾಂತುಹ್ಯನಿರುದ್ಧಸ್ತತೋತ್ತತಿ."* ಎಂತ ಮುಕ್ತಿತತ್ವ

ಸುಳಾದಿ. "ಮನಮೂರ್ತಿ ಇಪ್ಪ ಮೂಲಸ್ಥಾನದಲಿ ಒಂದು ಮಿನುಗುವ ಕಂದ ಉಂಟು. ಅದರಿಂದಲಿ ಜನಸದನಾಳಿ ಗಗನಾದಲ್ಲಿಗೆ ಮುಟ್ಟುವಾಗ ಎಣಿಸಿ ಹೃಷೀಕೇಶಾಂಗುಲಿನಿಟ್ಟು" : ಅಂದರೆ ವಾಸನಾಮೂರ್ತಿ ಅಂದರೆ ಮನೋವಾಸನಾರೂಪ ಜಡಪ್ರಕೃತಿಯ ಒಳಗೆ, ಬಿಂಬ ಮೂರ್ತಿಯನ್ನು ಬಹು ಕಾಲ ಉಪಾಸನೆ ಮಾಡಿ ಅದೇ ಬಿಂಬ ದರ್ಶನ ಒದಗಿಸಬೇಕು ಎಂತ ಅರ್ಥವು. ಬಹುಜನ್ಮಗಳ ಮೇಲೆ ನಿಜಗುರೂಪದೇಷದಿಂದ ಅಪರೋಕ್ಷ ತಾರತಮ್ಯ ಸುಳಾದಿ

ಪ್ರಕಾರ, ಸಹಸ್ರ ಹದಿಮೂರು ಜನ್ಮವ ಕೈಕೊಂಡು ಹೃದಯ ಸ್ಥಾನ ದರುಶನವಾಗುವುದ್ಯೆಯ್ಯ ವಾಸನಾಮಯವೆನ್ನಿ ಎಂತ ವಿಜಯ ರಾಯರ ಉಕ್ತಿ. ಇಂತಹ ಬಿಂಬಾಪರೋಕ್ಷವು ಆದಮೇಲೂ ದರ್ಶನವಾಗಿ ಮರ್ಯಾದ ರೂಪ ಧ್ಯಾನ ಪೂಜನಾದಿಗಳಿಗೆ ಈ ಮನ ಮೂರ್ತಿಯೇ ಆಧಾರವಾದ ಪ್ರಯುಕ್ತ ಈ ಗ್ರಂಥದ ಕೊನೆಯತನಕ ಇದರ ವಿಚಾರವೇ ಸರಿ. ಬಿಂಬಾಪರೋಕ್ಷವಾದ ಮೇಲೆ ಪುನಶ್ಚ ದರ್ಶನದುರ್ಲಭ ಎಂದರೆ "ಮಿನಗುವ ಅಪರೋಕ್ಷ ಅಧಿಕಾಧಿಕವಾದಂತೆ ನಾಶಕಾಣೋ ಪ್ರಾರಬ್ಧ ನಾನಾಜನುಮ।" ಎಂತ ಅನಾದಿ ಕರ್ಮ ಸುಳಾದಿ. "ಶೀಲಜನರಿಗೆ ಕೈಹಿಡಿಕೆಯಾಗಿಪ್ಪ ಕಾಲಕಾಲ ತನ್ನ ತೋರುತಲಿ" ಎಂತ ಮನಮೂರ್ತಿ ಸುಳಾದಿ. ಅಂದರೆ ಸ್ವೋತ್ತಮ ದ್ರೋಹವು ಶಾಪವು ತಗಲದೇ ಇದ್ದರೆ ಬಿಂಬರೂಪದ ಕಲಾಹಾನಿ ಬರಲಾರದು. ಅಧಿಕ ಅಧಿಕವಾಗಿ ಕಾಲ ಕಾಲಕೆ ದರ್ಶನವಾಗುತ್ತಾ ಮಿಕ್ಕ ಕಾಲದಲ್ಲಿ ಮರೆಯಾಗಿರೋಣ ನವಕೋಟಿ ತತ್ವೇಶರನ್ನು ಮಾತ್ರ ಬಿಟ್ಟು ಉಳಿದ ಕರ್ಮಜರ ತನಕ ಸ್ವೋತ್ತಮ ದ್ರೋಹದಿಂದ ದರ್ಶನ ಮರೆಯಾಗಿ ಕಾಲ ಕಾಲದ ದರ್ಶನವೂ ಕೂಡ ಇಲ್ಲದೇ ಹೋಗತದೆ ತತ್ವೇಶರಿಗೆ ಮಾತ್ರ ಪ್ರಾಪ್ತ ಪರೋಕ್ಷಕ್ಕೆ ತಿರೋಧಾನವಿಲ್ಲ. ಎಂದು "ತೃಣ ಪ್ರಾರಂಭಮಾಡಿ" ಎಂಬ ಸುಳಾದಿ ಸಿದ್ಧ. ಅಗ್ನಿಜ್ವಾಲೆಗೆ ತುಪ್ಪದಿಂದ ಹ್ಯಾಗೆ ಅಭಿವೃದ್ಧಿಯೋ ಹಾಗೆ ಸ್ವೋತ್ತಮರ ಬಿಂಬನೇ ಅಧಿಕ ಸನ್ನಿಧಿಮೂರ್ತಿ. ಆದುದರಿಂದ ಅವರ ಚರಣ ಸಂದರ್ಶನವೇ ಬಿಂಬಾಪರೋಕ್ಷಕ್ಕಿಂತಲೂ, ಕೋಟಿ ಪಾಲು ಅಧಿಕವಾಗಿ ಕೋಟಿ ಸೂರ್ಯ ಕಾಂತಿಯಲ್ಲಿ ಘನ ಬಿಂಬದರ್ಶನವಾಯಿತೆಂಬ ಪರಮ ಸುಖದ ಸ್ನೇಹವೇ ಇವನನ್ನು ಉದ್ಧರಿಸತಕ್ಕದ್ದು. "ಏನೆಂಬೆ ದ್ವಿಜರೋಳು ಸರ್ವರೂಪಾ" ಎಂತ ಆಹ್ನಿಕ ಸುಳಾದಿಯಾದುದರಿಂದ ಇದೇ ಗಜೇಂದ್ರನ ಪ್ರಾರಬ್ಧ ಕರ್ಮ ಫಲ ಬಲವಾಗಿ ಮೋಸದಿಂದ ಸತ್ಯಸಂಕಲ್ಪನ ಶಾಸನೆ ಘಟನೆ ಎಂಬುದೇ ಪರಮ ರಹಸ್ಯ. । ಬಿಂಬಾಪರೋಕ್ಷದ ಅನುಭವವೇನೆಂದರೆ ಎರಡು ಕಣ್ಣುಗಳು ಮುಚ್ಚಿಕೊಂಡರೆ ಹೃದಯದಲ್ಲಿ ಕತ್ತಲೆ ಹಾರಿ ಹೋಗಿ ಮಿಂಚಿಗೆ ಸಮಾನ ಕಾಂತಿ ಕಂಡು ಎತ್ತ ನೋಡಿದರತ್ತ ಶೃಂಗಾರ ಸದನ "ಎಂತಲೂ, ಮಿನುಗುವಾ ಮಧ್ಯ ಮಂಟಪ ಕೋಟಿ ರವಿಯಂತೆ ಸರಸಿಜನಾಭನರಮನೆಯಂತೆ ಸೊಂಬಗು" ಎಂತಲೂ. "ಸ್ವಮೂರ್ತಿಗಣ ಮಧ್ಯೆ ಸಚ್ಚಿದಾನಂದ್ಯೆಕ ರಮೆಯ ಸಹಿತ ಆಲಿಂಗತ್ವದಿ

ಕಮಲಜಾದಿಗಳಿಂದ ಸ್ತುತಿಸಿಕೊಳ್ಳುತ್ತಾ ಹೃತ್ಕಮಲದೋಳಗಿದ್ದ ಶ್ರೀ ವಿಜಯವಿಠಲನ ಕಂಡೆ'' ಎಂತ ''ಅಂತರಂಗದ ಕದವು ತೆಗೆಯಿತಿಂದು'' ಎಂಬ ನಾಮ ಸಿದ್ಧ. ಈ ಬಿಂಬಾಪರೋಕ್ಷವೇ ಮಾನಸಾಪರೋಕ್ಷ ಎನಿಸಿಕೊಳ್ಳುತ್ತದೆ. ''ಮನಸ್ಯೈವ ಸ್ವಭಕ್ತಾನಾಂ ದೃಶ್ಯೋ ಅಸೌ ರಮಯಾಸಹ'' ಎಂತ ಸತ್ತತ್ವರತ್ನಮಾಲಾ । ''ಸ್ವರೂಪ ಚಕ್ಷುಷಾ ದೃಷ್ಟಿರಪರೋಕ್ಷಮಿತೀರ್ಯತೆ ಎಂತ ಪ್ರಕಾಶ ಸಂಹಿತೆಗೆ ಆದೇ ಜೀವಾಪರೋಕ್ಷ ಕಾಲವು. ಆದಕಡೆಯಿಂದ ಅನುಕೂಲವೇ ಸರಿ.'' ದಶಯೋಜನ ವ್ಯಾಪ್ತಿ ಕ್ರಿಮಿಕೀಟಾದಿ । ದ್ವಿದಶ ಯೋಜನವ್ಯಾಪ್ತಿ ಪಕ್ಷಿ ಮೃಗಾದಿ। ಎಸೆವ ಮನುಜರಿಗೆ ಮಂಡಲ ಪರಿಯಂತ। ಎಂತ ಅಪರೋಕ್ಷ ತಾರತಮ್ಯ ಸುಳಾದಿಯಲ್ಲಿ ಮನುಷ್ಯೋತ್ತಮರಿಗೆ ಸುತ್ತಲೂ ಮೂವತ್ತುಗಾವುದ ತನಕ ಕಣ್ಣಿನ ಎದುರಿಗೆ ಇದ್ದ ದ್ರವ್ಯಗಳ ಹಾಗೆ ಕಾಣುವುದರಿಂದ ಅವರು ಕಣ್ಣು ಮುಚ್ಚಿದರೂ ಅಂಧಕಾರವು ಕಾಣುವುದಿಲ್ಲ. ಮಾಂಸ ಮೊದಲಾದದ್ದನ್ನೇ ಕಾಣುತ್ತಾರೆ. ಈ ಮನೋಮಯಮೂರ್ತಿಯು ಧ್ಯಾನಮಾಡತಕ್ಕವರಿಗೆ ಅಂಗಗಳ ಚಲಿಸದೆ ವಕ್ಷಸ್ಥಲವನ್ನು ಮುಂದಕ್ಕೆ ನಿಲ್ಲಿಸಿ ಶಿರಸ್ಸನ್ನು ತಗ್ಗಿಸದೆ, ಸುಳಾದಿ:- ''ಅರೆಗಣ್ಣು ಮಾಡಿ ಪಲ್ಗಣ ಕೊಡಿಸದಲೆ, ಕೊರಳು ಬಾಗದೆ ಕುಳಿತು ಕದಲದಂತೆ, ಕರಗಳ ತೊಡೆಯಮೇಲಿಟ್ಟು ವಿವರದಿಂದ ಬೆರಳುಗಳ ಸ್ವಲ್ಪಮಾತುರ ತಗ್ಗಿಸಿ ನಿರುಪದ್ರವವಾಗಿದ್ದು ಭೂಮಿಯನು ಸೇರಿ ಪರಿಸರದಲಿ ತನ ಮೂರ್ತಿ ಎದಿರಿನಲ್ಲಿ ಇಷ್ಟುಮರಳೆ ನಾಸಿಕಾಕೊನೆ ದೃಷ್ಟಿಯಿಂದ'' ಎಂತ ಯೋಗ ಸುಳಾದಿಯ ರೀತಿಯಿಂದ ಸರಿಸದಲಿ ಎಂದರೆ, ಸಮೀಪದಲಿ ಎಂತ ಅರ್ಥವು. ವಾಸನಾಮಯ ಜಡಮನಮೂರ್ತಿಯು ಹೃದಯದಲ್ಲಿ ನಿಲ್ಲಿಸ ಎಂತ ಹೇಳಿರುವುದಕ್ಕೆ ಹೀಗೆ ಆಸನದಿಂದ ಕೂತಿರುವ ಕಾಲದಲ್ಲಿ ನಿಲ್ಲತಕ್ಕದು ಹೊರತು ''ನಿಂತಲ್ಲಿಕುಳಿತಲ್ಲಿ ನಾನಾ ಪ್ರಯೋಜನ ಸಂತಸ ಮಾಡುವ ಸಮಯಾನುಸಾರದಿ'' ಎಂತ ಧ್ಯಾನ ಪ್ರಕರಣ ಸುಳಾದಿಯ ಪ್ರಕಾರ ಮತ್ತು ಕುಳಿತಲ್ಲಿ ನಿಂತಲ್ಲಿ ಮಲಗಿ ತಿರುಗಾಡುವಲ್ಲಿ ಇಂಥಾದೆ ಕೈಕೊಂಡು ಕರ್ಮವ ತೊರೆಯೋ ಎಂತ ಸಂಪೂಜಾ ಸುಳಾದಿ ರೀತಿಯಿಂದಲೂ ಹೃದಯ ಸ್ಥಾನದಲ್ಲಿ ಮೂರ್ತಿಯ ಲಕ್ಷ್ಯವಿಲ್ಲದೆ ಅದರ ಮೇಲಿನ ಪ್ರದೇಶದಲ್ಲಿ ಮನಸ್ಸಿಗೆ ಆಯಾಸವಿಲ್ಲದೆ ಮನೋವಾಸನಾಮೂರ್ತಿ ಅಖಂಡವಾಗಿ ಧ್ಯಾನಕ್ಕೆ ನಿಲ್ಲಬಹುದು ಬಾಧಕವಿಲ್ಲ ನಿಶ್ಚಯ ।ಆದಾಗ್ಯೂ ಈ ಮನಮೂರ್ತಿಯು ೧೧೧೩ ಜನ್ಮ ಈ

ಅಧಿಕಾರಿಯಿಂದ ಪೂಜೆ ತೆಗೆದುಕೊಂಡು ದರ್ಶನ ವದಗತಕ್ಕದ್ದಾದ ಮನೋ ವಿಕ್ಷೇಪ ಮಾತ್ರ ನಿಲ್ಲದೇ ಇದ್ದರೆ ಅಂತಹ ಧ್ಯಾನವು ತಾರಕವೇ ಸರಿ. ಇದು ಜಡಮೂರ್ತಿಯಾದುದರಿಂದ ಗೋಳಕ ಚಿಂತನೆ ಹ್ಯಾಗೆಂದರೆ– ಪ್ರಮಾಣ:-

*ಶೈಲೀದಾರುಮಯೀ ಲೋಹೀ ಲೇಪ್ಯಾ ಲೇಖ್ಯಾಚ ಸೈಕತೀ ।*
*ಮನೋಮಯಿ ಮಣಿಮಯಿ ಪ್ರತಿಮಾಷ್ಟವಿಧಾ ಸ್ಮೃತಾ।*

ಎಂತ ಭಾಗವತ ಮೂಲಕ್ಕೆ ವಿಜಯಧ್ವಜೀಯ. "ಲೇಪ್ಯಾ ಓಷಧಿ ರಸ ಸಂಲಿಪ್ತ ಶಿಲೋ, ಲೇಖ್ಯಾ ಚಿತ್ರಲಿಖಿತ ಪ್ರತಿಮಾ । ಸೈಕತೀ ಎಂದರೆ ಗಾರೆಯ ಪ್ರತಿಮಾ ಮನೋಮಯಿ" ಎಂಬುದೇ ಈಗಿನ ಸುಳಾದಿ ಸಿದ್ಧ. – ಮಣಿಮಯೀ ಎಂದರೆ ಮಾಣಿಕ್ಯ ರಜತ ಪ್ರತಿಮಾ, ಇದರಲ್ಲಿ ಒಂದು ತಾಮ್ರದ ಪ್ರತಿಮ ಒಳಗೆ ಆ ಪ್ರತಿಮೆಯ ಆಕಾರವಾಗಿ ತೇಜೋಮಯ ಪ್ರತಿಮೆ ೧, ಅದೇ ವಾಯು ಪ್ರತೀಕವಾದುದರಿಂದ ವಾಯು ದೇವರು ಶ್ರೀ ಹರಿಯ ಪ್ರತಿಮಾಕಾರರಾದುದರಿಂದ ಆ ತೇಜೋಮಯ ಪ್ರತಿಮೆಯು ಮಹತ್ತತ್ವಾತ್ಮಕ ಅದರೊಳಗೆ ಲಕ್ಷ್ಮೀ ಸ್ವರೂಪ ತೇಜಸ್ಸು ಶ್ರೀಹರಿಯ ಪ್ರತಿಮಾಕಾರ. ತಾಮ್ರಾದಿ ಜಡವನ್ನು ಬಿಟ್ಟು ಈ ಲಕ್ಷ್ಮೀ ವಾಯುಗಳೇ ಗೋಳಕಗಳು (ದ್ವಯ).

*ಸರ್ವತ್ರಚ ರಮಾ ಪ್ರಾಣಂ ಪ್ರತಿಮಾತ್ವೇನ ಭಾವಯೇತ್ ।*
*ವಿನಾವಾಯು ಪ್ರತೀಕಂತು ಸ್ಮರನ್ ನಿರಯಭಾಗ್ಭವೇತ್॥*

ಇತ್ಯಾದಿ ಪ್ರಮಾಣಗಳಿಂದ ಮನಮೂರ್ತಿಯು ಜಡವಾದುದರಿಂದ ಅಲ್ಲಿಯೂ ಹೀಗೆಯೇ ಸರಿ. ತಾಮ್ರಾದಿ ಶ್ರೀಹರಿಯ ಪ್ರತಿಮೆಗೂ, ತಾಮ್ರಾದಿ ಲಕ್ಷ್ಮೀ ಪ್ರತಿಮೆಗೂ, ತಾಮ್ರಾದಿ ಮುಖ್ಯ ಪ್ರಾಣ ಪ್ರತಿಮೆಗೂ, ಗೋಳಕದ್ವಯವೇ ಸರಿ. ರುದ್ರಾದಿ ಅನ್ಯ ದೇವತಾ ಪ್ರತಿಮೆಗಳಲ್ಲಿ ಪೀಠಸ್ಥ ಜಡ ಮೂರ್ತಿಯನ್ನು ಬಿಟ್ಟು– ಅನ್ಯ ದೇವತಾ ತೇಜೋಮಯ ಪ್ರತಿಮೆ ೧ ಅದರಲ್ಲಿ ಯಥಾ ಪ್ರಕಾರ ಪ್ರಾಣ ಪತ್ರಿಮಾ ಅದರಲ್ಲಿ ಲಕ್ಷ್ಮೀ ಅದರಲ್ಲಿ ಶ್ರೀ ಹರಿ. ಹರಿ ಪ್ರತಿಮೆ ವಾಯು ಪ್ರತಿಮೆ ರುದ್ರಾದಿ ಪುರುಷ ಪ್ರತಿಮೆಗಳಲ್ಲಿ ಲಕ್ಷ್ಮೀ ದೇವಿಯು ಪುರುಷಾಕಾರಳಾಗಿ ಪರಮಾತ್ಮನ ಆಕಾರದಂತೆಯೂ ಹನುಮದಾದಿ ಪ್ರತಿಮೆ ಒಳಗೆ ಕಪಿ ಮುಖ ಪುಚ್ಛ ಉಳ್ಳವಳಾಗಿ ರುದ್ರಾದಿ ರೂಪಗಳಲ್ಲಿ ರುದ್ರ

ಲಿಂಗಾದ್ಯಾಕಾರ ಉಳ್ಳವಳಾಗಿ ಯಂತ್ರದಲ್ಲಿ ಯಂತ್ರಾಕಾರಳು. ಸಾಲಿಗ್ರಾಮದಲ್ಲಿ ಶಿಲಾಕಾರವುಳ್ಳವರಾಗಿರೋಣ. ಇದೇ ಪ್ರಕಾರ ಪ್ರಾಣದೇವರು ಕೂಡಾ ಲಕ್ಷ್ಮೀ ಸರಸ್ವತೀ ಪಾರ್ವತ್ಯಾದಿ ಪ್ರತಿಮೆಗಳಲ್ಲಿ ಸ್ತ್ರೀರೂಪವನ್ನು ಧರಿಸಿ ಸ್ತನ ಕೇಶಾದಿ ಲಕ್ಷಣದಿಂದ, ಯಂತ್ರ ಸಾಲಿಗ್ರಾಮಗಳಲ್ಲಿ ಯಂತ್ರ ಸಾಲಿಗ್ರಾಮಾಕಾರವಾಗಿರೋಣವೇ. ಇದೇ ಶಬ್ದಾರ್ಥವು. ಇದು ತಂತ್ರಸಾರ ಛಲಾರಿ ಟಿಪ್ಪಣಿ ಸಿದ್ಧ. ಜಡದೊಳಗಿನ ಮುಖ್ಯ ಪ್ರಾಣದೊಳಗಿನ ರಮಾ ರೂಪದೊಳಗಿನ ಗುಣಪರಿಪೂರ್ಣನ ರೂಪವಿದೆ ಎಂಬುವುದರಿಂದ ಮೇಲೆ ಮೇಲಿನ ಪ್ರತೀಕಗಳಿಗಿಂತ ಒಳ ಒಳಗಿನ ಪ್ರತೀಕಗಳು ಸಣ್ಣ ಸಣಗೆ ಅದೆ ಎಂಬ ಭ್ರಾಂತಿ ಬಿಟ್ಟು ಅಂಗಾರವ್ಯಾಪ್ತ ಅಗ್ನಿಯಂತೆ ಜಡಪ್ರತಿಮೆಯು ಎಷ್ಟು ಪುಷ್ಟವಾಗಿ ಇರುತ್ತದೋ ಅಷ್ಟು ಪರಿಮಿತಕ್ಕೂ ತೇಜೋಮಯ ವಾಯು ಪ್ರತೀಕವು, ಲಕ್ಷ್ಮೀ ಪ್ರತೀಕವೂ ಭಗವದ್ವಿಗ್ರಹವೂ ಕೂಡ ಹಾಗೆಯೇ ಸರಿ. ಇದರಲ್ಲಿ ಯಂತ್ರ ಸಾಲಿಗ್ರಾಮಾದಿ ನಿರವಯವ ಗೋಲಕಗಳಲ್ಲಿ ವಾಯು ಲಕ್ಷ್ಮೀ ಹರಿ ರೂಪಗಳನ್ನು ಸಾವಯವರನ್ನಾದಾಗ್ಯೂ ತದಾಕಾರರನ್ನಾಗಿ ನೃಸಿಂಹ ಯಂತ್ರವನ್ನು ನೃಸಿಂಹ ಸಾಲಿಗ್ರಾಮವನ್ನೂ ಪೀಠಾಕಾರವನ್ನಾಗಿ ಭಾವಿಸಿ- ಈ ಗೋಲಕಕ್ಕೆ ಮೇಲು ಭಾಗ ಗೋಲಕಗಳಿಲ್ಲದೆ ಕೇವಲ ಚಿದಾನಂದ ಘನ ಭಗವನ್ಮೂರ್ತಿಯನ್ನು ತಿಳಿಯತಕ್ಕದ್ದು. ಪ್ರಮಾಣ:- ಸಾಲಿಗ್ರಾಮ ಸ್ಥಿತಾನ್ ದೇವಾನ್ ರಾಮ ಕೃಷ್ಣಾದಿ ರೂಪಕಾನ್। ಧ್ಯಾತ್ವಾ ಧ್ಯಾನೇನ ತದ್ರೂಪಾನ್॥ ಎಂತ ಭಾವಪ್ರಕಾಶಿಕಾ. ಅಲ್ಲಿಯೂ ನಮಗೆ ಧ್ಯಾನಕ್ಕೆ ಮಾನಸ ಮೂರ್ತಿಯೇ ನಿಲ್ಲುತ್ತದಾದ ಕಡೆಯಿಂದ ಗೋಲಕ ಹೊರತು ಚಿಂತನೆಯಲ್ಲ. ಸುಳಾದಿ:- ಪ್ರಾಣ -ಪ್ರಕೃತಿ- ಪುರುಷ ಇವರಿಂದ ಈ ಜಗತ್ತು ವೇಣೀಯಂದದಲಿ ಪ್ರವಾಹಕ್ಕೂ । ಎಂತ ಧ್ಯಾನ ಪ್ರಕರಣ ಸುಳಾದಿ. ಅಂದರೆ ವಾಯು ರಮಾ ಹರಿ ಈ ಮೂರು ರೂಪವು ಈ ಜಗದಾಕಾರವಾಗಿ ಜಡೆಯಂತೆ ಕಲೆಸಿ ಕೊಂಡು ಅದೆ. ಹೃದಯದಲ್ಲಿ ಬಿಂಬರೂಪನಾಗಿ, ಶ್ರೀಹರಿಯು ಸ್ವತ ಏವ ವಾಸ ಮಾಡುತ್ತಾನೆಂಬುವುದೇ ನಿಶ್ಚಯವು. ಆ ರೂಪವನ್ನು ಕಂಡವರಲ್ಲ. ಆದುದರಿಂದ ಬಿಂಬಾಪರೋಕ್ಷದ ಪರಿಯಂತ ನಮಗೆ ಮನಮೂರ್ತಿಯೇ ಗತಿ ಎಂತ ತಾತ್ಪರ್ಯವು. ಮನಮೂರ್ತಿ ಸುಳಾದಿ:- ಮನಮೂರ್ತಿ ಇಪ್ಪ ಮೂಲ ಸ್ಥಾನದಲ್ಲಿ ಒಂದು ಮಿನುಗುವ ಕಂದ ಉಂಟು ಅದರಿಂದಲಿ। ಅದರಿಂದ ಜನಿಸಿದನಾಲ ಗಗನದಲ್ಲಿ ಮುಟ್ಟುವಗೆ ಎಣಿಸಿ ಹೃಷೀಕೇಶ ಅಂಗುಲಿಯನಿಟ್ಟು॥

ಅಂದರೆ ಗಗನ ಆಕಾಶ ಎಂತ ಹೃದಯಕ್ಕೆ ಹೆಸರು. ಹೃಷೀಕೇಶನೆ ಕೇಶವಾಗಿ ಹತ್ತನೆಯ ರೂಪ. (ಕೃಷ್ಣಕೇಶ ಕೃಷ್ಣನ ರೂಪ ಹತ್ತನೇದು_ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ವಾಮನ, ಭಾರ್ಗವ, ರಾಮ, ವೇದವ್ಯಾಸ, ಬಲರಾಮ, ಕೃಷ್ಣ)) ನಾಭಿಯಿಂದ ಹೃದಯ ಪರಿಯಂತ ದಶಾಂಗುಲವೆಂಬ ಭಾವ। ಮುಂದಿನ ಮಾತು. ಎಣಿಕೆ ಮಾಡಲಿಕ್ಕೆ ಅಷ್ಟದಳ ಪದುಮ ಕನಕ ವರ್ಣದ ಕದಳೀ ಕುಸುಮದಂತೆ ವೊಪ್ಪುತಾ ಮೊನೆ ಅಧೋಮುಖವಾಗಿ ಚಂದ್ರ ಪ್ರಕಾಶವಾಗಿ। ಘನ ಕೋಮಲ ಪೂರ್ಣ ವಿಶಾಲ ದಶದಿಶವನು ಶೋಭಿಸುತಿಪ್ಪುದು ನೋಳ್ಪರ ಕಂಗಳಿಗೆ। ಅಂದರೆ ಶ್ರೀಪತೇಃ ಸಚ್ಚಿದಾನಂದ ಘನ ದೇಹೇಂದ್ರಿಯಾದಿಕಂ। ಪ್ರೋಜ್ವಲಂ ಭಾವಯೇದ್ವ್ಯಾಪ್ತಂ ಸ್ವಸ್ವ ದೇಹೇಂದ್ರಿಯಾದಿಷು। ಎಂತ ತನ್ನ ಸ್ಥೂಲ ಶರೀರೇಂದ್ರಿಯಗಳಲ್ಲಿ ವ್ಯಾಪ್ತವನ್ನಾಗಿ ಅನೇಕ ಭಗವದ್ರೂಪಗಳನ್ನು ಚಿಂತಿಸುವುದರಲ್ಲಿಯೂ, ಮುಖ್ಯವಾಗಿ ಸ್ಥೂಲಾಂಗುಷ್ಟ ಮೂರ್ತಿಯು ವ್ಯಾಪ್ತವಾದುದರಿಂದ ಆ ಮೂರ್ತಿ ಧ್ಯಾನಾನುಕೂಲ, ರಥ ಪೀಠ ಮಹಾಮಂಟಪ ಮೊದಲಾದುದಕ್ಕೆ ವಿಶಾಲ ಪದ್ಮವನ್ನಾಗಿ ತಿಳಿಯಬೇಕು. ಹಾಗಾದರೆ,

*"ಬ್ರಹ್ಮ ನಾಡೀತಿ ಸಾಂಕೇಶಂ ಕೃತ್ವಾ ಭಾಗಾನ್ಸಹಸ್ರಶಃ ।*
*ಏಕ ಭಾಗ ಪ್ರಮಾಣಾಸಾ ಸಛಿದ್ರಾ ಸೂಕ್ಷ್ಮ ರೂಪಿಣೀ।"*

*ಎಂತ ಮುಕ್ತಿತತ್ವ.*

ಪರಮ ಸೂಕ್ಷ್ಮ ಛಿದ್ರ ಅಂದರೆ, ಅದರೊಳಗಿನ ರಂದ್ರದಲ್ಲಿ ಕಮಲಗಳು ಹ್ಯಾಗಿದ್ದೀತೆಂದರೆ ಕುಂಬಾರನ ಚಕ್ರಕ್ಕೆ ಆಧಾರವಾದ ಸಣ್ಣ ಮೊಳೆ ಹೇಗೆ ಅವಲಂಬವೋ ಹಾಗೆ ಬ್ರಹ್ಮನಾಡಿ ಅವಲಂಬಿಸಿ ಜಡಜ್ಯೋತಿರ್ಮಯ ಕಮಲಗಳು ಸ್ಥೂಲದೇಹದಲ್ಲಿ ವ್ಯಾಪ್ತವೆಂಬುವುದೇ ಸಿದ್ಧವು. ಸುಳಾದಿ ಮುಂದಿನ ಮಾತು _ "ಗುಣಿಸು ಕೇಸರಿಗಳು ಅನುಮಾನ ಮುನಿಯ ಲಕ್ಷಣವೆನ್ನಿ." ಅಂದರೆ "ಅನುಮಾನ ತೀರ್ಥರೆಂಬ ಸರ್ವಜ್ಞರಾಯರ ದ್ವಾತ್ರಿಂಶ ಲಕ್ಷಣ ಹೇಗೋ ಹಾಗೆ ಕಮಲಕ್ಕೂ ೩೨ ಕೇಸರಗಳು ಎಂತ ಭಾವವು." ಎಂತ

ಮುಂದಿನ ಮಾತು–(ಅಷ್ಟೇ ಪತ್ರಂತು ಹೃತ್ಪದ್ಮಂ ದ್ವಾತ್ರಿಂಶ ಕೇಸರೀಸ್ಥಿತಂ ಎಂತ) "ಸುತ್ತಾಕಿಂಜಲ್ಕ ಮಧ್ಯೇಪರ್ಣಿಕಾ ಅನಿಮಿಷರಲ್ಲಿವಾಲಗ ಅಷ್ಟಹಸ್ತ ನಾರಾಯಣ ಶ್ರೀಭೂ ಸಹಿತ ಪ್ರಹರಿಯ ಮಾಡುತಿಪ್ಪ– ಮನುಜಾದಿಗಳವಿಡಿದು

ಶರ್ವ ಪರ್ಯಂತ ಕ್ಷಣ ಕ್ಷಣಕೆ ಒಂದೊಂದು ಬುದ್ಧಿಯ ಕೊಡುತ" ಅಂದರೆ ಋಜುಗಳಲ್ಲಿ ಕಲಿಯಾವೇಶ ಇಲ್ಲದ ಪ್ರಯುಕ್ತ ಶ್ರೀ ಹರಿ ನಿರುಋತಿದಳಕ್ಕೆ ಬಂದಾಗ್ಯೂ ಋಜು ಬುದ್ಧಿ ಕೆಡುವುದಿಲ್ಲವಾದ ಪ್ರಯುಕ್ತ ಶರ್ವ ಪರ್ಯಂತ ಎಂದು ಹೇಳಿದರು. ಮುಂದಿನ ಮಾತು "ವನಜ ಕರ್ಣಿಕೆ ಮೇಲೆ ಇನ ಶಿಶಿಪಾವಕ ತ್ರಿಮಂಡಲವಕ್ಕೂ ತದುಪರಿಯು। ಅಂದರೆ ದಳಾಗ್ರಸ್ಥ ಸೂರ್ಯ ದ್ವಾದಶ ಸಾರಾಸ್ತ್ರ ಮಂಡಲೆ ಸ್ಥಿತೇ ಪ್ರಾಣಿಸ್ಥಿತಂ ಧ್ಯಾಯೇಲ್ಲಕ್ಷ್ಮೀ ನಾರಾಯಣಂ ಪರಂ। ಪ್ರಾಣೇ ತತ್ ಕೇಸರಾಗ್ರಸ್ಥ ಸೋಮ ಮಂಡಲ ಸಂಸ್ಥಿತೇ ವಾಸ್ತುದೇವಾಖ್ಯ ದೇವೇಶಂ ಚಿಂತಯೇತ್ ಜ್ಞಾನವಾನ್ನರಃ। ಪ್ರಾಣೀ ತತ್ಕರ್ಣಿಕಾಗ್ರಸ್ಥ ವಹ್ನಿ ಮಂಡಲಗೆ ಸ್ಥಿತಂ। ನಾರಾಯಣಂ ರಕ್ತ ವರ್ಣಂ ಚಿಂತಯೇತ್ತದನಂತರಮ್॥" ಇಂದು ಮಂಡಲ ತ್ರಯಾಂತರ್ಗತ ಭಗವದ್ರೂಪತ್ರಯಂ ಎಂತ ಹೇಳಿದರು.

ಮುಂದಿನ ಗ್ರಂಥ–

*ತದಂತರನಂತಕೋಟಿ ಸೂರ್ಯ ಸನ್ನಿಭ ಸಮಪ್ರಭಾ ।*
*ಪ್ರಭಾಮಧ್ಯಗತಂ ಪೀಠಂ ನಾನಾರತ್ನ ಪ್ರವೇಷ್ಟಿತಂ।*
*ಅನೇಕ ರತ್ನ ಸಂಕೀರ್ಣಂ ಜ್ವಲನಾರ್ಕ ಸಮಪ್ರಭಂ।*
*ತನ್ಮಧ್ಯೇ ನವರತ್ನಾಢ್ಯಂ ತಪ್ತಹಾಟಕ ಸನ್ನಿಭಂ।*
*ತಸ್ಯೋಪರಿಷ್ಟಾಚ್ಚತುರಂ ನದದ್ಧ್ಯಂತ್ಯದಿಶೋಭಿತಂ ।*
*ವಿದ್ರುಮಸ್ಪಟಿಕಾರತ್ನ ಶತ ಸ್ತಂಭ ಸಮನ್ವಿತಂ।*
*ಸೂರ್ಯ ಕೋಟಿ ಪ್ರತೀಕಾಶಂ ವಿಮಾನಂ ಪ್ರಣವಾಕೃತಿಂ।*
*ಮುಕ್ತಾದಾಮವಿತಾ ನಾಡ್ಯಂ ಛತ್ರ ಧ್ವಜ ಪತಾಕಿನಂ।*
*ನಾನಾರತ್ನ ಶಿರೋ ಬದ್ಧ ಸುವರ್ಣ ಘಟ ಶೋಭಿತಂ।*
*ಇತಸ್ತತೋಮಿಲದ್ಬದ್ಧ ಸ್ವರ್ಣ ಧಾಮಾದ್ಯೃಥಂ ಶುಭಂ।*
*ಮಲ್ಲಿಕಾ ಕುಂದ ಮಂದಾರ ಕೇತಕೀ ಚಂಪಕಾದಿಬಿಃ ।*
*ಅನ್ಯೈಶ್ಚ ವಿವಿಧೈಃ ಸ್ರಗ್ಭಿಃ ಸಮಂತಾದವಕೀರ್ಣಿತಂ।*
*ತತ್ರ ಶ್ಲಾಘ್ಯೈಸ್ಫುರತ್ಪುಷ್ಪ ಕಲ್ಪವೃಕ್ಷಸ್ತದಂತರಂ।*
*ಲಸನ್ಮಂಟಪಮಂತಸ್ಥ ಸ್ವರ್ಣ ಪದ್ಮೋಪರಿಸ್ಥಿತೇ ।*
*ಫಣಾಮಣಿಗಣಾಕೀರ್ಣಾ ಸಹಸ್ರ ಫಣಿ ಭೂಷಿತೇ।*
*ಸಿಂಹಾಸನೇ ಸಮಾಸೀನಃ ಸೂರ್ಯ ಕೋಟಿ ಸಮಪ್ರಭಃ।*

*ವರ್ತತೇತು ರಮಾನಾಥೋ ರಮಯಾ ಸಹಸಂತತಂ ।*
*ಪರಂಬ್ರಹ್ಮೇತಿ ಭಗವಾನ್ ಸರ್ವಗಃ ಸಂಪ್ರಕೀರ್ತಿತಃ॥*
*ಕೃತೇಶ್ವೇತಂ ವಿಜಾನೀಯಾತ್ ತ್ರೇತಾಯಂ ರಕ್ತವರ್ಣಕಂ।*
*ದ್ವಾಪರೇ ಪೀತ ವರ್ಣಂತು ಕೃಷ್ಣ ವರ್ಣಂ ಕಲೌ ಯುಗೇ॥* ಎಂತ–

ಅಂದರೆ ಈ ಕಲಿಯುಗದಲ್ಲಿ ಕೃಷ್ಣ ವರ್ಣವಾಗಿ ಸ್ಥೂಲಾಂಗಷ್ಟ ಬಿಂಬರೂಪೀಯಂತ ಆದಿತ್ಯ ಪುರಾಣವೇಂಕಟೇಶ ಮಾಹಾತ್ಮೆ ೫ನೇ ಅಧ್ಯಾಯ ಸಿದ್ಧವು. ಸುಂದರ ಶ್ಯಾಮ ವರ್ಣ ಎಂತ ಭೂತ ಸುಳಾದಿ ಸಿದ್ಧ. "ಕುಳಿತು ಮರೆವ ಮನ್ಮಥ ಕೋಟಿ ಲಾವಣ್ಯ ಜಲಧರ ವರ್ಣ ಚತುರ್ಭುಜ" ಎಂತ ಗುಪ್ತಾರ್ಚನೆ ಸುಳಾದಿ ಮುಂದಿನ ಮಾತು. ಅನುವಾದ ಪವಳ ಸ್ಫಟಿಕದ ಕಂಬ। ಕನಕ ರತ್ನ ಸಂಯುಕ್ತವಾದ ದಿನಕರನೇಕ ಸಂಕಾಶ ವಿಮಾನ ಸುತ್ತಲೂ। ಹಣಿದ ಚಿನ್ನದ ದಾಮ ವಿರಾಜಿಸೆ। ಘಣ ಘಣ ಗಂಟೆ ಗೆಜ್ಜೆನಾದ ಕಟ್ಟಿದ ಮುತ್ತಿನ ಗೊಂಚಲ ಮಕರ ತೋರಣಗಳು ವಿನಯ ವಿಚಿತ್ರ ಧ್ವಜ ಪತಾಕ ಮೇಲ್ಪಟ್ಟು ಮಣಿಗಣದಿಂದ ಬಿಗಿದಮಲಕುಗಳು। ಚೀಣೀಚೀಣಾಂಬರ ಜೋಡಿಸಿದ ಕಲು ಕನಕ ಸನ್ಮಯವಾದ ಕಳಸ ಪೊಳೆವುತಿರೆ। ಪ್ರಣವಾಕಾರ ವಿಮಾನ ಮಧ್ಯದಲಿ। ಅನುದಿನವು ಚಿತ್ರವಿಚಿತ್ರವಾದ ಗುಣ ರೂಪವುಳ್ಳ ಹರಿ ತ್ರಿಗುಣಾತೀತ। ಚಿನುಮಯ ಸರ್ವ ವಸ್ತುಗಳಿಂದ ಭಿನ್ನ ಮಹಾ ಅಣುಜ್ಯೋತಿರ್ಮಯವಾದ ಕಾಂತಿಯಿಂದ। ದಿನದಲ್ಲಿ ಮೆರೆವ ವಿಜಯವಿಠಲರೇಯ ಘನಮಹಿಮ ವಾಸವಾಗಿಪ್ಪ ಜಗದಪ್ಪ ॥೧॥ ಇದು ಮನಮೂರ್ತಿ ಸುಳಾದಿ. ಗುಪ್ತಾರ್ಚನೆ ಸುಳಾದಿಯಲ್ಲಿ ತ್ರಿವಡಿ ಡಿಂಬಿದೊಳಗೆ ಹೃದಯಾಂಬರದೊಳು ಪೊಳೆವಲಂಬಿಸಿದ ನೂರು ಕಂಬದಿಂದ ಬಲು। ಸಂಭ್ರಮ ಮಂಟಪ ಕೊಂಬಿ ಕೊಂಬಿಗೆ ಶತ ಕುಂಭ ಪವಳ ಮಾಟ ತುಂಬಿದರತುನಾವು– ದಂಭೋಳಿ ಜೋಡಿಸಿದ ಮುಂಬಿಗಿದ ಸಂತ ಕೆಂಬಣ್ಣದ ಕಟ್ಟು। ಇಂಬಾಗಿ ಎಸೆವತಿರೋ। ಎಂತ ಗುಪ್ತಾರ್ಚನೆ ಸುಳಾದಿ. "ದಂಭೋಳಿ ಎಂದರೆ, ಮಿಂಚು ವಿದ್ಯುತ್ಪಾಶದಿಂದ ಕಟ್ಟಿದ ದಿವ್ಯ ರಥ" ಎಂತ ಅರ್ಥ. "ರವಿ ಕೋಟಿ ಪ್ರಕಾಶದಿಂದ ರಥ ಹೊಳೆವುತಿರಲು" ಎಂತ ಪುರಂದರ ದಾಸರ ಸುಳಾದಿ. ಮನಮೂರ್ತಿ ಸುಳಾದಿವಳಗೆ ಮೂಲ ನಾಭಿಯಿಂದ ಹೃದಯ ಪರಿಯಂತ ನಾಳವದರ ಮೇಲೆ ಕಮಲ ಎಂಟು ದಳಯುಕ್ತವಾಗಿ ಮಧ್ಯ ಮಧ್ಯದಿ ಕರ್ಣಿಕೆ ಮೇಲು ತ್ರಿಮಂಡಲದಲ್ಲಿ ತೇರು। ಕೇಳಿ ತೇರಿನ ಮಧ್ಯೆ ಚಿತ್ರ

ಮಂಟಪವು. ಪೂಮಾಲೆಗಳಿಂದ ಶೋಭಿಸುತಿದೆಕೋ। ನಾಲುಕು ಮೂಲೆ ಜಗುಲಿ ಕಲ್ಪವೃಕ್ಷ ವಿಶಾಲವಾದ ಕೆಳಗೆ ಸಿಂಹಾಸನ ಕೀಳುಮಣಿಗಳಿಂದ ಝಟಿತವಾಗಿದೆ. ಅಲ್ಲಿ ಶ್ರೀಲಕುಮಿ ಭೂರಿಂದ ಹರಿ ಕುಳಿತು। ವಾಲಗಗೊಳುತಿಪ್ಪ ಮುಕ್ತಾ ಮುಕ್ತರ ಕೈಯಲಾಲಿಸಿ ಸಹಸ್ರಫಣಿ ಸಂಯುಕ್ತ ನೀಲ ಮೇಘ ಶ್ಯಾಮ ಅಂಗುಷ್ಟ ಮೂರುತಿ ವಾಲಯ ಸಮಾಧಿಯಲಿ ಕುಳಿತೊಪ್ಪುವ। ಎಂತ ಹೇಳಿದ್ದಾರೆ. ಇಲ್ಲಿ ತಿಳಿಯಬೇಕಾದದ್ದೇನೆಂದರೆ- ಈಗ ಹೇಳಿದ ಹೃದಯ ಕಮಲ ಮೊದಲು ದಿವ್ಯ ರಥ ಪರಿಯಂತದಲ್ಲಿಯೂ ಜಗಲಿಯೇ ಸರಿ. ಆ ರಥದೊಳಗಿನ ಮಹಾ ಮಂಟಪವು ಅದರೊಳಗಿನ ಪದ್ಮವು ಶುದ್ಧ ಲಕ್ಷ್ಮ್ಯಾತ್ಮಕಗಳೇ ಹೊರತು ಜಡಜ್ಯೋತಿರ್ಮಯಾಂತರ್ಗತ ರಮಾರೂಪಾ ಎಂತ ಹೇಳಕೆಲಸವಿಲ್ಲ. ಯಾವ ಮಂಡಲ ತ್ರಯ ಪ್ರಭೇದಗಳು ಜಡಪ್ರಭೆಯೇ ಸರಿ. ಆ ವಹ್ನಿ ಮಂಡಲ ಮಧ್ಯದಲ್ಲಿ ಪ್ರಭಾ ಯಾವುದೋ ಅದೇ ಲಕ್ಷ್ಮ್ಯಾತ್ಮಕ ಮಹಾ ಮಂಟಪಾಧಾರವಾಗಿ ಶ್ವೇತದ್ವೀಪ ಎನಿಸಿಕೊಳ್ಳುತ್ತದೆ. ಪ್ರಮಾಣ:- ಶ್ವೇತದ್ವೀಪೋ ಮಂಟಪಶ್ಚ ದಿವ್ಯರತ್ನಮಯೀ ಮಹಾನ್। ಪದ್ಮಮೇಕತ್ರಯಂ ದೇವಿ ರಮ್ಯೈವ ಬಹುರೂಪಿಣೀ। ಎಂತ ತಂತ್ರಸಾರಮೂಲ. ಆ ಮಹಾಮಂಟಪದೊಳಗೂ ಮಂಡಲತ್ರಯಗಳುಂಟು. ಹೃದಯ ಕಮಲವು ವಿಶಾಲವಾದುದರಿಂದ ಷಡ್ದಲಮಧ್ಯೆ ಅಷ್ಟದಳ. ಆದರ ಕರ್ಣಿಕೆಯ ಪರಿಯಂತ ಶತಸ್ತಂಭಯುಕ್ತ ರಥ ಪೀಠದ ಕೆಳಗಿನ ಭಾಗವಾಗುತ್ತದೆ. ರಥ ಪೀಠದ ಮೇಲೆ ಮಹಾಮಂಟಪದ ಕೆಳಗೆ ಸೇರಿದ ಹಾಗೆ ಒಂದು ಚತುರಸ್ರ ಶುಭ್ರ ಜಗುಲಿ ಅದೆ. ಶ್ರೀ ಭಾಗ ಅದರ ಕೆಳಗೂ ಅದೇ ಪ್ರಕಾರ ರಕ್ತ ವರ್ಣದ ಭೂಭಾಗದ ಜಗುಲಿ, ಅದರ ಕೆಳಗೆ ದುರ್ಗಾ ಭಾಗದ ಕರಿಯ ಜಗುಲಿ. ಇವು ಮೂರು ಮಹಾಮಂಟಪದ ಕೆಳಗಿನ ಪೀಠರೂಪಗಳು ನಾಲಕು ಪಾರ್ಶ್ವದಲ್ಲಿಯೂ ಸೋಪನದ ಹಾಗೆ ಇರುತ್ತದೆ. ಇದು ರಥ ಪೀಠದಲ್ಲಿ ಮೇಲು ಭಾಗದನುಭವಸಿದ್ಧ. ಪ್ರಮಾಣ:-

*ಲಕ್ಷ್ಮ್ಯಾತ್ಮಕಂ ಮಂಟಪಂಚ ಸಪ್ತಾಂಗುಲಮಿತಂ ಮಹತ್।*
*ತದಧೋ ಭಾಗಕೇ ದುರ್ಗಾ ರೂಪಾಣಿ ವೇದಿಕೋಪಮಾ ।*
*ಸಾ ನೀಲ ವರ್ಣಾ ತಸ್ಯೋರ್ಧ್ವಂ ಭೂಭಾಗೋ ರಕ್ತ ವರ್ಣಕ:।*
*ಸ್ತ್ರೀ ಭಾಗಸ್ತದೂರ್ಧ್ವಂ ಸ್ಯಾದ್ವಜ್ರವಚ್ಛ್ವೇತ ವರ್ಣಕ: ।*
*ತದ್ಧಿ ಪೀಠತ್ರಯಂ ಪ್ರಾಹು: ವಿಷ್ಣೋರದ್ಭುತ ಕರ್ಮಣ:।*

*ಅಧೋಮುಖಂ ಹೃತ್ಕಮಲಂ ವಾಯು ಬೀಜೇನ ಸನ್ಮುಖಂ।*
*ಕುರ್ಯಾತ್ತಮೋಸ್ಯ ಮುಕುಲಂ ಜ್ಞಾನಾರ್ಕೇಣ ವಿಕಾಸಯೇತ್ ।*
*ಪ್ರಣವೇನ ವಿಕಾಸ್ಯ ತತ್ಕರ್ಣಿಕಾಯಾಂ ಸೂರ್ಯ ಮಂಡಲಂ।*
*ತದುಪರಿ ಚಂದ್ರ ಮಂಡಲ ತದುಪರಿ ವಹ್ನಿ ಮಂಡಲಂ ।*
*ಧ್ಯಾತ್ವಾ ತದ್ಜ್ವಾಲಾಯಾಂ ರಮಾರೂಪ ಶ್ವೇತ ದ್ವೀಪೇ।*
*ರಮಾ ರೂಪ ದಿವ್ಯ ರತ್ನ ಮಯ ಮಂಟಪಂ।*
*ತನ್ಮಧ್ಯೇ ದಿವ್ಯ ರತ್ನ ಖಚಿತ ಸುವರ್ಣ ಮಯ ಮಂಟಪಂ ಧ್ಯಾತ್ವಾ।*
*ಷಟ್ಕೋಣೇಷು ದೇವಸ್ಯಾಗ್ರೇ ಅಗ್ನಿಂ ತದ್ದಕ್ಷಿಣೆ ಸೂರ್ಯ ಮಂಡಲಂ ।*
*ಸವ್ಯೇ ಸೋಮಾ ಸವ್ಯೇ ಶ್ರಿಯಂ। ದಕ್ಷಿಣೇ ಭೂಮಿಂ ಪೃಷ್ಠ ಭಾಗೇ ।*
*ದುರ್ಗಾ ಧ್ಯಾತ್ವಾ ತದುಪರಿ ಷಟ್ಕೋಣ ಭೂಮೌ ಅಷ್ಟದಳ ಪದ್ಮಂ ।*
*ರಮಾ ರೂಪಂ ಧ್ಯಾತ್ವಾ। ತತ್ರ ಪದ್ಮ ದಳೇ ಸೂರ್ಯಂ ಕೇಸರೇಷು।*
*ಸೋಮಂ ಕರ್ಣಿಕಾಯಾಂ ಹುತಾಶನಂ ಧ್ಯಾತ್ವಾ ಪ್ರತ್ಯೇಕಂ ಪದ್ಮಾಷ್ಟದಳೇಷು।*
*ಮಧ್ಯೇ ಕರ್ಣಿಕಾಯಾಂತ ವಿಮಲಾದಿ ಶಕ್ತೀ:। ಆತ್ಮಾದಿ ಸೋಪಾನ ಮೂರ್ತಿ: ।*
*ಧ್ಯಾತ್ವಾ ಕರ್ಣಿಕೋಪರಿ ತಮೋ ರಜಃ ಸತ್ವಮಿತಿ ಕ್ರಮೇಣ।*
*ತ್ರಿಗುಣಾಭಿಮಾನಿನೀಂ ಚಿತ್ರಾಸನ ರೂಪಾಂ ಲಕ್ಷ್ಮೀಂ ಧ್ಯಾತ್ವಾ ।*
*ಸ್ವರೂಪ ಹೃದಯೇ ಸ್ವರೂಪಾಂಗುಷ್ಠ ಪರಿಮಿತಂ ಸ್ಥೂಲ ಹೃದಯೇ।*
*ಸ್ಥೂಲಾಂಗುಷ್ಠ ಪರಿಮಿತಂ ಬಿಂಬ ಮೂರ್ತಿಂ ಧ್ಯಾಯೇತ್।*

ಎಂತ ಭಾವಪ್ರಕಾಶಿಕಾ

।ನಾಮ। "ಆ ಮಂಟಪದೊಳಗೆ ಹನ್ನೆರಡು ಮೂಲೆಗಳುಳ್ಳ ಭಾನು ಮಂಡಲದೊಳು ಬಿಟವಾಗಿಹುದು, ಸೋಮ ಮಂಡಲದೊಳು ತ್ರಿಕೋಣಾಗ್ನಿ ಮಂಡಲ ಭೂಮಿಧರ ಶೇಷ ಪರಿಯಂಕದಲಿ" ಎಂತ ಜಗನ್ನಾಥ ದಾಸರ ಶಿಷ್ಯ ವಚನವು. ಪ್ರಮಾಣ:- ದ್ವಿಸ್ತಾವದ(ಸ್ತು) ರವಿ ವೃತ್ತ ಶಶಿತ್ರಿಮಗ್ನೌ ಯಂತ ತಂತ್ರಸಾರ. ಎಂದರೆ ಆ ಮಂಟಪದೊಳಗೆ ವಿಸ್ತಾರವಾಗಿ ಚತುರಸ್ರ ನಾಲ್ಕು ಪಾದವುಳ್ಳ ಪೀಠ ಬಂದು ಅದರ ಮೇಲೆ ಚತುಷ್ಕೋಣಂತು ಪೀಠಂಸ್ಯಾತ್।

ಷಟ್ಕೋನಂ ತಸ್ಯ ಮಧ್ಯತಃ। ತನ್ಮಧ್ಯೇ ಅಷ್ಟದಳಂ ಪದ್ಮಂ ತತ್ರ ಪದ್ಮೇಶಮರ್ಚಯೇತ್। ಎಂತ ತಂತ್ರಸಾರ ಥಲಾರೀಯೋದಾಹೃತ ತಂತ್ರ ತಿಲಕ ಪ್ರಮಾಣ। ಈ ಚತುಷ್ಕೋಣದ ಮೇಲೆ ಆರು ಕೋಣೆಯ ಪೀಠ ಅದರ ಮೇಲೆ ಎಂಟುದಳದ ಲಕ್ಷ್ಮೀ ರೂಪ ಕಮಲವೊಂದು– ಈ ಅಷ್ಟದಳಕ್ಕೂ ಷಟ್ಕೋಣ ಪೀಠಕ್ಕೂ ಮಧ್ಯದಲ್ಲಿ ನಾಲ್ಕು ಭಾಗವು. ಚತುರಸ್ರ ವಜ್ರಮಯ ಮೂರು ಸೋಪಾನಗಳು. ಅದರ ಕೆಳಗಿನ ಷಟ್ಕೋಣ ಪೀಠಕ್ಕೇವೆ. ಇದರ ಕೋಣೆಗಳ ಮಧ್ಯೆ ಮಧ್ಯೆ ಒಂದೊಂದು ಕೋಣೆಗಳಾಗಿವೆ. ೧೨ ಮೂಲೆ ಉಳ್ಳ ಸೂರ್ಯ ಮಂಡಲವೆನಿಸಿಕೊಳ್ಳುತ್ತದೆ– ಅದರ ಮೇಲಿನ ಚತುರಸ್ರ ಮೂರು ಸೋಪಾನದ ಮೇಲಿನ ರಮಾರೂಪ ಕಮಲದ ಕೇಸರಿಗಳಲ್ಲಿ ವರ್ತುಳವಾದ ಚಂದ್ರ ಮಂಡಲವನ್ನು ಆ ಕಮಲ ಕರ್ಣೀಕೆಯ ಮೇಲೆ ತ್ರಿಕೋಣಾಗ್ನಿ ಮಂಡಲವನ್ನೂ ತಿಳಿಯತಕ್ಕದ್ದು. ಅದರ ಮೇಲೆ ಶ್ರೀ ಭೂ ದುರ್ಗಾ ರೂಪ ಚಿತ್ರಾಸನ ಅದರ ಮೇಲೆ ವಿಚಿತ್ರ ರತ್ನ ಖಚಿತ ಉಪಬರ್ಹಣ। ಮೇಲೆ ಕಟ್ಟು. ಅದರಲ್ಲಿ ಮಾಣಿಕ್ಯಾದಿಗಳಿಂದ ಹೆಣದು ಇರತಕ್ಕ ಮಲುಕುಗಳು. ಮನಮೂರ್ತಿ ಸುಳಾದಿ ವಚನವನ್ನು ಹಿಂದೆ ಬರೆದು ಇದೆ. ಇವುಗಳೆಲ್ಲಾ ಲಕ್ಷ್ಮೀ ರೂಪ. ಈ ಸ್ವಾಮಿಯ ಹಿಂಭಾಗ ಕಲ್ಪವೃಕ್ಷ. ಅಲ್ಲಿಯೇ ಕಾಮಧೇನು ಚಿಂತಾಮಣಿ ಇವು ಮೂರೂ ಪೀಠದ ಹಿಂದೆ ಸದಾ ಇರತಕ್ಕದ್ದು. ನಾಮ:– "ಆ ಮಂಟಪದೊಳಗೆ ಹನ್ನೆರಡು ಮೂಲೆಯುಳ್ಳ ಭಾನು ಮಂಡಲದೊಳು ಬಟುವಾಗಿಹ ಸೋಮ ಮಂಡಲದೊಳು ತ್ರಿಕೋಣಾಗ್ನಿ ಮಂಡಲ ಭೂಮಿ ಶೇಷ ಪರ್ಯಂಕದಲ್ಲಿ ಮುತ್ತು ರತ್ನಗಳಿಂದ ಧಟ್ಟಿತವಾದಾಸನ ವಿಚಿತ್ರ ರತ್ನ ಖಚಿತ ಉಪ ಬರ್ಹಣ ಉತ್ತಮ ಶ್ವೇತದ್ವೀಪಗತ ವಿಷ್ಣು ಅಲ್ಲಿಹನು. ನಿತ್ಯ ಪರಮಾತ್ಮನೆಂಬೋರು ಆತಗೆ." ಎಂತ ಜಗನ್ನಾಥದಾಸರ ಶಿಷ್ಯ ವಚನ। ಇಂತಹ ಸ್ವಾಮಿಗೆ ಎಡ ಭಾಗ ಶ್ರೀರೂಪ, ಬಲ ಭಾಗದಲ್ಲಿ ಭೂದೇವಿಯವರು ಹಿಂದಿನ ಭಾಗ ದುರ್ಗಾದೇವಿಯರು ಈ ಸ್ವಾಮಿಯ ತೊಡೆಯ ಮೇಲೆ ಪ್ರಾಣದೇವರನ್ನು ಕೂಡಿಸಿಕೊಂಡು ಇದ್ದಾನೆ. ಈ ಪ್ರಾಣದೇವರು ಪೂರ್ವದಲ್ಲಿ ಹೇಳಿದ ರೂಪವಲ್ಲ. ಅದು ಮೂರ್ತಿಗೆದುರಿಗೆ ನಿಂತು ಶ್ವಾಸ ಮಂತ್ರ ಜಪ ಮಾಡುತ್ತಾ ಇರತಕ್ಕದ್ದು. ಈ ಬಿಂಬ ಮೂರ್ತಿಯ ಕಮಲನಾಳವು ಹೃದಯ ಮಧ್ಯ ಬ್ರಹ್ಮನಾಡಿಯಿಂದ ಹುಟ್ಟಿ ಬ್ರಹ್ಮ ನಾಡಿಯ ಪೂರ್ವ ಭಾಗದ ಪ್ರಕಾಶಿನೀ ನಾಡಿಯನ್ನು ಕೂಡಾ ಧಾಟಿಕೊಂಡು ಪೂರ್ವಕ್ಕೆ ಬಂದು ಮುಂಭಾಗದ ಹೃದಯದ ಪರಿಯಂತದಲ್ಲಿಯೂ

ದಳ ವಿಶಾಲ ಹರಡಿ ಇರುವುದರಿಂದ ಈ ಈರಾಂಕಮೂರ್ತಿಯೇ ಎದುರಲ್ಲಿಪ್ಪೋ ಪ್ರಾಜ್ಞನೆಂಬುವ ರುದ್ರ ಎಂತ ಅರ್ಥವು. ಇದುವರೆವಿಗೆ ಬಲ ಭಾಗದ ಸನ್ನಿಧಿಯಲ್ಲಿ ಬ್ರಹ್ಮಾದಿ ನವಕೋಟಿ ದೇವತೆಗಳು ಅಂಜಲಿ ಬದ್ಧರಾಗಿ ನಿಂತು ಸೇವಿಸುತ್ತಾರೆ–ಎಡದ ಭಾಗ ಸನ್ನಿಧಿಯಲ್ಲಿ ಈ ದೇವತಾ ಸ್ತ್ರೀಯರುಗಳು ಸರ್ವರೂ ಕಾದು ಇದ್ದಾರೆ ಮತ್ತು ನೀಲಾ, ಭದ್ರ, ಮಿತ್ರವೃಂದಾ, ಕಾಳಿಂದಿ, ಜಾಂಬವತೀ, ಲಕ್ಷ್ಮಣಾ ಇವರುಗಳು ರಮಾ ಭೂದೇವರ ಕೆಳ ಭಾಗ ಕೂತು ಇದ್ದಾರೆ. ಆ ರಮಾರೂಪಾಷ್ಟದಳ ಕಮಲಗಳಲ್ಲಿ ವಿಮಲ ಉತ್ಕರ್ಷಿಣೀ ಜ್ಞಾನ ಕ್ರಿಯಾ ಯೋಗ ಪ್ರಹ್ವೀ ಸತ್ಯಾ ಈಶಾನಾ ಮಧ್ಯೆ ಆಸನರೂಪ ಅನುಗ್ರಹಾ– ಈ ಒಂಬತ್ತು ಪರಮಾತ್ಮನ ಸ್ತ್ರೀರೂಪಗಳು ಚಾಮರಧಾರಿಗಳು. ಇದೇ ಪ್ರಕಾರ ಲಕ್ಷ್ಮೀ ರೂಪಗಳು ಅದೇ ದಳಗಳಲ್ಲಿ ಮತ್ತು ಬ್ರಹ್ಮ ದೇವರ ಸ್ತ್ರೀ ರೂಪಗಳು ೯, ವಾಯುದೇವರ ಸ್ತ್ರೀ ರೂಪಗಳು ೯, ಶೇಷದೇವರ ಸ್ತ್ರೀ ರೂಪಗಳು ೯, ಗರುಡದೇವರ ಸ್ತ್ರೀ ರೂಪಗಳು ೯, ಪರಮಾತ್ಮನ ಸ್ತ್ರೀ ರೂಪಗಳ ಸಹಿತವಾಗಿ ಆರು ವಿಧ ಒಂದೊಂದರಲ್ಲಿ ಆರಾರು ಸ್ತ್ರೀ ರೂಪಗಳು ಆಗಿ ಸೇವಿಸುತ್ತಾರೆ. ಪ್ರಮಾಣ:–

*ಶ್ರಿಯಶ್ಚ ಬ್ರಹ್ಮಣೋ ವಾಯೋ ಶೇಷಸ್ಯ ಗರುಡಸ್ಯಚ ।*
*ವಿಮಲಾದಿ ನಾಮಕಾ ಜ್ಞೇಯಾಃ ಪ್ರತ್ಯೇಕಂ ನವ ಮೂರ್ತಯಃ ॥*

ಎಂತ ಭಾಗವತ ತಾತ್ಪರ್ಯವನ್ನು ಛಲಾರೀಯ ತಂತ್ರಸಾರ ಟಿಪ್ಪಣಿಯಲ್ಲಿ ಉದಾಹರಿಸಿ ಇದ್ದಾರೆ. ಪ್ರತ್ಯೇಕ ಪ್ರತ್ಯೇಕ ಬ್ರಹ್ಮಾದಿ ಸ್ತ್ರೀ ರೂಪಗಳ ಹೆಸರನ್ನು ಭಾಗವತ ತಾತ್ಪರ್ಯದಲ್ಲಿ ವಿಸ್ತರಿಸಿ ಇದ್ದಾರೆ. ಈ ಪ್ರಕಾರ ಪ್ರಥಮತಃ ಚತುಷ್ಕೋಣ ಪೀಠಪಾದ ದೇವತೆಗಳನ್ನು ಗರುಡದೇವರನ್ನು ಮೊದಲಾಗಿ ಪೀಠ ಪೂಜಾ ಪ್ರಕಾರ ಪೀಠ ದೇವತೆಗಳನ್ನು ಮತ್ತು ಆವರಣ ದೇವತೆಗಳನ್ನೂ ಪ್ರಥಮತಃ ಹೃದ್ದೋಲ್ಕದ್ಯಾವರಣ, ೨ ಕೇಶವಾದ್ಯಾವರಣ, ೩ ಸಂಕರ್ಷಣಾದ್ಯವರಣ, ೪ ಮತ್ಸ್ಯಾದ್ಯಾವರಣ, ೫ ಅನಂತಾದ್ಯಾವರಣ, ೬ ಶಂಖನಿಧಿ ಪದ್ಮನಿಧಿ ಮೊದಲಾದ ಸರ್ವನಿಧಿಗಳೇನು. ಆಯುಧಾಭಿಮಾನಿ ದೇವತಾವರಣ, ೭ ಎಂಟನೇದು ಇಂದ್ರಾದ್ಯಾವರಣ. ಒಂಬತ್ತನೇದು ಜಯವಿಜಯಾದ್ಯಾವರಣ. ಈ ನವಾವರಣ ಪರಿಯಂತ ಶತಸ್ತಂಭಯುಕ್ತ ರಥ ಪೀಠ ಚತಸ್ರವು ಮಹಾಮಂಟಪದ ಹೊರಗಿನಿಂದ ಪಾಂಗ್ತವಾಗಿ ಚಿಂತಿಸಿ

ಹೃದಯಕ್ಕೆ ಪ್ರಾಕಾರಗಳು ದ್ವಾರಗಳು ಈ ರಥಪೀಠದ ತನಕವೇ ಸರಿ ಚಿಂತಿಸಬೇಕು, ಶ್ರೀ ಹರಿಯ ದರ್ಶನಕ್ಕೆ ಪೂರ್ವದ್ವಾರದಿಂದ ಮನುಷ್ಯೋತ್ತಮರು ಬರುತ್ತಾರೆ. ದಕ್ಷಿಣದ್ವಾರದಿಂದ ಆರ್ಯಮಾದಿ ಪಿತೃ ದೇವತೆಗಳು ಬರುತ್ತಾರೆ. ಪಶ್ಚಿಮದ್ವಾರದಿಂದ ಗಂಧರ್ವರು ಬರುತ್ತಾರೆ. ಉತ್ತರದ್ವಾರದಿಂದ ವಶಿಷ್ಠಾದಿ ಮಹರ್ಷಿಗಳು ಬರುತ್ತಾರೆ. ಮೇಲೆ ಊರ್ಧ್ವದ್ವಾರದಿಂದ ಬ್ರಹ್ಮಾದಿ ಸಕಲ ದೇವತೆಗಳು ಬರುತ್ತಾರೆ. ಈ ಅರ್ಥವು ಮುಕ್ತಿತತ್ವ ಸಿದ್ಧವು. ಕಾಮಧೇನುವಿನಂತೆ ಕಲ್ಪತರುವೂ ಚಿಂತಾಮಣಿಯೂ ಕೂಡಾ ಮಧ್ಯಮಾಧಿಕಾರಿ ದೇವತಾ ಜೀವಗಳೇ ಹೊರತು ಜಡಗಳಲ್ಲ. ಆದುದರಿಂದ ಬ್ರಹ್ಮಾದಿಗಳಿಂದಲೂ ಸನಕಾದಿಗಳಿಂದಲೂ, ಊರ್ವಶ್ಯಾದಿಗಳಿಂದಲೂ, ಮತ್ತು ಸಕಲ ಮುಕ್ತರಿಂದಲೂ, ರಮಾದೇವಿಯರ ಬಹುರೂಪಗಳಿಂದಲೂ, ಸರ್ವದಾ ಅತಿಚಿತ್ರ ಸೇವೆಗಳಿಂದಲೂ ಸರ್ವದಾ ಜಯಜಯವೆಂದು ಹೊಗಳಿಸಿಕೊಂಡು, ಸರ್ವಸ್ವಾಮಿಯೇ ಮಮಸ್ವಾಮಿ ಎಂದು ಪ್ರಾರ್ಥನೆಯ ಪೂರ್ವಕ ಬಿಂಬ ಪೂಜಾವಿಧಿ ಪೂರ್ವಕ ಯಥಾಯೋಗ್ಯ ಯಥಾಶಕ್ತಿ ತಿಳಿದು ಉಪಾಸಕನಾಗಬೇಕು. ಹಾಗಾದರೆ – ಮಂಗಳಾ ಇಡಾ ಪಿಂಗಳಾ ಸುಷುಮ್ನಾ ಸಂಘ ಮಧ್ಯದಲ್ಲಿ! ತಿಂಗಲೆಂದೊಪ್ಪುವನನ್ನು ಧ್ಯಾನಿಸು ಎಂತಲೂ "ವಿಜಯವಿಠಲನಂಘ್ರಿಪದ್ಮ ಪೊಂದಬೇಕಾದರೆ ತಪೋಲೋಕ ಚಿಂತಿಸು." ಎಂತ ವಿರಾಟ್ ಧ್ಯಾನ ಸುಳಾದಿಯಿಂದಲೂ "ಆ ತೈಜಸನ ಕಂಡು ವಿಶ್ವ ಮೂರುತಿಯಲಿ ಪ್ರೀತಿಯುಳ್ಳವನಾಗಿ ಪಥಿಕರಿಸು ಮರುಳೆ" ಎಂಬ ನಾಮದಿಂದಲೂ, ಮತ್ತು ಇದೇ ಅರ್ಥಕ್ಕೆ ಶ್ರೀಮುಷ್ಣ ಹಯಗ್ರೀವ ದಂಡಕದಲ್ಲಿ "ಮನೋಜಂಜುಪೂಗುರ್ಭುವೋರಂತರೆತ್ವಾಂ, ಸಮಸ್ತಾಗಮಾನುದ್ಗಿದಂತಂ ಸಮಾಚೀಂತ್ಯ ತತ್ರೈವ ದೀರ್ಘಾನ್ವಿತಂ" ಎಂತ ಭ್ರೂಮಧ್ಯದಲ್ಲಿ ಮಾಡತಕ್ಕ ಮೂರ್ತಿಧ್ಯಾನಕ್ಕೆ ಪೂರ್ವದಲ್ಲಿ ಹೇಳಿದ ಕಮಲ ಸುಳಾದಿಯಲ್ಲಿ ಭ್ರೂಮಧ್ಯ ಪ್ರಕರಣದಲ್ಲಿ "ಉದಯ ಭಾಸ್ಕರನಂತೆ ಮನಕೆ ಮೆಚ್ಚಿ ಪೊಳೆವ" ಎಂದು ಹೇಳಿದ್ದಾರಾದುದರಿಂದ ಹೃದಯ ಸ್ಥಾನದಲ್ಲಿ ಬಿಂಬ ಮೂರ್ತಿಯ ಧ್ಯಾನವು, ಬಿಂಬಾಪರೋಕ್ಷವು ಅಸಂಗತವಾಗಲಿ ಎಂಬ ಆಕ್ಷೇಪಕ್ಕೆ ಸಮಾಧಾನವು.

*"ಬಿಂಬರೂಪೋಪಾಸನಂ ಚಕಾರ್ಯಂ ಸದ್ಭಕ್ತಿ ಪೂರ್ವಕಂ ।*
*ಸರ್ವೈಶ್ಚ ವಿಘ್ನಹಾನ್ಯರ್ಥಂ, ನೃಸಿಂಹಾದೇರುಪಾಸನಂ ।"*

ಎಂತ ಸತ್ತತ್ವರತ್ನಮಾಲಾ.

ಅಲ್ಪಾಧಿಕಾರಿಗಳಿಗೆ ಸ್ವಯೋಗ್ಯ ಸರ್ವ ಸಾಧನವದಗಬೇಕಾದರೆ ರೊಗಾದಿ ದುಃಖ ಪ್ರಾರಬ್ಧ ಉಪಹತಿಯಿಂದ ಮನಸ್ಸು ಉಪಾಸನೆಯಲ್ಲಿ ಎರಗದೆ ಧ್ಯಾನಾದಿ ನಿಷ್ಕಾಮ ಮಹಾ ಕರ್ಮಾನುಷ್ಠಾನ ಕೆಟ್ಟು ಭಗವದ್ಪ್ರಸಾದ ಪಡೆಯುವ ಯೋಗ್ಯತೆ ಕಡಿಮೆಯಾಗಿ "ಸ್ಮರಣಂ ಸರ್ವದಾಯೋಗ್ಯಂ" ಎಂಬ ಭಾಷ್ಯ ವಚನಕ್ಕೆ ಮಾತ್ರ ಇವನು ಪಾತ್ರನಾಗಿ ಸರ್ವದಾ ಹರಿ ಸ್ಮರಣೆ ಮಾತ್ರ ಮಾಡಿಕೊಂಡು ಪರಮ ದುರ್ಲಭವಾದ ಧ್ಯಾನೋಪಾಸನೆ ಇವನಿಗೆ ಬಹುದೂರವಾಗಿ ಆ ಮಹಿಮನ ಚರಣದಲ್ಲಿ ಒಂದು ತುಲಸೀ ದಳ, ಬಿಂದು ಉದಕವನ್ನಾದರೂ ಸಮರ್ಪಣೆ ಮಾಡಿದರೆ, ಛಿಂಧಿಸುವ ಘನ ರೋಗಾದಿ ದುಷ್ಕರ್ಮ ಪ್ರಾರಬ್ಧ ಕಲಿ ಬಾಧೆಗಳು ಪರಿಹಾರ ಮಾಡುವುದಕ್ಕಾಗಿಯೇ ಪರಮ ಕರುಣಾಳು ನರಸಿಂಹ- ವರಾಹ- ಹಯಗ್ರೀವ -ರಾಮ -ಕೃಷ್ಣ- ವ್ಯಾಸಾದಿ ಇಷ್ಟು ಮೂರ್ತಿಯ ಉಪಾಸನಾರ್ಥವಾಗಿ ಅನಂತಾವತಾರಗಳನ್ನೂ ಮತ್ತು ಸಾಲಿಗ್ರಾಮ ರೂಪಿಯೂ ಸ್ವಯಂ ವ್ಯಕ್ತ ರೂಪಿಯೂ, ಸುಳಾದಿ:- "ಉದಧಿ ಮೇಖಲದೊಳು ಅಪರೋಕ್ಷ ಬ್ರಾಹ್ಮಣ ಮಿಗಿಲದ ಚಂಡಾಲ ಜಾತಿಯರು ಮುಟ್ಟಿದರೆ ದೋಷವಿಲ್ಲ. ಸರ್ವಥಾ ಪವಿತ್ರಬುಧರಿಗಿದು ಸಂಮತ, ಅವ್ಯಕ್ತ ಭಗವಂತ ಸಾಲಿಗ್ರಾಮ ಮುಖ್ಯ ಸನ್ನಿಧಿಯಾಗಿಪ್ಪನೋ । ಲೋಕಪಾವನ ಕಾಣೋ । ಸಂದರುಶನದಿಂದ ಅಭಿದಾನ ಪ್ರಭೆದ ಅಧಮಾಧಿಕಾರರು ಇದರಲ್ಲಿ ಪ್ರತ್ಯಕ್ಷ ವದಗಿ ಕಾಂಬರು ಮತ್ತೆ। ಅನ್ಯತ್ರದಲಿ ಉಂಟು ಬದರೀ-ದ್ವಾರಕೀ ಮಾಯಾ- ಕಾಶೀ -ಪ್ರಯಾಗ, ಶ್ರೀಪದವೀ-ಗಯಾಕ್ಷೇತ್ರ-ಅಯೋಧ್ಯಾ-ಜಗನ್ನಾಥ-ಯದುಗಿರಿ ತೋತಾದ್ರಿ- ಶ್ರೀಮುಷ್ಣ- ಮನ್ನಾರು- ಪದುಮನಾಭಾನಂತ- ವೆಂಕಟಾಚಲ ಪುಣ್ಯ ಸನ್ನಿಧಿಯಲಿ ನೆಲೆಸಿಪ್ಪ ಪ್ರತಿಮೆ ಕ್ರಮದಿಂದ ವಿಧಿ ಶಂಭು ಮೊದಲಾದವರು। ಪೂಜಿಸುದರೇನೋ ಪದೋಪದೆಗೆ ಯಾತ್ರೆ ಮಾಡುತಾ ನೋಳ್ಪದು" ಎಂತ ಮಾನಸ ಪೂಜಾ ಮಾಡು ಎಂಬ ಸುಳಾದಿ. "ಸ್ತುತಿ-ಕೀರ್ತನ- ಪ್ರಣತಿಭಿರ್ವಿಮುಕ್ತಯೇ ಸ್ವಜನಸ್ಯ ಯಾತ್ಯಯಮನೇಕ ರೂಪತಾಂ" ಎಂತ ಮಧ್ವ ವಿಜಯ ಮೊದಲಾದ ಗ್ರಂಥಗಳಿಂದಲೂ ವೆಂಕಟೇಶ ಪಾಂಡುರಂಗ ಮೊದಲಾದ ಅವತಾರ ರೂಪೋಪಾಸನೆಯಿಂದಲೇ ಪ್ರಾರಬ್ಧ ದುಷ್ಕರ್ಮ ಕಳೆದು ಇವನು ಜೀವನ್ಮುಕ್ತನಾಗುವುದೇ ನಿಶ್ಚಯವು. ನೃಸಿಂಹಾದಿಕಮನ್ಯಚ್ಚ ದುರಿತಾನಿ ನಿಕೃಂತಯೇ ॥ ಎಂತ ಭಾಷ್ಯ ವಚನ. "ಕೇಷಾಂಚಿದ್ಬಹಿರೇವಾಸ್ತ್ರಾ ಉಪಾಸ್ಯಃ

ಪುರುಷೋತ್ತಮಃ'' ಎಂತ ಭಾಷ್ಯ ವಚನದಿಂದಲೂ ನಾವು ಬಹಿರುಪಾಸಕೇ ನಿಶ್ಚಯವು ಎಂಬುವುದಕ್ಕೆ ನಮ್ಮ ಪ್ರಾರಬ್ಧ ದುಷ್ಕರ್ಮವೇ ಜ್ಞಾಪಕ ಎಂತ ಅರ್ಥವು. "ಹೃದಯೇ ಅಗ್ನೌ ಪ್ರತಿಮಾದೌ ಯೇ ಪಶ್ಯಂತಿ ತೇ ಸರ್ವೇ ಪ್ರತೀಕಾಲಂಬನಾ ಏವ. ಎಂತ ಹೇಳಿದ್ದಾರಾದ್ದರಿಂದ ಒಂದು ವೇಳೆ ನಾವು ಮಾನಸೋಪಾಸನೆ ಬಿಟ್ಟಾಗ್ಯೂ ಬಹಿವ್ರತ ಉಪಾಸನೆ ಬಿಡಕೂಡದು ಎಂತ ಸಿದ್ಧವು. ಹಾಗಾದರೆ ಅಂತರೋಪಾಸನೆಯನ್ನು ನಿಶ್ಶೇಷವಾಗಿ ಬಿಡಬಹುದಷ್ಟೆ ಎಂದರೆ "ಹೃದಿ ಕಿಂಚಿದುಪಾಸ್ಯೇನ ವಿಷ್ಣುಂ ಮುಕ್ತಿಮನವ್ರಜೇತ್'' ಎಂತ ಸ್ವಲ್ಪವಾದಾಗ್ಯೂ ಅಂತರುಪಾಸನೆ ಮಾಡದೇ ತೀರದು ಎಂತ ಹೇಳಿಯಿದ್ದಾರೆ. ಸತ್ತತ್ವರತ್ನಮಾಲಾ ಟಿಪ್ಪಣಿಯಲ್ಲಿ "ಸರ್ವ ಸಾಧಾರಣೋಪಾಸ್ತ್ಯನಂತರಂ ನಸಾಮಾನ್ಯಾದಿತಿ ಸೂತ್ರಾಭಿಪ್ರೇತ ಮಾಹ- ಬಿಂಬೇತಿ ॥ ತಥಾಹಿ ನ್ಯಾಯವಿವರಣೆ ಸರ್ಮೋಹಿ ಭಗವಾನ್ ಸ್ವಬಿಂಬದರ್ಶನೇನ್ಯೈವ ಏನಂ ಜೀವಂ ಮೋಚಯತೀತಿ। ಬೃಹದ್ಭಾಷ್ಯೇಚ.'' ಏಷಾಂ ಬಹಿರುಪಾಸನೇನ ಮೋಕ್ಷಸ್ತೇಷಾಮಪಿ ಹೃದ್ಯುಪಾಸನಂ ಕಿಂಚಿತ್ಕಾರ್ಯಮೇವೇತಿ ॥ ನನು ಏಷಾಂತಃ ಪ್ರಕಾಶಾ ಅಂತರ್ದೃಷ್ಟಯೋ ಬಹಿ ದೃಷ್ಟವ್ಯಃ। ಸರ್ವದೃಷ್ಟಯಃ ಇತ್ಯುಪಾಸನಾ ತ್ರೈವಿಧ್ಯಾತ್- "ಅಗ್ನೌ ಕ್ರಿಯಾವತಾಮಿತ್ಯಾದೌ ಬಹಿರುಪಾಸ್ತ್ಯಾದಿ ಭಾವೋಕ್ತೇಃ ಸರ್ವ ಸಾಧಾರಣ್ಯೇನ ಬಿಂಬೋಪಾಸನಾ ನಿಯಮೆ ತದ್ವಿರೋಧ ಇತಿ ಚೇತ್ ಉಚ್ಯತೇ॥ ಅಪ್ರತೀಕಾಲಂಬನ ಋಷಿ ಕರ್ಮ ಯೋಗ ಪ್ರಬುದ್ಧಾದಿ ತತ್ತಧಿಕಾರಿಣಾಂ ಸರ್ವತ್ರಾಗ್ನೌ ಪ್ರತಿಮಾದೌ ಚ ಉಪಾಸನಾ ಪ್ರಾಚುರ್ಯಸ್ಯ ಕರ್ಮಕ್ಷಯ ರೂಪ ಫಲ ಸಾಧನಸ್ಯೈವ ವಿವಕ್ಷಿತತ್ವಾತ್ । ಬಿಂಬೋಪಾಸನಸ್ಯ ಲಿಂಗಶರೀರ ಭಂಗಾ ಸಾಧಾರಣ ಭೂತಸ್ಯ ಕಾದಾಚಿತ್ಕಸ್ಯ ನ ಪ್ರಾಚುರ್ಯಮಿತಿ.। ಪ್ರಾಚುರ್ಯಾಭಿಪ್ರಾಯಕತ್ವೇನ ಉದಾಹೃತ ವಚನಾನಾಂ ವಿರೋಧ ಇತಿ। ಅತ ಏವ ಬೃಹದ್ಭಾಷ್ಯೇ ಕಿಂಚಿಚ್ಛಬ್ದಃ । ಹೃದಿ ಕಿಂಚಿದುಪಾಸಸ್ಯೈವ ವಿಷ್ಣುಂ ಮುಕ್ತಿಮನುವ್ರಜೇದಿತಿ ಚ। ತತ್ವಪ್ರದೀಕಾಯಾಂ ಚ ಸರ್ವಾಧಿಕಾರಿ ಸಾಧಾರಣ್ಯೇನ ಬಿಂಬಮೇವ ಆವಶ್ಯಂ ಇತ್ಯುಕ್ತಂ'' ಎಂತ ಸಾಧನ ಪ್ರಕರಣ ಸಿದ್ಧವು. ಆದುದರಿಂದ ಸರ್ವರಿಗೂ ಬಿಂಬೋಪಾಸನೆಯು ಮುಖ್ಯವಾದಾಗ್ಯೂ ಪ್ರಾರಬ್ಧ ದುಷ್ಕರ್ಮ ಕ್ಷಯಾರ್ಥವಾಗಿ ನೃಸಿಂಹಾದಿ ಮೂರ್ತ್ಯುಪಾಸನೆ ಮಾಡದೇ ತೀರದಾದುದರಿಂದ, ಇಂತಹ ಸಾಮಾನ್ಯ ಮೂರ್ತ್ಯುಪಾಸನೆಗೆ ಭೂಮಧ್ಯ ಸ್ಥಾನವೇ ಸರಿ.

"ಮೋಚಕಾಪರೋಕ್ಷ ದ್ವಾರಾ ಭೂತಾವತಾರಾ ಪರೋಕ್ಷ ಸಿದ್ಧ್ಯರ್ಥಂ ಬಹಿರುಪಾಸನಾ ।" ಎಂತ ಭಾಷ್ಯದೀಪಿಕಾಕಾರರ ವಚನ. ಅಷ್ಟಮಹಾಮಂತ್ರ ಮೊದಲಾದ ಸರ್ವ ಮಂತ್ರಮೂರ್ತಿಗಳಿಗೂ ಭ್ರೂಮಧ್ಯ ಸ್ಥಾನವಾದ ಪ್ರಯುಕ್ತ ಎರಡು ಸ್ಥಾನಗಳಲ್ಲಿಯೂ ಮನಮೂರ್ತಿಗಳನ್ನು ಚಿಂತಿಸಬೇಕೆಂತ ಭಾವವು. ಈ ಮನಮೂರ್ತಿಯು ಅಂತಃ ಸನ್ನಿಧಿಮೂರ್ತಿಯಂತ ಹೇಳಿಸಿಕೊಳ್ಳುತ್ತದೆ. ಪ್ರಮಾಣ:-

*"ಅಂತರಃ ಸನ್ನಿಧಿರ್ವಿಷ್ಣೋಃ ಭಾಹ್ಯಸನ್ನಿಧಿರೇವಚ।*
*ದ್ವಿವಿಧಃ ಸನ್ನಿಧಿ ಪ್ರೋಕ್ತಃ ಪ್ರತಿಮಾ ಬಾಹ್ಯ ಉಚ್ಯತೇ"*
*ಸ್ವಾಭಾವಿಕಃ ಸ್ವಾಂತರಃಸ್ಯಾತ್ಪ್ರತಿಮಾ ಜೀವಗೋ ಯಥ ।ಇತಿ ಚ।*
*ತದ್ವಿದಾಮೇವ ನ ತಿರ್ಯಗಾದೀನಾಂ"*

ಎಂತ ಏಕಾದಶ ತಾತ್ಪರ್ಯವು.

ಬಿಂಬೋಪಾಸಕನ ಲಕ್ಷಣ ಏನೆಂದರೆ- ತೃಣ ಜೀವ ಪ್ರಾರಂಭಿಸಿ ಬ್ರಹ್ಮದೇವರ ತನಕ ಸಕಲ ಸ್ವಾಧಮರ ಬಿಂಬ ಸನ್ನಿಧಾನವು ಸಕಲ ಸ್ವೋತ್ತಮರ ಬಿಂಬಗಳಲ್ಲಿಯೂ, ಉಂಟಾದ ಪ್ರಯುಕ್ತ ಸ್ವಾಧಮರ ಬಿಂಬಗಳಲ್ಲಿ ಸ್ವೋತ್ತಮರ ಬಿಂಬ ಸನ್ನಿಧಿ ಇಲ್ಲದೇ ಇದ್ದ ಪ್ರಯುಕ್ತ ಸರ್ವ ಸ್ವೋತ್ತಮರ ಸೇವೆಯಿಂದ- ಸುಳಾದಿ:-ತಮ್ಮ ತಮ್ಮ ಸ್ಥಾನದಲ್ಲಿ ತಮ್ಮ ತಮ್ಮ ಬಿಂಬವನ್ನು ಶಮ ದಮ ನಿಷ್ಠೆಯಿಂದ ಭಜನೆ ಮಾಳ್ಪರು. ಉತ್ತಮ ಸ್ಥಾನದಲ್ಲಿ ಇದ್ದ ಪರಮಾತ್ಮ ನಿತ್ಯ ಮಮತೆಯ ತೊರೆದು ಜ್ಯೋತಿಯಂದದಿ ಆಹ ಎಂತ ಜೀವ ಸಚ್ಚಿದಾನಂದ ಸುಳಾದಿ. ಸ್ವಯೋಗ್ಯತೆ ಸಾಧಕ ಬಿಂಬ ಸನ್ನಿಧಾನ ಅಭಿವೃದ್ಧಿ ಆಗುವುದಕ್ಕೆ ತನ್ನ ಬಿಂಬಾಂಶ ಸ್ವೋತ್ತಮರಲ್ಲಿಯೂ, ಸ್ವಸಮರಲ್ಲಿಯೂ ಇದ್ದ ಹೊರತು ಸರ್ವಥಾ ವಂದನಾದಿಗಳು ಮಾಡಕೂಡದು. ವೆಂಕಟಾದ್ರಿ ಮೊದಲಾದ ಮೂರ್ತಿದರ್ಶನದಲ್ಲಿಯೂ ತನ್ನ ಬಿಂಬಾಂಶವನ್ನು ತೆಗೆದು ಶ್ರೀನಿವಾಸನಲ್ಲಿ ಇಟ್ಟು ಆ ದರ್ಶನಾ ನಂತರ ಯುಥಾ ಪ್ರಕಾರ ತನ್ನಲ್ಲಿ ಕೂಡಿಸಿಕೊಂಬೋದರಿಂದಲೇ ಇವನಲ್ಲಿ ಬಿಂಬ ಸನ್ನಿಧಾನಾಧಿಕ್ಯವು. ಮತ್ತು ನಿಷ್ಕಾಮಕರ್ಮಾನುಷ್ಠಾನದಿಂದಲೂ ಮತ್ತು ಶೂದ್ರಾದಿಗಳಿಂದ ಪ್ರತಿಷ್ಠಿತ ಅಂದರೆ ಶೂದ್ರನು ಬ್ರಾಹ್ಮಣರಿಂದ ಪ್ರತಿಷ್ಠೆ ಮಾಡಿಸಿದಾಗ್ಯೂ ಆ ಮೂರ್ತಿಗೆ ಬ್ರಾಹ್ಮಣನು

ಹಸ್ತ ಮುಗಿಯೋಣ ಮಾತ್ರದಿಂದ ಯಮದೇವರು ಹಸ್ತಗಳನ್ನು ಛೇದಿಸಿ ಶಿಕ್ಷಿಸುತ್ತಾರೆ. ಆದುದರಿಂದ ಅದು ರಾಮ ಕೃಷ್ಣಾದಿ ಮೂರ್ತಿಗಳಾದರೂ ರಾಮ ಕೃಷ್ಣಾದಿ ಶಬ್ದವಾಚ್ಯರಾಗಿ ಕಲ್ಯಾದಿ ದೈತ್ಯರುಗಳೇ ಪ್ರತಿಮೆಗಳಲ್ಲಿ ಕೂತು ಪೂಜಿಸಿಕೊಳ್ಳುತ್ತಾರೆ. – ಎಂತ ಗರುಡ ಪುರಾಣ ಬ್ರಹ್ಮಕಾಂಡ. ಆದುದರಿಂದ ನೀಚಾಧಿಷ್ಠಾನಗಳಲ್ಲಿ ದರ್ಶನವನ್ನು ಬಿಟ್ಟುಉತ್ತಮಾಧಿಷ್ಠಾನಗಳಲ್ಲಿ ಸೇವೆ ಬಿಡದೇ ಇರತಕ್ಕ ಕರ್ಮ ದೀಕ್ಷೆಯಿಂದಲೇ ಅಪರೋಕ್ಷ ಸಾಧಿಸತಕ್ಕದ್ದು. ಪ್ರಮಾಣ:–

*"ಸಾಲಿಗ್ರಾಮೇ ವಿಶೇಷೋಸ್ತಿ ಸ್ವಯಂ ವ್ಯಕ್ತ ತಥೈವಚ ॥*
*ಬಿಂಬಮೂರ್ತ್ಯಾಸಹೈಕ್ಯೇನ ತತ್ರಸ್ಥಂ ಭಾವಯೇದ್ಧರಿಂ॥ "*
*ಎಂತ ಟೀಕಾಚಾರ್ಯಕೃತ ಪದ್ಯಮಾಲಾ.*

ಸುಳಾದಿ:– ಶ್ರೀ ವೆಂಕಟೇಶದೇವರ ದರ್ಶನ ಪದ್ಧತಿ ಸುಳಾದಿಯಲ್ಲಿ "ಮೂರೊಂದು ಬೀದಿಯನು ಬಳಸಿ ವೆಂಕಟನ ಮಹಾದ್ವಾರವನ್ನೆ ಪೊಕ್ಕು ಗರುಡಗಂಭದ ಬಳಿಯ ಪಾರಮಾರ್ಥಿಕವಾಗಿ ಕುಳಿತು ವಿಚಾರಿಸಿ ಹರಿ ಮಹಿಮೆ ಭಂಗಾರ ಬಾಗಿಲನೆ ಪ್ರವೇಶವನ್ನೆ ಮಾಡಿ ನಾರಾಯಣನೇ ಸರ್ವವ್ಯಾಪ್ತನೆಂದು ಆಕಣಿಕವ ಗ್ರಹಿಸಿ ಗೋಳಕ ಚಿಂತಿಸಿ ಗಾರುಗೆಡದೆ, ನಿನ್ನ ಒಳಗಿಪ್ಪ ಮೂರ್ತಿಯ ಇಪ್ಪು' ಎಂತ ಹೇಳಿದ್ದಾರಾದುದರಿಂದ ಸರ್ವತ್ರ ದರ್ಶನ ಕ್ರಮವು ಹೀಗೆಯೇ ಸರಿ. ಎನ್ನ ಬಿಂಬನೆ ಸರ್ವಾಕಾರನೆಂದು ಚಿಂತಿಸೋಣವೇ ಬಿಂಬೋಪಾಸನೆಯ ಲಕ್ಷಣವು. – "ಪಂಚಭೂತಾತ್ಮಕತ್ವೇನ ಸಮತಾ ಸರ್ವ ವಸ್ತುಷು। ಹರಿ ಸನ್ನಿಧಿ ವೈಶೇಷ್ಯಾದ್ವಿಶೇಷಸ್ತು ಮಹಾನ್ ಸದಾ ॥ಎಂತ ಭಾಗವತ ತಾತ್ಪರ್ಯದಿಂದ, ತತ್ವಾಭಿಮಾನಿಗಳಂತೆ ಘಟ ಪಟಾದಿಗಳಾಲಿಯೂ ಶ್ವಾನ ಸೂಕರಾದಿಗಳಲ್ಲಿಯೂ ಸನ್ನಿಧಾನವಿಲ್ಲದ ಭಗವಂತನನ್ನು ನಮಸ್ಕಾರ ಮಾಡುವವನೇ ತಮೋ ಯೋಗ್ಯನು." ಅಪ್ರತಿಷ್ಟಿತ ಬಿಂಬಸ್ಯ ಪೂಜನಂ ಸಿದ್ಧಿ ಹಾನಿಕೃತ್। ಎಂತ ತಂತ್ರಸಾರ ಛಲಾರಿ ಟಿಪ್ಪಣಿ. ತಿರ್ಯಗ್ಜಂತುಗಳಲ್ಲಿ ಕಣ್ಣಿನಿಂದ ಮಾತ್ರ ನೋಡಿ ಸದಾ ಚಿಂತಿಸತಕ್ಕ ಭಗವದ್ರೂಪವೇ ಹೊರ್ತು ಸನ್ನಿಧಿಮೂರ್ತಿ ಅಲ್ಲವಾದುದರಿಂದ ನಮಸ್ಕಾರ ಕೂಡದು ಎಂಬುದಕೆ "ಅಂತರ ಸನ್ನಿಧಿರ್ವಿಷ್ಣೋ" ಎಂತ ಭಾಗವತ ತಾತ್ಪರ್ಯದಲ್ಲಿಯೂ ಸನ್ನಿಧಿ ಮೂರ್ತಿಯು ಶ್ವಾನಾದಿ

ತಿರ್ಯಗ್ಜಂತುಗಳಲ್ಲಿ ಸರ್ವಥಾ ಇಲ್ಲದಿದ್ದ ಪ್ರಯುಕ್ತವಾದಾಗ್ಯೂ ತತ್ರ ತತ್ರ ಸ್ಥಿತಸ್ತತ್ತಚ್ಛಬ್ಧೈರ್ವಾಚ್ಯಃ ಸಮುಖ್ಯತಃ ।ತತ್ತದಾಕಾರ- ಯುಕ್ತಶಃ ಸೌಂದರ್ಯಾದ್ಯವಿರೋಧತಃ । ಎಂತ ಸತತ್ತ್ವರತ್ನಮಾಲಾ.

## ನಾರಾಯಣ ಪ್ರಕರಣ

ಅಂದರೆ, ಘಟದಲ್ಲಿ ಘಟಾಕಾರ ಭಗವದ್ರೂಪಕ್ಕೆ ಅವಿರೋಧದಿಂದ ದಿವ್ಯ ಸುಂದರ ಕರ ಚರಣಾದಿ ಭಗವದ್ರೂಪವನ್ನು ಕಂಡು ದೇವತೆಗಳು ಶ್ರೀ ಹರಿಯಂತೆ ತತ್ತತ್ಪದಾರ್ಥಾಕಾರವಾಗಿ ಇರತಕ್ಕವರಾದುದರಿಂದ, ತಾತ್ವಿಕರೇನೇ ಶ್ವಾನ ಸೂಕರಾದಿಗತ ಭಗವದ್ವಂದನಾದಿಗಳಿಂದಲೂ ವ್ಯಾಪ್ತ್ಯೋಪಾಸಕರೆನಿಸಿಕೊಂಡರು. "ಜಾಯಾನಪಿ ಕನೀಯಾಂಸಂ ಸಂಧ್ಯಾಕಾಲೇ ಅಭಿವಾದಯೇತ್ । ವಿನಾ ಪುತ್ರಂಚ ಶಿಷ್ಯಂಚ ದೌಹಿತ್ರಂ ದುಹಿತುಃ ಪತಿಂ ।ಎಂತ ಜ್ಞಾನಿಗಳಿಂದಲೂ ಕೂಡ ಬ್ರಹ್ಮಚಾರಿಗಳು ನಮಸ್ಕರಿಸಿಕೊಳ್ಳತಕ್ಕವರೇ ಸರಿ" ವಿನಾ ಪ್ರಣಾಮಂ ಪೂಜ್ಯಾಸ್ತು ವರ್ಣಹೀನೋ ಗುಣಾಧಿಕಃ । ಎಂತ ತಾತ್ಪರ್ಯ ನಿರ್ಣಯ ೨೯ನೇ ಅಧ್ಯಾಯ. ಹೀಗೆ ಸರ್ವಾಂತರ್ಯಾಮಿಯ ಉಪಾಸನೆಯು ನಿಬಂಧನವೇ ಹರಿವಾಯುಗಳ ಆಜ್ಞಾರೂಪ. ವಿಧಿ ನಿಷೇಧಾತ್ಮಕವಾಗಿ ಅದೆ. ಎಂತ ಅರ್ಥ ಸುಳಾದಿ. ಕೆಲವು ಕಣ್ಣಿನಿಂದ ಹಸ್ತ ಶ್ರವಣದಿಂದ ಗಾತ್ರದಿಂದ ಕೆಲವು ಮನಸ್ಸಿನಿಂದ ತೃಪ್ತಿಯ ಪಡಿಸಿ ಕೆಲ ಕಾಲ ಕಾಲಗುಣಿಸು ವಂದನಾದಿ ಕರ್ಮ" ಎಂಬ ಸುಳಾದಿಯು. ಅದೇ ಸುಳಾದಿಯಲ್ಲಿ ದಾನವಾರಿ ಆನಂದತೀರ್ಥರ ವಾಕ್ಯ ಸಿದ್ಧ. " ಮಾನವ ಮನೆಗಳಿಗೆ ಅರ್ಚನೆಗೆ ಯೋಗ್ಯವಾದ ಮೇಣು ಶಾಸ್ತ್ರೋಕ್ತಿಯಲ್ಲಿ ಪೇಳಿದ ಪ್ರತೀಕ ಎಂತ ಬಾಹ್ಯೋಪಾಸನೆ ಮಾಡದೇ ತೀರದು. ಎಂತ ತಾತ್ಪರ್ಯವು.

ತಮೋಯೋಗ್ಯರ ಬಿಂಬವನ್ನು ಮುಕ್ತಿಯೋಗ್ಯರು ಹೇಗೆ ಉಪಾಸನೆ ಮಾಡಬೇಕೆಂದರೆ- ಸುಳಾದಿ:- "ಹರಿ ಹರಿದಾಸರ ವೇದ ಪ್ರಮಾಣ ನಿರುತ ನಿಂದೆಯು ಮಾಳ್ಪ ಅಧಮರ ನೋಡಿ ಪರಿ ಪರಿಬಗೆಯಲಿ ನಿಂದೆ ಮಾಳ್ಪುವದೊಂದೆ ಪರಮ ಭಕುತನಿಗೆ ಇದೆ ಮಹಾಸಂಪೂಜೆ। ಕರಣ ಶುದ್ಧಿಯಲಿ ಉತ್ತಮರ ದಿವ್ಯ ಚರಣವನ್ನು ನೋಡಿ ಧರಣಿಯೊಳಗೆ ಇದೆ ಪರಿಶುಭ

ಸಂಪೂಜೆ'' ಎಂತ ದೂಷಣೆಯೇ ಪೂಜೆ ಎಂತಲೂ ಭಕ್ತರ ಸ್ತುತಿ ಒಂದು ಎಂತಲೂ ಐದು ಪ್ರಕಾರ ಪೂಜಾ ವಿವರ. ಬ್ರಹ್ಮಾಂಡಾದಿ ಜಡಗಳು ಈಶ ಸೃಷ್ಟವಷ್ಟೆ- ಅಲ್ಲಿ ತದಾಕಾರ ಮೂರ್ತಿಯನ್ನು ನೋಡೋಣವೇ ಪೂಜೆ ॥೧॥ ಕ್ರಿಮಿ ಕೀಟ ಗಜ ತುರಗಾದಿಗಳಲ್ಲಿ ಭೂತದಯವೇ ಪೂಜೆ ॥ ದಯಾಪಾತ್ರರಾದ ಅನ್ನಾಕಾಂಕ್ಷಿ ನೀಚ ಜಾತಿಯವರಿಗೂ ಅನ್ನ ದಾನವೇ ಪೂಜೆ. । ಜ್ಞಾನಿಗಳ ಪೂಜೆಯೇ ಮಹಾ ಪೂಜೆ॥ ಸಜ್ಜನ ಸೇರೆ ನೀಚ ನಿಂದೆಗಳ ಬಿಟ್ಟವರೆ- ಮುಂದಿನ ಮಾತು ಎರಡರ ವಿಹಿತ. "ಎಂತ ಸರ್ವೋಪಸ್ಕರ ತಂದು ಪೂಜಿಸಿದಾಗ್ಯೂ ಅದು ಸಂಪೂಜೆಯಲ್ಲ'' ಎಂತ ಸಂಪೂಜಾ ಸುಳಾದಿ. ಇದರಲ್ಲಿಯೂನೂ ಕಣ್ಣಿಂದ ನೋಡತಕ್ಕ ಭಗವದ್ರೂಪಗಳನ್ನು ವಂದನಾರ್ಹವನ್ನು ಅತಿ ವಿಸ್ತಾರದಿಂದ ಹೇಳಿದ್ದಾರೆ. ಸ್ವೋತ್ತಮರ ಭಜನೆ ಹೇಗೆ ತಾರಕವೋ ಹಾಗೆ ಕಲಿ ನಿಂದೆ ತಾರಕವಷ್ಟೆ. ಇಲ್ಲಿ ಆಕ್ಷೇಪ:-

ಕಲಿಯೇ ಮೊದಲಾದಖಿಲ ದಾನವರೋಳಗೆ ಬ್ರಹ್ಮ ಭವಾದಿ ದೇವಕ್ಕಿಗಳು ನಿಯಾಮಕರಾಗಿ ಹರಿರಾಜ್ಞೆಯಲ್ಲಿ ಅವರವರ ಕಲುಷ ಕರ್ಮವ ಮಾಡಿ ಮಾಡಿಸಿ ಜಲರುಹೇಕ್ಷಣನಿಗರ್ಪಿಸುತ ನಿಶ್ಚಲ ಭಕುತಿ ಜ್ಞಾನ ಪೂರ್ಣರು ಸುಖಿಪರವರೊಳಗೆ ॥ ೧॥ ಆವ ಜೀವರೋಳು ಇದ್ದರಿನ್ನೇನಾವ ಕರ್ಮಗಳ ಮಾಡಲಿನ್ನೇ । ನಾವಗುಣರೂಪಗಳು ವಾಸನೆ ಮಾಡಲೇನವರು । ಕಾಮನಯ್ಯನ ಪರಮ ಕರುಣಾವಲೋಕ ಬಲದಿ ಚರಿಸುವ। ದೇವತೆಗಳನು ಮುಟ್ಟಲಾಪವೆ ಪಾಪ ಕರ್ಮಗಳು.

ಎಂತ ಹರಿ ಕಥಾಮೃತಸಾರದಲ್ಲಿ ಕರ್ಮ ದೀಕ್ಷೆಯನ್ನು ಕಿತ್ತುವಗದು ಇದ್ದಾರಲ್ಲ ಎಂದರೆ ಸಮಾಧಾನ-

ಹಿಂದಿನ ಪ್ರಕರಣದಲ್ಲಿಯೇ ಸಮಾಧಾನವನ್ನು ಹೇಳಿದ ಪ್ರಕಾರ ಕೆಂಡಕ್ಕೆ ಇರುವೆ ಮುತ್ತದೆ ಹೋದಾಕ್ಷಣ ಆದಕ್ಕೆ ಆಜ್ಯವನ್ನಾಗಲೀ ಶುಷ್ಕವನ್ನಾಗಲೀ ಹಾಕದೆ ಸುಮ್ಮನೆ ಜ್ವಾಲೆ ಆಗದು. ಆದುದರಿಂದ ಬಿಂಬಾಪರೋಕ್ಷವೆಂಬ ಅಗ್ನಿ ಜ್ವಾಲೆಗೆ ಬೀಸಣಿಕೆ ಗಾಳಿ ಎಂಬ ಕರ್ಮ ದೀಕ್ಷೆ ಇಲ್ಲದವನು ಗುರು ದ್ರೋಹಿ ಎಂತ ಅರ್ಥವು. - ಈ ಕಳ್ಳ ತನ್ನ ಭಕುತಿಗೆ ಬಲಿಯುವುದಿಲ್ಲ ಎಂತ ಭಾವವು. ಆದುದರಿಂದ ಘೋರ ತಮಸ್ಸು ಇವಗಾವುದು.'' ಎಂಬ

ವಿಜಯರಾಯರ ಉಕ್ತಿಯನ್ನು ಹಿಂದಿನ ಪ್ರಕರಣದಲ್ಲಿ ತೋರಿಸಿ ಇದ್ದೇನೆ. ಋಜು ಪ್ರಕರಣ ಸುಳಾದಿಯಲ್ಲಿ "ವಿಧಿ ನಿಷೇಧ ಕರ್ಮ ಇವರಿಗಿಲ್ಲವೋ" ಎಂತ ಋಜುಗಳಿಗೆ ಮಾತ್ರ ಹೇಳಿದ ಪ್ರಯುಕ್ತ ಮಿಕ್ಕ ದೇವತೆಗಳು ಅಪ್ರತೀಕಾಲಂಬನರಾಗಿ ಅನಿಯತರಾದ ಪ್ರಯುಕ್ತ ಕರ್ಮಗಳನ್ನು ಮಾಡುವುದು ಉಂಟು. ಬಿಡುವುದೂ ಉಂಟು. ಪ್ರತೀಕಾಲಂಬನರಿಂದ ಅಧಮಾಧಿಕಾರಿಗಳು ಮುಕ್ತಿಯಲ್ಲಿಯೂ ಕರ್ಮವನ್ನು ಮಾಡತಕ್ಕವರಾದುದರಿಂದ ಸಂಪೂಜಾ ಸುಳಾದಿಯಲ್ಲಿ "ವಿಧಿ ನಿಷೇಧ ಕರ್ಮ ತಿಳಿದು ವೈಷ್ಣವ ಜ್ಞಾನ ಮುದ ಭಕ್ತಿಯಿಂದ ಸಂತತ ಇಪ್ಪ ಮಾನವನ ಮಧುರಾನ್ನ ಮಿಗಿಲಾದ ಉಪಚಾರದಿಂದಲಿ ಪದೋಪದಿಗೆ ಪೂಜೆ ಮಾಡಿದರಾಗಿದ್ದು ತದಾಕರ ಪೂಜೆ– ಇದೇ ಮಹಾ ಪೂಜೆ ಎಂತ ತೋರಿಸಿ ಇದ್ದಾರೆ. ನೀಚಾಧಿಷ್ಠಾನದಲ್ಲಿ ಹರಿಯ ಪೂಜಿಸಿದರು ಯೋಜಿಸು ವಿಜಯ ವಿಠಲನ್ನ ಸ್ವೋತ್ತಮರಲ್ಲಿ ಎಂತ ಜ್ಞಾನ ಸುಳಾದಿ. ಜಿತೆ:– ಅಂದರೆ ಕಲಿ ಬಿಂಬನೆ ನಮ್ಮನ್ನ ಕೆಡಿಸತಕ್ಕ ಶತ್ರುಯಂತ ಯೋಚಿಸಿ ಸ್ವೋತ್ತಮರ ಬಿಂಬವನ್ನು ಪೂಜಿಸು ಎಂತ ಅರ್ಥವು. ಭೀಮಸೇನ ದೇವರು ಶತ್ರುವಿನಿಂದ ಬಂದ ನಾರಾಯಣಾಸ್ತ್ರವು ಪಾಂಡವರ ಸೇನೆಯನ್ನು ಸುಡುತ್ತಾ ಇದ್ದಾಗ ಶ್ರೀಕೃಷ್ಣದೇವರು ಧರ್ಮಾದಿಗಳಿಂದ ಆ ಅಸ್ತ್ರಕ್ಕೆ ನಮಸ್ಕಾರ ಹಾಕಿಸಿ ಬದುಕಿಸಿದಾಗ ಭೀಮಸೇನದೇವರ ಶಿರೋಭವ ಅಸ್ತ್ರವೇಧಿಸಿದಾಗ್ಯೂ ನಮಸ್ಕಾರ ಮಾಡದೇ ಇದ್ದ ಹರಿ ಭಕ್ತಿ ದೀಕ್ಷೆಯನ್ನು ಸ್ಮರಿಸಿಕೊಳ್ಳತಕ್ಕದ್ದು. "ಪೂಜೆಯನು ಮಾಡಿರೋ ಪಾಪ ಪುರುಷನಿಗೆ" ಎಂಬ ವಿಜಯರಾಯರ ನಾಮದಲ್ಲಿ ಆಹಾರ ಪಾನೀಯವನ್ನು ಮೂತ್ರವನ್ನಾಗಿ ನೇತ್ರ ಶ್ರೋತ್ರವಾಲಗಳನ್ನು ಗಂಧವನ್ನಾಗಿ ಅಧೋವಾಯುವನ್ನು ರೂಪವನ್ನಾಗಿ ವಿಸರ್ಜನೆ ಮಾಡಿದ ನಖ ಕೇಶಗಳನ್ನು ಆಭರಣವನ್ನಾಗಿ ಸಕಲ ದೂಷಣೆಯನ್ನು ಸ್ತೋತ್ರವನ್ನಾಗಿ ಎಂದೂ ಹೇಳಿದ ಪ್ರಕಾರ ತಿಳಿದರೆ ಪವನಾಂತರ್ಯಾಮಿ ಶ್ರೀಹರಿ ಒಲಿವ । ಎಂತ ನಿರೂಪಿಸಿದ್ದಾರೆ. ಧೂಳಿ ಅಕ್ಷರ ಬರೆದು ನಿಪುಣನಾದ ಹೊರತು ಲೇಖಕನಾಗಲಾರ ಹೇಗೋ ಹಾಗೆ ಅಂತರೋಪಾಸನೆಗೆ ಪೂಜಾಪದ್ಧತಿಯು ಜ್ಞಾನರ್ಥವಾಗಿಯೂ ಮನೋಮಯಮೂರ್ತಿಯು ಧ್ಯಾನಕ್ಕೆ ನಿಲ್ಲೋಣ ಪ್ರಯಾಸವಾದ ಪ್ರಯುಕ್ತ– ಸೂಕ್ಷ್ಮ ಬುದ್ಧಿಯಿಂದ ರೇಖೋಪರೇಖಾ ಸಹಿತ ದ್ವಾತ್ರಿಂಶಲ್ಲಕ್ಷಣ ಪರಮ ಸುಂದರ ಪ್ರತಿಮಾ ಜ್ಞಾನಾರ್ಥವಾಗಿಯೂ, ಈ ಅಧಿಕಾರಿಗೆ ಪಾಂಚಭೌತಿಕ ಸ್ಥೂಲ ದೇಹವಿರುವತನಕ ಪಂಚಲೋಹ ಪ್ರತಿಮೋಪಾಸನೆ ಬಿಡಕೂಡದೆಂಬುದೇ

ಮನುಷ್ಯ ಗಂಧರ್ವರ ತನಕ ಕರ್ಮಯೋಗಿಗಳ ನಿಬಂಧನೆಯು. ಈ ಧ್ಯಾನಕ್ಕೆ ಮನೋನಿಗ್ರಹ ಪರಮ ಕಠಿಣಸಾಧ್ಯವಷ್ಟೆ. ಅದಕ್ಕೆ ಯೋಗ ಸುಳಾದಿಯ ಪ್ರಕಾರ. "ಹಿರಿಯ ನಾಡಿಯಿಂದ ಮಾರುತನ ಮೆಲ್ಲ ಮೆಲ್ಲಗೆ ಶಿರಸ್ಸು ಪರಿಯಂತ ತರಲುಪಾಯವನರಿತು" ಎಂತ ಹೇಳಿರುವ ರೀತಿಯಿಂದ ಆ ಯೋಗ ಶಾಸ್ತ್ರ ಮರಿಯಾದೆ ತಿಳಿದು ಸಾಧಿಸುವರು ಬಹುಜನವಿದ್ದಾಗ್ಯೂ ಅವರು ದುರ್ಲಭರೇ ಸರಿ. ಒಂದು ವೇಳೆ ಅವರು ವದಗಿದಾಗ್ಯೂ ಆ ಅಭ್ಯಾಸ ಕೇವಲ ಕಠಿಣವೇ ಸರಿ. ಮನೋನಿಗ್ರಹವುಳ್ಳ ಪುರುಷಗೆ ಅದರಿಂದ ವಿಶೇಷೋಪಯೋಗವಿಲ್ಲ. ಎಂತಲೂ ಅಥವಾ ಇದ್ದರೂ ಇರಬಹುದೆಂತಲೂ ಗೀತಾ ಭಾಷ್ಯ ಪ್ರಮೇಯ ದೀಪಿಕಾ ಸಿದ್ಧ. ಇದಕ್ಕೆ ಪ್ರಾಣಾಯಾಮ ಮಾಡಿ ಶ್ವಾಸವನ್ನು ಕುಂಭಕದಲ್ಲಿ ನಿಲ್ಲಿಸುವುದಕ್ಕೆ ಒಂದು ಪರಮ ಸುಲಭೋಪಾಯವಿದೆ. ಏನೆಂದರೆ– ಹಯಗ್ರೀವ ದಂಡಕದಲ್ಲಿ ಕೇವಲೇ ಕುಂಭಕೇ ಸಂಸ್ಥಿತಃ ಸನ್ ತದೂರ್ಧ್ವೀಕೃತೇನ ಸ್ವ ಜಿಹ್ವಾಗ್ರ ಭಾಗೇನ ರಂಧ್ರಂ ನಿರುಧ್ಯೋದ್ಗತಂ । ಸೋಮ ನೀರಂ ಪಿಬೇತ್ತ್ವತ್ಯಹಂ॥ ಎಂಬುದರಲ್ಲಿ ಕೇವಲ ಕುಂಭಕೇವಾದರೆ ರೇಚಕ ಪೂರಕಾಭ್ಯಾಂ ಅಸಹಕೃತೇ॥ ಎಂತ ಅರ್ಥವು. ಅದರ ಅನುಭವ:– ಶರೀರವನ್ನು ಕದಲಿಸದೆ ನೆಟ್ಟಗೆ ಕೂತು ಇರೋದರಲ್ಲಿ ಮೂಗು ಹಿಡಿದು ಶ್ವಾಸವನ್ನು ಕುಂಭಿಸದೆ ಅಂತಃ ಕುಂಭಕ ಮಾಡಬೇಕಂತ ಭಾವವು. ಆ ಕುಂಭಕದಲ್ಲಿ ಸುಲಭೋಪಾಯ ಯಾವುದೆಂದರೆ– ಒಂದು ಕೊಡದಲ್ಲಿ ಅರ್ಧ ನೀರು ತುಂಬಿದ ಹಾಗೆ ವದನದಿಂದ ವಾಯು ಪೂರಿಸಿ ಅರ್ಧ ಕುಂಭಕ ಮಾಡಿಕೊಂಡು ಪೂರ್ಣ ಕುಂಭವಲ್ಲದೇ ಇದ್ದದ್ದರಿಂದ ಕಿಂಚಿತ್ ಶ್ವಾಸ ಹೊರಗೆ ಬರುತ್ತಾ ಇರುವುದರಿಂದ ಅರ್ಧ ರೇಚಕ ರೂಪವಾಗಿ ಎರಡು ಕರಗಳನ್ನು ತೊಡೆಯಲ್ಲಿಟ್ಟು ಅಥವಾ ಹೃದಯದಲ್ಲಿ ಅಂಜಲಿ ಮಾಡಿಕೊಂಡು ಕೂಡೋಣವೇ ಸುಖಾಸನವೆಂದು ಕರೆಸಿಕೊಳ್ಳುತ್ತದೆ.

ಇಂತಹ ಅಂತಃ ಪ್ರಾಣಾಯಾಮಕ್ಕೆ ಶೂನ್ಯಕಂ ಪ್ರಾಣಾಯಾಮ ಎಂತ ಹೆಸರು. ಪೂರ್ಣ ಯೋಗಾಭ್ಯಾಸ ನಿಪುಣರಿಗೆ ಭಗವಚ್ಚರಣದಲ್ಲಿ ಮನೋ ನಿಗ್ರಹ ಹೇಗೆ ಆಗುವುದೋ ಹಾಗೆ ಆ ಅಭ್ಯಾಸದ ಸಮಾಚಾರವನ್ನೇ ಅರಿಯದ ಮಹಾತ್ಮರಿಗೆ ಭಗವಚ್ಚರಣದಲ್ಲಿ ಈ ಶೂನ್ಯಕ ಪ್ರಾಣಾಯಾಮವು ಮನೋನಿಗ್ರಹ ಸಾಧಕವೆಂಬುದೇ ನಿಶ್ಚಯವು. ಆಗ್ನೇಯ ಪುರಾಣ ತುಲಾ ಕಾವೇರಿ ಮಾಹಾತ್ಮೆಯಲ್ಲಿ ಈ ಶೂನ್ಯಕ ಪ್ರಾಣಾಯಾಮವು ಅರ್ಧ ರೇಚಕ ಅರ್ಧ

ಪೂರಕ ಅರ್ಧ ಕುಂಭವುಳ್ಳದ್ದು ಎಂತ ಹೇಳಿ ಇದ್ದಾರೆ. ಮನಮೂರ್ತಿ ಸುಳಾದಿ ಮುಂದಿನ ತಾಳದಲ್ಲಿ "ನೋವಿಲ್ಲದೆ ಕಮಲವನ್ನು ವಿಕಸಿತ ಮಾಡಿ ಆವಾಹನಾಸನ ಪಾದ್ಯ ಅರ್ಘ್ಯ ಆಚಮನ" ಎಂತ ಸುಲಭೋಪಾಯವನ್ನು ತೋರಿಸಿ ಇದ್ದಾರೆ. ಈ ಧ್ಯಾನಕ್ಕೆ ಮೂರು ಹೆಸರು. ಧಾರಣ, ಧ್ಯಾನ ಸಮಾಧಿ ಎಂತ. ಇದರ ಅಂಗಗಳು ಐದು ಅದರ ವಿವರ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ ಅಂತ ಐದು. ಯಮ ಯಾವುದೆಂದರೆ ಅದು ಐದು ವಿಧ. ಅದರ ವಿವರ ಅಹಿಂಸಾ, ಸತ್ಯ, ಆಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ. ಅಹಿಂಸ ಅಂದರೆ ಭೂತ ದಯೆ. ಸತ್ಯ ಅಂದರೆ ಯಥಾರ್ಥ ವಚನ. ಸಜ್ಜನರಿಗೆ ಹಿತವಾದದ್ದು ಎಂತ ಅರ್ಥ. ಆಸ್ತೇಯವೆಂದರೆ ಭಂಗಾರ ಮಿಗಿಲಾದ ದ್ರವ್ಯಗಳನ್ನು ಕಂಡರೆ ಮುಂಗಾಲಿನಲ್ಲಿ ಒದ್ದು ದಾಟಿ ಹೋಗುವುದಯ್ಯ ಎಂತ ವೈರಾಗ್ಯ ಸುಳಾದಿಯಲ್ಲಿ ಸಿದ್ಧ. ತೃಣವನ್ನಾದರೂ ಚೌರ್ಯ ಮಾಡದೇ ಇರೋಣ, ಬ್ರಹ್ಮಚರ್ಯವೆಂದರೆ ಬ್ರಹ್ಮಚಾರಿ, ನೈಷ್ಟಿಕ ಬ್ರಹ್ಮಚಾರಿ ಯತಿ ವಾನಪ್ರಸ್ಥ ಈ ನಾಲ್ಕು ಆಶ್ರಮಗಳಿಗೆ ಅಷ್ಟಾಂಗ ಸ್ತ್ರೀಸಂಗ ತ್ಯಾಗವೇ ಬ್ರಹ್ಮಚರ್ಯವು. ಶ್ರವಣಂ ಕೀರ್ತನಂ ಕೇಳಿಃ ಪ್ರೇಷಣಂ ಗುಹ್ಯಭಾಷಣಂ। ಸಂಕಲ್ಪೋ ಅಧ್ಯವಸಾಯಶ್ಚ ಕ್ರಿಯಾ ನಿವೃತಿರೇವಚ ಏತನ್ಮೈಥುನಮಷ್ಟಾಂಗಂ ಪ್ರವದಂತಿ ಮನೀಷಿಣಃ । ಎಂತಲೂ, "ಋತಾವೃತೌ ಸ್ವದಾರೇಷು ಸಂಗತಿರ್ಯಾ ವಿಧಾನತಃ। ಯೋಗಿನಾಂ ಚ ಸ್ವಜಾಯಾಸು ವಶಿಷ್ಟಾದಿ ಮಹರ್ಷಿಣಾಂ" ಎಂತ ತಂತ್ರಸಾರ ಛಲಾರಿ ಟಿಪ್ಪಣಿ. ಶಿಷ್ಯರಿಗೆ ಗುರು ಸೇವೆಯೇ ಬ್ರಹ್ಮಚರ್ಯವು. ಸ್ತ್ರೀಯರಿಗೆ ಪತಿ ಸೇವೆ. ಅಧಮ ಜಾತಿ ಜನಗಳು ಉತ್ತಮಜಾತಿ ಜನಗಳ ಸೇವಿಸೋಣವೇ ಬ್ರಹ್ಮಚರ್ಯವು. ಅಪರಿಗ್ರಹ ಎಂದರೆ ಜನಾಭಿಮಾನ ಪರಿತ್ಯಾಗ. ವ್ಯರ್ಥ ವಚನ ತ್ಯಾಗ, ಹಾಳು ಹರಟೆ ಬಿಟ್ಟು ಹೊತ್ತು ಕಳೆವುದೇ ಹಬ್ಬ- ಎಂತ ಹಬ್ಬ ಸುಳಾದಿ. ಇದೇ ವೈರಾಗ್ಯ ಐದು ಯಮಗಳ ಸಂಗ್ರಹಿಸಿ ಹೇಳಿತು. ಎರಡನೆಯ ಅಂಗ ನಿಯಮ. ಐದು ಪ್ರಕಾರ. ಶೌಚ ತಪಸ್ಸು ತುಷ್ಟಿ ಸ್ವಾಧ್ಯಾಯ ಭಗವದ್ಪೂಜೆ ಅಂತ ಐದು. ಶೌಚ ಎರಡು ಪ್ರಕಾರ ಶೌಚ ಸ್ನಾನಗಳೆಂಬ ಬಾಹ್ಯ ಶೌಚ- ಮನೋ ದೋಷ ಪರಿಹಾರವೇ ಅಂತಃ ಶೌಚ. "ಮೃಜ್ಜಲಾಭ್ಯಾಂ ಕೃತಂ ಬಾಹ್ಯಂ ಮನಃ ಶುದ್ಧಿಸ್ತಥಾಂತರಂ। ಮನಶ್ಶುದ್ಧಿಸ್ತು ವಿಜ್ಞೇಯಾ ಧರ್ಮಣಾಧ್ಯಾತ್ಮ ವಿದ್ಯಂಯಾ. ಅಂದರೆ ಜಾತ್ಯಾಶ್ರಮ ಧರ್ಮಾನುಷ್ಠಾನದಿಂದ

ಭಗವದ್ಪೂಜಾನುಷ್ಠಾನವು. ಧ್ಯಾನೋಪಯುಕ್ತ ಶ್ರವಣಾದಿ ಜಿಜ್ಞಾಸೆಯಿಂದ ಕಲ್ಮಷ ಹೋಗಬೇಕು. ತಪಃ ಎಂದರೆ ಜಪ ಹೋಮ ಅತಿಥಿ ಪೂಜಾ ತೀರ್ಥ ಸಂಚಾರಾ, ಪರೋಪಕಾರ ಕ್ರಿಯೆಗಳು. ತುಷ್ಟಿ ಎಂದರೆ ಅಲಂ ಬುದ್ಧಿ. ಹ್ಯಾಗೆಂದರೆ ಸರ್ವದಾ ಗುರುಪ್ರಸಾದ ಲಬ್ದ ಜ್ಞಾನ ಭಕ್ತಿ ಬಲದಿಂದ ಅಭೀಷ್ಟಾಷ್ಟವು ವಾರಾಶಾನಿವುಜ್ಯೋನ್ಮಜ್ಜಿತಂನಿಜಾ ॥ ಆನಂದಾಷ್ಟವು ಸುದ್ವೀಪೆ ಸ್ಥಾಪಯಸಿಚಾದರಾತ್ ॥ ಎಂತಲೂ," ಕರುಣಾರಸ ಪೂರ್ಣಾಭ್ಯಾಂ ಸಮೀಕ್ಷಸೆ। ಕಾ ಚಿಂತಾ ಮೇ ಇಹಾಮುತ್ರ ಸರ್ವಾರಿಷ್ಟ ಹರತ್ಯಸೌ॥ ತ್ವತ್ಪಾದಾಂಬುಜ ವಿಶ್ವಾಸಃ ಸರ್ವಾಭೀಷ್ಟಂ ದದಾತಿಹಿ ॥ ಎಂತ ಆದಿತ್ಯ ಪುರಾಣ ವೆಂಕಟೇಶ ಮಹಾತ್ಮ ಪ್ರಕಾರ ಸಂತುಷ್ಟನಾಗಿ ಇರಬೇಕಂತ ಅರ್ಥವು. ಸ್ವಾಧ್ಯಾಯ ಎಂದರೆ ಅರ್ಥ ಜ್ಞಾನವಿಲ್ಲದೇ ವೇದೋಚ್ಚಾರಣ ಅರ್ಥ ಜ್ಞಾನವಿದ್ದರೆ ಧ್ಯಾನದಲ್ಲಿ ಸೇರತಕ್ಕದ್ದೇ ಹೊರತು ನಿಯಮದಲ್ಲಿ ಸೇರದು. ಭಗವದ್ಪೂಜೆಗೆ, ಐದು ನಿಯಮಗಳಾಯಿತು. ಮೂರನೇ ಅಂಗ ಆಸನ ಅಂದರೆ ಶರೀರ ಅಲುಗದೇ ಇರೋಣ. ನಾಲ್ಕನೇ ಅಂಗ ಪ್ರಾಣಾಯಾಮ "ಓಂ ಭೂಃ" ಇತ್ಯಾ ಪೂರ್ಣಗುಣತ್ವಾದಿ ಭಗವತ್ಸ್ಮರಣೆಯುಳ್ಳದ್ದು ಧ್ಯಾನಕ್ಕೆ ಸೇರುತ್ತೆ. ಜಡ ವಾಯು ಬಂಧನವೇ ಅಜ್ಞಾನಿಯ ಅಧ್ಯಯನೋಚ್ಚಾರಣೆಗೆ ಸಮ ಫಲ. ಐದನೇ ಅಂಗ ಪ್ರತ್ಯಾಹಾರ ಅಂದರೆ ಮನಸ್ಸು ಇಂದ್ರಿಯಗಳನ್ನು ಹೊರಗೆ ಬಿಡದೆ ಹರಿ ಧ್ಯಾನಕ್ಕೆ ನಿಲ್ಲಿಸಿಕೊಂಬೋಣ. ಈ ಐದು ಅಂಗಗಳು ಧ್ಯಾನ ಸಾಧಕಗಳು.

## ಧಾರಣ ಧ್ಯಾನ ಸಮಾಧಿ ಲಕ್ಷಣ

ಧಾರಣವೆಂದರೆ ಪಾದಾದಿ ಏಕೈಕಾವಯವ ಧ್ಯಾನ. ಇದೇ ಖಂಡ ಸ್ಮೃತಿ. ಅಖಂಡಸ್ಮೃತಿ ಎಂದರೆ, ಪಾದಾದಿ ಹಸನ್ಮುಖಪರ್ಯಂತ ಸಮಗ್ರ ಅವಯವ ಧ್ಯಾನ. "ಏಕೈಕಶೋಂಗಾನಿ ಧಿಯಾನುಭಾವಯೇತ್ಪಾದಾದಿ ಯಾವದ್ಧಸಿತಂ –ಗದಾಭೃತಃ ॥ಜಿತಂ ಜಿತಂ ಸ್ಥಾನಮಪೋಹ್ಯ ಧಾರಯೇತ್ಪರಂ ಪರಂ ಸಿಧ್ಯತಿ ಯಥಾ ಯಥಾ." ಎಂತ ಭಾಗವತ ದ್ವಿತೀಯ ಸ್ಕಂಧ– ಪಾದ ಧ್ಯಾನಮಾಡಿ, ಅನಂತರ ಜಂಘಾ ಧ್ಯಾನ, ಅನಂತರ ಊರು ಇಂತಹ ಧ್ಯಾನದಲ್ಲಿ ಪಾದ ಜಂಘಾದಿಗಳು ಮರಿಯದೆ, ಹೀಗೆಯೇ ಕಿರೀಟ ಕುಂಡಲ, ಕಟಕ

ಮೊದಲಾದ ಆಭರಣ ವಸ್ತ್ರೋಪವೀತ ದ್ವಾತ್ರಿಂಶಲ್ಲಕ್ಷಣ ಹಸನ್ಮುಖ ಕಟಾಕ್ಷ ವೀಕ್ಷಣದ ತನಕ ಕದಲದ ಹಾಗೆ ಮನಸ್ಸಿನಲ್ಲಿ ನಿಲ್ಲಿಸಿಕೊಳ್ಳೋಣವೇ ಧಾರಣ. ರಾಜರ ಉಕ್ತಿ "ಅಂಗಗಳ ವಳಗೆ ಒಂದಂಗ ಧ್ಯಾನ ಮಾಡುತ್ತಾ ಅಂಗ ಬಿಟ್ಟು ಮತ್ತೊಂದಂಗ ಧ್ಯಾನ ಮಾಡೋರು । ಹೀಗೆ ಅಂಗಗಳು ಸರ್ವ ಧ್ಯಾನ ವಿಷಯವಾಗಲು ಬ್ರಹ್ಮ ಜ್ಞಾನವು ಬೇಗ ಸಿದ್ಧವಾಗುವುದು." ಎಂತ ಹೇಳಿದ್ದಾರೆ. ಈ ಸಮಗ್ರ ಅವಯವ ಸ್ಮರಣೆಯೂ ಕೂಡ ಧ್ಯಾನವೆಂತ ಹೇಳಿಸಿಕೊಳ್ಳದು. ಏಕೆಂದರೆ ಕೆಲವು ಕಾಲಸ್ಮರಣೆ ಕೆಲವು ಕಾಲ ಚಿತ್ತ ಬಹಿ ಮುಖವಾಗತಕ್ಕದ್ದು. ಧಾರಣವೆಂತ ಕರೆಸಿಕೊಳ್ಳುತ್ತದೆ. ಧ್ಯಾನಾರ್ಥ ಯತ್ನ ಮಾಡಿದರೆ ಬಹುಕಾಲ ಮನಸ್ಸು ಚಲಿಸದೇ ಇರೋಣವೇ ಧ್ಯಾನ. "ನೈರಂತರ್ಯ ಮನೋವೃತ್ತಿಃ ಧ್ಯಾನಮಿತ್ಯುಚ್ಯತೇ ಬುಧೈಃ ॥ ಎಂತ ಗೀತಾ ಭಾಷ್ಯ- ಧ್ಯಾನ ಮಾಡುವೆನೆಂಬ ಯತ್ನ ಹೊರತು ಸ್ವತಏವ ಪ್ರಾಪ್ತವಾಗಿ ಬಹು ಕಾಲ ನಿಲ್ಲತಕ್ಕ ಧ್ಯಾನವೇ ಸಮಾಧಿ ಎಂತ ಕರೆಸಿಕೊಲ್ಲುತ್ತದೆ. ಆದರಿಂದಲೇ ಬಿಂಬಾಪರೋಕ್ಷವು. ಪ್ರಮಾಣ:- ಖಂಡ ಸ್ಮೃತಿರ್ಧಾರಣಾಸ್ಯಾದಖಂಡಾಧ್ಯಾನ ಮುಚ್ಯತೇ। ಅಪ್ರಯತ್ನಾತ್ಸಮಾಧಿಸ್ಯಾದ್ದರ್ಶನಂ ಚಿರಯಾನಯಾ। ಎಂತ ತಂತ್ರಸಾರ." ತಚ್ಚ ಧಾರಣಂತ್ಯಕ್ತ್ವಾ ಸ್ವತಏವ ಮನಃ ತತ್ರೈವ ಸಮಾಹಿತತ್ವಾದನ್ಯತ್ಕಿಮಪಿ ನಚಿಂತಯೇತ್॥ ಯಾವತ್ಸಮಗ್ರ ಸ್ಮರಣಮಚಲಂ ಕೇಶವೇಭವೇತ್। ಸಮಗ್ರಂ ಚಿಂತಯೇತ್ತಾವದ್ಯದಾತು ವಿಚಲೇತ್ತತಃ। ಪ್ರತ್ಯಂಗ ಧಾರಣಾ ಕುರ್ಯಾನ್ಮನೋ ಯಾವತ್ಸಮಗ್ರಗಂ ಪ್ರತ್ಯಂಗಾಭ್ಯಾಸತೋ ಯಾವತ್ಸಮಗ್ರೇಷು ಸ್ಥಿತಮನಃ॥ ತದಾ ಪುನಃ ಸಮಗ್ರಂತು ಧಾರಯೇದ್ಯತ್ನತೋ ಬುಧಃ। ಯಾ ದಾತು ಧಾರಣೋತ್ಸಾಹಂ ವಿನಾ ತತ್ರಾಚಲಂ ಮನಃ॥ ತಿಷ್ಠೇತ್ತ್ಯಕ್ತ್ವಾ ತಮುದ್ಯೋಗಂ ಶಂಖ ಚಕ್ರಾಂಬುಜಾಂತಿಕೇ । ಆರೂಢ ಚೇತಾಃ ಪರಮೇ ಶೃಂಗಾರಾದ್ಯೇಕ ಧಾಮನಿ। ನೈವಾದ್ಯಚ್ಚಿಂತಯೇತ್ ತಸ್ಮಾತ್ ಪೂರ್ಣಾನುದಾಚ್ಚತುರ್ಭುಜಾತ್। ಯತೋ ಅನ್ಯತ್ಸ್ಮರಣೆ ತಸ್ಮಾನ್ಮನಃ ಚಲತಿ ಸುಸ್ಥಿತಂ । ಧಾರಣಾರ್ಥಂ ಪ್ರಯತ್ನಾಚ ತಸ್ಮಾತ್ತದುಭಯಾಂತ್ಯಜೇತ್ ॥ ಯಾವತ್ಸಾರೂಢಚೇತಾಸ್ಯಾದ್ವಿಷ್ಣೋ ರೂಪೇ ಚತುರ್ಭುಜೇ। ಇತಿ ಧ್ಯಾನಗೆ- ಎಂತ ಏಕಾದಶ ತಾತ್ಪರ್ಯದಲ್ಲಿ- ದ್ರವ್ಯ ಜ್ಞಾನ ಕ್ರಿಯಾ ವಿಷಯೇ ಭ್ರಮರೂಪಂ ಮನೋಲಯಂ ಯಾತಿ। ಎಂತ ೧೪ನೇ ಅಧ್ಯಾಯದ ತಾತ್ಪರ್ಯವು- ಅಂದರೆ

*ಕಾರಕಕ್ರಿಯಾದ್ರವ್ಯವಿಭ್ರಮ। ಮೂರು ಬಹು ವಿಧ ಜೀವರಿಗೆ ಬಹು ಸಂ।*
*ಸಾರಕಿವೆ ಕಾರಣವೆ ಎನಿಸುವುದ್ಯಲ್ಲ ಕಾಲದಲಿ॥*
*ದೂರ ಓಡಿಸಿ ಭ್ರಾಮೇಕತ್ರಯ। ಮಾರಿಗೊಳಗಾಗದಲೆ ಸರ್ವಾ।*
*ಧಾರಕನ ಸರ್ವತ್ರದಲಿ ಚಿಂತಿಸುತ ಮರಿಯದಿರು॥*

ಎಂತ ಹರಿಕಥಾಮೃತಸಾರದಲ್ಲಿ ಭಾವಾದ್ವೈತ ದ್ರವ್ಯಾದ್ವೈತ ಕ್ರಿಯಾದ್ವೈತಗಳನ್ನು ಸಪ್ತಮ ಸ್ಕಂಧೋಕ್ತಿಯಿಂದಲೂ ತಿಳಿಯ ತಕ್ಕದ್ದು. ಭಾವಾದ್ವೈತವೆಂದರೆ ಪ್ರಕೃತಿ ಎಂಬ ಕಾರಣಾಂತರ್ಗತ ಭಗವದ್ರೂಪಕ್ಕೂ ತತ್ಕಾರ್ಯವೆಂಬ ಮಹದಾದ್ಯಂತರ್ಗತ ಭಗವದ್ರೂಪಕ್ಕೂ ಐಕ್ಯಾ- ದ್ರವ್ಯಾದ್ವೈತವೆಂದರೆ ಭೋಗ ಸಾಧನ ದ್ರವ್ಯಾಂತರ್ಗತ ಭಗವದ್ರೂಪಕ್ಕೂ ಭೋಗಿಸುವೆನು ಎಂಬ ಇಚ್ಛಾಂತರ್ಗತ ಭಗವದ್ರೂಪಕ್ಕೂ ಐಕ್ಯ. ಕ್ರಿಯಾದ್ವೈತವೆಂದರೆ ನಖುತೇ ತ್ವತ್ಕ್ರಿಯತೇ ಕಿಂಚನಾರೇ ಇತಿ ಕ್ರಿಯಾದ್ವೈತಂ ಎಂತ ವಿಜಯಧ್ವಜೀಯ. ಅಂದರೆ ಜಗತ್ತಿನ ಕ್ರಿಯಾಂತರ್ಗತ ಈಶ ಕ್ರಿಯಾ. ಇಂತಹ ಅದ್ವೈತತ್ರಯ ಜ್ಞಾನದಿಂದ ಭ್ರಾಮಕತ್ರಯ ಮಾರಿಯನ್ನು ಓಡಿಸಿ ಎಂದರೆ ಪೂರ್ವೋಕ್ತ ಸುಳಾದಿ ರೀತಿಯಿಂದ ನದಿಯ ಪ್ರವಾಹ ಜ್ಞಾನದಿಂದ ಪಾಷಾಣ ಜ್ಞಾನವು ಅಡಗುವಂತೆ ಜಗತ್ತನ್ನು ಮರಿಯತಕ್ಕದ್ದು ಎಂತ ಭಾವವು. "ಇರುತಿರುತ ಮೈಮರೆದು ಕೃಷ್ಣಾರ್ಪಣವೆನಲು" ಎಂತ ಹರಿಕಥಾಮೃತಸಾರ ಸುಳಾದಿ:-

*ಚಿಂತಿಸು ಈ ಪರಿ ಇರಳು ಹಗಲು ನೀನು।*
*ಭ್ರಾಂತಿಗೊಳದಲೆ ತ್ರಿಕಾಲದಲ್ಲಿಯೂ॥*
*ಸಂತೋಷದಲಿ ಗುಣಿಸು. ಬೊಮ್ಮನು ಮೊದ।*
*ಲು ತೃಣ ಜಂತುಗಳ ಕಡೆ। ಆಮೇಲೆ ಜಡ ಸಂಖ್ಯೆ॥*
*ಅಂತದೀ ಪೃಥ್ವೀ ಪರಮಾಣುವಿಡಿದು ಕಾ।*
*ಲಾಂತ ಪ್ರಕೃತಿಯನ್ನು ಪ್ರಾರಂಭವನೆ ಮಾಡಿ॥*
*ಕಂತು ಪಿತನು ತಾನೆ ಇದರಂತದಲಿ ತನ್ನ।*
*ಕಾಂತಿವಡನೆ ವಾಸವಾಗಿ ಅನಂತ ಬಗೆಯಿಂದ ನಿಲ॥*
*ದಂತೆ ಕುಳಿತು ಪವಡಿಸಿ ಆಡುತಿಪ್ಪನು।*

*ಇಂತು ತಿಳಿದುಕೊಂಡು ಬಗೆ ಬಗೆ ವಿಷಯಂಗಳ॥*
*ಅಂತ ಇಲ್ಲದ ಜ್ಞಾನಿ ಅನುಭವಿಸಲು ಅವ।*
*ಗೆಂತು ಕರ್ಮಗಳು ಲೇಪನವಾಗೋದು॥*
*ಸಂತಾಪ ನಮ್ಮ ವಿಜಯವಿಠಲನಂಘ್ರಿ।*
*ಚಿಂತೆಯಲಿ ಎಲ್ಲೆಲ್ಲಿ ಇದ್ದವ ಬಹು ಧನ್ಯ॥*

ಆದಿ:-

*ಅಡವಿಯಲಿ ಆನೆಯಲ್ಲಿ ಗಿಡದಲ್ಲಿ ಗುಣಿಯಲ್ಲಿ।*
*ಕುಂಡದಲ್ಲಿ ಕೊಂಡೆಯಲ್ಲಿ ಗುಡಿಯಲ್ಲಿ ಗುಡ್ಡದಲ್ಲಿ॥*
*ಜಡದಲ್ಲಿ ಜಲದಲ್ಲಿ ದಡದಲ್ಲಿ ಧರೆಯಲ್ಲಿ।*
*ಗಿಡುಗನಲ್ಲಿ ಗಾನದಲ್ಲಿ ಅಡಿಯಲ್ಲಿ ಅಳತೆಯಲ್ಲಿ॥*
*ಮಡಿಯಲ್ಲಿ ಮನೆಯಲ್ಲಿ ಕಿಂಡಿಯಲ್ಲಿ ಕೆರೆಯಲ್ಲಿ।*
*ಕಡೆಯಲ್ಲಿ ತಾಳದಲ್ಲಿ ಕಡಲಲ್ಲಿ ಕಾಂತಿಯಲ್ಲಿ॥*
*ಹಡಗಲ್ಲಿ ಹಿಡಿಯಲ್ಲಿ ಪಡೆಯಲ್ಲಿ ಪಟ್ಟಣದಲ್ಲಿ।*
*ಪೊಡವಿಯಲ್ಲಿ ಪಟ್ಟಾಸದಲ್ಲಿ ನಡವೆಯಲ್ಲಿ ವಾಜೀಯಲ್ಲಿ॥*
*ಎಡಬಿಡದೆ ಈ ಮನಸ್ಸು ಅಡಿ ಮೊದಲಗಿ ಪಾದದಲ್ಲಿ।*
*ನುಡಿ ಮತ್ತೆ ನೋಡಿ ನೋಡಿ. ದಡವಾಗಿ ಅಲ್ಪದಲ್ಲಿ॥*
*ನುಡಿಯ ಪ್ರಕಾರ ನಿಬಿಡವಾಗಿ ತುಂಬಿಹನೆಂದು।*
*ಎಡಗೆಡಗೆ ತಿಳಕೊಂಡು ಕಡು ಕೃತಾರ್ಥನಾಗು॥*
*ಪರಿಯಿಲ್ಲದ ಮಹಿಮಾ ವಿಜಯ ವಿಠಲ ಹರಿಯ।*
*ವಡನೊಡನೆ ನೆನೆಸುವುದು । ಒಡಲೊಳಗೆ॥*
*ಕಂಡಕಂಡ ಕಡೆಯಲ್ಲಿ ಕಾಣನಾಗಬೇಕು।*
*ಒಡಲೊಳು ಗುಣಿಸುತ ।ಜತೆ।*

*ಘನ ಪೂಜೆ ಇದೆಕಾಣೋ ಆಲೋಚಿಸಿ ನೋಡಿ।*
*ಗುಣಾತೀತ ವಿಜಯವಿಠಲನ ಪಾದದಲ್ಲಿರು॥*

ಎಂತ ಘನ ಪೂಜಾ ಸುಳಾದಿ.

ಇದರಲಿ ಚಿಂತಿಸು ಈ ಪರಿ ಎಂಬ ಹಿಂದಿನ ತಾಳದಿಂದಲೇ ಸಕಲ ಜೀವ ಜಡಾಂತರ್ಗತ ಹರಿ ರೂಪ ಚಿಂತನೆ" ಹೇಳಿದರಷ್ಟೆ. ಪುನಶ್ಚ ಅಡವಿಯಲಿ ಆನೆಯಲ್ಲಿ ಎಂಬ ತಾಳವನ್ನು ಏಕೆ ಹೇಳಿದರು ಎಂದರೆ ವಿಶಿಷ್ಟ ಸುಳಾದಿಗಳಿಗೂ ಭಾವ. "ಆವೃತ್ತಿರಸಕೃದುಪದೇಶಾತ್" ಎಂಬ ಸೂತ್ರ ತಾತ್ಪರ್ಯವನ್ನು ಮನಸ್ಸಿನಾಗಿಟ್ಟು ದೀಪವೆಂಬ ಜ್ಞಾನಕ್ಕೆ ಎಣ್ಣೆ ಎಂಬ ಉಪದೇಶವಿದ್ದಾಗ್ಯೂ ಆ ಬತ್ತಿಯಿಂದ ಏನಾಗುತ್ತದೆ ಎಂದರೆ ಬತ್ತಿಯನ್ನು ಆಗಾಗ್ಯೆ ಮುಂದಕೆ ನೂಕಿ ಆದರದಕ್ಕೆ ಕಡಿದಹಾಗೆ ಈ ಸುಳಾದಿಗಳಲ್ಲಿ ವಚನ ಸಂಕ್ಷೇಪವನ್ನು ಆಕ್ಷೇಪಿಸಿ ನದೀ ಪ್ರವಾಹರೂಪವಾಗಿ ಅತಿ ವಿಸ್ತರ ಸುಳಾದಿಗಳನ್ನು ಯಾಕೆ ಬೆಳೆಸಬೇಕೆಂಬ ಆಕ್ಷೇಪಕ್ಕೆ ಅವಕಾಶ ಕೊಡದೆ ಅಖಂಡ ಭಗವದುಪಾಸನೆಯನ್ನು ಕೆಡಿಸತಕ್ಕ ಮೂಲ ಕಲಿಯ ವ್ಯಾಪಾರವೇ ಪಾಲುಮಾರಿಕಿ ಆದ ಪ್ರಯುಕ್ತ ಈ ಪಾಲು ಮಾರಿಕೆ ಹೋಗಿ ನಿರುಪಾಧಿಕ ಆರಾಧನೆಯಲ್ಲಿ ಪರಮ ಪ್ರೇಮ ಹುಟ್ಟಿ- ಈ ಪರಮಪ್ರೇಮಕ್ಕೆ ತಿಲಮಾತ್ರ ಹ್ರಾಸ ತಂದು ಬಿಡತಕ್ಕ ನಿರ್ಭಾಗ್ಯರ ದರುಶನದಲ್ಲಿಯೂ ಕೂಡ ಪರಮಾಸಹ್ಯವನ್ನು ಹುಟ್ಟಿಸತಕ್ಕ ಮಹಾ ಕುತೂಹಲವುಳ್ಳವರೇ ವಿಜಯರಾಯರು. ಎಂತ ತಿಳಿಯತಕ್ಕದ್ದು. "ಆವರೋಗವೊ ಎನಗೆ ದೇವ ಧನ್ವಂತ್ರಿ ॥ ಎಂಬ ನಾಮದಲ್ಲಿ ಹರಿ ಅರ್ಚನೆ ಮಾಡೆ ಕೈಬಾರದು. ಹರಿಯ ಯಾತ್ರೆ ಮಾಡೆ ಕಾಲೇಳದು. ಎಂತ ಹೀಗೆ ಶಿಕ್ಷಿಸಿದ್ದಾರೆ. ಹರಿ ತನ್ನ ಖಂಡಾಖಂಡ ಜ್ಞಾನ ಪ್ರಬಲವಿತ್ತು ದರ್ಶನ ಕೊಡುವನು." ಎಂತ ಅಪರೋಕ್ಷ ತಾರತಮ್ಯ ಸುಳಾದಿ. ಪ್ರಮಾಣ:- : ಅಛಿದ್ರ ಸೇವನಾಚ್ಚೈವ ನಿಷ್ಕಾಮತ್ವಾಚ್ಚ ಯೋಗ್ಯತಃ। ದ್ರಷ್ಟಾಂಶಕ್ಯೋ ಹರಿಃ ಸರ್ವೈಃ ನಾನ್ಯಥಾತು ಕಥಂಚನ। ಎಂತ ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯ ಪ್ರಥಮಾಧ್ಯಾಯ. ಸರ್ವತ್ರ ಸರ್ವದಾ ಭಗವಚ್ಚಿಂತನಯನ್ನೋದಗಿಸತಕ್ಕ ಘನಪೂಜಾ ಸುಳಾದಿಯಲ್ಲಿ

*ನಾನಾ ಸುಖಪಡುವ ಹರಿಯನ್ನೇ ಪೂಜಿಸು*
*ನಾನಾದುಖ ಕಳೆವ ಹರಿಯನ್ನೇ ಕೊಂಡಾಡಿ*
*ನಾನಾನಂದವ ಧರಿಸು ಹರಿಯನ್ನೇ ಮೆಚ್ಚಿಸಿ*
*ನಾನಾ ಪೂಜೆಯ ಮಾಳ್ಪ ಹರಿಯದಾಸರೊಡನೆ*
*ಜ್ಞಾನದಿಂದಲಿ ನಿತ್ಯ ಎಲ್ಲೆಲ್ಲಿ ನೋಡಿದರು*
*ಶ್ರೀನಿವಾಸನ ಮೂರ್ತಿ ಚಿಂತಿಸುತ। ನಾನಾಮಿಕ್ಕಾದ ಪ್ರಪಂಚದಲ್ಲಿ*

*ಇದೇ ತಾನೆ ತೋರುತಲಿಪ್ಪ ಮುಂದೊಲಿದು.*
*ಧ್ಯಾನಕೆ ಪೊಳೆವನು ಅಡಿಗಡಿಗೆ*
*ಎನೆ ಹೀನಾಯವಾಗಗೂಡ ಬಲು ಜೀವನು ॥*

(ಅಂದರೆ ಬಲಿಷ್ಠ ಎಂದರ್ಥ. ಕಾಣಿಸಿಕೊಂಬನು ಕಂಡತಾವಿನಲಿ ನಾನೇನೆಂಬೇನ್ಯೆಯ್ಯ ಹರಿಯು ಕರುಣಾತನಕೆ. ಆನಂದವುಂಯನಾದ ವಿಜಯವಿಠಲರೇಯ ಗಾನಕೆ ಪ್ರಿಯನು ಕಲಿಯುಗದಲಿ ಸಿದ್ಧ. ಎಂತ ಹಿಂದಿನ ತಾಳದಲಿ ಪರಮಾನಂದವನ್ನು ತೋರಿಸಿ ಹೀಗೆ ಅವರ ಸಕಲ ವಚನಗಳು ಆನಂದೋದಕ ವೃಷ್ಟಿರೂಪವಾಗಿ ತಾರದೆ ಇದರಲ್ಲಿ ಆಹ್ನೀಕ ಕರ್ಮಗಳಲಿ ಭಗವಚ್ಚಿಂತನೆಗೆ ಆಹ್ನಿಕ ಸುಳಾದಿ:- ಜಪದಲ್ಲಿ ಸಿದ್ಧಿಗೋಸ್ಕರ ಭಗವಚ್ಚಿಂತನೆಗೆ ಜಪ ಸುಳಾದಿ. ಆಹಾರದಲ್ಲಿ ಚಿಂತನೆ ಅಖಂಡವಾಗುವುದಕ್ಕೆ ಪ್ರಾಣಾಹುತಿ ಸುಳಾದಿ. ಈ ಮಾತನ್ನೂ ಸ್ವಲ್ಪದಿಂದ ಹೇಳಿ ಅನಂತರ ಧ್ಯಾನ ಸುಳಾದಿ ಕ್ರಮ ವಿಸ್ತರಿಸುತ್ತೇನೆ. -

ಸಕಲ ಆಹ್ನಿಕಕ್ಕೆ ಮುಖ್ಯ ಕರ್ಮ ಯಾವುದೆಂದರೆ ಪಂಚ ಸಂಸ್ಕಾರಗಳು "ತಾಪಃ ಪುಂಡ್ರಸ್ತಥಾ ನಾಮಮಂತ್ರ ಯಾಗಸ್ತು ಪಂಚಮಃ ॥ ಅಮೀಹಿ ಪಂಚ ಸಂಸ್ಕಾರಾಃ ವೈಷ್ಣವತ್ವಸ್ಯ ಹೇತುಃ॥ ಅಂದರೆ ತಾಪಃ ಅಂದರೆ ತಪ್ತ ಮುದ್ರಾಂಕನ, ಪುಂಡ್ರ ಅಂದರೆ ಊರ್ಧ್ವಪುಂಡ್ರ- ನಾಮ ನಾರಾಯಣ ರಾಮ ಕೃಷ್ಣಾದಿ ಶ್ರೀಹರಿಯ ನಾಮವನ್ನೇ ಭಕ್ತಗೆ ಹೆಸರು ಮಾಡಿಕೊಂಬೋಣ- ಮಂತ್ರ ಅಂದರೆ ಮೂಲಮಂತ್ರಾದಿ ಜಪದೀಕ್ಷೆ. ಎಂತ ಅರ್ಥ- ಯಾಗ ಅಂದರೆ ಭಗವದ್ಪೂಜಾ॥ ಶ್ರೀವಿಷ್ಣುರಹಸ್ಯದಲ್ಲಿ ದೀಕ್ಷಾಧಿಕಾರಕ್ಕೆ ಒಂದು ಅಧ್ಯಾಯವೇ ಪ್ರವೃತ್ತವಾಗಿದೆ. ಗರುಡ ಪುರಾಣದಲ್ಲಿ "ವಿಣ್ಮೂತ್ರೋರ್ಜನ ಕಾಲೇಹ್ಯಪಾನಾತ್ಮಕ ಕೇಶವಂ ॥ ಅರುಣೋದಯ ಕಾಲ ಆರಂಭಿಸಿ ಪ್ರತ್ಯೇಕ ಪ್ರತ್ಯೇಕ ಆಹ್ನಿಕ ಕರ್ಮವನ್ನು ಮಾಡತಕ್ಕ ಕಾಲ ನಿಯಾಮಕ ಭಗವದ್ರೂಪಗಳನ್ನು ಸ್ಮರಿಸಬೇಕು॥ ನದೀ ಸ್ನಾನ ಕಾಲೇತು ವರಾಹಂ ಚಿಂತಯೇತ್ಸಗ। ಮುದ್ರಾಧಾರಣ ಕಾಲೇ ಕೃದ್ಧೋಲ್ಕಾದೀನ್ ಸ್ಮರೇತ್ಸಗ ॥ ವಸ್ತ್ರ ಪ್ರಸಾರಣ ಕಾಲೇ ವಾಯ್ವಂತರ್ಯಾಮಿಣಾಂ ಹರಿಂ। ಪ್ರಯಾಣ ಕಾಲೇ ಸಂಸ್ಮರೇಸ್ತಾರ್ಕ್ಷ್ಯವಾಹಂ। ಇತ್ಯಾದ್ಯರ್ಥಾನುಕೂಲ ಆಹ್ನಿಕ ಸುಳಾದಿ. ಅದರ ಕೊನೆಯ ತಾಳ ॥ ಅಡಿಗಡಿಗೆ

ಮಾಡುವ ಸಂಸಾರ ಯಾತ್ರೆಯಲ್ಲಿ ಬಿಡದೆ ಕರ್ಮಾವಳಿನ್ಯಸಗುವ ಕಾಲಕೇ" ಅಂದರೆ ಶೃತಿ ಸ್ಮೃತಿ ಕರ್ಮ ವ್ಯತಿರಿಕ್ತ ಗೃಹ ಕರ್ಮಗಳಲ್ಲಿ- ಮುಂದಿನ ಮಾತು ವಡನೊಡನೆ ಕೇಶವಾದಿ ಮೂರ್ತಿಗಳ ನೆನೆಸುವುದು.

*ನಡೆ ನುಡಿ ಮರೆಯದಲೆ ಮನದಲಿ ಚಿಂತಿಸಿ*
*ಪೊಡವೀಶ ರಂಗನ। ಕರುಣಾಕಟಾಕ್ಷವ*
*ಪಡೆದು ಧನ್ಯನಾಗೋ ಇಂಥಾದ್ದೇ ಸತ್ಕರ್ಮ*
*ಕಡೆ ಬೀಳುವುದು ಕಾಣೋ। ಸಂಸಾರಾಂಬುಧಿಯಿಂದ*
*ತಡೆಯದೆ ಹೆದ್ದಾರಿ ವೈಕುಂಠ ನಗರಿಗೆ*
*ಬಡವನಾದರೆ ಇನಿತು ತಿಳಿದು ಸಂಚರಿಸಿದರೆ*
*ಎಡಬಿಡದೆ ನೂರಾರು ಯಾಗ ಫಲ*
*ಕುಡಿದ ನೀರು ಮೊದಲಾಗಿ ಸರ್ವಾಂತರ್ಯಾಮಿ ಹರಿಯ*
*ಕಡು ಪೂಜೆ ಎನಿಪುದು. ಆವಾವ ಬಗೆ ಇರಲು,*
*ವಡಲಿಗೋಸುಗ ಇವು ಮಾಡಿದಡಾದರೆ*
*ಕಡಲ ಕೆರೆಯಂತೆ ಪುಣ್ಯ ಒಪ್ಪುದು*
*ದೃಢ ಮನಸಿನಲಿ ಮಾಡಿ ನೆನೆಸು ಕಾರ್ಯದಿಂದ।*
*ಪಡು ತುಪ್ಪೆಗಳನು। ಬಿಡು ಬಿಡು ಮತ್ತೆ ಬಿಡು*
*ವಡೆಯ ವಿಜಯ ವಿಠಲ ಸಕಲ ವಿಷಯದಲ್ಲಿ*
*ಹುಡುಕಿಸಿಕೊಳ್ಳದಲೆ. ಮುಂದೆನಿಂದಾಡುವ ॥ಜತೆ॥*
*ರಸನದೊಳಗೆ ಇನಿತು ನುಡಿದರೆ ತನ್ನ ದರ್ಶನ*
*ಕೊಡುವನು ವಿಜಯವಿಠಲ ವಲಿದು.*
*"ಹಾದಿ ನಡೆವಿದೆ ನರ್ತನೆಗಲೆಂದರ್ತವನೆ ಯೋಗಿ॥"*

ಎಂತ ಅಮೃತಸಾರ.

ಈ ಸುಳಾದಿಯನ್ನು ನಾಲಿಗೆಯಿಂದ ಉಚ್ಚಾರಣೆ ಮಾತ್ರಕ್ಕೆ ದರ್ಶನ ವದಗುತ್ತದೆ ಎಂತ ಹೇಳಿರೋಣದರಿಂದ ಕರ್ಮಗಳ ಮಾಡಿ ಆಕಾಲಕ್ಕೆ ತತ್ತನ್ಮೂರ್ತಿಗಳ ನೆನಿಸಬೇಕೆಂಬ ನಿಬಂಧನೆ ಕೆಲಸವಿಲ್ಲದೇ ಹೋಗಲಿ ಎಂದರೆ ದೀಪಕ್ಕೆ ಬತ್ತಿ ಹೇಗೆ ಆಧಾರವೋ ಹಾಗೆ ಇಂತಹ ವಿಶೇಷ ವಿಭೂತಿರೂಪ

ಚಿಂತನೆಗೆ ಕರ್ಮ ಮಾಡೋಣವೇ ಆಧಾರ ಎಂತ ಅರ್ಥವು. ವಿಶೇಷ ವಿಭೂತಿ ಎಂದರೆ– ಸಾಮಾನ್ಯ ವಿಭೂತಿರೂಪವು ಜೀವರ ಸರ್ವ ವ್ಯಾಪಾರ ಮಾಡತಕ್ಕದ್ದೇ ಸರಿ. ಆದಾಗ್ಯೂ ಸುಳಾದಿ– ಪಾನಕದಲ್ಲಿ ನರಸಿಂಹ ಮೂರುತಿ ಗಂಗಾ ಪಾನದಲ್ಲಿ ವಿಷ್ಣು ತ್ರಿವಿಕ್ರಮನೋ ॥ ಎಂತಲೂ, ಫಲ ಭಕ್ಷಣ ಕಾಲದಲ್ಲಿ ಶ್ರೀ ಕೃಷ ಎಂತಲೂ ಗಾನ ಮಾಡುವಾಗ ಯಜ್ಞೇಶ ಎಂದರೆ ಸ್ವಾಯಂಭುವ ಮನ್ವಂತರದಲ್ಲಿ ಇಂದ್ರ ಪದವಿಯನ್ನಾಳಿದ ಯಜ್ಞನಾಮಕ ರೂಪ ಧರಿಸಿ ಗಾನವನ್ನು ಕೇಳುತ್ತಾನೆ ಎಂತ ಅರ್ಥ. ಆನಂದಕಥಾ ಮಧ್ವ ಶಾಸ್ತ್ರ ಎಂದರ್ಥ. ಇತ್ಯಾದಿಗಳ ಹೇಳಿರುವುದಕ್ಕೆ ನೃಸಿಂಹರೂಪದಿಂದ ಪಾನಕ ಪಾನಮಾಡೋಣ ಕೃಷ್ಣ ರೂಪದಿಂದ ಫಲ ಭಕ್ಷಣ–ಉದಕ ಪಾನ ಮಾಡುವರೂಪ ತ್ರಿವಿಕ್ರಮ. ಆ ಉದಕಾಭಿಮಾನಿ ಬುಧನು ಉದಕಾಕಾರನಾಗಿ ತದಂತರ್ಗತ ಶ್ರೀ ಕೃಷ್ಣನು ಪರಮಾತ್ಮಗೆ ಕ್ಷಾತ್ವಾನಾರ್ಹ ಉದಕನಾಗಿರುವುದು ಸಮಾನ್ಯ ವಿಭೂತಿರೂಪ ಎಂತ ಅರ್ಥ। "ವಿಶೇಷಾಖ್ಯ ವಿಭೂತಿಸ್ತು ವಿಭೂತಿಶ್ಚ ಸ್ವಭಾವಜಾ। ದ್ವಿಧಾ ವಿಭೂತಿರ್ವಿಜ್ಞೇಯಾ" ಎಂತ ಏಕಾದಶ ತಾತ್ಪರ್ಯ.

ಜಪಸುಳಾದಿ ಮರ್ಮವೇನೆಂದರೆ "ಚೇತನಾಚೇತನಾಂತರ್ಗತ ಭಗವದ್ರೂಪ ಚಾತುರ್ಯದಲಿ ಉಂಟು ಅಣು ಮಹತ್ತು ಎಂತ ಪ್ರಾರಂಭಿಸಿ" ಜೀವಾಂತರ್ಯಾಮಿಂಯೋ ಯಾವದವ್ಯಾಕೃತಾಕಾಶ ಮಹಾಕಾಲಾದಿ ಪರಿಪೂರ್ಣನಾದ ಪ್ರಯುಕ್ತ ಭೂತಳದೊಳು ನಾಲಕು ಎಂಬತ್ತು ಲಕ್ಷ ಯೋನಿಜಾತನಿಂದ ಕಾಲಕ್ಕೂ ವಳಗಿಪ್ಪದೋ ಭೂತಿಕೊಡುವುದಿದು. ಅಪ್ರಯತ್ನ ಮಂತ್ರ ತೋರಗೊಡದಂಯ್ಯ। ಅಜ್ಞಾನಿಗೆ ಪ್ರಾತಃ ಕಾಲಾರಭ್ಯ ಅಪರೋದಯಪರ್ಯಂತ ಆತುಮದೊಳು ಸಿದ್ಧ ಸ್ವಚ್ಛವೃತ್ತಿ "ಎಂತಲೂ" ಜ್ಞಾತ ಕರ್ಮದಿಂದಾಗತ ಜನ್ಮಗಳ ಮಿಶ್ರ ಮಾತೃ ಗರ್ಭಾಸ್ಥಾನಾಶೇಷ ಪ್ರಾರಬ್ಧ ಧೌತವಾಗುವತನಕ ಇದೇ ಪ್ರಣವ ಮಂತ್ರವೆಂದು ಪ್ರೀತಿಯಿಂದಲೆ ಜಪಿಸು ಧ್ಯಾನೋಕ್ತದಿ ॥ ಅಂದರೆ ಧ್ಯಾನ ಪ್ರಕರಣ ಸುಳಾದಿ ಮರ್ಮವನ್ನು ಜಪದಲ್ಲಿ ತಿಳಿದು ಎಂತ ಅರ್ಥ. ಈ ಸುಳಾದಿಯಲ್ಲಿ ಶ್ವೇತದ್ವೀಪಗತ ವಾಸುದೇವನ ಅಂಶವನ್ನು ತೆಗೆದು ಪ್ರಾಣದೇವರ ಅಂತರ್ಗತನಲ್ಲಿ ಕೂಡಿಸಿ ಆ ಅಂಶವನ್ನು ಪರಮ ಗುರುಗಳ ಅಂತರ್ಗತನಲ್ಲಿ ತೇದು ಆ ಅಂಶವನ್ನು ಸ್ವಗುರು ಬಿಂಬರೂಪದಲ್ಲಿ ಕೂಡಿಸಿ ಅದರನ್ನು ತನ್ನ ಬಿಂಬನಲ್ಲಿ ಕೂಡಿಸಿಕೊಂಡರೆ

ಇದೇ ವಿಶೇಷ ಸನ್ನಿಧಾನವೆಂತ ಅರ್ಥವು. ಇದರಲ್ಲಿ ಯಾವ್ಯಾವ ಮಂತ್ರ ಜಪಿಸುತ್ತಾನೋ ಅಂತಹ ಗಾಯತ್ರೀ ನಾರಾಯಣಾಷ್ಟಾಕ್ಷರ ಕೃಷ್ಣ ಮಂತ್ರಾದಿ ಪ್ರತಿಪಾದ್ಯ ಮೂರ್ತಿಗಳನ್ನು ಭ್ರೂಮಧ್ಯದಲ್ಲಿ ಮನಮೂರ್ತಿಯ ಧ್ಯಾನಿಸಿ ಆಮಂತ್ರ ಎಷ್ಟು ಅಕ್ಷರದ್ದೋ ಅಷ್ಟಕ್ಕೂ ಒಂದೊಂದಕ್ಷರಕ್ಕೆ ಒಂದೊಂದು ದಳ ವಿಶಿಷ್ಟವಾದ ವಲಯವನ್ನು ಚಿಂತಿಸಿ ಷಟ್ಕೋಣ ಸೂರ್ಯ ಮಂಡಲದ ಮೇಲೆ ಮಂತ್ರಮೂರ್ತಿ ಮಾತ್ರ ವಲಯವೊಂದು. ಅನಂತರ ಅಷ್ಟಾಕ್ಷರಾದಿ ವಲಯಗಳ ತಿಳಿದು ಸುಳಾದಿ "ಇಪ್ಪತ್ತು ನಾಲ್ಕು ಐವತ್ತೊಂದು ಚಿಂತಿಸಿ ದಳದಂತೆ ತ್ರಿಕೋಣ ಬೀಜಗಳು" ಎಂತ ಸಂಕೋಚದಿಂದ ಜಪ ಸುಳಾದಿಯಲ್ಲಿ ಹೇಳಿರುವ ಪ್ರಕಾರ ವಲಯ ಮಂತ್ರಮೂರ್ತಿಗಳನ್ನು ವಲಯ ಮಂತ್ರಾಕ್ಷರ ಮೂರ್ತಿಗಳನ್ನು ಕೃಷ್ಣ ಮಂತ್ರವಾದರೆ ಕೃಷ್ಣ ಪ್ರಭೇದಗಳನ್ನಾಗಿ "ರಾಮ ರಾಮೋ ರಾಮ ಕೃಷ್ಣೋ ರಾಮ ವ್ಯಾಸ ಇತಿಸ್ಮ ವೈ। ಕೃಷ್ಣರಾಮಃ ಕೃಷ್ಣಕೃಷ್ಣಃ ಇತ್ಯೇವಂ ಶ್ವೇಶ್ಚಸಂಯುತಾಃ।" ಎಂತ ಸತ್ತತ್ವರತ್ನಮಾಲಾ ನಾರಾಯಣ ಪ್ರಕರಣ ರೀತಿಯಿಂದ ಸ್ವಮೂರ್ತಿ ಪರಿವಾರ ಸಹಿತ ಸರ್ವವೂ ಪ್ರಧಾನ ಮೂರ್ತಿ ಎಂದು ತಿಳಿದು. ಹೃದಯದಲ್ಲಿ ಮನೋಮಯ ವಲಯಗಳು ಹೇಗೆ ಹೇಗೆ ವಾಕ್ಯ ರೂಪ ಮಂತ್ರೋಚ್ಚಾರಣೆ ವಲಯ(೧) ಹಸ್ತದಿಂದ ತುಲಸೀವಲಯವೊಂದು ಇಂತಹ ತ್ರಿಕರಣ ವಲಯಗಳಲ್ಲಿಯೂ ಮಂತ್ರಾರ್ಥ ಸ್ಮರಣ ಭಗವದ್ರೂಪಗಳ ಸ್ಮರಣೆಯಿಂದ. ಸುಳಾದಿ ಆ ಆದಿ ಮಧ್ಯ ಮೂರುತಿ ಸುತ್ತ ಸೇರುವ ರೂಪದಿಂದ ಪೊಂದಿಕೊಂಡಿಪ್ಪವು. ಸ್ವಮೂರ್ತಿ ಪರಿವಾರ ರಾಶಿ ಸಿದ್ಧಿಸುವುದು ಕೇಳು, ಜಪಿಸಿ ತಿಳಿಯಬೇಕು. ಹೃದ್ಗುಹದಲ್ಲಿ ಇನಿತು ಚಕ್ರಾಬ್ಜ ಮಂಡಲ ಪದುಮ ಸುದರ್ಶನ ದಳದಲ್ಲಿ ಚಾರ ತಿಳಿದು ಪದ್ಧತಿ ತಪ್ಪದಲೆ ಪರಿಭ್ರಮಣೆತಾಹೋದು ಪದುಮ ಬಾಂಧವ ನಮ್ಮ ವಿಜಯವಿಠಲರೇಯ ಉದ್ಧರಿಸುವ ಬಿಡದೆ ಉನ್ನತಗತಿಯಿತ್ತು ॥ಜತೆ॥ ಜನ್ಮದೊಳಗೆ ಒಮ್ಮೆ ಈ ಪರಿ ಜಪಿಸಲು ಗುಣತ್ರಯ ನಾಶನ ವಿಜಯವಿಠಲ ವಲಿವ॥ ಹೃದಯ ಸ್ಥಾನದಲ್ಲಿ ಕಂಕಣ ಸುಳಾದಿ. ವಲಯ ಯಂತ್ರಸ್ಥಾಪನೆಗೆ ಸ್ಥಳವ್ಯಾವುದೆಂದರೆ ಪೂರ್ವೋಕ್ತ ಸಪ್ತಾಂಗುಲೋನ್ನತ ಲಕ್ಷ್ಮ್ಯಾತ್ಮಕ ಮಹಾ ಮಂಟಪದೊಳಗೆ, ಇದ್ದು ನವರತ್ನದ ವೇದಿಕೆಯೊಳಗೆ ಚಿಂತಿಸತಕ್ಕದ್ದು- ಇದು ಮಂಟಪಾಧಾರ ವೇದಿಕೆ ತ್ರಯಕ್ಕೆ ಸೇರಲಿಲ್ಲ- ಮಂಟಪದೊಳಗಿನ ರತ್ನವೇ ವೇದಿಕೆಯು. "ಸುವರ್ಣ ವೇದಿಕಾ ಮಧ್ಯೆ ಮಂತ್ರಾ ಸಿಂಹಾಸನಂ ಯಜೇತ್।" ಎಂತ ತಂತ್ರಸಾರ ಛಲಾರಿ ಟಿಪ್ಪಣಿ ಸಿದ್ಧ. ಕಂಕಣಾಕಾರ

ಸುಳಾದಿಯಲ್ಲಿ "ಇನ್ನಿಂತಾದರು ಸತ್ಯ" ಅಂತ ಹೇಳಿದ್ದಾರಾದುದರಿಂದ ಧನ್ವಂತರಿ ಮಂತ್ರ ಧ್ಯಾನಕ್ಕೆ ಮೂಲಾಧಾರದಿ ಸಹಸ್ರ ದಳ ಕಮಲ ಪರ್ಯಂತದಲ್ಲಿಯೂ ಶಿರಸ್ಸಿನ ತನಕ ಆರು ಧನ್ವಂತರೀ ಮನಮೂರ್ತಿಗಳನ್ನು ನಿಲ್ಲಿಸಿ ಷಡಾಧಾರ ಸ್ಥಲಗಳಲ್ಲಿಯೂ ಸಮಗ್ರ ಲಕ್ಷಣವುಳ್ಳ ಕಂಕಣ ಯಂತ್ರ ವಲಯ ಸ್ಥಾಪನೆ ಮಾಡ ಬೇಕು. ಎಂತ ತೋರಿಸಿ ಇದ್ದಾರೆ. - "ಕೃಪಾ ವತ್ಸಲ ವಿಷ್ಣು ವಲಯದಲ್ಲಿ ವಲಿದು ಕೃಪೆ ಮಾಡಿದನೋ ಲೇಶ ತಡವಾಗದೆ, ಎಂತ ಅನಾದಿ ಕರ್ಮ ಸುಳಾದಿ- ಹೃದಯ ವಲಯದಲ್ಲಿ ಬಿಂಬಾಪರೋಕ್ಷ ಎಂತ ಅರ್ಥ. ಬಿಂಬರೂಪನೇ ಶ್ರೀನಿವಾಸನಾದುದರಿಂದ ನೃಸಿಂಹಾದಿ ಸಾಮಾನ್ಯ ಮೂರ್ತಿ ಉಪಾಸನೆಗೆ ಸೇರಿಸದೆ ಶ್ರೀಭೂಮಿ ಸಹಿತವಾಗಿ ಹೃದಯದಲ್ಲಿ ಕುಳಿತು ಮೆರೆಯುವ ಮನ್ಮಥ ಕೋಟಿಲಾವಣ್ಯ ಎಂತ ಕೂತಿರೋಣ ಮಾತ್ರವೇ ಭೇದ ಎಂತ ಅರ್ಥವು. ಈ ಬಿಂಬಮೂರ್ತಿಯ ಧ್ಯಾನಾರ್ಥವಾಗಿ ಸೂರ್ಯಪುಟದಂತೆ" ಎಂಬ ಸುಳಾದಿ ಪ್ರವೃತ್ತವಾಗಿ ಅದೆ. ಪ್ರಕೃತ ಕಂಕಣಾಕಾರ ಸುಳಾದಿ "ಕಂಕಣಾಕಾರವನುಬರೆದು ಅದರ ಮಧ್ಯೆ ಓಂ' ಕಾರ ಎರಡು ಎಡ ಬಲದಿ ರಚಿಸಿ ಶಂಕೆಯಿಲ್ಲದೆ ನಡುವೆ ಘೃಣಿ' ಎಂದು ಲಿಪಿಸಿ ಮೀನಾಂಕನಯ್ಯನ ಪೀಠಸ್ಥಲವಿದೆಂದು "ಎಂತ ಆರಂಭ ಮಾಡಿ" ಮಧ್ಯೆ ವರ್ತುಳಮಾದಿತ್ಯಾಯ। ಎಂದು ನವಗ್ರಹ ಸ್ಥಾಪನಪ್ರಕಾರಕ್ಕೆ ಮಧ್ಯ ಸೂರ್ಯಾ ಅಷ್ಟಾಕ್ಷರವಲಯ ದಳಗಳಲ್ಲಿ ಮಿಕ್ಕ ಎಂಟು ಗ್ರಹಗಳನ್ನು ಸ್ಥಾಪಿಸಿ ಪ್ರಣವಾಷ್ಟಾಕ್ಷರಾದಿಗಳನ್ನು ಕವರ್ಗಾದಿ ವರ್ಣ ಸ್ಥಾಪನೆ ಕ್ರಮಕ್ಕೆ ತತ್ತ್ವ ತತ್ವೇಶ ಸ್ಥಾಪನೆ ಮೊದಲಾದದ್ದನ್ನು ಗ್ರಂಥ ವಿಸ್ತರ ಭಯುದಿಂದ ಬರೆಯುವುದಿಲ್ಲ. - ಪ್ರತ್ಯೇಕವಾಗಿ ತಿಳಿದುಕೊಳ್ಳುವುದು. ಅದರ ಮುಖ್ಯ ತಾತ್ಪರ್ಯ ಬ್ರಹ್ಮ ಗಾಯತ್ರೀ ವಲಯದ ಮೇಲೆ ಸುಳಾದಿ- ಇದರ ಮೇಲಕ್ಕೆ ಪಂಚಾಶತದಳವುಳ್ಳ ಕಮಲವನ್ನು ಬರೆದು ಪ್ರದಕ್ಷಿಣೆಯ ಮಾಡಿ ದ್ವಿರಷ್ಟ ಮಿಕ್ಕಾದ ಮೂವತ್ತೈದು ಇದೆ. ಇದೇ ದಳದಲ್ಲಿ ಲಿಪಿಸಿ ಅಜಾದಿಯ ವದಗಿ ಸ್ತೋತ್ರವ ಮಾಡು. ವರುಣದೇವತೆಯೆಂದು ತುದಿಮೊದಲಿದರ ವಿಸ್ತಾರವೇ ಈ ಪರಿಯಿದೆ. ಚಂಕ್ರಾಂಬುಜವೆಂದು ಕರೆಸುತಲಿಪ್ಪೋದು. ಹೃದಯಾಕಾಶವಾರಿ ಸ್ಥಂಡಿಲಗಳು ಸೂರ್ಯ ಮಂಡಲ ಸಮಸ್ತ ಉತ್ತಮಸ್ಥಾನ ಇದೇ ನಿರ್ಮಾಣ ಮಾಡಿ ಪದೋಪದಿಗೆ ಶ್ರೀಹರಿ ಧ್ಯಾನ ಮಾಡಲಿಬೇಕೋ- ಇದರೊಳು ಏಳು ಕೋಟಿ ಮಂತ್ರಾರ್ಥವೇ ಉಂಟು. ಅದಿದ್ಯೈವ ಅಧಿಭೂತ ಅಧ್ಯಾತ್ಮವೇ ಉಂಟು. ಅಧಿಕಾರತನ ಭೇದ ತಿಳಿಕೊಂಬೋ

ಜೀವರ್ಗೆ ಸದಮಲಾದ ಶ್ರೀ ವಿಜಯವಿಠಲರೇಯ ಬದಿಯಲ್ಲಿ ಇರುತಿಪ್ಪ ಚಕ್ರಾಬ್ಜ ಬಲ್ಲವನಿಗೆ- ಸ್ನಾನ ಉದಕ ಆಚಮನೀಯ ಸಂಧ್ಯಾರ್ಘ್ಯ ತ್ರಿಪದಾ ಯಣಿಸುವಾಗೆ ನಾನು ಸುಮಹಾಮಂತ್ರ ಜಪಿಸುವಾಗ ವೇಣುಅರ್ಚಾರ್ಚನೆ ಅರ್ಚಾ ಎಂದರೆ ಪ್ರತಿಮಾ ಎಂತ ಅರ್ಥ. ಮುಂದಿನ ಮಾತು.

ಪಾವಕಾಹುತಿ ಸುರರ ಪೂಜೆ ಆತ್ಮ ಸಂತೋಷ ಅನ್ನ ಪಾನಾದಿ ಕೊಡುವಗೆ – ಇದನೆ ಚಿಂತಿಸಬೇಕು. ಏನೆಂಬೆನಯ್ಯಾ ಅವ ಅಪರೋಕ್ಷಿ ಎಂದಿಗೂ ಧ್ಯಾನ ಸಂಪೂರ್ಣ ಸಿದ್ಧ. ಜ್ಞಾನವಂತಹನಾಹ ಪ್ರಾಣರಾಗಿಪ್ಪೋರು- ಹರಿಸಿರಿ ಪ್ರಾಣಾದ್ಯರು ಕಾಣಿಸಿಕೊಂಬೋರು ಒಂದೊಂದು ಮಂಡಲದಲ್ಲಿ ಆನಂದಗತಿಗೆ ಸಾಧನ ಬೇಕಾದರೆ- ಮಾನವ ಇದನೆ ಕೈಕೊಂಡು ಆಲೋಚಿಸಿ ಸುಸ್ಥಾನಾಸ್ಥಾನಕೆ ನಿನಗೆ ನಿನಗೆ ಶುಭವಕ್ಕು ಪುಸಿಯಲ್ಲ ದೀನನಾಥನವೇ ವಿಜಯವಿಠಲರೇಯ ನಗನವ ಮಾಡಿರೋ ಗ್ರಹಿಸು ಈ ಪರಿಯಿಂದ ॥ಜತೆ॥ ಸಿದ್ಧ ಸಾಧನವಿದು ಬಿಂಬಕಾಂಬುವುದಕ್ಕೆ। ಪದ್ಮವಲ್ಲಭ ನಮ್ಮ ವಿಜಯವಿಠಲರೇಯ ಪ್ರಾಪ್ತಿ॥

ಈ ಪ್ರಕಾರ ಔಪಾಸನಾಗ್ನಿ ಸೂರ್ಯ ಚಂದ್ರ ನದೀ ಚಲಾಚಲ ಮೊದಲಾದ ಸ್ತ್ವೋತ್ತಮಾಧಿಷ್ಠಾನದಲ್ಲಿ ಹೃದಯದಂತೆಯೇ ವಲಯ ಪೀಠ ಚಿಂತನೆಯಿಂದಲೇ ಬಿಂಬಾಪರೋಕ್ಷಕ್ಕೆ ಸನ್ನಿಧಿಧಾನಾಭಿವೃದ್ಧಿ ಆಗುತ್ತದೆ ಎಂತ ಅರ್ಥವು.

ಅನಂತರ ಆಹಾರ ವಿಷಯದಲ್ಲಿ ಅಪರೋಕ್ಷ ಸಾಧನ ಚಿಂತನೆಗೆ ಪ್ರಾಣಾಹುತಿ ಸುಳಾದಿ "ಆಹುತಿ ಕೊಡುವುದು- ಪಂಚಪ್ರಾಣನಿಗೆ ಸಂದೇಹ ಮಾಡದಲೆ ಮನಸ್ಸುಪೂರ್ವಕದಿಂದ ದೇಹದೊಳಗೆ ಐದು ಸ್ಥಾನಗಳಲ್ಲಿ ತಿಳಿದು ಸ್ವಾಹಾಲೋಲನ ಪ್ರೀತಿ ಪಡಿಸಿ ಉಣಿಸಿ। ಆಹಾರ ಮೆಲ್ಲುವಾಗೆ ಮರಿಯಲಾಗದು ಅತಿಸ್ನೇಹ ಭಾವದಿಂದ ಸರ್ವದಲ್ಲಿ ಮಹಾ ಪುಣ್ಯಬಪ್ಪುದು ಮಾಡಿದಘಾರಣ್ಯ ದಹನವಾಗುವುದು ತಡವಿಲ್ಲದೆ- "ಎಂತ ಉಪಕ್ರಮಿಸಿ ವಿಸ್ತರದಿಂದ ಹೇಳಿ ಇದ್ದಾರೆ." ಯದ್ಜ್ಞಾತ್ವಾಮುಚ್ಯತೇಜಂತುರ್ಜನ್ಮ ಮೃತ್ಯುಜರಾದಿಭಿಃ । ಪರಿಜ್ಞಾನೇನ ಮುಂಚಂತೆ ನರಾಃ ಪಾತಕ ಕಿಲ್ಬಿಷೈಃ॥ ವಿಧಿನಾ ಭುಂಜ್ಯತೇ ಯೋನ ಮುುಚ್ಯತೇ ಚ ಋಣತ್ರಯಾತ್। ಕುಲಾನುದ್ಧರತೇ ವಿಪ್ರೋವರಕಾದೇಕವಿಂಶತೈಃ॥ ಸರ್ವ ಯಜ್ಞ ಫಲಂ ಪ್ರಾಪ್ಯ ವಿಷ್ಣೋಃ ಸಾಯುಜ್ಯ

ಮಾಪ್ನುಯಾತ್। ಹೃತ್ಪುಂಡರೀಕರಮಣಂ ಮನೋಮಂಥಾನ ಸಂಜ್ಞಿತಂ ।ವಾಯು ಯಜ್ವಾ ಮುಖೇಚಾಗ್ನಿರಾತ್ಮಾಧ್ವರ್ಯುಃ ಪ್ರಕೀರ್ತಿತಃ। ಇತ್ಯಾದಿ ಪ್ರಾಣಾಗ್ನಿ ಹೋತ್ರ ಚಿಂತನೆಗೆ ಪ್ರತ್ಯೇಕ ಸುಳಾದಿ ಅದೆ. ಭೋಜನ ಪ್ರಕರಣಕ್ಕೂ ಅಂಗುಲಿ ನಿಯಮ ಸ್ಥಾನ ನಿಯಮಗಳಿಂದ ಪೂರಣ ಪೂರಕ ಮಂತ್ರೇಣ ರೇಚಕಾಂತ ವಿನಿರ್ದಿಶೇತ್ । ಇತ್ಯಾದಿ ಪ್ರಕರಣಾನುಕೂಲವಾಗಿ ಶ್ವಾಸ ಪೂರಣ ರೂಪವಾಗಿ ಆಹುತಿ ಸ್ವೀಕರಿಸಿ, ಒಂದು ಶ್ವಾಸ ಪೂರ್ತಿ ರೇಚಕವಾಗುವತನಕ ಪಂಚಾಗ್ನಿಯನ್ನು ಬೇರೆ ಬೇರೆ ಸೇರುತ್ತದೆ ಎಂತ "ಬ್ರಹ್ಮಣೇ ಸ್ವಾಹ" ಎಂಬ ಸೃಷ್ಟು ಕೃದ್ದ್ಯೋವಾಕ ತನಕ ಆರು ಶ್ವಾಸ ಬಿಡುವ ಕಾಲ ಪರಿಯಂತ ಆರು ಆಹುತಿ ಕೊಡಬೇಕೆಂದು ೩೨ ಕವಳಕ್ಕೆ ಪ್ರಣವಾಯುವದ ವಿಶ್ವಾಸದಿ ಎಂಟು ಮೂರ್ತಿಗಳನ್ನು ಗಾಯತ್ರಿಯ ಕೇಶವಾದಿ ೨೪ ಮೂರ್ತಿಗಳ ಸಹಿತ ಕವಳ ಮೂರ್ತಿಯನ್ನು ಕೇವಲ ವಿಸ್ತರವಾಗಿ ಪ್ರತ್ಯೇಕವಾಗಿ ಭೋಜನ ಪ್ರಕರಣ ಸುಳಾದಿಯು ಕೇವಲ ಭಗವಚ್ಚಿಂತನೆಗೆ ಮುಖ್ಯವಾಗಿ ಹೊರಟಿದೆ. ಮುಖೇಚಾಹವನೀಯಃ ಹೃದಯೇ ಗಾರ್ಹಪತ್ಯಃ । ನಾಭೌ ದಕ್ಷಿಣಾಗ್ನಿಃ। ದಕ್ಷಿಣೇ ನಾಭೇ ಸುರಭಿಃ ಉತ್ತರೇ ಶರಭಿಶ್ಚೇತಿ। ಪ್ರಾಣೋ ಹೋತಾ ಅಪಾನೋದ್ಗಾತಾ ವ್ಯಾನೇ ಬ್ರಹ್ಮ ಉದಾನೋ ಅಧ್ವರ್ಯುಃ ಸಮಾನೋ ಯಜಮಾನಃ ಓಂಕಾರೋ ಯಾಪಃ ಅಹಂಕಾರಃ ಪಶುಃ ಬುದ್ಧಿಶ್ಚ ಪತ್ನೀ ಪೃಥ್ವೀಚಾರಣಿಃ ವೇದೀ ಚ ಪೃಷ್ಠಾ ರೋಮಾಣಿ ದರ್ಭಾಃ ಜಿಹ್ವೇ ಸ್ರುಕ್ ಸ್ರುವೌ ಮನೋವಿಭಕ್ತಾ ಆದಿತ್ಯಃ ಸೋಮಾಗ್ನಿಃ ವಾಯುಪರ್ಜನ್ಯಃ ಪ್ರಧಾನದೇವತಾಃ ಅಮೃತ ಋಷಿಃ ಸತ್ಯೋ ದೇವತಾ ಗಾಯತ್ರೀಚ್ಛಂದಃ ಅಮೃತ ಪ್ರಾಶನೆ ವಿನಿಯೋಗಃ ಶ್ರದ್ಧಯಾ ಪ್ರಾಣೇ ನಿವಿಷ್ಟೋ ಅಮೃತಂ ಜುಹೋಮಿ ಶಿವೋ ಮಾವಿಶಪ್ರದಾಯ ಪ್ರಾಣಾಯ ಸ್ವಾಹಾ। ಪ್ರಾಣಾತ್ಮನೇಕ್ಷುಧಾಗ್ನಯೇ ಆದಿತ್ಯಾಂತರ್ಗತ ಅನಿರುಧ್ಧಾಯೇದಂ॥ ಅಪಾನೀಯೇತಿ ಮಂತ್ರಸ್ಯ ಗೋಕ್ಷೀರ ವರ್ಣ ಶ್ರದ್ಧಾಗ್ನಿ ಋಷಾಃ ಸೋಮೋದೇವತಾ ತ್ರಿಷ್ಟುಪ್ ಛಂದಃ ಅಸ್ಯ ಹೋಮೇ ವಿನಿಯೋಗಃ ಶ್ರಧ್ಧಯಾ ಮಪಾನೇ ನಿವಿಷ್ಟೋ ಇತ್ಯಾದಿ ಅಪಾನಾಯ ಸ್ವಾಹ। ಅಪಾನಾತ್ಮನೇ ಶ್ರಧ್ಧಾಗ್ನಯೇ ಸೋಮಾಂತರ್ಗತ ಶ್ರೀಪ್ರದ್ಯುಮ್ನಾಯೇದಂ ॥೨॥ ವ್ಯಾನಾಯೇತಿ ಮಂತ್ರಸ್ಯ ಪದ್ಮ ವರ್ಣ ಹುತಾಶನ ಋಷೀಃ ಅಗ್ನಿದೇವತಾ ಅನುಷ್ಟುಪ್ ಛಂದಃ ಅಸ್ಯ ಹೋಮೇ ವಿನಿಯೋಗಃ ಶ್ರದ್ಧಯಾಮಿತ್ಯದಿ ಸ್ವಾಹ। ವ್ಯಾನಾತ್ಮನೇ ಹುತಾಶನಾಗ್ನಯೇ ಅಗ್ನ್ಯಂತರ್ಗತ ಶ್ರೀ ಸಂಕರ್ಷಣಾಯೇದಂ। ॥೩॥ ಉದಾನಾಯೇತಿ ಮಂತ್ರಸ್ಯ ರುದ್ರ ಗೋಪವರ್ಣ ಸ್ಪರ್ಶಾಗ್ನಿ ಋಷಿಃ

ವಾಯು ದೇವತಾ ಬೃಹತೀ ಛಂದಃ ಅಸ್ಯ ಹೋಮೇ ವಿನಿಯೋಗಃ ಶ್ರದ್ಧಯಾಮಿತ್ಯಾದಿ ಸ್ವಾಹ। ಉದಾನಾತ್ಮನೇ ಸ್ಪರ್ಶಾಗ್ನಯೇ ವಾಯ್ವಂತರ್ಗತ ಶ್ರೀ ವಾಸುದೇವಾಯೇದಂ॥ ॥೪॥ ಸಮನಾಯೇತಿ ಮಂತ್ರಸ್ಯ ವಿದ್ಯುದ್ವರ್ಣೋ ವಿರೂಪಾಗ್ನಿ ಋಷಿಃ ಪರ್ಜನ್ಯೋ ದೇವತಾ ಪಂಗ್ತಿ ಛಂದಃ ಅಸ್ಯ ಹೋಮೇ ವಿನಿಯೋಗಃ ಶ್ರದ್ಧಯಾಮಿತ್ಯಾದಿ ಸ್ವಾಹ। ಸಮಾನಾತ್ಮನೇ ವಿರೂಪಾಗ್ನಯೇ ಪರ್ಜನ್ಯಾತರ್ಗತ ಶ್ರೀ ನಾರಾಯಣೇದಂ॥ ॥೫॥ ಅಯಮಹಮಗ್ನಿ ವೈಶ್ವಾನರೋಯಂ ವಾಯುದೈವತ್ಯೋ ದೇವೀ ಗಾಯತ್ರೀ ಛಂದಃ ಪೂರ್ಣಾಹುತಿ ಹೋಮೇ ವಿನಿಯೋಗಃ ಸಚೇತ ಆತ್ಮನೇ ಬ್ರಹ್ಮಣೇ ಸ್ವಾಹ। ಪರಮಾತ್ಮನೇದಂ॥ ಎಂತಲೂ ಪ್ರಾಣೇಭ್ಯೋಜುಹುಯಾದನ್ನಂ ವ್ಯಂಜನ ಕ್ಷೀರ ವರ್ಜಿತಂ। ಇತ್ಯಾದಿ "ತುಲಸೀ ಮಿಶ್ರಮನ್ನಂ ತು ಯೋದದ್ಯಾತ್ಪ್ರಾಣ ಪಂಚಕೇ। ಸಿಕ್ಥೇ ಸಿಕ್ಥೇ ಭವೇತ್ತಸ್ಯ ಪುಣ್ಯಂ ಯಜ್ಞ ಶತಾಧಿಕಂ।" ಎಂತಲೂ "ಪಾತ್ರತ್ಯಾಗೀ ಭವೇದಂಧಃ" ಎಂತಲೂ ಭೋಜನೇ ಪಾತ್ರಮುತ್ಸಜ್ಯಯೋ ಭುಂಜೀತಿ ನರಾಧಮಃ ಶ್ವಾನ ಸೂಕರ ಭೋಜೇಸ್ಯಾನ್ನವಿಷ್ಣುಃ ಪ್ರೀತಿಮಾವಹೇತ್। ತಸ್ಮಾತ್ಪಾತ್ರಂ ಪೃಷ್ಟ್ಯೈವ ಭೋಜನಂಹಿ ಸಮಾಚರೇತ್ । ಇತಿ ನಾರದೀಯೇ ಎಂತಲೂ ಸಿಕ್ಥಾನಾಂತು ಚತುಷ್ಷಷ್ಟಿಃ ಪ್ರಾಣಾದೀನಾಂ ಯಥಾಕ್ರಮಂ ಪಂಚಸಿಕ್ಥಾತ್ಮಕಾದ್ಯಸ್ಯ ಪ್ರಾಣಸ್ಯೈವಾಹುತಿರ್ಭವೇತ್ । ತತಃ ಷಡಾತ್ಮಕಂ ಜ್ಞೇಯಮಪಾನೇಸ್ಯಾಹುತಿಂ ಕ್ಷಿಪೇತ್। ವ್ಯಾನಸ್ಯಷ್ಟ ಸಿಕ್ಥಾತ್ಮಾ ಆಹುತಿಃ ಪರಿಕೀರ್ತಿತಾ॥ ದಶದ್ವಾದಶ ಸಿಕ್ಥಾತ್ಮಾ ತಥೋದಾನ ಸಮಾನಯೋಃ। ಶೇಷಸ್ತು ಸ್ವಿಷ್ಟಕೃದ್ಭಾಗಂ ಭೋಜಿಷ್ಯೇ ಬ್ರಾಹ್ಮಣೋ ಹವಿಃ । ಎಂತ ಇತ್ಯಾದಿ ಪ್ರಮಾಣಗಳು ಭಾವಪ್ರಕಾಶಿಕಾ ಸಿದ್ಧಾ. ಸುಳಾದಿ "ಸಕ್ತಮಾನವನೆನಿ ತುಳಸೀಮಿಶ್ರ ರಹಿತ ತುತ್ತು ತೆಗೆದು ಕೋಂಡರೆ ವಮನ ಸರಿಯೇ । ಎಂತ ಭೋಜನ ಕ್ರಮ ಸುಳಾದಿ. ಪ್ರಕೃತ ಪ್ರಾಣಾಹುತಿ ಸುಳಾದಿಯಲ್ಲಿ "ಓಂ ಪ್ರಾಣವೆಮ್ಮಿಗೆ ಹೋಮಿಸುವುದು ಸ್ವಾಹ ಕಡೇಲಿ ನುಡಿದು." ಅಂದರೆ ಆಹುತಿಯು ಸ್ಥಾನವನ್ನು ಸೇರುವತನಕ ಸ್ವಾಹಾಕಾರ ಹೇಳ ಕೂಡದು. ಏಕೆಂದರೆ ಸ್ವಾಹ ಶಬ್ದೋಚ್ಚಾರಣೆಯೇ ಬಾಹ್ಯಕ್ಕೆ ಶ್ವಾಸ ರೇಚನೆ ರೂಪವಾಗೋಣವೇ ಬಾಧಕ ಎಂದರ್ಥ. ಮುಂದಿನ ಮಾತು. "ಋಗ್ಮ ವರ್ಣಾಕ್ಷದಾಗ್ನಿ ಋಷಿ ದೇವತಾ ಗಗನ ಮಣಿಯನ್ನು ಗಾಯತ್ರೀ ಛಂದಸ್ಸು ಬಗೆಯನ್ನು ತಿಳಿದು ಶಿವ ಪುತ್ರನು ಪವನ ಮಗನು ಚಕ್ಷು. ಶ್ವಾಸೋಚ್ಛ್ವಾಸದಭಿಮಾನಿಗರುಪಿ. ಅಹಿ ಗರುಡ ಪ್ರಾಣವಾಚ್ಯರಿವರು,

ದಿಙ್ನಾಮಕಳು ಭಾರತೀದೇವಿ, ಆತರುವಾಯ ಜಗಜ್ಜೀವನತನಕ ಅಧಿಕಾರವ ಗ್ರಹಿಸಿ ನಿಗಮಾಭಿಮಾನಿ ಶ್ರೀಲಕುಮಿಯವಿಡಿದು ಪ್ರಾಣನಾಮಕ ಅನಿರುದ್ಧಾತ್ಮಕ ಅಗಣಿತಗುಣಸಾರ ವೈಶ್ವಾನರನಿಗೆ ಸೊಗಸಾಗಿ ಕೊಟ್ಟು ತೃಪ್ತಿಯ ಪಡಿಸಿರೋ ಪೊಗಳಿದವರ ಪ್ರಾಣ ವಿಜಯವಿಠಲರೇಯ ದೇವಾದಿಗಳ ಕೈಂಯ್ಯ ವಾಲಗವಾಗೊಳುತಿಪ್ಪ.'' ಇದೇ ಪ್ರಕಾರ ಆರುತಾಳಗಳಿಂದ ಆರುಆಹುತಿಗಳನು ಹೇಳಿದ್ದಾರೆ. ಅದರ ತಾತ್ಪರ್ಯ- ಪ್ರಾಣ ಶಬ್ಧ ವಾಚ್ಯರು ಗಣಪತಿ ವಿಶ್ವಕ್ಸೇನಾದಿಗಳು. ಗರುಡ ಶೇಷ ರುದ್ರಾದಿಗಳು ಪ್ರತ್ಯೇಕ ಪ್ರತ್ಯೇಕವಾಗಿ ಪಂಚ ವ್ಯೂಹಗಳ ಧರಿಸಿ ಪ್ರಾಣಾದಿ ಸಮಾನಾಂತ ಶಬ್ದವಾಚ್ಯರೇ ಸರಿ. ವಿಶ್ವ ತೈಜಸಾದಿ ಭಗವನ್ನಾಮವುಳ್ಳ ವಿಶ್ವ ತೈಜಸಾದಿ ಭಾರತೀ ಪುತ್ರರು ಎಂಟು ಜನರೂ ಪಂಚವ್ಯೂಹವೇ ಸರಿ. ''ವಿಶ್ವಾದ್ಯಾ ಅನಿರುದ್ಧಾದ್ಯಸ್ತದ್ವಿಧಾ ಸಂಪ್ರಕೀರ್ತಿತಾಃ । ವಿಷ್ಣುರೂಪಾಸ್ತದನ್ಯೇಚೇತಾನ್ ಸರ್ವಾನ್ನ್ಯಾತಿ ಮೋಕ್ಷಗಃ ।'' ಎಂತ ತತ್ತ್ವವಿವೃತ್ತಿಯಲ್ಲಿ ಉದಾಹೃತ ಭಾಗವತ ತಾತ್ಪರ್ಯ ಭೇದವೇನೆಂದರೆ ಪ್ರಾಣ ಶಬ್ದಕ್ಕೆ ಚಕ್ಷುರಭಿಮಾನಿ ಸೂರ್ಯನು ಅಪಾನ ಶಬ್ದಕ್ಕೆ ಶ್ರೋತ್ರಾಭಿಮಾನಿ ಚಂದ್ರನು, ವ್ಯಾನ ಶಬ್ದಕ್ಕೆ ವಾಗಭಿಮಾನಿ ಅಗ್ನಿಯೂ, ಉದಾನ ಶಬ್ದಕ್ಕೆ ಪರ್ಜನ್ಯನೂ ಇವರು ಮಂತ್ರ ಒಂದೊಂದು ವ್ಯೂಹಕ್ರಮಕ್ಕೆ ನಿಂತು ಇದೇ ಕ್ರಮಕ್ಕೆ ಪಂಚವ್ಯೂಹಗಳಲ್ಲಿ ವ್ಯೂಹ ದೇವತೆಗಳ ಅಂತರ್ಗತ ಭಾರತೀ ದೇವಿಯು 'ದ್ಯು' ಶಬ್ದ ವಾಚ್ಯ ಅನೇಕ ರೂಪಗಳಿಂದಲೂ 'ದಿಕ್' ಶಬ್ದ ವ್ಯೂಹ ರೂಪಗಳಿಂದಲೂ 'ಪೃಥ್ವೀ' ಶಬ್ದ ವಾಚ್ಯ ವ್ಯೂಹ ರೂಪಗಳಿಂದಲೂ ಆಕಾಶ ಶಬ್ದ ವಾಚ್ಯ ವ್ಯೂಹರೂಪಗಳಿಂದಲೂ, ವಿದ್ಯುಚ್ಛಬ್ದ ವಾಚ್ಯ ವ್ಯೂಹ ರೂಪಗಳಿಂದಲೂ ಭಾರತೀ ಪಂಚ ವ್ಯೂಹಾಂತರ್ಗತ ಶಾಂತಿ, ಕೃತಿ, ಜಯಾ, ಮಾಯಾ ಶ್ರೀವ್ಯೂಹಾಂತರ್ಗತ ಅನಿರುದ್ಧ ಪ್ರದ್ಯುಮ್ನ ಸಂಕರ್ಷಣ ವಾಸುದೇವ ನಾರಾಯಣ ವ್ಯೂಹಗಳಿಗೆ ತೃಪ್ತಿಯಾಗಬೇಕೆಂದು ಕೊಡತಕ್ಕ ಆಹುತಿ ಹೇಗೆ ಸೇರುತ್ತದೆ ಎಂದರೆ- ಈಗ ಹೇಳಿದ್ದು ಮಂತ್ರವಾಚ್ಯ ವ್ಯೂಹಗಳಾದ ಪ್ರಯುಕ್ತ ಶ್ರೀಹರಿಯನ್ನು ಗುರುಗಳನ್ನೂ ಪಿತೃಗಳನ್ನೂ ಉದ್ದೇಶ ಮಾಡಿ ಅವರಿಗೆ ಸೇರಬೇಕೆಂದು ಹೇಳಿ ಬ್ರಾಹ್ಮಣರ ಮುಖದಲ್ಲಿ ಅನ್ನದಾನ ಮಾಡಿದ ಹಾಗೆ ವೈಶ್ವಾನರ ನಾಮಕ ಅನಿರುದ್ಧಾದಿ ಪಂಚರೂಪನು ಪಂಚಾಗ್ನ್ಯಂತರ್ಗತನಾಗಿ ಮಂತ್ರವಾಚ್ಯನಲ್ಲವಾದ್ದರಿಂದ ಬ್ರಾಹ್ಮಣನು ತೃಪ್ತನಾಗುವ ಹಾಗೆ. ಅಗ್ನಿನಾಮಕ ಹರಿಯ ರೂಪಗಳೂ ಸಂತುಷ್ಟರಾಗಿ ಆ ಅಗ್ನಿದೇವರು ಚಂದ್ರನ ಸಮೀಪಕ್ಕೆ

ತೆಗೆದು ಕೊಂಡುಹೋಗಿ ಅಮೃತಮಯ ಮಾಡಿ ದೇವತೆಗಳಿಗೆ ಸಲ್ಲಿಸುತ್ತಾರೆ. ಎಂತ ತಿಳಿಯ ಬೇಕು. ನಮ್ಮ ಸ್ಥೂಲ ಭೋಜನಾರ್ಹ ಆಹುತಿಗಳು ಮಾತ್ರ ಜಡಾಗ್ನಿಯಲ್ಲಿ ಭಸ್ಮವಾಗುತ್ತದೆ. ದೇವತಾರ್ಹ ಆಹುತಿಗೆ ಜಡಾಗ್ನಿಯಲ್ಲಿ ಬಾಧೆಯಿಲ್ಲ. ರಕ್ತ ಗಂಧ ರಕ್ತ ಪುಷ್ಪಾದಿ ಸಕಲೈಶ್ವರ್ಯದಿಂದ ಅಗ್ನಿದೇವರು ಅಗ್ನಿಯಲ್ಲಿ ಒಪ್ಪುತ್ತಾರೆ. ಅತಏವ ವೈಶ್ವಾನರೋಪಾಸನೆ ಮಾಡಲಾಗಿ ಎಂತ ಸುಳಾದಿ ಮುಂದಿನ ಭಾಗ. "ಅನಿರುದ್ಧಾತ್ಮಕ ವಿಶ್ವ ಅಂತರಾತ್ಮಕ ತೈಜಸನು ಪ್ರದ್ಯುಮ್ನ ಪರಮಾತ್ಮ ಪ್ರಾಜ್ಞನು. ಸಂಕರ್ಷಣ ಮೂಲ ವ್ಯೂಹವಾಗಿ ಅನುದಿನ ಮಧ್ಯಮ ಸ್ಥೂಲ ಸೂಕ್ಷ್ಮಸಾರವನ್ನು ಬಿಡದೆ ಉಕ್ತಪ್ರಕಾರದಲ್ಲಿ ಎಣಿಸಿ ತಿಳಿದು ವೈಶ್ವಾನರೋಪಾಸನೆ ಮಾಡಲಾಗಿ ಅಂದರೆ ಅನಿರುದ್ಧ ಆತ್ಮಾ ವಿಶ್ವ ಹೀಗೆ ಜಾಗ್ರತ್ಕಾಲಕ್ಕೆ ಸ್ಥೂಲಸಾರಕ್ಕೆ ಮೂರು ರೂಪಗಳು ಸ್ವಪ್ನ ಕಾಲಕ್ಕೆ ಮಧ್ಯಮ ಸಾರಕ್ಕೆ ಮೂರು ಪ್ರದ್ಯುಮ್ನ ಅಂತರಾತ್ಮ ತೈಜಸ ರೂಪಗಳು. ನಿದ್ರಾ ಕಾಲ ಕಿಂಚಿತ್ಸ್ವರೂಪಾನಂದ ಭೋಜನಕ್ಕೆ ಮೂರು ರೂಪಗಳು. ಇಂಥ ಮೂರು ವ್ಯೂಹ ಸಂಕರ್ಷಣ ಪರಮಾತ್ಮ ಪ್ರಾಜ್ಞರೂಪರಾಗಿ ಇದ್ದಾರೆ. ಮುಂದಿನ ಮಾತು." ಈತ ನಾಡ್ಯಂತರ್ಗತವಾದ ರೂಪ ಅನಿರುದ್ಧಾದಿ ವಿಶ್ವಾದ್ಯಂಟು ಮೂರುತಿ ಮಿನುಗುವ ಚತುರ್ವಿಂಶತಿ ಮೂರುತಿ. ಅನ್ನಮಯಾದಿ ಕೃದ್ಧೋಲ್ಕಾದಿ ಪಂಚಸನತ್ಕುಮಾರ ಮೂರುತಿ, ಸಾಸಿರ ಮೂರುತಿ ಮುನಿ ವೇದವ್ಯಾಸಾದಿ ಶಿಂಶುಮಾರ ವನಚರಾದ್ರೂಪ ವನಚರ ಅಂದರೆ ಉದಕಚರ ಮತ್ಸ್ಯ ಎಂತ ಅರ್ಥ. ಮುದೆ ಪರಾದಿ ಅಜಿತರೂಪ ಗಣನೆ ಇಲದೆ. ಮೂರ್ತಿ ಶಕ್ತ್ಯಾದಿ ಹನ್ನೊಂದು ವನಜಾಂಡಕಾಧಾರ ಶ್ರೀಧರ ತ್ರಿಧಾಮದಲ್ಲಿ ವಾಸ ಅನಿಮಿಷ ಪೆಸರಿನ ಶಬ್ದ ಮೂರುತಿ। ಘನ ಅಣುವಿನಲಿ ತದಾಕಾರ ತದ್ವರ್ಣ ಮನುಜ ದನುಜರಲಿ ತದಾಕಾರ ಮೂರುತಿ ದಿನ ಕುಲ ಮೃಗ ಪಕ್ಷಿ ತುರುಗಿರಿ ನಭ ವಾಯು ಅನಲ ಉದಕ ಭೂಮಿ ಶರಧಿ ನದಿಯಲಿಪ್ಪ। ಮನ ಕನಸು ನಾನಾ ವಸ್ತು ಈ ಮಿಕ್ಕಾದರಲ್ಲಿ ಗುಣ ಅವಿಕಾರ. ಅಖಂಡವ್ಯಾಪ್ತ ಇನಿತು ತಿಳಿದು ಪಂಚರೂಪನಲ್ಲಿ ನೆನೆದು ಚಿಂತನೆ ಮಾಡಿ ಏಕೀಭೂತಾ ಮುನಿಗಳ ಮತವಹುದು ದೇವ ತೃಪ್ತನಾಹ ಅನುಮಾನಗೊಳದಿರಿ ಜಗದೊಳಗೆ ಜನನ ದೂರ ನಮ್ಮ ವಿಜಯವಿಠಲರೇಯ ಘನದೋಷ ತಿಮಿರಕ್ಕೆ ಮಾರ್ತಾಂಡ ಕಾಣೋ ॥೮॥ ಇಂತು ಭೋಜನ ಮಾಡೆ ಅನ್ನದೋಷದಿಂದ ಸಂತತ ನಿರ್ಲಿಪ್ತ ಅನ್ನಾಭಿಮನಿಗಳು ಸಂತುಷ್ಟರಾಗೋರು. ಅಗ್ನಿ ಚಂದ್ರ ಸೂರ್ಯ ಮಿತ್ರ(ಮಂತ್ರಿ) ದಕ್ಷ ಕಾಮ

ಇಂದ್ರ ಉಮಾದೇವಿ ಕಂತುಹರ ಶೇಷ ಗರುಡರಿವರ ಸ್ತ್ರೀಯರು ಮಾತೆ ಭಾರತೀ ದೇವಿ. ವಾರಿಜ ಭವ ಕಂತು ಜನನೀ ಲಕುಮೀ ಈಸು ಜನರು ನಿರಂತರದಲಿ ಅನ್ನದಲ್ಲಿ ಅಭಿಮಾನಿಗಳು. ಇಂತು ರಸಪ್ರದ ನಿಯಾಮಕ ವಿಷ್ಣು ಭಗವಂತನು ಇರುತಿಪ್ಪ ಇವನ ವಿನವಾಗಿ। ಚಿಂತಿಸು ಭೋಕ್ತರಲ್ಲಿ ಸಂಕರ್ಷಣ ಪ್ರದ್ಯುಮ್ನ ಶಾಂತಿರಮಣ ನಾರಾಯಣ, ಭೋಜ್ಯ ದ್ರವ್ಯಗಳಲ್ಲಿ ಅಂದರೆ "ನಾರಾಯಣಾನಿರುದ್ಧೇತು ಭೋಜ್ಯ ವಸ್ತುಷು ಸಂಸ್ಥಿಥಾ ।ತರ್ಪಕೌ ಸರ್ವ ಜೀವಾನಾಂ ತಸ್ಮಾದ್ಭೋಜ್ಯ ನ ಚರ್ವತಃ। ಸಂಕರ್ಷಣಶ್ಚ ಪ್ರದ್ಯುಮ್ನೋ ತತ್ರ ಭೋಕ್ತೃಷು ಸಂಸ್ಥಿತಾ॥ ಭೋಕ್ತೃ ಶಕ್ತಿ ಪ್ರದಾತಾತಾ ಭೋಕ್ತಾತಾಚ ವಿಶೇಷತಃ। ಅವಕಾಶ ಪ್ರದೋನಿತ್ಯಂ ವಾಸುದೇವೋ ನ ಭಸ್ಮಿತಃ। ಎಂತ ಮೂಲ ವಚನ. ಮುಂದಿನ ಮಾತು." ಇಂತೀವರ ಮಧ್ಯ ಅವಕಾಶಪ್ರದ ವಾಸುದೇವ ಅತ್ಯಂತ ಭಯಂಕರ ನರಸಿಂಹ ಸರ್ವರಿಗೆ ನಿಂತು ಆಪ್ಯಾಯನ ಜ್ವಾಲಾ ಸಮೂಹದಿಂದ ಸಂತೋಷ ಕೊಡುವನು. ಹೀಗೆಂದು ತಿಳಿದರೆ ಯಂತ್ರವಾಹಕದೇವ ವಿಜಯವಿಠಲರೇಯ ಅಂತರಂಗದಲಿಪೊಳೆವ ದುರಿತವ ಕಳೆವ ॥೯॥ ಈ ತೆರದಿ ಭುಂಜಿಪ ಮಾನವ ತನ್ನ ಜಾತಿಯೊಳಗೆ ಅಧಿಕನಾಹನು ಕೇಳಿ। ತಾ ತೃಪ್ತನಾಗಿ ಉಂಡು ಮಿಕ್ಕ ಎಂಜಲು ದೂತ ಸೂಕರ ಶ್ವಾನ ಚಂಡಾಲ ನಾನಾಂಯೋನಿ। ಜಾತರಿಗೆ ಕೊಡೆ ಅವರಲ್ಲಿ ಇದ್ದ ಜಾತವೇದಿಸನು ತೃಪ್ತನಾಗುವನಯ್ಯ। ಭೂತಳದೊಳಗಿದು ತಿಳಿದವನೆ ಧನ್ಯ ಪಾತಕದವನಲ್ಲ ಯಾತನೆಗೆ ಸಲ್ಲವಾತ ದೇವನ ದಯಪಡೆದು ಮತ್ತೆ ಮಹಾಕೀರುತಿವಂತನಾಹ। ಪೂತುತಿ ಮುಕುತಿಯಲಿ ಸುಖಸಾಂದ್ರದೊಳಿಪ್ಪ ವಾತಿಗೆ ಗತಿ ಈವ ವಿಜಯವಿಠಲರೇಯನು. ತನ್ನ ಮಾತಿನ ಮಹಿಮೆಯನು ತೋರುವ. ॥೧೦॥ ಇದರ ಕೊನೆಯ ತಾಳದಲಿ " ಭೂಗೋಳದೊಳಗಿದ್ದು ತಿಳಿಯದೆ ಭೂಮಿಸುರನು ಹೋಳಿಗೆ ಪರಮಾನ್ನ ಉಂಡರೆ ಫಲವೇನೋ। ಕೋಳಿ ಸೂಕರ ಕತ್ತೆ ನಾಯಿ ನರಿಗಳು ಕಾಲವ ಕಳೆಯದೆ ಜಾತಿ ಆಹಾರವ ತಿಂದು ಪೇಳುವುದೇನು ಇವನು ಅದಕಿಂತ ಕನಿಷ್ಠ ಕಾಲಿನ್ನ ಪಟ್ಟಣಕೆ ಮೊದಲು ಬೀಳಕೊಂಬ ಲೀಲೆಯಿಂದಲಿ ಕೇಳಿ ಒಮ್ಮೆ ಪೇಳಿದರು. ವ್ಯಾಳ ವ್ಯಾಳೆಗೆ ಉಣಲು ಉಂಡವನಲ್ಲ ಮೌಲಿಯ ಕೂಗುತ ಸುರ ಸಮುದಾಯನೆರದು ಪಾಲಿಸುತಿಪ್ಪರು ದಿನ ಪ್ರತಿದಿನದಲ್ಲಿ ಪಾಲಸಾಗರ ಶಾಯಿ ವಿಜಯವಿಠಲರೇಯ ಆಳುವಜ್ಞಾನ ಭಕುತಿ ವೈರಾಗ್ಯವನಕೊಟ್ಟು। ಈ ಪರಿಯಲಿ ತಿಳಿದು ಯಾಗಮಾಡಿದವರಿಗೆ

ತಾಪತ್ರಯಗಳಿಲ್ಲ ವಿಜಯವಿಠಲ ಬಲ್ಲ. "ಈ ಚಿಂತನೆಗಳಿಂದ ಏನಾಗುತ್ತದೆಂದರೆ ಬುದ್ಧಿ ಪೂರ್ವಕವಾಗಿ ಶ್ರೀಹರಿಯನ್ನು ಮರೆತೇನೂ ಎಂದರೂ, ಮರೆವು ಹುಟ್ಟದೆ ನದಿಯ ಪ್ರವಾಹದಂತೆ ಅಖಂಡ ಧ್ಯಾನವದಗುವುದೇ ಸಿದ್ಧ.

ಹರಿಕಥಾಮೃತಸಾರದಲ್ಲಿ ಸ್ನಾನದಲಿ ಚಿಂತನೆ.

*ಶ್ರೀ ವರನಿಗಭಿಷೇಕವೆಂದರಿ। ದೀವ ಸುಂಧರೆಯೊಳಗೆ ಬಲ್ಲವ।*
*ರಾವಜಲದಲಿ ಮಿಂದರೆಯು ಗಂಗಾದಿ ತೀರ್ಥಗಳು ॥*
*ತಾವಲಿದು ಬಂದಲ್ಲೆ ನೆಲೆಗೊಂ। ಡೀವರಖಿಲಾರ್ಥಗಳನರಿಯದೆ।*
*ಜೀವರಮರ ತರಂಗಿಣಿಯ ನೈದಿದರಾಫಲವೇನು॥*

"ಲಲನೆಯರಿಂದೊಡಗೂಡಿ ಚೈಲಗಳೊಳಗೆ ಓತ ಪ್ರೋತರೂಪದಿ" ಎಂತ ಹರಿಕಥಾಮೃತಸಾರ. ಮುಂದಿನ ಮಾತಿನ ಭಾವ. ಛಲಿ ಬಿಸಲು ಮಳೆ ಗಾಳಿಗಳ ಬಾಧೆ ತಪ್ಪಿಸಿ ವಸ್ತ್ರರೂಪನೆ ಸಂರಕ್ಷಿಸುತ್ತಾನೆ ಎಂತ ಅರ್ಥ. ಸ್ನಾನದಲಿ ಮತ್ತೊಂದು ಚಿಂತನೆ." ಸ್ನಾತುಃ ಪುರುಷ ನಿಷ್ಟದೇವತಾಃ ಉದಕಾಷ್ಟನಸ್ಥ ದ್ರವರೂಪ ದೈವತಾನಿ ನಿಕಟಂ ಪ್ರಾಪ್ಯ ಸ್ವಸ್ವರೂಪೇಣಾಲಿಂಗ್ಯ ನೀಚಾನೀಚ ಉತ್ತಮೋತ್ತಮ ದ್ರವ ದೇವತಾಶ್ಚೋತ್ತಮೋತ್ತಮ ದ್ರವ ದೇವೇಷು ತಥೈವ ಸ್ನಾತ್ವಾ ಪುಷ್ಕರಾದಿ ಬ್ರಹ್ಮಾಂತಾಃ ಸರ್ವೇಽಪಿ ಪರಮಾತ್ಮಾನಂ ಗತ್ವಾ ಷೋಡಶೋಪಚಾರಾನ್ ಸಮರ್ಪ್ಯ ತದನಂತರಂ ಪರಸ್ಪರಂ ಸ್ವಗತ ಸ್ವಗತ ಭಗವದ್ರೂಪೈರನುಜ್ಞಮವಾಪ್ಯ ಪರಸ್ಪರಂ ಸ್ವರೂಪೈರನುಜ್ಞಾಂಚ ಗೃಹೀತ್ವಾ ಸ್ನಾತುರ್ಜೀವಾಸ್ಯ ಈಶ್ವರಾನುಜ್ಞಯಾ । ಫಲಂ ತದ್ಯೋಗ್ಯಂ ಪ್ರಯಚ್ಛಂತೀತ್ಯನುಸಂಧೇಯಂ। ಸುಳಾದಿ "ದೀಪ್ತನಾಗಿಪ್ಪ ಸತಿ ಪರಿವಾರ ಸಹಿತ। ವ್ಯಾಪ್ಯನೀತನು ಸರ್ವ ಠಾವಿಲಿ ತೊಲಗದೆ" ಎಂತ ಗುಪ್ತಾರ್ಚನೆ ಸುಳಾದಿ. ಭಗವಚ್ಚಿಂತನೆಗೆ ಅನುಸರಿಸಿ ಅಂಗದೇವತೆಗಳ ಚಿಂತನೆಯೂ ಕೂಡ ಜಟಿಲವಾಗಿರ ಬೇಕೆಂತಾ ಅರ್ಥವು.

*ಗಾಳಿ ನಡೆವಂದದಲಿ ನೀಲಘ । ನಾಳಿ ವರ್ತಿಸುವಂತೆ ಬ್ರಹ್ಮ ತ್ರಿ*
*ಶೂಲಧರ ಶಕ್ರಾರ್ಕ ಮಿಗಿಲಾದಖಿಲ ದೇವಗಣ॥*
*ಕಾಲ ಕರ್ಮ ಗುಣಾಭಿಮಾನಿ ಮ।ಹಾಲಕುಮಿ ಅನುಸರಿಸಿ ನಡೆವಳು।*
*ಮೂಲ ಕಾರಣ ಮುಕುತಿದಾಯಕ ಹರಿ ಎನಿಸಿಕೊಂಬ॥ ಎಂತಲೂ,*

*ಭವವೆನಿಪ ವನಧಿಯೊಳು ಕರ್ಮ। ಪ್ರವಹದೊಳು ಸಂಚರಿಸುತಿಹ ದೇ।*
*ಹವ ಸುನಾವೆ ಮಾಡಿ ತನ್ನವರಿಂದೊಡಗೂಡಿ ॥*
*ದಿವಸ ದಿವಸಗಳಲ್ಲಿ ಲಕ್ಷ್ಮೀ ।ಧವನು ಕ್ರೀಡಿಪನೆಂದು ಚಿಂತಿಸೆ।*
*ಪವನನಯ್ಯ ಭವಾಬ್ಧಿ ದಾಟಿಸಿ ಪರಮ ಸುಖವೀವ।*

ಎಂತ ಹರಿಕಥಾಮೃತಸಾರ

# ಧ್ಯಾನ ಕ್ರಮ

ಧ್ಯಾನ ಕ್ರಮ ನಿರೂಪಿಸುತ್ತೇನೆ. ಸುಳಾದಿ "ಧ್ಯಾನವ ಮಾಡು ಮನವೆ ದೈನ್ಯ ವೃತ್ತಿಯಲಿ 'ನಾನು' ಎಂಬ ಮಾತು ಮುಕ್ತಿಯಲ್ಲಿಪ್ಪೋದು ಮಣದಿರು ಸೊಲ್ಲು ಸತ್ಯ ಸಿದ್ಧ ದುರಭಿಮಾನವಲ್ಲವು. ಕಾಣೋ ಸ್ವರೂಪಭೂತ ಈ ನುಡಿಯಿಲ್ಲದಿರೆ, ಸೇವಕ ನ್ಯಾಯ ಕೇಳಿ ಸ್ವಾಮಿ ಭೃತ್ಯ ಅನಂತಾನಂತ ಕಲ್ಪಕೆ ಇರಲಿ ಇರಲಿ ಬೇಕು. ಮೇಣು ಪುಸಿ ಎಂದರೆ ಜೀವೇಶ್ವರ ಏನೆಂಬೆ। ಇದೆ ಇದೆ ಸಂಸಾರಾವಸ್ಥೆಯಲಿ ಜ್ಞಾನ ವೈರಾಗ್ಯ ಭಕುತಿ ಎರಡು ವಿಧವೋ। ಅಂದರೆ ಈ ಗ್ರಂಥದ ಆದಿಯಿಂದಲೂ ನಾನು ಎಂಬುದನ್ನು ಬಿಡುವ ಕ್ರಮ ವಿವರಿಸಿದೆ." ಪ್ರಮಾಣ :– ಧ್ಯಾನಂ ಕಾರ್ಯಾನ್ ಮಾನಸೇಹಿ ದೈನ್ಯ ವೃತ್ಯಾ ಹರೇರ್ವಿಭೋಃ। ಸರ್ವಥಾ ಬಧ್ಯ ಭೇದೋಹಿ ಮುಕ್ತಾವನಾ ಪ್ರಮಾಣಮಿದಂ ವಾಕ್ಯಂ ದ್ವಾಸುಪರ್ಣೇತಿ ಮಾನತಃ। ನಾಭಿ ಮಾನತಯಾ ವಕ್ತುಂ ಶಕ್ಯತೇ ಕೇನಚಿತ್ಕ್ವಚಿತ್ ॥ ಇತ್ಯಾದಿ ಶೌನಕ ಸ್ಮೃತಿಯು. ಮುಂದಿನ ಮಾತು – "ಆ ನಳಿನ ಸಂಭವ ತೃಣ ಜೀವ ತನಕ ನಿದಾನದಿಂದಲೇ ನೋಡು ತರತಮವು। ಪ್ರಾಣ – ಪ್ರಕೃತಿ– ಪುರುಷ ಇವರಿಂದ ಈ ಜಗತ್ತು ವೇಣಿಯಂದದಲಿ ಪ್ರವಾಹವಕ್ಕು। ಪ್ರಾಣತ್ರಯ ಬಗೆ ಉಂಟು, ಜ್ಯೋತಿರ್ಭೇದದಿಂದ ಶ್ರೀನಾರಿ ಅಭಿಮಾನಿ ಸಕಲಕ್ಕೂ ನಿತ್ಯ" ಅಂದರೆ ಹರಿ– ರಮಾ– ಪ್ರಾಣ ಪ್ರತಿಮಾತ್ರಯಗಳಲ್ಲಿಯೂ ಪ್ರಾಣ ದೇವರು ತದಾಕಾರ ತ್ರಿವಿಧ ತೇಜೋರೂಪವಾಗಿ ಲಕ್ಷ್ಮೀ ಸ್ವರೂಪ ತೇಜಸ್ಸು ಗುಣ ಪೂರ್ಣ ಹರಿ ಸಹಿತ ವೇಣೀ ಎಂದರೆ ಜಡೆ ಅಂತ ಅರ್ಥ. ಮುಂದಿನ ಮಾತು "ಇನಿತು ತಿಳಿವುದು ಇಂದಿರಾ ದೇವಿಗೆ ಜ್ಞಾನ ಶರೀರವಿಹುದು ಶೃತಿ ಸಿದ್ಧವೋ, ಶ್ರೀನಾರಾಯಣಗಿದು ಪೇಳೋದು ಸೋಜಿಗವೇ॥ ಪ್ರಾಣೆ ಮಾತುರಗಿದೇ ಲಿಂಗದೇಹವೆ ಬದ್ಧ ಅನಾದಿಯಿಂದ ಬಂದ ಪ್ರತಿಬಂಧಕ।

ಎಣಿಸಿ ನೋಡುವುದು ಅವರವರ ಯೋಗ್ಯತಾ । ಆನಂದ ಮಿಶ್ರ ದುಃಖ ಬಾಧ್ಯಕರು.'' ಬ್ರಹ್ಮಾದಿ ತೃಣ ಪರ್ಯಂತಂ ತಾರತಮ್ಯಂ ವಿಚಿಂತಯಾ । ಪುರುಷಃ ಪ್ರಕೃತಿಃ ಪ್ರಾಣ ಸ್ತ್ರೀಭಿಃ ಸೃಷ್ಟಂ ಜಗತ್ರಯಂ। ಎಂತ ಶೌನಕ ಸ್ಮೃತಿ. ಮುಂದಿನ ಮಾತು – ''ಧ್ಯಾನ ಮಾಡು ಮನವೆ ಮನೋಹರದಿಂದ ನೀನೆನೆದು ಧನ್ಯನಾಗೋ ಪ್ರಥಮದಲಿ, ಸಿರಿ ಪ್ರಾಣನಾಥನಾದ ನಾರಾಯಣ ನಾನಾವತಾರಾವೇಶ ಅಂಶೀ ಅಂಶಾಧಿಷ್ಠಾನವನೆ ಚಿಂತಿಸು. 'ಅಪ್ರಾಕೃತ' ಎಂದರೆ ಪೂರ್ವ ರಮಾ ಪ್ರಾಣನಾಥ ಹರೇರ್ನಾನಾಂಶಕಾನ್ ಸ್ವಕಾನ್। ಆವೇಶಾಂ ತದಿಷ್ಠಾನಾನ್ವಾರಂ ವಾರಂ ವಿಚಿಂತಯಾ। ತಸ್ಯ ಪಾದಾದಿ ನಖರೇ ಗುಲ್ಫ ಜಾನೂರು ಮಧ್ಯಮಾನ್। ನಾಭಿ ಪಾರ್ಶ್ವೋದರ ಪ್ರಾಣೋ ಪ್ರಾಂತ ರೇಖಾಂಗುಲೀನಪಿ। ಬಾಹೂರಃ ಕರ್ಣಕಂಚ್ಯೈವ ಮುಖಂ ಚಂದ್ರೌಘ ಸನ್ನಿಭಂ। ತಾಲೂ ಶಿರಃ ಸ್ಮಿತಂಶ್ಚೈವ ದಂತ ಪಂಗ್ತಿ ಸುಕೇಶಕಾನ್। ಮುಕುಟಾದೀನಿ ಸಂದಧ್ಯಾ ಚ್ಛಿದಾನಂದಾತ್ಮಕಾನಿಚ। ಎಂತ ಶೌನಕ ಸ್ಮೃತಿ । ಕಿರೀಟಾದಿ ಕವಚ್ಛೈಶ್ಚ್ಯತದ್ವಿಧಾಃ ಸಂತಿ ಖಗೇಶ್ವರಃ। ಸ್ವರೂಪಾ ಅಸ್ವರೂಪಾಶ್ಚ ಸ್ವರೂಪಾ ಹಿ ದರ್ಶನೇ ಗೃಹೀತಾಃ ॥ ಎಂತ ಗರುಡ ಪುರಾಣ ಬ್ರಹ್ಮ ಕಾಂಡ. ಮುಂದಿನ ಶೌನಕ ಸ್ಮೃತಿ = ''ಏಕ್ಯೆಕಶೋಪ್ಯನಂತಾನಿ, ನಿತ್ಯಾನಿ ಸುಖದಾನಿಚ। ಸೃಷ್ಟ್ಯಾದಷ್ಟ ಕರ್ತ್ಯಾಣಿ ಸ್ವತಂತ್ರಾಣೀತಿ ಚಿಂತಯೇತ್। ಸಲ್ಲಾಪೋತ್ಸುಕ್ಯ ಕೃತ್ಯಾನಿ ಭಕ್ತಾನುಗ್ರಹಕಾರಿಕಾ। ಸ್ವೇಚ್ಛಾ ವಿಹಾರತಃ ಸರ್ವಂ ಪ್ರಪಂಚಂ ಸೃಜತಿ ಪ್ರಭುಃ। ನಿಜಪ್ರಯೋಜನಾರ್ಥಂ ಹಿ ನಕಾರ್ಯಾತ್ಪರಮೇಶ್ವರಃ। ಪರಾನುಗ್ರಹ ಮಂತ್ರಾದ್ಧಿ ಜಗತ್ಸರ್ಜನಮೀರಿತಂ। ಪಾದಾಂತಂ ಶಿರ ಆರಭ್ಯಮಿತಿ ಹೀನಾನಿ ತಸ್ಯವೈ। ಅಂಗಾನಿ ರೋಮ ಕೂಪೇಷು ರೂಪರೂಪೇಷ್ವನಂತತಾ। ವಿಚಿಂತ್ಯಾನಿ ಪದಾ ಸರ್ವೈಃ ಭಗವತ್ತತ್ವವೇದಿಭಿಃ। ಜ್ಞಾನಾನಂದ ಸುಖೈಶ್ವರ್ಯ ಭೋಗಾನಿ ಸಕಲಾನಿಚ ಕಾಲತೋ ದೇಶತಶ್ಚಾಪಿ ನಿತ್ಯಾ ನಿಹನ ಸಂಶಯಃ। ಇತಿ ಮತ್ವಾ ರಮಾದೇವ್ಯಾ ಚಿಂತಿತಾ ಅಪಿ ಸರ್ವದಾ। ಏಕ್ಯೆಕಾವಯವಾನಂತ್ಯ ನಹಿ ಬೋಧ್ಯಾ ಇತಿ ಶ್ರುತಂ॥'' ಎಂತ ಶೌನಕ ಸ್ಮೃತಿ. ಸುಳಾದಿ ಮುಂದಿನ ಮಾತು. ಅನಖಾಂಗುಳಿ ರೇಖಾಪಾದ ಪಡದು ಜಂಗ್ಘೆ ಜಾನೂರು ಜಘನ ಕಟಿ ನಾಭಿ ಉದರ ಪಾರ್ಶ್ವ ಪಾಣಿ ರೇಖೋಪರೇಖಾ ಹಸ್ತಾಂಗುಲಿಯಂ ನಖಗೇಣು ಕರ್ಣ ಪ್ರಾದೇಶ ತಾಲು। ಗೋಣುಸ್ಕಂಧ ಬಾಹು ಉರು ಹೃದಯ ತಾಳು ವದನ ಆನನ ನಾಸಾ ಅಕ್ಷಿ ಶ್ರವಣ ಕದಪು । ಫಣಿಕುಂತಳಾಪುರ್ಬುವೋಷ್ಟ ಶುಭ್ರದಂತ ಪಂಗ್ತಿ

ಮೃದುವಾಣಿ ಮಂದಹಾಸ ನೋಟ ನಟನೆ ಗಾನ ಹಾಸ್ಯ ಆನಂದ ಶಾಂತವೋ। ಫಣಿಕೋಪ ತ್ರಾಣ ಅಹಂ ಬುದ್ಧಿ ಚಿತ್ತ ಮನಸು. ಪ್ರಾಣೇಂದ್ರಿಯಂಗಳ। ಐಶ್ವರ್ಯ ಪ್ರಭಾ ತೇಜಃ ಶಬ್ದ ಸ್ಪರ್ಶ ರೂಪ ರಸ ಗಂಧಾನು ಲೇಪನ ಗಮನ ಕಾಲ್ಯೈಶ್ವರ್ಯ ಧೈರ್ಯ ಮೌನ ವಿಲಾಸ ಭೋಗ ನೀತಿ ನಿರ್ಣಯ ನಾಮ। ದಾನ ವ್ಯಾಪಾರ ಮತ್ತೆ ತನು ಶಿರೋರುಹ ಏನೇನು ಇದ್ದವೆಲ್ಲ ಸರ್ವವು ಪರಿಪೂರ್ಣ ಆನಂದಮಯುವಯ್ಯ। ಜ್ಞಾನ ಕಾರ್ಯ ದೀನನಾಥ ಸಿರಿ ವಿಜಯವಿಠಲರೇಯನ ಧ್ಯಾನವ ಮಾಡಿರೋ ಈ ಪರಿಗ್ರಹಿಸಿ. ॥೧॥

"ಜೀವಾನಾಂಚ ಜಡಾನಾಂಚ ರವಾಾ ರೂಪಾಣಿಚಾನಿಶಂ। ಹರಿಂವ್ಯಾಪ್ಯೈವ ತಿಷ್ಟಂತಿ ಅನಾದಿತ್ವೇನ ಭಕ್ತಿತಃ। ರೂಪ ರೂಪೇಷು ಚ ಹರೇಃ ಪ್ರತಿತಾನಿ ವಸಂತಿಹಿ। ಇತ್ಯಾದಿ ಶೌನಕ ಸ್ಮೃತಿಯ ಕ್ರಮದಿಂದ ಶ್ಲೋಕ ಪದಾರ್ಥ ರೂಪತ್ವೇನ ಸುಳಾದಿ– ವಾಕ್ಯ ಸರಣಿಯು ಹೊರಟು ಆದೆ. ಮುಂದಿನ ತಾಳ: –" ಜಡ ಜೀವ ವಿಧಿ ಸಿರಿ ರೂಪಗಳಾನಂತ ಬಿಡದೆ ಇಪ್ಪವು. ನೋಡಿ ಬಲು ಪರಿಯಿಂದಲಿ ಕಡಲಶಯನ ಹರಿ ರೂಪಂಗಳ. ಅನಂತನೊಡನೆ ಉಂಟು ದ್ರವ್ಯ ಪೂರ್ತಿಯಾಗಿ. ಪಡಿಯಿಲ್ಲದೆ ಜಗದೊಳು ತುಂಬಿಕೊಂಡಿಪ್ಪುದಯ್ಯ ತಡೆಯದೆ ದೇವನ್ನ ಮಹಿಮೆಯ ತಿಳಿ ಕೊಡುವನು, ಪದದಿಂದ ನಡೆವನು ಕರದಿಂದ ಪಿಡಿವನು ಕಿವಿಯಿಂದ ಕೇಳುವ ಕಣ್ಣಿಂದ ನೋಡುವ ಮೂಗಿನಿಂದ ವಾಸಿಸುವ ಜಿಹ್ವೆಯಿಂದ ನುಡಿಪನು ಬೆನ್ನಿಂದ ಹಾರುವ ಮುಖದಿಂದ । ಬಿಡು ಬಿಡು ಇದು ಯಾತರ ಮಾತು ಪೇಳಸಲ್ಲ। ನುಡಿ ಮೊದಲಾಗಿದ್ದ ವ್ಯಾಪಾರಂಗಳು। ಸಡಗರದಲ್ಲಿ ಸ್ವಾಮಿ ಯುಗಪದಿ ಮಾಡುವನೋ ಕಡೆಗೆ। ಅಣುವು ಆಗಿ, ಅನಂತ ಬೊಮ್ಮಾಂತ ಒಡಲೊಳಗಿಟ್ಟುಕೊಂಬ ಪ್ರಯಾಸವಿಲ್ಲದಲೆ। ಜಲಜ ಸಂಭವ ಮಿಕ್ಕ ಸರ್ವ ಜೀವಗಳ ಒಂದೊಡೆಯಲಿ। ಮೇರುವಿಗೆ ಸಣ್ಣ ಇರುವಿನಂದದಿ (ಅಂದರೆ) ಪಿಪೀಲಿಕಾ। ಭಾರತೋಹಿ ಮೇರೋರಿವ ಜಗತ್ಪತಿಃ ॥ ಎಂತ ॥ ಮುಂದಿನ ಮಾತು "ಉಡುದು ಬಿಡದೆ ನೋಡಿ ಕಡು ಸಾಹಸ ಮಲ್ಲ। ಅಂದರೆ ಪರಮ ಸಾಹಸಿಕ ಜಟ್ಟಿಯಂತೆ ಅರ್ಥ. ಮುಂದಿನ ಮಾತು" ಅಡಿ ಶಿರ ಮೊದಲಾಗಿ ನಾನಾ ಪರಿಸಂಗಡಲೆ ದೇಶ ಕಾಲ ವ್ಯವಧಾನವಾಗಗೊಡದೆ ಪೂರ್ಣನಾಗಿ ಸರ್ವ ತಂತ್ರ ಸ್ವತಂತ್ರದಲಿ । ಒಡನೊಡತಿರುತಿಪ್ಪ ಕಾಣಿಸಿಕೊಳ್ಳುತಿಪ್ಪ । ಬಿಡದಂತೆ ಇಪ್ಪ। ತೊಡರು ಇಲ್ಲದೆ ಮಹಾ ಚೇತನನಾಗಿಪ್ಪ।

ಕೂಡಿ ವಳಗೆ ನಿತ್ಯ ಮಹತ್ತು ಮಹತೀಗೆ ಅಗಲದಿಪ್ಪನು। ಬಹು ದೇವತೆಗಣ ಸಹಿತ ಗಿಡ ಮರ ಫಲ ಬಳ್ಳಿ ನಾನಾ ವೇಷವ ಧರಿಸಿ। ಮಡದಿಯ ರಾಜರಸಿ ಸರಸವಾಡುವ ಮೂರ್ತಿ। ಬಡವನಲ್ಲವು ಕಾಣೋ। ಮಾಡಿದ್ದೆ ಮಾಟ। ಭಳಿರೆ ಭಳಿರೆ ರಾಯ ಪೂತುರೆ ಪೂತುರೆ । ಜಯ ಜಯ ಜಗಜ್ಯೋತಿ ನಮೋ ನಮೋ ಅನಿಮಿತ್ತ ತ್ರಾಹಿ ತ್ರಾಹಿ ಶರಣ ಪಾಹಿ ಪಾಹಿ ಪುರದ। ಅಹೋ ಅದ್ಭುತನೆ ಅತಿವೈಚಿತ್ರಕನೆ। ಅತಿ ಶ್ರೀ ಪರಮ ಸುಹೃತ್ತೈಶ್ವರ್ಯ ಕಾಯಾ । ಅಲೌಕಿಕವಸ್ತು ಬಹು ವೈಲಕ್ಷಣ್ಯ ಒಂದು ಮೊದಲು ಮಾಡಿ ಅನಂತ ಪರಿಯಂತ ಶಿಖ ನಖ ಸಮಸ್ತವುಳ್ಳ ಉದಧಿಶಯನ ಇಂತು ನಲಿವ ಜಾಣ ಸ್ವಲ್ಪಾಕಾಶದಲಿ ನಿಂತು ಭಕ್ತರ ಕೈಯ ಪೂಜೆಗೊಂಬ ರಾಜ। ಕೊಡುವ ಬೇಡಿದ ವರ ವಿಜಯವಿಠಲರೇಯನ ಅಡಿಗಳ ಕೊಂಡಾಡಿ ಮನದಣಿಯ ನೋಡಿ'' ಈ ಎರಡು ತಾಳಗಳ ಮುಖ್ಯ ತಾತ್ಪರ್ಯವನ್ನು ಮುಂದೆ ನಿರೂಪಿಸುತ್ತೇನೆ. ಆದಾಗ್ಯೂ ಕಿಂಚಿದರ್ಥ- ಭೋಜನ ಪಾತ್ರೆಯಲ್ಲಿ ಬಹು ಪದಾರ್ಥಗಳು ಬಡಿಸಿ ಇರುವುದನ್ನು ಇದು ಸರ್ವವೂ ನನಗೆ ಭೋಜನಾರ್ಹವಾಗಲಿ ಎಂಬ ಕುತೂಹಲದಿಂದ ಕ್ಷಣದಲಿ ಹ್ಯಾಗೆಮರಿಯದೆ ನೋಡುತ್ತಾನೋ ಹಾಗೆ ಯಥೇಚ್ಛ ಸಾಲಿಗ್ರಾಮಗಳನ್ನು ಪೂಜೆಗೆ ತೆಗೆದಿಟ್ಟುಕೊಂಡಹಾಗೆ ವಿವಿಕ್ಷ ಭೇದದಿಂದ ಸಕಲ ಜಗದಂತರ್ಬಹಿರ್ವ್ಯಾಪ್ತ ಭಗವಲ್ಲಕ್ಷ್ಮೀ ತತ್ವೇಶ ರೂಪಗಳನ್ನು ಏಕಾಕಾರವಾಗಿ ಬುದ್ಧಿಯಿಂದ ಧಾರಣೆಗೆ ತಂದು ಸ್ವಲ್ಪಾಕಾಶದಲ್ಲಿ ಪೂಜೆಗೊಂಬ ಎಂದರೆ ಹೃದಯಾಕಾಶಸ್ಥ ಪ್ರಾಜ್ಞನಲ್ಲಿ ತೀಕ್ಷ್ಣ ಬುದ್ಧಿಯನ್ನು ಇಡಬೇಕೆಂಬ ಭಾವ. ಮುಂದಿನ ತಾಳ. ತ್ರಿ-(ಪುಟ)'' ನಿನ್ನ ಬಿಂಬನ ಸ್ಮರಿಸಿ ಇದೇ ಈ ಅನಂತ ಚಿನುಮಯ ರೂಪಗಳು ಶುದ್ಧವೆಂದು ಭಿನ್ನ ಜೀವರೋಳು ಇದ್ದ ಮೂರ್ತಿಗಳಲ್ಲಿ ಚನ್ನಾಗಿ ನಿನ್ನ ಬಿಂಬನ ಅಂಶ ತೆಗದು ಮುನ್ನೀಗ ಪೊಂದಿಸಿ ಏಕೀಭೂತ ನೆನೆದು ಸನ್ನುತಿಸಿ ತಿರಿಗಿ । ಭಿನ್ನರ ಮಧ್ಯದಲಿ ಮನ್ನಣೆಗೊಳುತಿಪ್ಪ ಅಗ್ರೇಶನೊಳಗೆ ಸಂಪೂರ್ಣವಾಗಿದ್ದ ಅಂಶಗಳ ತೆಗೆದು ನಿನ್ನ ಬಿಂಬನ ಕೂಡಾ ಕೂಡಿಸಿಕೊಂಡು ಸಂಪನ್ನ ಭಕುತಿಯಿಂದ ಪೂಜೆ ಮಾಡೋ । ಇನ್ನು ಈ ಮಾತಿಗೆ ಸಂಶಯ ಬಡಸಲ್ಲ ಗಣ್ಯವಿಲ್ಲದಲೆ ಮನಸುದಣಿಯಲ್ಯಾಕೋ। ಅಂದರೆ – ಇದುವರೆಗೂ ಇಷ್ಟು ಪ್ರಕಾರ ನಿರೂಪಿಸಿದ್ದರಲ್ಲಿಯೂ ಇದ್ದಂಥ ರಹಸ್ಯವನ್ನು ವಿಜಯ ರಾಯರು ಈ ಹಿಂದಿನ ಸ್ಥಳದಲ್ಲಿ ಮಾತ್ರ ಅದರ ಗುಟ್ಟು ತಿಳಿಸಿ ಅನ್ಯತ್ರ ಸುಳಾದಿಗಳಲ್ಲಿ ಸ್ಪಷ್ಟವಾಗಿ ಹೇಳದೇ ಇರತಕ್ಕ ಪರಮ ಸೂಕ್ಷ್ಮವನ್ನು ನಾನು ನಿರೂಪಿಸದೇ

ಇದ್ದಲ್ಲಿ ಇಷ್ಟು ಪ್ರಕಾರ ಪೂರ್ವದ ನಿರೂಪಣೆಗೆ ಫಲದಲ್ಲಿ ಅಭಿರುಚಿಯೇ ಅಧಿಕಾರಿಗಳಿಗೆ ತೋರದೆ ಅಥವಾ ಭಗವತ್ಸೇವೇ ಮಾಡಿದ ಕಾಲಕ್ಕೂ ತೀವ್ರೋಪಾಸನೆಯ ದೀಕ್ಷೆಯಲ್ಲಿ ಸ್ವರೂಪಿಕ ಕುತೂಹಲ ಆಧಿಕ್ಯವಾಗಲಾರದು. ಆದುದರಿಂದ ಈ ಮರ್ಮವೇ ಭಗವದ್ಪ್ರಸಾದವನ್ನು ಕ್ಷಣ ಮಾತ್ರದಲ್ಲಿ ವದಗಿಸಿಕೊಡತಕ್ಕದ್ದು- ಆದುದರಿಂದ ಮುಖ್ಯವಾಗಿ ಮನಸೋಪಾಸನೆ ಮೊದಲು ಮಾಡಿ ನಿರಂತರ ಸಕಲ ಬಾಹ್ಯ ಕರ್ಮ ಪರಂಪರೆಗಳಲ್ಲಿಯೂ ಈಗ ಹೇಳತಕ್ಕ ಮಾತನ್ನು ಸ್ಮರಿಸಿಕೊಳ್ಳುತ್ತಾ ಇದ್ದರೆ, ಅವನು ಪರಮ ಧನ್ಯನಾಗುವುದರಲ್ಲಿ ಸಂಶಯವಿಲ್ಲ. ಈ ಮರ್ಮ ಎಂಥಾದ್ದೆಂದರೆ, ಬಹು ಸ್ಥೂಲವಾದ ಶತಘ್ನಿಗುಂಡಿನ ಮದ್ದಿಗೆ ಹೇಗೆ ಒಂದು ಅಣುಮಾತ್ರ ಅಗ್ನಿ ರಂಜಕವೇ ತೀಕ್ಷ್ಣದಲ್ಲಿ ವ್ಯಾಪ್ತವಾಗಿ ಮಹಾ ಕಾರ್ಯ ಸಾಧಕವಾಗುತ್ತದೋ ಹಾಗೆ ಇದು ಪರಮ ಮುಖ್ಯ ಮರ್ಮ. ಅಹಂ ಮಮತಾದಿ ದೋಷ ಹೋಗುವುದರಿಂದ ಹ್ಯಾಗೆ ಇವನು ಪರಿಶುದ್ಧಾಧಿಕಾರಿಯಾದನೋ ಕಂಕಣವಲಯ ಪೀಠಸ್ಥಾಪನೆಯಿಂದ ಹ್ಯಾಗೆ ಅಂಗ ದೇವತಾ ಸಹಿತ ಭಗವತ್ಸಾನ್ನಿಧ್ಯ ಸಿದ್ಧಿ ಉಂಟಾಗುತ್ತದೋ ಹಾಗೆ ಈ ಮರ್ಮ ಜ್ಞಾನದಿಂದ ನಿಷ್ಕಾಮೋಪಾಸನೆಯು ಸಂಪೂರ್ಣ ವೀರ್ಯವತ್ತರವಾಗುವುದೇ ಸಿದ್ಧ. ಆ ಮರ್ಮ ಒಂದೇ ಆದಾಗ್ಯೂ ಮೂರು ಪ್ರಕಾರವಾಗಿ ಅದೆ. ಅದರಲ್ಲಿ ಭಗವದ್ರೂಪ ಚಿಂತನೆಯಲ್ಲಿ ಎರಡು ಪ್ರಕಾರವಾಗಿಯೂ, ಇವನ ಕ್ರಿಯಾ ಮೂಲಕತ್ವೇನ ಒಂದು ಪ್ರಕಾರವು ಅಂತೂ ಮೂರು ವಿಧವು. ಅದು ಯಾವುದೆಂದರೆ ಪ್ರಥಮತಃ ಭಗವದ್ವಿಷಯ. ಭಗವದ್ರೂಪ ಸರ್ವವ್ಯಾ, ಅಪರಿಚ್ಛಿನ್ನವಾದಾಗ್ಯೂ ಒಂದೊಂದು ಮೂರ್ತಿಯನ್ನು ಲಕ್ಷಿಸಿದರೆ ಅದರ ಸೌಂದರ್ಯದಲ್ಲಿ ಮನಸ್ಸು ಲಗ್ನವಾಗುವುದೇ ವಿಹಿತವಾದಾಗ್ಯೂ ಮನಸ್ಸು ಅಣುವಾದ ಪ್ರಯುಕ್ತ ಸದಾ ಅಪರಿಚ್ಛಿನ್ನ ರೂಪದಲ್ಲಿ ಮನಸ್ಸು ಎರಗಲಾರದು. ಅಖಂಡ ಎಂದರೆ "ಚೇತನಾಂತಸ್ಥಮಾರಭ್ಯ ಸರ್ವಗಾಂತಃ ಸ್ವರೂಪವಾನ್" ಎಂತ ತಂತ್ರಸಾರ ಮೂಲ। ಸರ್ವಗಾ ಎಂದರೆ ಅವ್ಯಾಕೃತಾಕಾಶವು. ಜೀವಾಂತರ್ಯಾಮಿ ಹಿಡಿದು ಅವ್ಯಾಕೃತಾಕಾಶದ ತನಕ ಸಮಗ್ರ ಕಾಲ ದೇಶ ವ್ಯಾಪ್ತನು ಒಬ್ಬನೇ ಆದುದರಿಂದ ಜೀವಾಂತರ್ಯಾಮಿಗಳು ಅನೇಕ ರೂಪಗಳು ಸ್ಥೂಲದೇಹ ಸರ್ವರೂಪಗಳೂ ಚತುರ್ದಶ ಭುವನ ರೂಪಗಳೂ, ವಿರಾಡ್ರೂಪವು. ಬ್ರಹ್ಮಾಂಡ ನವಾವರಣ ವ್ಯಾಪ್ತ ರೂಪಗಳೂ ಏಕಾಕಾರ ಮಾಡಿ ನಿಲ್ಲಿಸಿಕೋ ಎಂತ ಧಾರಣ ಧ್ಯಾನ ಯೋಗ ಸುಳಾದಿಯ ಪ್ರಕಾರ

ಭಗವದ್ರೂಪಗಳೆಲ್ಲಾ ಓಂದೇ ಸಾರಿಗೆ ಸ್ಮರಿಸಿ ಎಂಬ ನಾಮದಿಂದಲೂ, ಪ್ರಕೃತ ಚಮತ್ಕಾರವೇನೆಂದರೆ ಜೀವಾಂತರ್ಯಾಮಿ ಅಂದರೆ ಅವ್ಯಾಕೃತಾಕಾಶ ವ್ಯಾಪ್ತ ಎಂದರ್ಥವು. ಪ್ರಾದೇಶವಾದರೂ ಹೀಗೆಯೇ ಸರಿ– ಸರ್ವವೂ ಸರ್ವ ವ್ಯಾಪ್ತವೇ ಸರಿ. ಜೀವಾಂತರ್ಯಮಿಗಳೇ ಸರಿ. ಸರ್ವವೂ ಸಾಕಾರಗಳಾಗಿ ಸರ್ವ ವ್ಯಾಪ್ತಗಳು. ಅಲ್ಪಾಧಿಕಾರಿಗಳ ಸ್ಥೂಲ ಬುದ್ಧಿಗೆ ಘಟದಲ್ಲಿ ಘಟಾಕಾರ, ಪಟದಲ್ಲಿ ಪಟಾಕಾರ ಚಿಂತಕರೇ ನಾವು . ಅದರಲ್ಲಿ ಕರಚರಣಾದಿಗಳುಂಟು ನಾವು ಅರಿಯೆವು. ದೇವತೆಗಳು ಬಲ್ಲರು. ಉಸುಗಿನ ಮುಷ್ಟಿಗೆ ಹಾಗೆ ಅನಂತಾನಂತ ರೂಪಗಳೆಲ್ಲವೂ ಅವ್ಯಾಪ್ತರೂಪದೊಳಗೂ ಅದೆ. ಆತುರಗಳು ಸೂರ್ಯಬಿಂಬಗಳ ಹಾಗೂ ಬಿಂಬ ಕಿರಣ ವ್ಯಾಪ್ತಿಯಂತೆ ಸರ್ವ ವ್ಯಾಪ್ತವಾಗಿಯೂ, ಗುಣಪೂರ್ಣನ ಪ್ರಕಾಶಕ್ಕೆ ಎರಡನೆಯ ದೃಷ್ಟಾಂತ ಮಿಂಚಿನ ಹಾಗೆ. ಆಕಾರ ಆ ಮಿಂಚೇವೇ ಬೆಳಕಿನ ಆಕಾರವಾಗಿ ಯಾವದವ್ಯಾಕೃತಾಕಾಶ ವ್ಯಾಪ್ತ ಎಂತ ಅರ್ಥವು. ಉಪಾಸ್ಯ ಪ್ರಾಜ್ಞನೆಂಬ ಮಿಂಚಿನ ಬೆಳಕೇವೇ ಮಿಕ್ಕ ವಿಶಿಷ್ಟ ವಿರಾಡ್ರೂಪಗಳು ಎನ್ನುವುದೇ ಉಪಾಸಕನ ಪರಮಾಂತರ್ಯ. ಇದೇ ಮೂರರಲ್ಲಿ ಒಂದು ಮರ್ಮವು. – " ಎನ್ನ ಬಿಂಬನೆ ಸರ್ವಾಕಾಶ" ನಂತೆಂದು ವಿಜಯರಾಯರ ನಾಮ. ಸುಳಾದಿ:– "ಹಗಲಿರಳು ಹರಿಂಯು ವ್ಯಾಪ್ತ ಬಗೆಂಯುನ್ನೆನಿಸೋ" ಎಂತ ಸಾಧನವೆಂಬೋದೊಂದಿದೆ ಎಂಬ ಸುಳಾದಿ. – "ದೀಪ್ತನಾಗಿಪ್ಪ ಸತಿ ಪರಿವಾರ ಸಹಿತ। ವ್ಯಾಪ್ತನೀತನು ಸರ್ವ ಠಾವಿನಲಿ ತೊಗಲದೆ।" ಎಂತ ಗುಪ್ತಾರ್ಚನೆ ಸುಳಾದಿ. ರೂಪಾತಿಶಯಗಳ ಕಣ್ಣ ತೆರೆದು ಮುಚ್ಚಿ ಲೋಪ ಮನ ಮಾಡದೆ ಸಾಧಾರಣವಾಗಿ ವ್ಯಾಪುತನಾಗಿದ್ದ ಹರಿಯನ್ನು ನೆನೆಯೋ। ಎಂತ ಮನಮೂರ್ತಿ ಸುಳಾದಿ. "ಈ ಪರಿಯಿಂದಲಿ ಪ್ರಾಣಾಧಿಷ್ಠಾನದಲಿ ವ್ಯಾಪುತನಾಗಿದ್ದ ಅನಾದಿ ಪುರುಷನ್ನ" ಎಂತಲೂ "ನೆನೆದು ನೆನೆದು ಜಂಬೂದ್ವೀಪ ದಕ್ಷಿಣ ಭಾಗದಲ್ಲಿ ಸಾಧನ ಮಾಡು" ಎಂತ ವಿರಾಟ್ ಧ್ಯಾನದ ಸುಳಾದಿ. "ವಿಷ್ಣು ಅಂಗುಷ್ಠ ಪ್ರಮಾಣ ವಿಶ್ವ ವ್ಯಾಪಕನಾಗಿ" ಎಂತ ಅಷ್ಟದಳ ಸುಳಾದಿ. "ಸರ್ವ ಪ್ರಕಾರದಲ್ಲಿ ವ್ಯಾಪ್ತ ಮೂರ್ತಿಯ ಪೂಜೆ ವರ ಅವರದಲ್ಲಿ ನಿರ್ಲಿಪ್ತನೆಂದು ಇರಳು ಹಗಲು ಇದೆ ಚಿಂತಿಸುವುದೆ ಸಂಪೂಜೆ। ಎಂತ ಸಂಪೂಜೆ ಸುಳಾದಿ. ಹೀಗೆ ಸರ್ವವೂ ಸರ್ವತ್ರ ವ್ಯಾಪ್ತ ಎಂತ ತಿಳಿಯತಕ್ಕದ್ದು. ಹಾಗಾದರೆ ವ್ಯಾಪ್ತ್ಯೋಪಾಸನೆಯೇ ಇದು ಆಯಿತಲ್ಲ ಎಂದರೆ, ಮಿಂಚನ್ನು ಬಿಟ್ಟು ಅದರ ಕಾಂತಿಯನ್ನು ಮಾತ್ರ ಹಿಡಿಯುವುದಿಲ್ಲವಾದುದರಿಂದ ವ್ಯಾಪ್ತಿ ಸ್ಮರಣೆ ಮಾಡಿದಾಕ್ಷಣ, ಅದು

ಉಪಾಸನೆಗೆ ಬಹಿರಂಗ ರೂಪವೆ ಹೊರತು ಉಪಾಸನೆಯು ಅಲ್ಲ. ಆ ನಿರಂತರ ಅಖಂಡ ವ್ಯಾಪ್ತಿ ಸ್ಮರಣೆಯು ಕೂಡ ವಲ್ಲದೇ ಹೋಗಲಿ ಎಂದರೆ "ತತ್ಸವಿತ್ಃ" ಎಂಬ ಗಾಯಿತ್ರಿಯು ರೂಪಸ್ಮರಣೆಯುಲ್ಲಿ ತತ್= ತತ್ವಾತ್ ಎಂತ ಅರ್ಥವಾದುದರಿಂದ ವಿಶ್ವ ವ್ಯಾಪ್ತಿ ಸ್ಮರಣೆ ಮಾಡದೆ ತೀರದು ಎನ್ನುವುದೇ ನಿಶ್ಚಯವು. ಬ್ರಹ್ಮ ದೇವರ ವಂದನೆ ಮಾಡಬೇಕಾದರೂ ಸ್ವಬಿಂಬಾಂಶವನ್ನು ಅವರ ಅಂತರ್ಯಾಮಿಯಲ್ಲಿ ಕೂಡಿಸಿ ಸೇವಿಸುವವನೇ ಅಲ್ಪಾಧಿಕಾರಿ, ಕೂಡಸದವನೇ ವ್ಯಾಪ್ತ್ಯುಪಾಸಕನಾಗಿ ಕೆಡತಕ್ಕವರು ಎಂತ ಅರ್ಥವು. ಆಕ್ಷೇಪ– ಪರಮಾತ್ಮನ ಕರ ಚರಣಾದಿಗಳು ಅಪರಿಚ್ಛಿನ್ನವಲ್ಲದೇ ಹೋಗಲಿ ಆಕಾಶದಂತೆ ಅದು ಸಾಕಾರವಲ್ಲಾದೇ ಹೋಗಲಿ ಎಂದರೆ, ಸಮಾಧಾನವು– "ಪಾದಾಂತಂ ಶಿರ ಆರಭ್ಯಮಿತಿ ಹೀನಾನಿತಸ್ಯವೈ" ಎಂತ ಶೌನಕ ಸ್ಮೃತಿ. ಸರ್ವೇ ನಿತ್ಯಾಃ ಶಾಶ್ವತಾಶ್ಚ ದೇಹಾಸ್ತಸ್ಯ ಮಹಾತ್ಮನಃ। ಪರಮಾನಂದ ಸಂದೋಹ ಜ್ಞಾನಮಾತ್ರಾಶ್ಚ ಸರ್ವಶಃ। ಸರ್ವೇ ಸರ್ವಗುಣಾತ್ಮನಃ ಸರ್ವ ಕರ್ತಾರ ಏವಚ। ದೇಶತಃ ಕಾಲತೋನಂತ ವೃದ್ಧಿ ಹ್ರಾಸ ವಿವರ್ಜಿತಾಃ। ತಥೈವ ಗುಣತೋ ಅನಂತಾಃ ಸರ್ವೇ ಸರ್ವೇ ಸರ್ವೇಶ್ವರಾಃ। ಸಮಸ್ತ ಭೊಗ ಭೋಕ್ತಾರಃ ಸ್ವಭೋಕ್ತಾರಸ್ತಥೈವಚ। ಮಹಾಲಕ್ಷ್ಮೀ ಮುಖಾಂಭೋಜ ಮಧ್ವಾಸ್ವಾದನ ತತ್ಪರಾಃ । ಅನ್ಯೋನ್ಯಾನ್ಯಧಿಕಾಶ್ಚೈವ ಗುಣೈಃ ಸರ್ವೈಶ್ಚ ಸರ್ವತಃ। ಸರ್ವ ಲಕ್ಷಣ ಸಂಪೂರ್ಣೈಃ ಸರ್ವಾಕಾರಾಃ ಸದಾಖಿಲಾಃ । ಸರ್ವ ವರ್ಣಶ್ಚ ಸರ್ವೇಪಿ ಸರ್ವ ಕಾರ್ಯ ಪ್ರವರ್ತಕಾಃ । ಕೈವಲ್ಯೈಶ್ವರ್ಯ ಸಂಯೋಗಾದೀಶ್ವರಃ । ಎಂತ ಸತ್ತತ್ವರತ್ನಮಾಲಾ ನಾರಾಯಣ ಪ್ರಕರಣ." ಜ್ಞಾನೀಸ್ಯಜ್ಞಾನಿತಾ ದೇವೇ ಜ್ಞಾನಿತಾಸ್ಯೇನಚಾತ್ಮನಃ । ಜ್ಞಾನ ಭುಕ್ತ ಸುಖಸ್ಯಾಪಿ ಸುಖಿತ್ವಂ ಸುಖಭೋಕ್ತೃತಾ। ಇತ್ಯಾದಿ ಅದ್ಭುತ ಮಹಿಮೆಯನ್ನು ವರ್ಣಿಸಿದ್ದಾರೆ. ಅದರ ಟಿಪ್ಪಣಿಯಲ್ಲಿ ತೃತೀಯ ತಾತ್ಪರ್ಯಂಚ "ದೇಶ ಕೋಟಿ ವಿಹೀನತ್ವಮಿತ್ಯಾದಿನಾ ದೇಶ ಕಾಲ ಗುಣೈರಾನಂತ್ಯಮಿತ್ಯಭಿಧಾಯ ತಸ್ಯ ಸರ್ವ ಸ್ವರೂಪೇಷ್ವಪ್ಯಾನಂತ್ಯಂ ಸುವಿಲಕ್ಷಣಂ। ತಥಾಪಿ ದೇಶತಸ್ತಸ್ಯ ಪರಿಚ್ಛೇದೋಪಿ ವಿದ್ಯತೇ ಪರಿಚ್ಛೇದಸ್ತಥಾವ್ಯಾಪ್ತಿರೇವ ರೂಪೇಪಿ ಯುಜ್ಯತೆ। ವ್ಯಾಪ್ತತ್ವಂ ದೇಶತೋಪ್ಯತ್ರ ಸರ್ವ ರೂಪೇಷು ಯದ್ಯಪಿ। ತಥಾಪಿ ವಿದ್ಯತೇ ಅಣುತ್ವಂ ಸ್ವಸ್ಮಾದ್ವೈಶ್ವರ್ಯ ಯೋಗತಃ ಇತಿ। ನನು ತರ್ಹಿ ಇದಂ ಮತ್ಸ್ಯ ರೂಪಮಿದಂ ಕೂರ್ಮರೂಪಮಿದಂ ರಾಮಾದಿಕಂ ಮಾನುಷಾಕಾರಮಿದಂ ಮತ್ಸ್ಯಾದಿಕಂ ತಿರ್ಯಗಾಕಾರಂ ರಾಮಃ ಶಾಮಃ

ಜಾಮದಗ್ನ್ಯೋ ರಕ್ತಃ ವಿಶ್ವೋ ಜಾಗ್ರತ್ಪ್ರವರ್ತಕಃ ತೈಜಃ ಸ್ವಪ್ನ ಪ್ರವರ್ತಕಃ ಇತ್ಯಾದಿ ಪ್ರಕಾರಕ ವಿವಿಧಾನಂತ ರೂಪಾದಿ ವ್ಯವಸ್ಥಾ ಕಥಮುಪಪದ್ಯತೇ। ಸರ್ವಸ್ಯ ಸರ್ವ ಸಂಸ್ಥಾಪಕಾಕಾರಾದಿಮತ್ವೇನ ಭೇದಕಾಭಾವಾದಿತ್ಯತಃ। ಪ್ರಮಾಣ ವಚನೇನೈವ ಲೇಶತಃ ಪರಿಹಾರಾಂಶಂ ದರ್ಶಯತಿ। ಕೇವಲೇತಿ। ಅಪಿಚೈವಂ ಪ್ರತ್ಯೇಕಂ ಅನಂತಗುಣ ಕ್ರಿಯಾದಿ ಧರ್ಮಾಣಾಂ ಕೇಶಾದ್ಯವಯವಾನಾಂಚಪ್ಯನಂತ ರೂಪಾತ್ಮಕತ್ವಾತ್ ಜ್ಞಾನ ರಾಮಃ ಜ್ಞಾನ ಕೃಷ್ಣಃ ಜ್ಞಾನ ವಾಮನಾದಿಃ ಜ್ಞಾನ ಜ್ಞಾನದಿಃ ಜ್ಞಾನಾನಂದ ರಾಮಾದಿಃ ಆನಂದ ಜ್ಞಾನ ರಾಮಾದಿಃ ಇತ್ಯೇವಂ ತಥಾ ರೂಪಣಾಮಪಿ ಗುಣಾತ್ಮಕತ್ವೇನ ಪ್ರತ್ಯೇಕಂ ಸರ್ವೇಷಾಂ ಗುಣಾದಿ ಧರ್ಮಾಣಾಮವಯವಾದೀನಾಂ ಚ ಸಮಸ್ತ ರೂಪತ್ವೇನೋಕ್ತರೀತ್ಯಾ ಪುನಃ ಪುನರಾಧಿಕ್ಯಂ ಜ್ಞೇಯಮಿತಿ। ಎಂತ ಟಿಪ್ಪಣಿಯ ವಾಕ್ಯ। ಪರಿಪೂರ್ಣೋಽಹಿ ಭಗವಾನೇಕೈಕಾವಯವೇಷ್ವಪಿ। ಆಕೇಶಾ ದಾನಖಾಗ್ರಾಚ್ಚ ಪರಿಪೂರ್ಣಂತತೋ ಹರಿಃ॥ ಎಂತ ಸತ್ತತ್ವರತ್ನಮಾಲಾ ಮೂಲ. ಏತೇನ ಪರಿಚ್ಛೇತ್ಯಾನುಭವವೇ ಪ್ರಥಮ ಮರ್ಮ. ಇದು ಧ್ಯಾನ ಪ್ರಕರಣ ಸುಳಾದಿ. ಎರಡನೇ ತಾಳದಲ್ಲಿ ಹಿಂದೆ ಉಕ್ತವಾಗಿದೆ ಎರಡನೇ ಮರ್ಮ. ಮೂರನೇ ತಾಳದಲ್ಲಿ ಹಿಂದೆ ಬರೆದು ಇದ್ದೇನೆ. ಅದರ ಅನುಭವವೇನೆಂದರೆ ಭಗವದ್ರೂಪದಲ್ಲಿ ಚಿಂತಿಸುವ ಕ್ರಮ. ದ್ವೀಪ ಜ್ವಾಲೆಯಿಂದ ಒಂದು ಕಿಡಿ ಉದುರಿದ ಭಾವಕ್ಕೆ- ಉಪಾಸ್ಯ ಜ್ಞಾನ ಮೂರುತಿಯ ಚರಣಾಂಗುಲಿಯ ಅಗ್ರ ಭಾಗದಿಂದ ಒಂದು ಕಣವನ್ನು ಪ್ರಾರ್ಥಿಸಿ ತೆಗೆದು ಆ ಕಣವೇ ಅನಂತ ಗುಣಪರಿಪೂರ್ಣ ಪರಬ್ರಹ್ಮ ಸ್ವರೂಪವಾದುದರಿಂದ ಆ ಅಂಶವನ್ನು ಅನಂತಾನಂತ ಮಾಡಿ, ಅದರೊಳಗಿನ ಕೆಲವು ಅಂಶಗಳನ್ನು ವೈಕುಂಠಾಧಿಗತ ಭಗವದ್ರೂಪಗಳಲ್ಲಿ ಸೇರಿಸಿ ಅಂಶಗಳನ್ನು ಪಾತಾಳಗಭೋದಕಾದಿಗತ ಭಗವದ್ರೂಪಗಳಲ್ಲಿ ಕೂಡಿಸಿ ಕೆಲವು ಅಂಶಗಳನ್ನು ಲಕ್ಷ್ಮೀ ಮುಕ್ತಾಮುಕ್ತ ದೇವತೆಗಳ ಅಂತರ್ಗತ ಭಗವದ್ರೂಪಗಳಲ್ಲಿ ಕೂಡಿಸಿ ಕೆಲವಂಶಗಳನ್ನು ಹಿಂದಿನ ಕಾಲ ಕರ್ಮಾದಿಗತ ಭಗವದ್ರೂಪಗಳಲ್ಲಿ ಸೇರಲಿ ಅಂತ ಪ್ರಾಥಿಸಿ ಕೂಡಿಸಿ ಕೆಲವು ಅಂಶಗಳನ್ನು ಮುಂದಿನ ಕಾಲ ಕರ್ಮಾದಿ ನಾಮಕನಲಿ ಕೂಡಿಸಿ ಕಲ್ಯಾದಿ ನೀಚ ಸನ್ನಿಧಿ ಸ್ಥಳ ಬಿಟ್ಟು ಸಕಲ ಸ್ತೋತ್ತಮಾಂತರ್ಗತ ಭಗವದ್ರೂಪಗಳಲ್ಲಿ ಕೂಡಿಸಿ ಬ್ರಹ್ಮಚಾರಿ ಮೊದಲು ಮಾಡಿ ಸಮಸ್ತ ಯೋಗ್ಯ ಸ್ತ್ರೀ ಪುರುಷಾಂತರ್ಗತ ಬಿಂಬ ರೂಪಗಳಲ್ಲಿ ಕೆಲವು ಅಂಶಗಳನ್ನು ಕೂಡಿಸಿಕೊಂಡು ಕೆಲವಂಶಗಳನ್ನು ಜೀವಾಂತರ್ಗತ

ರೂಪಗಳಲ್ಲಿಯೂ, ನಾಡಿಗತ ರೂಪಗಳಲ್ಲಿಯೂ ಸ್ಥೂಲ ಶರೀರಗತ ಅನಂತ ಭಗವದ್ರೂಪಗಳಲ್ಲಿಯೊ ಹಾಗೆ ಸರ್ವತ್ರ ಏಕಾಕಾರವಾಗಿ ಓಂದೇ ಕ್ಷಣದಲ್ಲಿ ಕೂಡಿಸಿ ಆಲೋಚಿಸಿ ತಿರುಗಿ ಎರಡನೇ ಆವರ್ತಿ ಪೂರ್ವೋಕ್ತ ಶೇಷ ಭಗವದ್ರೂಪಗಳಲ್ಲಿ ಇದ್ದ ಒಂದೊಂದರ ಒಂದೊಂದು ಅಂಶಗಳನ್ನಾಗಿ ಸಮಗ್ರ ಏಕ ಕಾಲದಲ್ಲಿ ಉಪಾಸ್ಯ ಪ್ರಾಜ್ಞಗೆ ದಶದಿಕ್ಕುಗಳಿಂದಲೂ. ಮತ್ತು ವಿಶ್ವಾದಿ ಸಹಸ್ರ, ಪರಾದಿ ಅಜಿತಾದಿ ಅನಂತಾಂಶಗಳನ್ನು ಯಥಾಕ್ರಮಕ್ಕೆ ತಂದು ಕೂಡಿಸತಕ್ಕದ್ದು. ಇದಕ್ಕೆ ದೃಷ್ಟಾಂತ:– ಆ ಅನಂತಾಂಶಗಳು ಕ್ಷಣ ಮಾತ್ರದಲಿ ಬಂದು ಈ ಪ್ರಾಜ್ಞ ಮೂರುತಿಯ ನಖ ಶಿಖ ಪರ್ಯಂತದಲ್ಲಿಯೂ ಮೇಲಿನಿಂದ ಮೇಲೆ ಹನಿಗಳ ಹಾಗೆ ಕೆಳವಾದಬಾಣದ ಕಿಡಿಗಳಂತೆ ಅನಂತಾಂಶಗಳು ಒಂದು ಕೂಡಿದ್ದರನ್ನಾಗಿ ಚಿಂತಿಸತಕ್ಕದ್ದು. "ಒಂದು ರೂಪದೊಳಗನಂತರೂಪವು" ಎಂತ ಸ್ವತಃ ಸಿದ್ಧಾನಂತಕ್ಕೆ ಅಂಶಗಳಾದ ಸಂಶ್ಲೇಷ ವಿಶ್ಲೇಷಗಳಿಂದ ಏನು ಉಪಯೋಗವೆಂದರೆ ಕಲ್ಯಂತರ್ಗತ ರೂಪವೂ ಕೂಡ ಅನಂತ ರೂಪ ವಿಶಿಷ್ಟವೇ ಸರಿ. ಆದರೊಳಗೆ ಅಪ್ರಯೋಜಕ ಏಕೆಂದರೆ, ಸುಳಾದಿ:– "ಜೀವೇಶ್ವರೊಂದೆಂದು ಪೇಳುವ ಪಾಪಿಗೆ" ಎಂಬ ಅನ್ನಾದಾನ ಸುಳಾದಿಯಲ್ಲಿ." ಧನ್ಯನಾಗುವೆನೆಂದು ಬಿಂದು ಉದಕ ಆದವಿತ್ತರೆ ಯಾವತ್ತು ಪುಣ್ಯನಾಶವಾಗುವುದು ಎಂತಲೂ ಮತ್ತೊಂದು ಸುಳಾದಿಯಲ್ಲಿ "ಕತ್ತೆಯ ಅಂಡಕ್ಕೆ ಕಸ್ತೂರಿಯನ್ನು ಪೂಶಿ ಸುತ್ತಲೂ ದೂಪ ದೀಪಾರತಿ" ಇತ್ಯಾದಿ ದೃಷ್ಟಾಂತದಿಂದ ಪರಮ ಅನರ್ಥವನ್ನು ಪೂರ್ವದಲ್ಲಿಯೇ ಯಮದೇವರು ಇವನನ್ನು ಶಿಕ್ಷಿಸುತ್ತಾನೆ, ಎಂತಲೂ "ತಿಮಿರದ ಮೇಲೆ ತಿಮಿರ ಮುಸಿಕಿನಂತೆ" ಎಂತ ತಮೋ ಯೋಗ್ಯ ಪ್ರಕರಣ ಸುಳಾದಿಯಲ್ಲಿ ಹೇಳಿ ಇರುವುದರಿಂದ "ನೀಚಾಧಿಷ್ಠಾನದಲ್ಲಿ ಹರಿಯ ಪೂಜಿಸದಿರು" ಎಂತ ಜ್ಞಾನ ಸುಳಾದಿ ಜತೆ. "ಅಪ್ರತಿಷ್ಠಿತ ಬಿಂಬಸ್ಯ ಪೂಜನಂ ಸಿದ್ಧಿಹಾನಿಕೃತ್" ಎಂತ ತಂತ್ರಸಾರ ಛಲಾರಿ ಟಿಪ್ಪಣಿ. ಹೀಗೆ ಮಹಾನರ್ಥಗಳಿರುವುದರಿಂದ ಈಗ ಹೇಳಿದ ಸಂಶ್ಲೇಷ ವಿಶ್ಲೇಷಗಳೇ ಭಗವದ್ವಿಶೇಷ ವಿಭೂತಿ ಸನ್ನಿಧಾನ ಅಭಿವೃದ್ಧಿ ಸಾಧನವಾಗಿ ಇದೇ ಮರ್ಮದಲ್ಲಿ ಎರಡನೆಯವಿಧ. ಪೂರ್ವಪ್ರಕೃತ ಧ್ಯಾನ ಸುಳಾದಿ ಮೂರನೇ ತಾಳದ ಮುಂದಿನ ಮಾತು. "ಗಣ್ಯವಿಲ್ಲದಲೆ ಮನದಣಿಯಲ್ಯಾಕೋ ತನ್ನೊಳು ತಾನೇವೆ ತಿಳಿದು ಈ ಬಗೆ ಭಕುತಿಯನ್ನೇ ಮಾಡು ಸರ್ವ ಸ್ಥಾನದಲ್ಲಿ, ಸ್ತನ್ಯ ಪಾನಾದಿ ಹತ್ತದೆಂಬೋದಿದ್ದರೆ ಪುಣ್ಯ ಸಂಪಾದಿಸು ಅತಿತೀವರ ॥" "ಕಣ್ಣಿಗೆ ಕಾಂಬೋದಲ್ಲಿ ಅಂತರಂಗದ ಪೂಜೆ

ಘನ ಸುಲಭವಯ್ಯಾ ಸುಲಭ ವಿದ್ಯಾ" ಎಂತಲೂ, "ಮುನಿ ಮನು ಸನಕಾದಿದೇವತೆಗಳು ಅಬ್ಧಿ ಕನ್ಯಾ (ಲಕ್ಷ್ಮೀ) ಇದನೆ ಮಾಡಿ ಸುಖಿಸುವಳೋ." ನಿನ್ನಯೋಗ್ಯತೇದಷ್ಟು ಮರೆದು ಬಿಡುವುದಿಲ್ಲ ಭಿನ್ನವಾದರು ಹರಿಯೇ ಪಾಲಿಸಬೇಕೋ। ಅನ್ಯಥಾ ಉಪಾಯ ಮತ್ತೊಂದಿಲ್ಲ. ಪ್ರಸನ್ನನಾಗುವ ಹರಿ ಒಳಗೆ ಪೊಳೆವ ॥ ಎಂತಲೂ ಈ ಉಪಾಯವನ್ನು ಬಿಟ್ಟರೆ ಮಿಕ್ಕ ಅಪರಿಮಿತ ಸಾಧನಗಳಿಂದಲೂ – ಸುಳಾದಿ ಮುಂದಿನ ಮಾತು. "ಧನ್ಯನಾಗನು ಕಾಣೋ ಹರ್ಷತೀರಿದ ಮೇಲೆ ಬಿನ್ನ ಬಿಡಲಿ ಬೇಕೋ ವಿಮುಖನಾಗಿ" ಎಂತ ಹೇಳಿರುವುದರಿಂದ ಶ್ರೀಹರಿಯನ್ನು ತನ್ನ ಸಂದರ್ಶನ ಕೊಡಲಿಕ್ಕೆ ಈ ಉಪಾಯವನ್ನು ಮಾತ್ರ ಮುಖ್ಯ ಮಾಡಿ ತೋರಿಸಿ ಇರುವುದರಿಂದ ಇದು ಬಿಟ್ಟರೆ ಮಾರ್ಗವಿಲ್ಲವೆಂಬುದೇ ಸಿದ್ಧ. ಮುಂದೆ ಪ್ರಮಾಣವನ್ನು ಬರಿಯುತ್ತೇನೆ. ಪ್ರಕೃತ ಮರ್ಮದ ಪ್ರಮಾಣ, "ನಿತ್ಯಂ ಸ್ವಬಿಂಬಂಚೋಪಾಸ್ಯ ಮೂರ್ತಾ ಸಂಚಿಂತ್ಯ ಪೂಜಯೇತ್" ಏಕಾಂಶತೋಹಿ ಸಂಶ್ಲಿಷ್ಯ ಪೂಜಾಂತೇ ಪುನರೇವಹಿ. ಅಂಶಿನಂ ಯೋಜಯೇದಂಶಂ ಭಕ್ತಿ ಜ್ಞಾನೈಕ ಚಕ್ಷುಷಾ । ಎಂತ ಶೌನಕ ಸ್ಮೃತಿಯಲ್ಲಿ ಈ ಪ್ರಮಾಣವು ಬಾಹ್ಯ ಪ್ರತಿಮ ಪೂಜಾ ನಿಬಂಧನೆಯನ್ನು ಹೇಳಿದ್ದರಿಂದ ಅದರ ಮುಂದಿನ ಪ್ರಮಾಣ:– ಸ್ವಬಿಂಬಮೇವ ಬಹುಶೋ ಚಿನ್ಮಯಾನಂತ ರೂಪಕಂ। ಸಿದ್ಧಮೇವಂ ಭಿನ್ನ ಜೀವಂ ಸರ್ವರೂಪೇಷು ಚಿಂತಯೇತ್॥ ಸ್ವಬಿಂಬಾಂಶಮಭೇದೇನ ಯೋಜಯಿತ್ವಾನತಿಂ ಕುರು। ಪುನಶ್ಚ ಪ್ರತಿಬಿಂಬಸ್ಥ ರೂಪಾಣಿ ಸ್ವಾಂಶಕಂ ಪ್ರತಿ॥ ಅಪಕೃತ್ಯ ಶುಭೇತ್ಯೇನ ಪೂಜಾಂ ಕುರುನ ಸಂಶಯಃ ॥ ಎಂತ ಶೌನಕ ಸ್ಮೃತಿ. 'ಶುಭೇಕ್ಯೇನ' ಎಂತ ಹೇಳುವುದರಿಂದ ಅಶುಭ ಕಲ್ಯಾದಿ ಬಿಂಬ ಹರಿಯಲ್ಲಿ ಅಂಶ ಸಂಶ್ಲೇಷ ಮಾಡದೆ ಎಂತ ಅರ್ಥ. ಅಂತರೋಪಾಸನೆಯಲ್ಲಿ– ಇದೇ ಆವಾಹನೆ ಕ್ರಮ ಎನಿಸಿಕೊಳ್ಳುತ್ತದೆ. ಅಂತರೋಪಾಸನೆಗೆ ಪೂಜಾಂತದಲ್ಲಿ ಬಾಹ್ಯೋಪಾಸನೆಯಂತೆ ತದಂಶಕ್ಕೆ ಅಂತಸ್ಥಾಪನೆ ಇಲ್ಲ. ಸುಳಾದಿ:– "ಕಂತು ಪಿತನ ಪೂಜೆ ಮಾಳ್ಪ ಲಕ್ಷಣ ಆದ್ಯಂತ ಕಾಲದಲ್ಲಿರತಕ್ಕದೆಂದು" ಎಂತ ಸಂಪೂಜಾ ಸುಳಾದಿ. ಅಂದರೆ ಉಪಾಸನೆಗೆ ಪ್ರಾರಂಭ ಕಾಲಮಾತ್ರ ಉಂಟು ಹೊರತು ಪರ್ಯವಸಾನ ಕಾಲ ಇಲ್ಲವೆಂತ ಅರ್ಥ. ಮುಂದೆ ವಿವರಿಸುತ್ತೇನೆ– ತಾಮ್ರಪರ್ಣೀಯ ಪ್ರತಿಮಾವಾಹನ ಪದ್ಧತಿ. ರಮಾ ಗುಣೇಷು ರೂಪೇಷು ಧರ್ಮೇಷು ಸಮ ಸ್ಪೃಶಃ । ಮುಕ್ತೇಷು ಮುಕ್ತ ಧರ್ಮೇಷು ಸತ್ವಮಾನಿ ಸುರೇಷು ಚ॥ ವೈಕುಂಠಾದಿಷು ಸರ್ವೇಷು

ಇತ್ಯಾದಿ ಪ್ರತಿಮಾವಯವಾಃ॥ ಸರ್ವೇಪ್ಯನಂತಾಂಶ ಸಂಯುತಾಃ । ಸರ್ವಾಂಶ್ಚ ಮತ್ಸ್ಯ ಕೂರ್ಮಾದಿ ನಾನಾಕಾರಾ ನಿಗೃಹ್ಯಚ। ಇತ್ಯಾದಿ ವಿಸ್ತರಶಃ। ವಾಕ್ಪರಿಚರ್ಯಾಖ್ಯ ಪೂಜಾಪದ್ಧತಿಯಲಿ ಸಿದ್ಧ. ಈಗ ಎರಡು ವಿಧ ಮರ್ಮ ಹೇಳಿದ್ದೇನಷ್ಟೆ- ಮೂರನೇಯದು ಯಾವುದೆಂದರೆ. ಈ ಸುಳಾದಿ ನಾಲ್ಕನೇ ತಾಳದಲ್ಲಿ ನಿರೂಪಿಸಿ ಇದ್ದಾರೆ. – ಬುಧಜನರ ಪ್ರಿಯ ತಾಪಭಂಜನನಿಗೆ ಷೋಡಶ ಪೂಜೆಯ ವ್ಯಾಪುತಿ ತಿಳಿದು ಒಂದರಿಂದ ಸರ್ವಕ್ಕೂ ಆ ಪಾರ್ಥ ಪಾರ್ಥಿವ ಲಿಂಗತಲೆಕಾ ಪುಷ್ಪ ಭಕುತಿಯಿಂದ ಇಟ್ಟು ವ್ಯಾಧರೂಪನಾಗಿದ್ದ ದೇವನ್ನಗೆಲುವೆನೆಂದು ಸಂತಾಸದೀಂದೇರಿಸಿ ಆತನ ಸಿರದಲ್ಲಿ ಈ ಪುಷ್ಪಕಂಡೇನೆಂಬೋದು ಪುಸಿಯೇನೋ। ಗೋಪತಿ ಕೇತಗೆ ಈ ಪರಿ ಇರಲಿಕ್ಕೆ ಆ ಪರಮಾತ್ಮಗಿದು ಪೇಳುವುದು ಸೋಜಿಗವೆ ॥ "ತಾತ್ಪರ್ಯ ನಿರ್ಣಯೋಕ್ತಿಯಿಂದ ದೃಷ್ಟಾಂತ ಕೊಟ್ಟು ಇದ್ದಾರೆ. ಅರ್ಜುನನಿಗೆ ಕಿರಾತ ರುದ್ರ ಸಾಕ್ಷಾತ್ಕಾರ ಕಾಲದಲಿ ಅರ್ಜುನನು ಪಾರ್ಥಿವ ಲಿಂಗದ ಶಿರಸ್ಸಿನಲ್ಲಿ ಇಟ್ಟ ಪುಷ್ಪಗಳೆಲ್ಲವೂ ಎರಡು ಪ್ರಕಾರವಾಗಿ ಆ ಲಿಂಗಶರೀರದಲ್ಲಿಯೂ, ಆ ಕಿರಾತ ರುದ್ರ ದೇವರ ಶಿರಸ್ಸಿನಲ್ಲಿಯೂ ನಿಸ್ಸಂಶಯವಾಗಿ ಕಂಡಿದ್ದರಿಂದ ಮತ್ತು ಅರ್ಜುನನಿಗೆ ಆ ರುದ್ರ ದೇವರ ಪಾದದಲಿ ಭಕ್ತಿ ಲೇಶವಿಲ್ಲದೆ ಗೆಲ್ಲ ಬೇಕೆಂಬ ಅನುಗ್ರಹದಿಂದಲೇ ಪೂಜಿಸಿದಕ್ಕೂ ಕೂಡ ಆ ರುದ್ರದೇವರು ಹೇಗೆ ಪುಷ್ಪ ಸ್ವೀಕರಿಸಿದರೋ ಆ ರೀತಿಯಿಂದ ಗುಣ ಪೂರ್ಣನಾದ ಶ್ರೀಹರಿಯಲ್ಲಿ ಹೀಗೆ ಚಿಂತಿಸಲಿಕ್ಕೆ ಆಶ್ಚರ್ಯವೇನೆಂದು ಹೇಳಿದರು. ಷೋಡಶ ಪೂಜೆಯ ವ್ಯಾಪುತಿ ತಿಳಿದು ಎಂಬ ಸುಳಾದಿಮಾತಿಗೆ ಅರ್ಥವೇನೆಂದರೆ – ಒಂದು ದಳ ಮಾನಸಿಕ ತುಳಸಿಯನ್ನು ಶ್ರೀ ಪಾದಕ್ಕೆ ಇವನು ಸಮರ್ಪಿಸಿದರೆ ಮತ್ತು ಒಂದು ಬಿಂದುಉದಕವನ್ನು ಸಮರ್ಪಿಸಿದರೂ, ಹೀಗೆ ಸಮಸ್ತ ಅಭಿಷೇಕ ವಸ್ತ್ರ ಗಂಧ ಪುಷ್ಪಮಾಲಾ ಆಭರಣ ಮಾಲಾ ಧೂಪ ದೀಪಾದಿಗಳು ಪೂರ್ವೋಕ್ತ ಸಮಸ್ತ ಸಕಲ ದೇಶ ಜೀವ ಜಡಾಂತರ್ಗತ ಭಗವದ್ರೂಪಗಳಿಗೆ ಭಗವದ್ರೂಪಾನಂತ್ಯದಂತೆ ವ್ಯಾಪ್ತವಾಗುತ್ತದೆ. ಎಂತ ತಿಳಿಯತಕ್ಕದ್ದು. ಶೋಡಷೋಪಚಾರಗಳು ವ್ಯಾಪ್ತವಾಗುತ್ತದೆ ಎಂದರೆ, ಇದು ವ್ಯಾಪ್ತ್ಯೋಪಾಸನೆ ಏಕೆ ಆಗಬಾರದು ಎಂದರೆ, ಸರ್ವಥಾ ಆಗಲಾರದು. ಹಿಂದಿನ ತಾಳದಲ್ಲಿ "ಇಂತು ನಲಿವ ಜಾಣ ಸ್ವಲ್ಪಾಕಾಶದಲಿ ನಿಂತು ಭಕ್ತರ ಕೈಯ್ಯ ಪೂಜೆಗೊಂಬ ರಾಜ" ಎಂತ ಇವ ಅಲ್ಪಾಧಿಕಾರಿಯಾದ ಪ್ರಯುಕ್ತವೇ ಒಬ್ಬ ಬಿಂಬರೂಪನೇ ಇವನ ಹಸ್ತದಿಂದ

ಆರಾಧನೆ ತೆಗೆದುಕೊಂಬುವ ಎಂತ ಹೇಳಿದ್ದರಿಂದ ತಾನಾಗಿ ಸರ್ವತ್ರ ವ್ಯಾಪ್ತಗಳಾದರೆ ಅದನ್ನು ತಿಳಿಯೋಣ ಮಾತ್ರವೇ ವ್ಯಾಪ್ತ್ಯೋಪಾಸನೆಯಾಗಲಾರದು. ಎಂಬುದೇ ಸಿದ್ಧ. ಪ್ರಕೃತ ತಿಳಿದ ಮುಂದಿನ ಮಾತು. "ನೀ ಪರಮ ಭಕುತಿಯಿಂದ ಅಂತರಂಗದ ಉಪಾಸನೆ ಮಾಡುವುದು ವೈಕುಂಠಕೆ" ಅಂದರೆ ಒಂದು ಶಂಖ ಕ್ಷೀರಾಭಿಷೇಕ ಮೊದಲುಗೊಂಡು ಶ್ರೀಹರಿ ಕಂಠದಲಿ ಒಂದು ಪುಷ್ಪಮಾಲೆ ಮೊದಲಾಗಿ ವ್ಯಾಪ್ತಿ ತಿಳಿದು ಉನ್ಮತ್ತನಾಗದೆ ಪೂಜಿಸಬೇಕು. "ಆಕೇಶಾದಾನಖಾಗ್ರಾಚ್ಚ ಪರಿಪೂರ್ಣತರೋಹರಿಃ" ಎಂತ ಸತ್ತತ್ತ್ವರತ್ನಮಾಲೆಯಿಂದ ಚರಣ ಸಮರ್ಪಿತ ತುಳಸೀ ದಳಾದಿಗಳಲ್ಲಿ ಒಂದೊಂದು ತುಳಸೀದಳಗಳು ಆಭರಣ ನಖಾಗ್ರವು ಸಹಿತ ಸರ್ವ ದೇಶ ಕೋಟಿ ಕಾಲಕೋಟಿಗಳನ್ನು ಮೀರಿ ವಿರಾಟರೂಪಾದಿಗಳು ಆಗಿಯಿದೆ. ಆದುದರಿಂದ "ಪರೋಮಾತ್ರಯಾ ತನ್ವಾಮೃಧಾನಃ" ಇತ್ಯಾದಿ ಶೃತಿಗಳಿಂದಲೂ, ಪುಷ್ಪಾದಿಗಳಿಗೆ ನಖಾಗ್ರ ಮೊದಲಾದ ಭಗವದವಯವ ಸಂಬಂಧದ ಮಹಿಮೆಯೇ ಇಂಥಾದ್ದಾಗಿ ಅದೆಯಾದುದರಿಂದ ಈ ಜೀವನ ವ್ಯರ್ಥ ವ್ಯಾಪಾರವನ್ನು ಎಣಿಸಿ ಉಪಯೋಗವಿಲ್ಲ ಎಂತ ಅರ್ಥ. ಇದೇ ಅಧಿಕಾರಿ ಕ್ರಿಯಾ ಮೂಲಕವಾದ ಮೂರನೆಯ ಮರ್ಮ. ವ್ಯಾಪುತಿ ತಿಳಿದು ಎಂಬ ಸುಳಾದಿ ವಚನವೇ ಹೇತುಗರ್ಭ ವಿಶೇಷಣ. ಹೇಗೆಂದರೆ ತಾಪಭಂಜನನಿಗೆ ಎಂತ ಹೇಳಿದ್ದರಿಂದ ಈ ಚಿಂತನೆಯೇ ತಾಪಭಂಜಕ ಎಂದು ಅರ್ಥವು. "ವರ್ತತೇ ಜ್ಞಾನಿರಕ್ಷಕಃ । ತಾಪಭಂಜಕ ಶಕ್ತ್ಯೈಕ ನಿಷ್ಟತೋಮರಮರ್ದನಃ ಇತ್ಯಾದಿ ಅಂತಃಪೂರ್ಣ ಗುಣೋಪೇತ ಭಕ್ತಿಸೋಪಾನತೋನಿಶಂ ॥ ಅಂತರಂಗೆ ವರ್ಧಯಸ್ವ ಫಲದೋಹಿ ಫಲಃ ಪುಮಾನ್।" ಹೀಗೆ ವರ್ಧಯಸ್ವ ಅಂದರೆ ಪೂಜಾವ್ಯಾಪ್ತಿ ಭಾವ ನೋಡು ಎಂತ ಅರ್ಥವೇ ಹೊರತು ಪೂಜೆಗೆ ಕ್ರಿಯಾನಿಮೇಶನಾಧಿಕ್ಯದಿಂದ ವ್ಯಾಪಾರಾಧಿಕ್ಯ ಮಾತ್ರವೇ ಅರ್ಥವಲ್ಲ ಎಂತ ಭಾವ. ಈ ಶೌನಕ ಸ್ಮೃತಿಯ ಮುಂದಿನ ಪ್ರಮಾಣ. "ಏತದರ್ಥೇ ವೇದವಾಕ್ಯಂ ತಂತ್ರ ವಾಕ್ಯಂ ಚ ವರ್ತತೇ। ಅರ್ಚಾಂಚಿತ ಹೃದ್ಯಂತಃ ಏಕಾಂತೆ ಹರಿಮರ್ಚಯು। ಅನಂತ ಗುಣ ಪೂರ್ಣಸ್ಯ ಹರೇರಾನಂತ್ಯತಾಂ ಸ್ಮರನ್ । ಜೀವ ಸುಖಾನಂತ ಮುಕ್ತಾನಾನಂದಾದೀನ್ ಗಣಯನ್ ಬಹೂನ್। ಅನಿರೀಕ್ಷ್ಯ ಸ್ಥಿತಾಃ ಸರ್ವೇ ಸ್ವಾಪಾದಿ ಗುಣ ಭಾಗಿನಃ। ಏವಂ ಹ್ಯನುಭವಂ ಭಾವೆ ಆದ್ಯಂತಂ ಪರಿಚಿಂತ್ಯಚ। ಸುಖೀಭೂತ್ವಾ ಭಾವಿಜನ್ಮ ಸಾಧನಂ ಭವತಿ ಧ್ರುವಂ । ಜನ್ಮಾದಿಕಂ ಮಮ ಪ್ರಾಪ್ತಂ

ಮಾಭೂಯಾದುತ್ತರತ್ರಹ । ಇತಿ ಮತ್ವಾ ವ್ಯಾಪ್ಯತೆಯಾ, ಹರಿಂ ದೃಷ್ಟ್ವಾತು ಮಾನಸೇ।ಸದೈವಂ ಕ್ರಿಯಮಣಾನಾಂ ಸಂತತ್ಯಾ ಸಹ ಮುಕ್ತಿಗಂ। ಕುರ್ವೇವಂ ಭಗವಾನುಕ್ತ್ವಾ ಪ್ರತಿಜ್ಞಾತೇ ಅನಿಶಂ ಭುವಿ॥ ಸರ್ವಾಭಿಷ್ಟ ಪದಾನೇತು ಚಿಂತಾಮಣಿರುದೀರ್ಯತೇ। ಎಂತ ಶೌನಕ ಸ್ಮೃತಿ॥ ಈ ಸ್ಮೃತಿಯಲ್ಲಿ "ವ್ಯಾಪ್ತತೆಯಾ ಹರಿಂ ದೃಷ್ಟ್ವಾ ಸರ್ವದಾ ಏವಂ ಕ್ರಿಯಮಾಣಾನಾಂ" ಎಂತ ಹೇಳಿದ್ದರಿಂದ ವರ್ಧಯಸ್ವ ಎಂಬ ಪದಕ್ಕೆ ಷೋಡಶ ಪೂಜೆಯು ವ್ಯಾಪುತ ತಿಳಿದು ಎಂತ ಸುಳಾದಿಯಲ್ಲಿ ಮರ್ವೋಪದೇಶ ಮಾಡಿದ್ದಾರೆ. ಮುಂದಿನ ಮಾತು. "ಗೋಪಾಲಕ ನಮ್ಮ ವಿಜಯವಿಠಲರೇಯನ ವ್ಯಾಪರವನ್ನೇ ನೆನೆ ಗುಣ ರೂಪ ಕ್ರಿಯಾವನ್ನೆ॥ಳ॥ರೂಪಕ॥ ಮೇರು ಸಿಂಹಾಸನ ಧಾರುಣಿ ಮಂಟಪ ತೋರಣ ಮಕರಗಳು ಮಹಾಲಕುಮಿಯನ್ನು ಕುದುರೆ ಮೋರೆ ಎರಡು ತಥಾಸ್ತು ಎಂಬುವುದಯ್ಯ। ಕುದುರೆ ಮೋರೆ ಎಂದರೆ ಅಶ್ವಿನೀ ದೇವತೆಗಳು. ದೇವಸ್ಯಾನಂತ ಭೊಗೋಸ್ತು ಇತ್ಯಾದಿ ಸರ್ವೋಪಚಾರಗಳು ನಡಿಯತಕ್ಕದ್ದು, ಮುಂದಿನ ಮಾತು." ಚಾರು ಮಂದಿರ ವಾಸ್ತು ದೇವತೆಗಳು ರಚಿತ ಭಂಗಾರ ಚಂದ್ರಮ ಭಾಸ್ಕರಾಗಿಪ್ಪರು. ಪರಿ ಒಂದೊಂದು ಮಣಿಗಳಿಗೆ ಹಿಮವಂತ ವಾರಿನಿಧಿಯಾಗಿಪ್ಪೋನು ಸುತ್ತಾ ರಂಜಿಸುತಲಿ। ವಾರುಣೀಪತಿ ಹಾಸಿಕೇ ಮೇಲೆ ನಿನ್ನಿಂದಲಿ ಆರಾಧನೆ ಗೊಂಬ ವಿಗ್ರಹ ನೀನಿಲ್ಲಿಸೇ (ಅಂದರೆ) ಮನೋವಾಸನಾ ನಿಗ್ರಹವನ್ನು ಹೃದಯದಲ್ಲಿ ಧಾರಣೆಗೆ ನಿಲ್ಲಿಸುವತನಕ ಈ ಭೃತ್ಯನ ವ್ಯರ್ಥ ಪ್ರಯತ್ನವೇ ಹೊರತು ಅನಂತರ ಆ ಮಹಿಮನೆ ನನ್ನನ್ನು ದರ್ವಿಯೋಪಾದಿಯಲಿ ನಿಮಿತ್ತ ಮಾಡಿ ಸ್ವತಏವ ತಾನೆ ತನ್ನ ಪೂಜೆಯನ್ನು ನಿರ್ವಹಿಸಿ ಕೊಳ್ಳುತ್ತಾನೆ. ಎಂತ ಆರ್ಥ. ಮುಂದಿನ ಮಾತು. "ದ್ವಾರಪಾಲಕ ಪೆಸರ್ಗೊಂಡು ಜಯಾದಿಗಳ ಮೂರೊಂದು ಬಾಗಿಲಲ್ಲಿ ತಿಳಿದು ಕೊಂಡಾಡುವುದು. ಹಾರೈಸು ಧ್ಯಾನ ಮೊದಲಾದ ಬಗೆಯನ್ನು ಮೂರು ಮೂರುತಿಯನು ಕೂಡಿಸು ಭೋಗ ಕಾರ್ಯ ಕರಣವನ್ನೇ ನೋಡಿ ಪೂಜಾ ಸಾಧನವೆಲ್ಲ । ವಾರಿಜ ಮಿಗಿಲಾದ ದ್ವಯಂಗಳ ಚಿಂತಿಸಿ ಬೇರೆ ಬೇರೆ ಇವಿಷ್ಟು ದೈವತೆಗಳು ಸಿದ್ಧ." ಅಂದರೆ ಮೂರ್ತಿ ಮೂರ್ತಿಗೆ ಉಪಾಸ್ಯ ಪ್ರಾಜ್ಞನು ಲಕ್ಷ್ಮ್ಯಾತ್ಮಕ ಸುವರ್ಣ ಪದ್ಮ ಪೀಠದಲ್ಲಿ– ಆ ಪದ್ಮವು ರಮಾ ರೂಪ ನವರತ್ನ ಮಂಟಪಗತವಾದುದರಿಂದ ಅಂಥ ಮಂಟಪಾಧಾರವಾದ ರಕ್ತವರ್ಣ ಜ್ಯೋತಿರ್ಮಯ ಜಡ ಹೃದಯ ಕಮಲದಲ್ಲಿ ಮುಂಭಾಗ ಮೂಲೇಶ, ಹಿಂಭಾಗಾ ಪ್ರಾದೇಶ ಈ ಎರಡು ರೂಪಗಳಿಗೂ

ವಾರಿಜ ಮಿಗಿಲಾದ ದ್ವಯ ಎಂದರೆ ತಕ್ಕ ತಕ್ಕ ಕಮಲಗಳು ಪೀಠಗಳು, ಸೇವಕರಾದ ಬ್ರಹ್ಮಾದಿ ವ್ಯೂಹ ಹೃದಯರು ಮಿಗಿಲಾಗಿ ಇದ್ದಾರೆ – ಎಂತ ಅರ್ಥ– ಪ್ರಮಾಣ:– "ಭೂರೇವ ಮಂಟಪಂ ಕಸ್ಯ ಮೇರುಃ ಸಿಂಹಾಸನಂ ಭವೇತ್। ಶೀತಾಂಶುರ್ಭಾಸ್ಕರಶ್ಚೋಭೌ ರೂಪ್ಯಕಾರ್ತಸ್ವತಾಹಿತೌ ಸೌಂದರ್ಯ ಗುಣ ಮಾಣಿಕ್ಯ ವಾರಾ ಆನಿಧಿರುಪಾಸಿತಃ । ಶೇಷ ಶಾಯೀ ಸುರೈಃ ಸರ್ವೈಃ ಬ್ರಹ್ಮ ರುದ್ರಾದಿತಾಮವೈಃ । ಜಯಾದಿ ದ್ವಾರ ಪಾಲೈಶ್ಚ ಪಾರ್ಶ್ವದೈರುಪ ಶೋಭಿತಃ॥" ಎಂತಲೂ "ಧ್ಯೇಯಃ ಸ್ವಮನಸಾ ಪೂಜಾ ಸಾಧನಾನಿ ಫಲಾನಿಚ॥ ಕಂಜಾದಿ ಪುಷ್ಪನಿಕರಂ ಪರಿಕಲ್ಪ್ಯ ಪ್ರಪೂಜಯ। ಇತ್ಯಾದಿ" ಇದಮೇವ ಮನುಷ್ಯಾಣಾಂ ತಾರಕಂ ತತ್ತ್ವ ವೇದಿನಂ ।ಇತ್ಯಾಲೋಚ್ಯ ಶರಣ್ಯ ಹಿ ವ್ರಜ ಸರ್ವಾರ್ಥ ದಾಯಿನಂ। ಎಂತ ಶೌನಕ ಸ್ಮೃತಿ– ಮುಂದಿನ ಮಾತು. "ತಾರತಮ್ಯವೇ ಉಂಟು ಕೆಲವು ಗ್ರಹಸ್ತಾನದಲ್ಲಿ ವಾರಿಜಭವ ಪ್ರಧಾನ ಅರ್ಚಕನೆ। ಚಾರು ಚರಿತ ನಮ್ಮ ವಿಜಯವಿಠಲರೇಯನೆ. ಆರೆರಡು ಕರ್ತೃತ್ವ ತಿಳಿದು ನಿನ್ನೊಳು ಹಿಗ್ಗೆ ॥೫॥ ದ್ರುವ ತರಣಿ ಚಂದ್ರಾಗ್ನಿ ಮೂರು ದೀಪಗಳ ನೋಡು ಗರುಡನ ಘಂಟೆಯನ್ನು ನಾದ ಶೇಷ ಸರ್ವ ಉಪಕರಣ ಭೂದೇವಿಯನ್ನೆ ಮಾಡು । ಗದಾಧರ ಮಹಾಲಕುಮಿ ಅನಿರುದ್ಧನೆನ್ನು ಅಂದರೆ ಪೂಜಾ ದ್ರವ್ಯಾಣಿ ಭೂದೇವಿ ಅಂದರೆ ರಮಾ ಸ್ವರೂಪ ಭೂವ್ಯತಿರಿಕ್ತ ಪೃಥಿವ್ಯಭಿಮಾನಿ ಭೂ ದೇವತೆಯು ಉಪಕರಣಮಾನ ಜಡ ಪದಾರ್ಥದಲಿ ತದಾಕಾರಳು ಅಲ್ಲಿ ಗದಾಧರ ಎಂದರೆ ಪ್ರಾಣ ದೇವರು ಅದರಲ್ಲಿ ಮಹಾಲಕ್ಷ್ಮಿಯು ತದಾಕಾರರಾಗಿ ಇದ್ದಾರೆ ಅಂತ ಅರ್ಥವು. ಪೂರ್ವೋಕ್ತ ಮೂರು ಮರ್ಮಗಳು ಒಂದೇ ಮರ್ಮಕ್ಕೆ ಸೇರಿದುದು. –

ಭಗವದ್ಪ್ರಸಾದಾಪೇಕ್ಷಿಯು ಹೀಗೆ ನಿಶ್ಚಯ ತಿಳಿದು ಆರಾಧನೆ ಕರ್ಮ ದೀಕ್ಷಿತನಾದರೆ, ಅವನ ಮರ್ಮವೇ ಸಾರವತ್ತರವು, ಅವನಿಗೆ ಅಪರೋಕ್ಷಾದಿಗಳು ಸರ್ವವೂ ಕರಸ್ಥವೇ ಸರಿ. ಸುಳಾದಿ ಮುಂದಿನ ಮಾತು :– ಅರಿ ಶಂಖ ಗದಾ ಪದ್ಮ ಮಿಕ್ಕಾದ ಆಯುಧ ಸ್ಮರ ಅನಿರುದ್ಧ ವಾಯು ಲಕ್ಷ್ಮೀ ದೇವಿ ನಿರೀಕ್ಷಿಸು. ಅದರಂತೆ ಅಲ್ಲಿಗಲ್ಲಿಗೆ ಚಿಂತಿಸು ಪರಮ ಪುರುಷ ಹರಿಯ ಆರಾಧನೆ। ಅಂದರೆ ಸ್ಮರಣೆ ಚಕ್ರ. ಅನಿರುದ್ಧ ವಾಯು ಲಕ್ಷ್ಮೀದೇವಿ ನಿರೀಕ್ಷಿಸು ಅದರಂತೆ ಶಂಖರೂಪ ವಾಯು ದೇವರು ಗದಾ ಲಕ್ಷ್ಮಿಯು ಪದ್ಮ ಅಲ್ಲಿಗಲ್ಲಿಗೆ ಅಂದರೆ ಕ್ಷೀರವನ್ನು

ಅಭಿಷೇಕ ಮಾಡಿದರೆ, ಆಕ್ಷೀರಾಂತರ ಭಗವದ್ರೂಪಕ್ಕೆ ಕ್ಷೀರಾಭಿಷೇಕಾಂತವಾದ ಪೂಜೆ ನಡೆಯಿತು. ಎಂತ ಚಿಂತಿಸೋಣ. ಕಿರೀಟವನ್ನಿಟ್ಟರೆ ಕಿರೀಟಾಂತರ್ಗತ ಭಗವದ್ರೂಪಕ್ಕೆ ಕಿರೀಟ ಧಾರಣೆ ಪರ್ಯಂತ ಚಿಂತನೆಯು. ಆಭರಣ ಗಂಧ ಪುಷ್ಪಾದಿ ಸಮರ್ಪಣೆಗಳಲ್ಲಿಯೂ ತತ್ತತ್ಪದಾರ್ಥಾಂತರ್ಗತ ದೇವತಾಂತರ್ಗತ ರೂಪಗಳನ್ನು ಬಿಡದೆ ಚಿಂತನೆ ಮಾಡು ಎಂತ ಭಾವ. ಮುಂದಿನ ಮಾತು "ಶರೀರದೊಳಗೆ ಮಾಡುವ ಜ್ಞಾನಾಕಾರದಿಂದ ಮರಳೆ ಮರಳೆ ಗುಣಿಸಿ ಶುಭ ಮಾರ್ಗದಿ । ಕರಿಭಯ ಹರ ನಮ್ಮ ವಿಜಯವಿಠಲರೇಯನ ಸ್ಮರಿಸಿ ಚನ್ನಾಗಿ ಆತನ ಧ್ಯಾನ ಮಾಡು" ಹಾಗಾದರೆ ಅತಿ ಸ್ವಲ್ಪ ಮನಸ್ಸಿನಿಂದ ಅಪರಿಮಿತ ಚಿಂತನೆಯು ಹ್ಯಾಗೆ ಒದಗಿತೆಂದರೆ- ಸಂದಣಿಸಿಕೊಂಡಿಹವು ಧ್ಯಾನಕೆ ಪಾದ ಒಂದನಿತು ಚಿಂತಿಸು ಎಂತ ಅಮೃತಸಾರ ಸಿದ್ಧ. ಆದುದರಿಂದ ಅಲ್ಪ ಬುದ್ಧಿಗೆ ಸ್ವಲ್ಪ ಜ್ಞಾನಾಕಾರವನ್ನು ಸ್ವಾಮಿಯು ಎಷ್ಟು ವೇಳೆಯೋ ಹಬ್ಬಿಸುತ್ತಾನೋ ಅದರಲ್ಲಿ ಯಥೋಚಿತ ಮರೆಯಬಾರದು. ಎಂತ ಅರ್ಥ. ಮುಂದಿನ ತಾಳ "ಮರುತ್ತು ಚೊಂಡಾರತುನ ಗೋಪೀಚಂದನ ಕಾಮ ಚರಣದಲ್ಲಿಪ್ಪ ಪಾದುಕ ಗರುಡ ಕಾಣೋ। ಸಿರಿ ತುಳಸಿ ಗಂಧ ಪರಿಮಳ ಪುಷ್ಪ ಧೂಪಗಳು ಪರ ಲಕುಮಿ ಕಾಮ ಅಜ ರುದ್ರ ನಿರುಋತಿ ಭರದಿಂದ ಪಾವಕನೇಕಾರತಿ ಆಹ । ಉರಗ ಪತಿ ವರ್ತಿ ತೈಲವೆ ವರುಣದೇವನೊ ಹರಿಣಾಂಕ ಅನ್ನನಾಗುವ ದೇವಗೆ-ಪರಮಾನನಾಗುವಳು ಭಾರತೀ । ಭಕ್ಷ್ಯವೇ ತರಣಿ ಆದನೆ. ಲಕ್ಷ್ಮೀ ಘೃತವಾದಳು ಗರುಡದೇವನೆ ಸೂಪಾಕಾರನಾದನೋ ಕೇಳಿ ಪುರುಷ ಧನ್ವಂತ್ರಿ ಶಾಕವೆನ್ನು ಮಿತ್ರ ಮಿರುಗುವ ಫಲ ಶಂಖ ಶೇಷ ದೇವರೇ ನಿಜವೋ। ಗಿರಿಜೆ ಆಮ್ಲ ರೂಪವಾದಳದಕೋ। ಪುರಹರನು ಅನಾಮ್ಲ ಸಕ್ಕರೆ ಬೆಲ್ಲ ಇಂದ್ರ ಪರಮೇಷ್ಠಿ ಉಪಸ್ಕರ ರೂಪವಾದ । ತರಣಿ ಸುತ(ಯಮ) ಕಟು ದ್ರವ್ಯವಾದ । ರಾಮಠೇಳ ಸ್ಮರಣೆ ತಾನಿದನು ।ತವಕದಿಂದ ಪುರುಹೂತ ತನುಜನು ಜಯಂತ ತೈಲ ಪಕ್ವ ಶರೀರವನೆ ಧರಿಸಿದ ಹರಿಯಾಜ್ಞದಿ। ಸರಸಿಜಭವ ಸುರರು ಮನು ದಕ್ಷಪ್ರಜೇಶ್ವರ ಸಂಡಿಗೆ ಮಾಷ ಭಕ್ಷ್ಯವಾದರು ಹರಿಗೆ ನಿರುಋತಿ ಲವಣ ಶಾಕದಿ ಪ್ರಾಣ ಇರುತಿಪ್ಪ। ತಾಂಬೂಲ ಸುರಗಂಗೆಯೂ। ಪರಿಮಳ ಸ್ವಾದೋದಕ ಬುಧ ದೇವನಾಗುವ। ಚಿತ್ತಾರದಿಂದ ನೈವೇದ್ಯ ಸಮರ್ಪಿಸುತ ಕರುಣಾಕರನಮ್ಮ ವಿಜಯವಿಠಲರೇಯ ಶರಣ ಜನರಿಂದ ಈ ಪರಿ ಕೈಕೊಂಬ॥ಅಟ್ಟ॥

ಇಂತ ನೈವೇದ್ಯ ತಾತ್ವಿಕ ಜನರಲ್ಲಿ ನಿರಂತರ ತದಾಕಾರ ತನ್ನಾಮಕರಾಗಿ ಅಂತರಂಗದಲ್ಲಿ ಜನ್ಯರಾಗುವರೈಯ್ಯ । ಎಂತ ಪೇಳಲಿ ಇವರೆ ಅಷ್ಟಾಂಗ ಯೋಗ ಸಂಕರಿಸಿದ ಫಲಪ್ರಾಪ್ತಿಯೈದಿಸುತ। ಕಂತು ಪಿತನ ಸೇವೆ ಮಾಳ್ಪರು ಸರ್ವದಾ ನಿಂತಿಹರು ಹಸ್ತ ಜೋಡಿಸಿಕೊಂಡು । ಭ್ರಾಂತಿಗೊಳಗಾಗದೆ ಸಂತಸದಲ್ಲಿ ಮಾನಸ ಚಿಂತೆಯ ಮಾಡೋದಂತೀ ಮೊದಲಾದ ಜಡಾನೇಕ । ಅಂತರಂಗದಲ್ಲಿ ತತ್ವ ಜನರೂ ಭಗವಂತನೂ ಇಪ್ಪುದು ವೇದ ಪ್ರಮಾಣವು । ತಂತ್ರವುಳ್ಳವನಾಗೋ ನಿನ್ನೊಳರ್ಚನೆ ಏಕಾಂತದಿ ಧ್ಯಾನಿಸು ಒಂದೆಸೆಯಲ್ಲಿ ಇದರಂತೆ ಸಮಸ್ತವೂ ತಿಳಿದು ಮಾಡಲು। ಅನಂತ ಜೀವರ ಬಿಂಬಾನಂತ ಮುಕ್ತನಂತಾನಂತ। ಅಂತಗಾಣದೆ ರೂಪಗಳು ನಿರಂತರನಿಂತು ಕುಳಿತು ಮಲಗಿ ಪೋಗುತಲಿಪ್ಪೋವು। ಇಂತು ಪೇಳಿದ ಮಾತು ಅನುಭವಕ್ಕೆ ಆದ್ಯಂತ ತಂದುಕೊಂಡು ಸುಖಿಸು ಅರ್ಪಿತವೆಂದು ಮುಂದಿನ ಬಲು ಜನ್ಮಕ್ಕೆ ಸಾಧನವೆನ್ನು। ನಿಂತಲ್ಲಿ ಕುಳಿತಲ್ಲಿ ಆವಾವ ಪ್ರಯೋಜನ ಸಂತಸ ಮಾಡುವ ಸಮಯಾನುಸಾರದಿ। ಸಂತೆಯೊಳಗೆ ಪೋಗಿ ಮಾನವ ತಿರುಗಾಡದಂತೆ ಕಾಣೆಲೋ ಜೀವಿ ಈ ಬಗೆ ವಿಚಾರ। ಚಿಂತಿಸು ಮೆಲ್ಲ ಮೆಲ್ಲನೆ ಕ್ರಮಾನುಸಾರದಿ ಎಂಥನಾದರೂ ಇದನೆ ಕೈಕೊಂಡರೆ, ಸಂತತಿ ಸಮೇತ ಮೋಕ್ಷಕ್ಕೆ ಸೇರುವ । ಚಿಂತಾಮಣಿಯು ನಮ್ಮ ವಿಜಯವಿಠಲರೇಯ ಸಂತಾಪ ಹರಿಸುವ ತನ್ನವನ್ನ ಮಾಡಿ ॥ಆದಿ॥ ಸಕಲ ತಾತ್ವಿಕ ಜನರೂ ಮನಸ್ಸು ಸಹಿತ ದೇಹ ಅಕಳಂಕರಾಗಿ ಪುಟ್ಟಿದರಂದೂ । ವೈಕಾರಿಕದಿಂದಲೂ ಸರ್ವ ತಾತ್ವಿಕರುಂಟು (ಅಂದರೆ ದೇವತೆಗಳು ಸಕಲ ಮಾನಸ ಪದಾರ್ಥಾದ್ಯಾಕಾರರಾಗಿ ಕಲ್ಯಾವೇಷ ಹೀನರಾಗಿ ಮನೋ ಮಾತ್ರ ದೇಹ ಧರಿಸಿ ಸೇವಿಸುತ್ತಾರೆ. ಎಂತ ಅರ್ಥವು. ಏವಂ ನಿವೇದ್ಯಾಭಿಮಾನಿ ತಾತ್ವಿಕ ದೇವತಾಃ ಕ್ರಮಾತ್। ತನ್ನಾಮಕಾಸ್ತದಾಕಾರ ಅಂತರಂಗ ಪ್ರಪೂಜಿತಾಃ॥ ಏವಂ ಕರ್ಮ ಕೃತೌಮಷ್ಟಂಯೋಗ ಪ್ರಾಪ್ತಿಂ ದದನ್ ಹರಿಃ॥ ಹರಿ ಸೇವಾರತಾಯೇತು ತಸ್ಯಾಗ್ಯೇಹಸ್ತ ಬಂಧನಂ । ಕೃತ್ಯೈವ ತಿಷ್ಟಂತಿ ಸದಾ ಸಂಸಾರಂನವಿಶಂತಿ ಹಿ ॥ ಇತ್ಯಾದಿ ॥ "ಸರ್ವೇಷಾಮಪಿ ದೇಹಾನಾಂ ಮಧ್ಯೇ ತಿಷ್ಟಂತಿ ತಾತ್ವಿಕಾಃ। ಅಕಳಂಕಾಶ್ಚ ಸರ್ವೇಪಿ ವೈಕಾರಿಕ ಶರೀರಿಣಾಃ॥" ಮುಂದಿನ ಮಾತು "ಆವಂಗ ಧ್ಯಾನ ಮಾಡೆ ಶಕ್ಯವಾಗುವರೈಯ್ಯ ಆವಾವ ವೇದಾರ್ಥ ನೀಹೋದಂತೆ ಸತ್ಯ ಯೋಗ ಮಾಯಾದಿಂದ ಭಕುತಿವಂತರಿಗೆಲ್ಲ ಇದೆ ಒಂದು

ಉಪಾಯ ಮಾತ್ರ ಬೇಕು. ।" ಒಂದು ಪೂಜಾ ಸಾಧನ ಭೇದ ಉಕುತಿಯಿಂದಲೇ ಇಂಥಾ ಅನುಸಂಧಾನ ರೂಪದಲ್ಲಿ ಯುಕುತಿಯು ನೆಲೆಸಿಪ್ಪೋದು ಅಪರೋಕ್ಷ ಬೇಕಾದರೆ "ಅಪರೋಕ್ಷಂ ಭಗವಂತೋ ಯದಿಚ್ಛೇತ್ಪರಮೇಶಿತುಃ । ಭಕ್ತಿ ಜ್ಞಾನ ವಿರಾಗಾದೀನ್ ಕೃತ್ರ್ಯೈವಂ ಮುಕ್ತಿಮಾಪ್ನುಯಾತ್। ಏತತ್ಸರ್ವಂ ಅವಿಜ್ಞಾಯ ನಿದಾನಂ ಜನ್ಮನಾಂಜನಾಃ । ಕರ್ಮ ಕುರ್ವಂತ್ಯವಿದುಷಸ್ತೇಷಾಮೇ ತನ್ನ ಲಭ್ಯತೇ ॥ ತಸ್ಮಾತ್ ವಿಷ್ಣ್ವೈಕ ಮನಸಾಂ ಜ್ಞಾನಿನಾಂ ಮುಕ್ತಿದೋಭವೇತ್ ॥ ಮಾಯಾ ವಿಕಲ ಬುದ್ಧಿಂಚ ಹಿಂಸಯಿತ್ವಾ ಸ್ವರೂಪತಾಂ। ದದಾತಿ ತಸ್ಯ ಸಂತುಷ್ಟಃ ಸದ್ಗುಣಾನಂದ ಸನ್ನಿಧೀಃ। ಎಂದು ಶೌನಕ ಸ್ಮೃತಿಃ ॥" ಮುಂದಿನ ಮಾತು- "ಭಕುತಿ ಮೊದಲಾದ ಆವಾವ ಬಗೆ ಕ್ರಿಯವೆಲ್ಲ ಕಕುಲಾತಿಯಿಂದ ಮರೆದು ಜನನವಾಗುವುದಲ್ಲ ಪುಕ್ಕಲ ಮಾನವರಿಗೆ ಇದು ದೊರಕುವುದೇನೋ ಸುಖ ಪಾರವರ್ಯ ನಮ್ಮ ವಿಜಯ ವಿಠಲರೇಯ ವಿಕಳ ಮತಿಯನೆ ಬಿಡಿಸಿ ತನ್ನ ಲೋಕವ ಕೊಡುವಾ ॥ಜತೆ॥ ಜಡ ಜೀವಾನಂತಾಧಿಷ್ಠಾನದಲ್ಲಿ ನಿತ್ಯ ಬಿಡದಿರೋ ವಿಜಯವಿಠಲನರ್ಚನೆ ಬಹು ॥ ಸುಳಾದಿ॥ ಲಕುಮಿ ಪೂಜಿಸುವಳು ನಿನ್ನಂಘ್ರಿ ಪ್ರೇರಕನಾಗಿ ವಳಗೆನಿಂದು। ನಿನಗೆ ನೀನೇ ಅರ್ಚಕನಾಗಿ ಅನುಗಾಲ ಪೂಜಿಸುವ ದೈವವೆ ಭಕುತರಿಂದಲಿ ನಿನಗೆ ಆವುದೋ ಪರಿಪೂರ್ಣ । ಮುಕುತಾ ಮುಕುತರೊಳು ಎಣಿಸಿ ಗುಣಿಸಿದರೂ ಭಕ್ತರೊಳಗೆ ನಾನೊಬ್ಬ ಅಲ್ಪರೊಳಗೆ ಅಲ್ಪನಯ್ಯಾ। ನಿನ್ನ ಮೆಚ್ಚಿಸ ಬಲ್ಲೆನೇ। ಅಖಿಲ ಜೀವರೊಳು ವಾಸವಾಗಿದ್ದು ಸಖನಾಗಿ ಪ್ರತಿದಿನ ಪಾಲಿಪ ಪರಮಾತ್ಮ ಲಕುಮಿ ಮಿಕ್ಕಾದ ತಾರತಮ್ಯ ಭಾವದಿಂದ ಭಕುತರರ್ಚನೆ ಮಾಡೆ ಲೇಶ ಬೇಕಾದುದಿಲ್ಲ। ಸಕಲಾಭರಣವಿಟ್ಟು ಮರಳಿ ಮರಳ್ಯಾತನ ನಖರೇಖ ಶಿಖ ಪರಿಯಂತ ನಸು ನಗೆಯಲ್ಲಿ ನಿತ್ಯ । ಮುಕುರದೊಳಗೆ ಪ್ರತಿಬಿಂಬ ನೋಡಿಕೊಳ್ಳುತ್ತಾ ಸುಖವಪಟ್ಟಂತೆ ನಮಗಲ್ಲದೆ ನಿಮಗೇನೋ ಲಕುಮಿ ವಲ್ಲಭ ನಮ್ಮ ವಿಜ್ಯವಿಠಲರೇಯ ಭಕುತರಿಗೆ ನಿನ್ನಿಚ್ಛೆಯಾಗದಲೆ ಗತಿಯಿಲ್ಲ ॥ ಜತೆ॥ ನಿನಗೆ ನೀನೇ ಪೂಜೆ ಮಾಡಿಕೊಂಬೆಯಾದೇವ। ಯನಗಾವ ಪಥೆಯಿಲ್ಲ ವಿಜಯವಿಠಲ ಒಲಿಯೋ" ಎಂತ ಪೂಜಾ ಸುಳಾದಿ. ಇಂಥ ಧ್ಯಾನಾನುಕೂಲವಾಗಿ ಡಿಂಬದೊಳಗೆ ಹೃದಯಂಬರದೊಳು ಪೊರೆವಾಲಂಬಿಸಿದ ನೂರು ಕಂಬದಿಂದ ಬಲು ಸಂಭ್ರಮ ಮಂಟಪ ಕೊಂಬೆ ಕೊಂಬೆಗೆ ಶತ ಕುಂಭ ಪವಳ ಮಾಟಿ ತುಂಬಿದಾರತನವೂ। ದಂಭೋಳಿ ಜೋಡಿಸಿದ ಮುಂಬಿಗಿದ ಸುತ್ತ

ಕೆಂಬಣ್ಣದಾಕಟ್ಟು ಇಂಬಾಗಿ ಎಸೆವುತಿರೆ । ಶಂಬರಾರಿಯ ಜನಕ ವಿಜಯವಿಠಲ ಹರಿಯ ಬಿಂಬ ತೋರುವ ಸ್ಥಾನ ಚನ್ನಾಗಿ ಗ್ರಹಿಸೋದು । ಎಂತ ಗುಪ್ತಾರ್ಚನೆ ಸುಳಾದಿ. ಮುಂದಿನ ತಾಳವನ್ನು ಹಿಂದಿನ ಪ್ರಕರಣದಲ್ಲಿ ಬರೆದಿದ್ದೇನೆ. ಇಂತಹ ಪರಮ ರಹಸ್ಯವಾದ ಅಚ್ಛಿದ್ರೋಪಾಸನೆ ಮಾಡಿ ಸ್ವಾಮಿಯನ್ನು ಏನು ಕೇಳ ಬೇಕು, ಎಂದರೆ ಸುಳಾದಿ:- ಫಲಗಳ ಬಯಸದೆ ಉಪಸಂಹಾರದಿಂದ ಎಂತ ಧಾರಣಾಧ್ಯಾನ ಸುಳಾದಿ. ಪ್ರಮಾಣ:- ಅಸದ್ಯು(ಪ್ಚು) ಜ್ಞಾನಿನೋಧ್ಯಾನಾತ್ ಜ್ಞಾನಮೇವ ವಿಶಿಷ್ಯತೇ। ಜ್ಞಾತ್ವಾ ಧ್ಯಾನಂ ತತಸ್ತಸ್ಮಾತ್ ತತ್ಫಲೇಚ್ಛು ವಿವರ್ಜಿತಂ। ತಸ್ಮಾತ್ ಜ್ಞಾನಂ ತೇನ ಮುಕ್ತಿಸ್ತ್ಯಾಗ ಧ್ಯಾನ ದ್ವಯಂ ಸ್ಫುಟಂ। ಎಂತ ಗೀತಾ ತಾತ್ಪರ್ಯ ವಚನವು. ಧ್ಯಾನ ಫಲ ತ್ಯಾಗವನ್ನೂ ಧ್ಯಾನವನ್ನೂ ಈ ಎರಡನ್ನೂ ಹೊರತು ಮೋಕ್ಷವಿಲ್ಲವೆಂತ ಹೇಳಿದ್ದಾದುದರಿಂದ ಕರ್ಮ ಬಂಧ ಬಿಡಿಸಿ ಮುಕ್ತನ್ನ ಮಾಡು ಎಂತ ಪ್ರಾರ್ಥಿಸೋಣ. ಇಂಥ ಮೋಕ್ಷ ಕಾಮವು ಸಮ್ಮತವಲ್ಲ ಎಂತ ಹಿಂದಿನ ಪ್ರಕರಣದಲ್ಲಿ ಹೇಳಿದ್ದೇನೆ. ಸುಳಾದಿ:-ಶುದ್ಧ ಸೂಕ್ಷ್ಮ ನಿರ್ವಿಕಾರ ನಿರಂಜನ ಅದ್ವೈತಮಹಿಮ ಶ್ರೀನಿವಾಸ ಅಪ್ರಮೇಯ। ಸಿದ್ಧಾಂತ ಪ್ರಮೇಯ ಸಂಪೂರ್ಣ ಸಚ್ಚಿದಾನಂದಾತ್ಮಕ ಉದ್ಧರಿಸು - ಅನಿರುದ್ಧ ಕ್ಷೀರ ಸಮುದ್ರ ಶಯನ ಅಚ್ಛೇದ್ಯಾಭೇದ್ಯ ಜೀವಭಿನ್ನ ಭವರೋಗ ವೈದ್ಯ ಚೈದ್ಯವಿನಾಶ ವಿಶ್ವಾಸ ಫಲದಾಯಕ ಪದ್ಮಾಪದ್ಮಜ, ರುದ್ರ ಸಿದ್ಧ ಸಾಧ್ಯರ ಪ್ರಬುದ್ಧರ ಮಾಡಿ ಭವ್ಯ ಬಂಧ ವದ್ದು ಬಿಡಿಸುವೆ, ಶುದ್ಧ ಭವಾಬ್ಧಿಯೋಳ್ಬೊಂದಿಪ್ಪ ಯನ್ನ ಅನಾದ್ಯವಾಗಿದ್ದ ಅವಿದ್ಯಾಕರ್ಮಗಳ ವದ್ದು ಕಡೆಗೆ ಮಾಡಿ ಉದ್ಧರಿಸು ಅಂದು ಅಂಜಲಿ ಪೂರ್ವ ಬದ್ಧವಾಗಿ ನಿಂದು ಹೃದ್ಗತನಾಗಿದ್ದು ಉದ್ದಂಡದೈವನಂಘ್ರಿ ಪದ್ಮದ್ವಯಕ್ಕೆ ಬಿದ್ದು ಭಕುತಿಯಿಂದ। ಭದ್ರ ಗತಿಯ ಪಥನಿರ್ಧರವಾಗಿ ಬೇಡಿ ಮುದ್ರಧರರೊಡನೆ ಪದ್ಧತಿ ಉಣಿಸೋ ಬುದ್ಧಿಯ ಕೊಡು ಎಂದು ಶುದ್ದನ ಆನಂದ । ಅಬ್ಧಿಯೊಳಗೆ ಇಟ್ಟು ಕೃದ್ಧ ಒದ್ದೋಡಿಸಿ ಮಧ್ವರಮಣ ನವೇ ವಿಜಯವಿಠಲರೇಯ ತ್ವದ್ದಾಸನೆಂದರೆ ಇದ್ದಲ್ಲೇ ಶುಭಯೋಗ। ಎಂತ ಮನಮೂರ್ತಿಸುಳಾದಿ। ಹೀಗೆ ಉದ್ಧರಿಸು ಎಂತ ಮುಕ್ತಿಯನ್ನು ಕೇಳಿದರೂ-ಇಂಥ ಹರಿಧ್ಯಾನಕ್ಕೆ ರಮಾ ಬ್ರಹ್ಮಾದಿ ನವಕೋಟಿ ತಾತ್ವಿಕರನ್ನು ಧ್ಯಾನಿಸಬೇಕೆಂದು ಪ್ರಮಾಣ. "ಅಂಗಾವಬದ್ಧ ದೇವಾನಾಮಪ್ಯರಿಗೇಷೂಪ ಸಂಹೃತಿಃ । ಅಂಗಾಶ್ರಿತಾಮರ ಗಣಾ ಧ್ಯೇಯಾ ಅಂಗೇಷು ನಿತ್ಯಶಃ । ಏವಮಂಗದೇವೇಷು ಗುಣ ಧ್ಯಾನಂ ಭವೇತ್ಕ್ವಚಿತ್। ಮಹತಾಮಪಿ ಶೇಷಾಂ ಚಿದಂಗೇಷ್ವಪ್ಯಂಗ ದೇವತಾಃ। ಉಪಾಸ್ಯಾ

ಉತ್ತಮಾಸ್ತೇಷು ತದ್ಗುಣಾಶ್ಚೋತ್ತರೋತ್ತರಂ ।" ಎಂತ ಸತ್ತತ್ವರತ್ನಮಾಲಾ ಮತ್ತು ಭಾಷ್ಯ ಸಿದ್ಧಾರ್ಥವು.

"ಕಾಣಜಿ ನಿನ್ನಂಗ ಸುರರಿಗೆ" ಎಂತ ಪುರಂದರದಸರ ಸುಳಾದಿ. ಇಂಥ ಧ್ಯಾನವು ನಿರ್ವಿಘ್ನದಿಂದ ಅಭಿವೃದ್ಧವಾಗುವುದಕ್ಕೆ ಯೋಗ ಸುಳಾದಿ ॥ಜತೆ॥

"ಬಹಿರಾ ಶೂನ್ಯನಾ ಗೋಚರಿಸೂ । ಅಂತರದಲ್ಲಿ ಮಹದೇವ ವಿಜಯವಿಠಲ ಪಾದಕಣೋ"

ಎಂದರೆ ಗಾಢನಿದ್ರೆಗೆ ಸಮವಾಗಿ ಅಸಂಪ್ರಜ್ಞಾತದಲ್ಲಿ ಬಹಿಃ ಪ್ರಜ್ಞನಾಗು ಎಂತ ಅರ್ಥ. ಈ ಸಾಧನವಿಲ್ಲದವರಿಗೆ ಸುಳಾದಿ ಮಧ್ಯ ಮಧ್ಯದಲಿ ಮನಸ್ಸು ಹೊರಗೆ ಹೋಗಲಾಗಿ ಅಧೈರ್ಯ ಬೀಳದಲೆ ಇದ್ದಲೆ ನಯದಿಂದ ತಿದ್ದು ಮನ ಮೆಲ್ಲ ಮೆಲ್ಲನೆ ಪೊದ್ದಿಕೊಂಡು ದುರಾಶೆ ಗೆದ್ದು ಸಿದ್ಧವಾಗು ಧ್ಯಾನದಲ್ಲಿ ಎಂತ ಅರ್ಥ. ಅಭ್ಯಾಸವೇ ಮನೋನಿಗ್ರಹ ಸಾಧಕ ಎಂತ ತೋರಿಸಿ ಇದ್ದಾರೆ.

ಸುಳಾದಿ:- "ಕಾಲಕಾಲಕ್ಕೆ ಪ್ರಾಣ ನಿರೋಧವನೆ ಮಾಡಿ ವಾಯು ಧಾರಣೆಯಿಂದ ಮನಸುನಿಲ್ಲಿಸೋ" ಎಂತಲೂ ಕೊನೆ ಭಾಗದಲ್ಲಿ

ಹಲವು ಸ್ಥಾನಾಂತರದಲ್ಲಿ ಈ ಕಳೇಬರ ಪಾಲಿಪ ದೇವತೆಗಳ ಪಾದ ಜಲಜಕ್ಕೆ ಬಿನ್ನೈಸಿ ।

"ಜಿತಗದ್ದಿಗೆ ನಿರಾನುಕೂಲನಾಗಿ ರೂಪ ರೂಪಾಂತರ ಕೂಡಿಸಿ ವಲಿಸಿಕೊ ವಲಸಿಕೊ ವಲಸಿಕೋ ಇವರನ್ನೂ"

ಎಂದರೆ ಹೇಗೆ ಬಿಂಬರೂಪದಲ್ಲಿ ಸರ್ವ ವ್ಯಾಪ್ತರೂಪಗಳಿಗೆ ಏಕ ಭಾವಕ್ರಮವೋ ಅದೇ ಪ್ರಕಾರ ರಮಾ ಬ್ರಹ್ಮಾದಿಗಳ ಅಂಥಂಥ ತತ್ವಗಳಲ್ಲಿ ಸರ್ವ ವ್ಯಾಪ್ತಾನಂತ ರೂಪಗಳಿಗೂ ಏಕಾಕಾರ ಮಾಡಿ ನಿಲ್ಲಿಸಿ ವಲಿಸಿಕೋ ಎಂತ ಭಾವ. ಇದರ ಸೂಚನೆಯನ್ನೇ ಮೊದಲು ತಾಳದಲ್ಲಿ ಸೂಚಿಸಿದ್ದಾರೆ. ಮುಂದಿನ ಮಾತು.

ಥಳ ಥಳಾಯಮಾನ ಭೂಷಣ ವಸನ ಸಂಯುಳನಗೆ ಸರ್ವ ಲಕ್ಷಣೋಪೇತ ಸತಿ ಬಂಧು ಬಳಗ ಪರಿವಾರ ಪರಿಪೂರ್ಣಕಾಮರು

ಗೆಳೆಯರಾಗಿಪ್ಪೋರು ನಮಗೆ ನಿರಂತರ ಆಳಲಿಕೆ ಬಳಲಿಕೆ ನಾನಾ ಶೋಕ ದುಃಖ ಕಳೆದು ಕರುಣದಿಂದ ತಮಗಿಂದಧಿಕರ ವಳಗೆ ತೋರುವುದ್ಯೆಯ್ಯ। ಧರ್ಮ ಮಾರ್ಗದಿಂದ ಸುಳಿಸುಳಿದಾಡೋರು ಮನದಲ್ಲಿ ಮಾಣದೆ, ಬಲಗೊಳ್ಳಲಿಬೇಕು ಪ್ರಾಣಪರಿಯಂತ ಫಲಗಳ ಬಯಸದೆ ಉಪಸಂಹಾರದಿಂದ ಹೊಲವು ತಪ್ಪಾದೆ ಸಗಣನು ಸರ್ಗದಂತೆ ಹೊಲಗೊಂಡು ಮೆಚ್ಚಿ ನಡೆಯದಿರು। ಕೆಡದಿರು ನಳನಳಿಸುವ ಬಿಂಬಬಿಂಬನ ಗುಣಗಳ ಬಲರೂಪ ಕ್ರಿಯಾದಿ ಸರ್ವವೂ ಪರಿಪೂರ್ಣ ಸ್ಥಳ ದೇಶ ಗುಣ ಕಾಲ ವ್ಯಾಪ್ತ ನಿಜೈಶ್ವರ್ಯ ಸುಲಭ ಸುಲಭ ಅಣು ಮಹತ್ತುರೂಪ ಹಂಬಲಿಸೆ । ಈ ಪರಿಯಿಂದ ಅತ್ಯಂತ ಭೇದವೋ ಎಂದು ಹೇಳಿ ಮುಂದೆ

ಎಲ್ಲೆಲ್ಲಿ ತತ್ತತ್ತನೂ ಧರಿಸಿದ ದೇವಾಂಶಗಳಲ್ಲಿಗಲ್ಲಿಗೆ ಚಿಂತಿಸಿ ಅವರವರ ನಿರ್ದೇಶ ಮೆಲ್ಲ ಮೆಲ್ಲನೆ ತಿಳಿದು ಅಂಗಾಂಗಿಗಳರೂಪ ಎಲ್ಲ ಉಪಸಂಹಾರದಿಂದ ವಾರಿಜಜಾಂಡವೆಲ್ಲ ಏಕಾಕಾರ ಮಾಡಿ ಮಾಡುತಾ ಬಂದು ಸಲ್ಲಲಿತ ದೇಹದಲ್ಲಿದ್ದವರ ಜ್ಞಾನದಲ್ಲಿ ಕೂಡಿಸು ಮಹಾಯೋಗಾಭ್ಯಾಸದಿ ।ಬಲ್ಲವನಾಗು ಹೃತ್ಕಮಲ ಪರಿಯಂತ ಅಲ್ಲಿದ್ದ ಚೇತನಾವರಣ ತ್ರಿಬಗೆಯಲ್ಲಿ ಸಲಿಸಿದವರ ನೋಡು ಕ್ರಮಾನುಸಾರದಿಂದ। ನಿಲ್ಲಿಸು ಹದಿನಾರು ಕಳೆಗಳ ವಿದ್ಯದಲ್ಲಿ ಗೆಲುವೋಬ್ಬೊಬ್ಬರ ನಾಮಾದಿ ಪಿಡಿದು ಮಾವಲ್ಲಭ ಪರಿಯಂತ ಅಧೀನಾಧೀನ ನೆನೆದು ಹೊಲೆಚಿತ್ತ ಮಾಡದೆ ಹರುಷದಿಂದಲಿ ನಿತ್ಯದಲ್ಲಿ ಈ ಪರಿ ಧ್ಯಾನಿಸು॥

ಅಂದರೆ ಒಂದು ದಿನವೂ ಬಿಡದೆ ದೀಕ್ಷೆ ಇರಲಿ ಎಂತ ಅರ್ಥ– ಮುಂದಿನ ಮಾತು. "ಅಘಬದ್ಧ ಮಾರ್ಗವ ವಲ್ಲೆನೆನ್ನದಿರು ಇದರೊಳಗವರ ಸಲ್ಲುವಾಭಿಮಾನಿಗಳು ತದ್ಗತರಾಗಿಹರು । ಎಲ್ಲರ ಕರುಣವ ಪಡೆದು ಭಕುತಿಯಿಂದ ಇಲ್ಲಿ ನಲಿವ ವಾಯು ಪ್ರತಿಮೆಯು ಮಧ್ಯದಲ್ಲಿ ಬಲ್ಲ ದೇವತೆಗಳ ಸ್ಥಾನಾಸ್ಥಾನದಲ್ಲಿಟ್ಟು ತಲ್ಲಣಗೊಳದಲೆ ಅಂತರ ಪೂಜೆಯ। ವಳ್ಳಿತಾಗಿರಚಿಸು ಪ್ರಾರ್ಥನಾ ಪೂರ್ವಕ । ಬಳ್ಳಿಯ ಕುಡಿ ಒಂದೊಂದು ದಿವಸಕೆ ಬಿಡದೆ ಪಲ್ಲೈಸಿದಂತೆ ಮನಸು ಸಾಗಿಸ ಬೇಕು. ಸಲ್ಲದು ಸಲ್ಲದು ಸುಮ್ಮನಿದ್ದರೆ ಗತಿಯಿಲ್ಲವೋ ಇಲ್ಲವೋ। ಹರಿಗುರುಗಳ ಕೃಪೆ ಎಲ್ಲಿನಿಂತಾದರೂ ಇದನೆ ಕೈಗೊಂಡರೆ ಪೋಲಾಗದು ಕಾಣೋ ಮಾಡಿದ ಸತ್ಕರ್ಮ ಕ್ಷುಲ್ಲಕ ಬುದ್ಧಿ

ಬಿಟ್ಟು ಚತುರತೆಯಿಂದಲಿ ಬಲ್ಲಿದ ಜನರ ಒಲಿಸಿಕೊಂಡು ನಲಿದಾಡೋ ।"

ಅಂದರೆ ಅಸಂಪ್ರಾಜ್ಞಾತ ಸಮಾಧಿಯನ್ನು ಇವನಿಗೆ ಚೆನ್ನಾ ಶಿಕ್ಷೆಸಿ ವದಗಿಸಿಕೊಂಡ ತಕ್ಕವರೇ ಈ ಧ್ಯಾನೋಪಾಸನೆಯಲ್ಲಿ ಬಲಿಷ್ಟರು ಎಂತ ಅರ್ಥ. ಮುಂದಿನ ಮಾತು, "ಎಲ್ಲಿ ನಿನಗೆ ಇಷ್ಟವಾದ ಸ್ಥಾನದಲ್ಲಿ" ಎಲ್ಲಿ ಧ್ಯಾನ ಮಾಡಿ ಸಾಧಿಸು ಹರಿಪಾದ। ಮಲ್ಲಮರ್ದನ ನಮ್ಮ ವಿಜಯವಿಠಲರೇಯ ಕ್ಷುಲ್ಲಕರ ಸಂಗತಿಯ ಬಿಡಿಸಿ ಶುದ್ಧನ ಮಾಳ್ಪ ಎಂತ ಇದು ಧಾರಣ ಧ್ಯಾನ ಸುಳಾದಿ. ಹೀಗೆ ಸಾಧಿಸತಕ್ಕವರಿಗೆ.

## ಬಿಂಬಾಪರೋಕ್ಷ ಕ್ರಮವು

*"ನಿರಂಶಾಃ ಸತ್ಸಾಧನಾಯೋಚಿತ ಜನ್ಮ ಸಹಸ್ರಃ ।*
*ಜ್ಞಾನಂತು ದಶಭಿಃ ಪ್ರಾಪ್ಯ ಸದ್ಭಕ್ತಿಂ ತ್ರಿಭಿರಾಪ್ಯಚ ॥*
*ದೃಷ್ಟ್ವಾ ಹೃದಿಸ್ಥಂ ಮುಚ್ಯಂತೆ ಹೃತಸ್ತ್ವೇ ಕರ್ಮ ಯೋಗಿನಃ।*
*ಅತಾತ್ವಿಕಾ ದೇವದಾಸಾಃ ಸತ್ಕರ್ಮ ಶತ ಜನ್ಮಭಿಃ ॥*
*ಕೃತ್ವಾ ದಶ ಸಹಸ್ರೋರು ಜನ್ಮಭಿಃಜ್ಞಾನಮಾಪ್ಯಚ ।*
*ಭಕ್ತಿಂ ತ್ರಿಶತಕೈರಾಪ್ಯ ಮುಚ್ಯಂತೆ ಜ್ಞಾನಯೋಗಿನಃ।*
*ಪ್ರಾರಬ್ಧಸ್ಯ ಭವೇತ್ಕಾಲೋ ಯಾವನ್ರೂಪಾಂಶ ಸಾಧನೆ ।*
*ಏವಂ ತತ್ವೇಶ ದೇವಾನಾಂ ನಿಯಮ"॥* ಇತಿ ಪ್ರಕಾಶ ಸಂಹಿತಾ

*"ರಾಮ ಕೃಷ್ಣಾದಿ ರೂಪಾಣಿ ಬಹಿಃ ಪಶ್ಯಂತ್ಯಪಿ ಕ್ವಚಿತ್ ।*
*ಮನುಷ್ಯತ್ವೇನ ಪಶ್ಯಂತಿ ಅಪರೋಕ್ಷೋ ನ ಸಂಸ್ಮೃತಂ।*
*ಸ್ಥೂಲ ಹೃದ್ಯಪರೋಕ್ಷಸ್ತು ಬಾಹ್ಯಸ್ಯಾದಪರೋಕ್ಷತಃ ।*
*ಸ್ವಸ್ವರೂಪಶ್ಚ ಜೀವಾಭ ಸ್ವತಂತ್ರಸ್ಯಚ ದರ್ಶನಂ ।*
*ಸ್ವರೂಪಾಖ್ಯೋ ಅಪರೋಕ್ಷಸ್ತು ಸರ್ವೇಷಾಮೇವಮೇವಹಿ।*
*ಪಾದೋನ ಘಟಿಕಾ ಮಾತ್ರಂ ಸ್ವರೂಪೇ ಪ್ರಾಕೃತೀ ಹೃದಿ ।*
*ಪಶ್ಯಂತಿ ಕ್ರಿಮಿಕೀಟಾದ್ಯಾಃ ಪ್ರದೀಪ ಪ್ರಭಯಾ ಹರಿಂ ।*
*ಸ್ವರೂಪ ಚಕ್ಷುಷಾ ದೃಷ್ಟಿರಪರೋಕ್ಷ ಇತೀರ್ಯತೇ ।*

*ದೇವದೇಶಾಕ್ಷತೋ ಕಾಲೋ ಜೀವೇಶೌ ಪ್ರಾಕೃತೀಂದ್ರಿಯೈಃ ।*
*ನ ವೇದ್ಯಾಹಿ ಸ್ವರೂಪೇಣ ವೇದ್ಯಾ ಏತೇ ಪ್ರಕೀರ್ತಿತಾಃ॥*
*ಭಕ್ತ್ಯಾ ಹರಿ ಪ್ರಸಾದೇನ ನಷ್ಟೇತ್ವಜ್ಞಾನ ಪಂಚಕೇ।*
*ರಕ್ತವದ್ಭಾಸತೇ ಲಿಂಗ ಸೂಕ್ಷ್ಮ ದೇಹಸ್ಥಿತಃಸ್ಯತು ।*
*ಜೀವಸ್ಯ ಚಕ್ಷುಷಾವ್ಯಕ್ತೇ ಭವೇತಸ್ಯೇನ ಪಶ್ಯತಿ ।*
*ತೇಜೋಮಯ ಸ್ವರೂಪಸ್ಥಂ ಸ್ಥೂಲ ಹೃದ್ಗಂ ಕ್ರಮೇಣತು ।*
*ಯಾವನ್ಮಾತ್ರಂ ಹರೀತಾರ್ಣಕ ಕೀಟಾದ್ಯಾ ಬದರೀಮಿತಂ ।*
*ಅಂಗುಷ್ಠಾಗ್ರಮಿತಂ ವೃಕ್ಷಾಃ ಪ್ರದೀಪದಶ ಸನ್ನಿಭಂ।*
*ಹರಿಂ ಪಶ್ಯಂತಿ ಘಟಿಕಾಮಿತಂ ಕಾಲಂ ರಮಾ ಪತಿಂ ॥*
*ಸಮಂ ದೀಪಂ ಚಿದಾನಂದಂ ಚಿದಾನಂದಾತ್ಮಕಂ ಮೃಗಾಃ ।*
*ಖಗಶ್ಚ ಪಶವೋಗಾವಃ ಹೃದ್ಗಂ ಜೀವಗತಂ ಹರಿಂ ।*
*ಪ್ರದೀಪ ಶತಭಾಯುಕ್ತಂ ಘಟಿಕಾರ್ಥಂತದರ್ಥಕಂ ।*
*ಸಚ್ಚಿದಾನಂದ ಆತ್ಮೇತಿ ಮನುಷ್ಯೇ ಧ್ಯೇಯ ಈಶ್ವರಃ।*
*ವಿದ್ಯುನ್ಮನ್ಮಾನುಷಾ ವಿದ್ಯುರ್ಪಶ ವಿದ್ಯುನ್ಮಿತಾನ್ಯಪಾಃ।*
*ಗಂಧರ್ವಾಸ್ತದ್ವಿಗುಣಾಭಂ ಸೂರ್ಯ ಮಂಡಲವತ್ಸುರಾಃ ।*
*ಗಂಧರ್ವಾಪಿ ಶತಃ ಸೂರ್ಯಾ ಶತ ಸನ್ನಿಭಮೀಶ್ವರಂ।*
*ಗೋಪ್ಯಃ ಕೃಷಾಂಗ ಸಂಗಾರ್ಹಾಃ ಪಂಚ ಸಾಹಸ್ರ ಸೂರ್ಯಭಂ ।*
*ಅಜಾನಜಾದಶ ಸಹಸ್ರಾರ್ಕಾಭಂ ತ್ವಗ್ನಜಾ ಅಪಿ । "*

ಇತ್ಯಾದಿ ಬ್ರಹ್ಮ ಪರ್ಯಂತವೂ ಪ್ರಕಾಶ ಸಂಹಿತಾ ವಿಸ್ತಾರವಾಗಿ ಆದೆ. ಅಪರೋಕ್ಷ ತಾರತಮ್ಯ ಸುಳಾದಿಯಲ್ಲಿ ಈ ಅರ್ಥವನ್ನೇ ವಿವರಿಸಿದ್ದಾರೆ. ಮುಖ್ಯ ತಾತ್ಪರ್ಯ ಸುಳಾದಿ.

ಭಗವದ್ದರ್ಶನ ಲಾಭ ಕ್ರಿಮಿ ಕೀಟಾದಿಗಳು ಪಾದೋನ ಘಟಿಕಾ ಯುಗಳ ದೃಷ್ಟಿಗಳಿಂದನೆ ನೋಳ್ಪರು ॥ ಪ್ರದೀಪದ ಬಗೆಯಾಗಿ ಬದರೀ ಪ್ರಮಾಣದಂತೆ॥ ಎಂತ ಮುಕ್ಕಾಲು ಘಳಿಗೆ ಪ್ರಾರಂಭಿಸಿ ಒಂದು ಘಳಿಗೆ ಒಂದೊವರೆ ಘಳಿಗೆ ಎರಡು ಘಳಿಗೆ ನಾಲ್ಕು ಘಳಿಗೆ ಗೋಪ್ಯಯಂಮಾಂತಮಂಜಸಾ ॥ ಇಂಥಾ ಕಾಲಮಿಗೆ ಮನುಜೋತ್ತಮರು ಚತುರ್ಗುಣೋಪಾಸಕರು ಅಗಣಿತ ಮಹಿಮನ್ನು

ಮಿಂಚಿನೋಪಾದಿಯಲಿ ಘಳಿಗೆ ಎರಡು ಪರ್ಯಂತ ಹೇಳಿ 'ಅಪರೋಕ್ಷ' ತಾರತಮ್ಯ ಸುಳಾದಿ "ಗೋಪ್ಯೋಯೋಮಾಂತಮಂಜಸಾ" ಇಂಥ ಕಾಲ ನಿಬಂಧನಕೆ ಬ್ರಹ್ಮ ಕಲ್ಪಾಂತ ಸಾಧನ ಸಾಧ್ಯವೇ ಹೊರತು ಬಿಂಬಾಪರೋಕ್ಷವಾದ ಸಂಗಾತಲೇ ಸ್ವಸ್ವಯೋಗ್ಯ ಘಳಿಗೆಗಳ ತನಕ ಅಪರೋಕ್ಷ ಮರೆಯಾಗದೆ ಕಾಣುತ್ತಾರೆ ಎಂತ ಅರ್ಥವಲ್ಲ ಎಂತ ಕೊನೆಯು ತಾಳದಲ್ಲಿ ಎಂತ ನಿಶ್ಚಯಿಸಿದ್ದಾರೆ. ಆ ದರ್ಶನದ ವಿಭವ ಪ್ರಮಾಣ :-

*"ತೃಣಾದ್ಯಸ್ತು ಹೃದಿಸ್ಥಂ ಹಿ ಪಶ್ಯಂತ್ಯುಚಿತ ಜನ್ಮಭಿಃ।*
*ದೀಪ ಕಾಂತಿ ವಿಶಿಷ್ಟೇಶಂ ನ ದೇವಾದ್ಯೈವ ಮರ್ತ್ಯಗಂ।*
*ಘಟಿಕಾರ್ಧಂ ಶರೀರೇವಾ ಮುಕ್ತಾಶಕ್ತಿಸ್ತು ತಾದೃಶೀ । "*

ಮುಕ್ತಿಯಲ್ಲಿ ಜ್ಞಾನವ್ಯಂಗ್ಯಾನಂದಕ್ಕೆ ಹ್ರಾಸ ಹೇಳ ಕೂಡದು. ಆದ ಪ್ರಯುಕ್ತ ಮುಕ್ತ ತೃಣ ಜೀವರು ಪೀಠಾವರಣ ದೇವತೆಗಳ ಕಾಣದೆ ಇರುವ ವಿಷಯದಲ್ಲಿ ಅವರ ಯೋಗ್ಯತಾ ಸಾಮರ್ಥ್ಯವೇ ಹೊರತು ಅಪರೋಕ್ಷ ತಿರೋಧಾನ ಹೇಳಕೂಡದು. ಮುಂದಿನ ಪ್ರಕರಣ

*"ಚಿನ್ಮಾತ್ರೋಪಾಸನಾ ಶಕ್ತಿಃ ದ್ವೈವಾಧಿಕ ಗುಣೋತ್ತರೆ।*
*ಮರ್ತ್ಯೋಚ್ಚ ಹೃದಿ ದೇವಾಂಶ್ಚ ಪಾದಸ್ಥ ಪೀಠದೇವತಾಃ ।*
*ತಥಾ ವರಣಗಾನ್ ದೇವಾನ್ ಪಶ್ಯಂತ್ಯಪಿಚ ಮಂಡಲಂ ।*
*ಸುಷುಮ್ನಾ ಸಪ್ತ ಕಮಲಾನ್ಯಪಿ ತದ್ಗಹರೀಶ್ವತಾ ।*
*ಸ್ಥಾನೇಶಂಚೈವ ಮೂಲೇಶಂ ರಾಜಾನೋ ಮರ್ತ್ಯಗಾಯಕಾಃ ।*
*ತಥಾ ಪಿಂಗಳ ನಾಡಿಸ್ಥಾನ್ ಕ್ರಮೋಚ್ಚಾನ್ ಸರ್ವದೇಹಗಾನ್ ॥*
*ತತ್ವೇಶಾಸ್ತದ್ಗತೇಃ ಹರೇಃ ರೂಪಾಣ್ಯಾಖಿಲಾನ್ಯಪಿ ।*
*ಧ್ಯಾತ್ವೋಪಾಸ್ಯ ವಿಮುಚ್ಯಂತೇ ದೇವಾ ಅಜಾನಜಾಹ್ವಯಾಃ । "*

ಇತಿ ಪ್ರಕಾಶ ಸಂಹಿತಾಃ

ಸುಳಾದಿ:- ಖಗ ಮೃಗ ತೃಣಾದಿಗಳು ಹೃದಯಕಮಲದಲ್ಲಿ ನಖಶಿಕ ಪರಿಯಂತ ಹರಿ ಮೂರ್ತಿ ನೋಡುವರು. "ಮನುಜೋತ್ತಮ ಮಂಟಪ ಪೀಠಾವರಣಸ್ಥರ" ಎಂತ ತೃಣ ಪ್ರಾರಂಭ ಮಾಡಿ ಎಂಬ ಸುಳಾದಿಯಲ್ಲಿ-

ಆಕ್ಷೇಪ:- ಏಕಾದಶ ಸ್ಕಂಧದಲ್ಲಿ

*"ಯೋಗ್ಯಸ್ಯ ತಪಸಶ್ಚೈವ ಜ್ಞಾನಸ್ಯ ಗತಯೋ ಅಮಲಾಃ।*
*ಮಹರ್ಜನಸ್ತಪಃ ಸತ್ಯಂ ಭಕ್ತಿ ಯೋಗ್ಯಸ್ಯ ಮದ್ಗತಿಃ।"*

ಎಂಬ ಶ್ಲೋಕಕ್ಕೆ ತಾತ್ಪರ್ಯ ವಚನ

*ನೈವ ವಿಷ್ಣ್ವ ವಿಭಕ್ತಸ್ಯ ಮಹರ್ಲೋಕಾದಿ ಕಾಗತಿಃ ।*
*ಭಕ್ತ್ಯುದ್ರೇಕಾತ್ಪ್ರವೋದೂರ್ಧ್ವಂ ಯಾವದ್ವಿಷ್ಣೋಃ ಪ್ರವೇಶನಂ।*
*ಏವಂ ಜ್ಞಾನಂ ವಿನಾನಾಪಿ ಮಹರ್ಲೋಕಾದಿಕಾಗತಿಃ ।*
*ಜ್ಞಾನೋದ್ರೇಕಾತ್ಪ್ರವೋದೂರ್ಧ್ವಂ ಯಾವದ್ವಿಷ್ಣೋಃ ಪ್ರವೇಶನಂ ।*
*ನಿತ್ಯಶೋ ಭಗವದ್ರೂಪಸ್ಯ ಪರೋಕ್ಷೇಣ ದರ್ಶನಂ ।*
*ಮುಹೂರ್ತಮಾತ್ರಂ ಜ್ಞಾನಂ ಸ್ಯಾನ್ಮಹಾಜ್ಞಾನಂ ತತೋಧಿಕಂ ।*
*ಜ್ಞಾನೇನ ಬ್ರಹ್ಮಲೋಕಾಸ್ಯಾನ್ಮಹಾಜ್ಞಾನಾನ್ಹರೇಃ ಗತಿಃ ॥*

ಅಂದರೆ ದೃಷ್ಟಿಗೆ ಬಿದ್ದ ರೂಪವೂ ಒಂದು ಮುಹೂರ್ತ ಮರೆಯಾಗದೇ ಇದ್ದರೆ. ಅವನಿಗೆ ಸತ್ಯ ಲೋಕ ಪ್ರಾಪ್ತಿಯು- ಅದಕ್ಕಿಂತ ಅಧಿಕ ಕಾಲದಲಿಯೂ ಮರೆಯಾಗದೇ ಇದ್ದರೆ ಅವನು ವೈಕುಂಠ ಲೋಕದಲ್ಲಿ ಅಮುಕ್ತ ಸ್ಥಾನವನ್ನು ಸೇರುತ್ತಾನೆ- ತಪಸ್ಸು ಎಂದರೆ ೬ ಮಾತ್ರಕಾಲದವರೆವಿಗೂ ರೂಪ ಮರೆಯಾಗದೇ ಇದ್ದ ಅಪರೋಕ್ಷಕ್ಕೆ ಪೆಸರು. ಪಾದಯೋಗವೆಂದರೆ ಕಾಲು ಮಾತ್ರ ಕಾಲ ದರ್ಶನವು ಮಾತ್ರ ಎಂದರೆ ಆ ಈ ವರ್ಣವೇ ಮೂರುಹ್ರಸ್ವ ಅಕಾರವರ್ಣಗಳಿಂದ ಕೂಡಿದೆ. ಆದುದರಿಂದ ಇದೇ ಮೂರು ವರ್ಣ ಆ ಆ ಆ ಆ ಆ ಎಂತ ಐದು ದೀರ್ಘಾಕ್ಷರಗಳಿಂದ ೧೫ ವರ್ಣಗಳಾಗಿ ಒಂದು ಹ್ರಸ್ವಾಕ್ಷರವೂ ಅಧಿಕವಾಗಿ ಸೇರಿದರೆ- ಹದಿನೈದು ವರ್ಣಗಳಾಯಿತು. ಹೀಗೆ ಆ ಎಂಬ ದೀರ್ಘ ಧ್ವನಿ ಒಂದರಿಂದಲೇ ಇಷ್ಟು ಕಾಲಕ್ಕೆ ೧೬ ವರ್ಣ ಉಚ್ಚಾರಣೆಗೆ ಸಮತೋಲ ಎಂತ ಮನಸ್ಸಿಗೆ ತಟ್ಟತಕ್ಕ ಕಾಲವೇ ಒಂದು ಮಾತ್ರ ಎನಿಸಿಕೊಳ್ಳುತ್ತದೆ.

*"ಜಾನುಂ ಪ್ರದಕ್ಷಿಣೀ ಕೃತ್ಯ ನದ್ರುತಂ ನ ವಿಲಂಬಿತಂ ।*
*ಅಂಗುಳೀಸ್ಫೋಟನುಕಾರ್ಯಾತ್ಸಾಮಾತ್ರೇತಿ ಪ್ರಚಕ್ಷತೆ ।"*

ಎಂತ ತಂತ್ರಸಾರ ಛಲಾರಿ ಟಿಪ್ಪಣಿ.

ಈ ಭಗವದ್ರೂಪ ದರ್ಶನದಲ್ಲಿಯೇ ಇಂಥಾ ತಾರತಮ್ಯವಾದುದರಿಂದ, ಈ ಸರ್ವಪಕ್ಷದಲ್ಲಿಯೂ ಪರಮಾತ್ಮನ ಧ್ಯಾನ ಮಾತ್ರ ಅಖಂಡವಾಗಿ ಸರ್ವದಾ ಇರತಕ್ಕದ್ದು ಎಂತ ಹೇಳಿದ್ದಾರೆ. ಮುಂದಿನ ತಾತ್ಪರ್ಯ ವಚನವು

*"ಸದೈವಾಖಂಡಿತಂ ಜ್ಞಾನಂ (ಧ್ಯಾನಂ) ತಪ ಇತ್ಯುಚ್ಯತೇ ಬುಧೈಃ।*
*ಅಪರೋಕ್ಷ ದೃಶಾಯುಕ್ತಂ ನಿತ್ಯಂ ಷಣ್ಮಾತ್ರ ಕಾಲಯಾ ।*
*ಅಪರೋಕ್ಷ ದೃಶಾಯುಕ್ತಂ ನಿತ್ಯಮೇಕ ಮಾತ್ರಯುಜಾಯುತಂ ।*
*ಯೋಗನಾಮ್ನಾ ಸಮಾದ್ದಿಷ್ಟಂ ಧ್ಯಾನಂ ನಿತ್ಯಮಖಂಡಿತಂ ।*
*ತಚ್ಚತುರ್ಭಾಗಯಾನಿತ್ಯಂ ಅಪರೋಕ್ಷ ದೃಶಾಯುತಂ ।*
*ಪಾದಯೋಗಾನ್ಮಹರ್ಲೋಕೋ ಜನಲೋಕಸ್ತು ಯೋಗತಃ ।"*
*ತಪಸಸ್ತು ತಪೋಲೋಕಃ ಪ್ರಾಪ್ಯತೇ ನಾನ್ಯಥಾ ಕ್ವಚಿತ್ ಇತಿ ಧ್ಯಾನ ಯೋಗೇ। ಎಂತ ಭಾಗವತ ತಾತ್ಪರ್ಯ ಮೂಲ ಸಿದ್ಧ.*

ಪ್ರಕಾಶಸಂಹಿತಾ ನಿಬಂಧನಕ್ಕೂ ಇದಕ್ಕೂ ವಿರೋಧ ಬಂತು ಎಂದರೆ ಸಿದ್ಧಾಂತ– ಈ ತಾತ್ಪರ್ಯ ವಚನಗಳಿಗೆ "ತತ್ತಲ್ಲೋಕ ಪ್ರಾಪ್ತಿ ಸಾಧಕ ಸಾಮಾನ್ಯಾಪರೋಕ್ಷ ವಿಶೇಷ ರೂಪತ್ವಾತ್ ಸ್ವಸ್ವಯೋಗ್ಯ ವಿಶೇಷಾಪರೋಕ್ಷ ವಿಶೇಷ ವಿಷಯಂತತ್।" ಎಂತ ಸತ್ತತ್ವರತ್ನಮಾಲಾ ಟೀಕೆಯಲ್ಲಿ ತಾತ್ಪರ್ಯೋಕ್ತಾಪರೋಕ್ಷಗಳೇ ಮೋಚಕಾಪರೋಕ್ಷಗಳಲ್ಲಿ ಎಂತ ನಿಶ್ಚಯಿಸಿದ ಪ್ರಯುಕ್ತ ವಿರೋಧವಿಲ್ಲ.

## ಮುಕ್ತ ಬ್ರಹ್ಮಾದಿಗಳ ಅಪರೋಕ್ಷ ಕ್ರಮವು

*ಮುಕ್ತಸ್ತು ಸರ್ವದಾಪಶ್ಯೇತ್ ಸರ್ವಗತ್ವೇನಚಾಪಿ ತು।*
*ನರಮಾವದ್ವಿಶೇಷಾಣಾಂ ದರ್ಶನಂ ಶಕ್ನುಯಾತ್ ಕ್ವಚಿತ್ ।*
*ಸರಸ್ವತೀತು ತ್ರಿಗುಣಾದೂರ್ಧ್ವಂ ಶತ ಗುಣಂತ್ವತಃ ।*
*ಗಿರಿಶೋ ಗರುಡಶ್ಚೈವ ತಮೋಮಾತ್ರಗತಂ ಹರಿಂ ।*
*ಪಶ್ಯೇದ್ವಿಶೇಷಾನಪಿ ಹಿ ವಾಣಿ ದೃಷ್ಟಾನ್ನಪಶ್ಯತಿ ।*
*ಉಮಾ ಸೌಪರ್ಣೀಚ ಮಹತ್ತತ್ವಂ ಯಾವತ್ಪ್ರಪಶ್ಯತಿ ।*

*ದೃಷ್ಟ್ವಾನ್ವಿಶೇಷಾಂಶ್ಚ ನೈವಪಶ್ಯೇತ್ಕದಾಚನ।*
*ಜಾನಾತೀಂದ್ರಶ್ಚ ಕಾಮಶ್ಚ ಬ್ರಹ್ಮಯಾವದಹಂ ಕೃತಿ ॥*
*ಪಶ್ಯಂತಿ ಮನು ದಕ್ಷಾದ್ಯಾ ಬುದ್ಧಿ ತತ್ವಸ್ಥಿತಂ ಹರಿಂ ।*
*ಪಶ್ಯತಃ ಸೋಮ ಸೂರ್ಯೌತು ಮನಸ್ಥಂ ಪರಮೇಶ್ವರಂ ।*
*ಅನ್ಯ ಭೂತಸ್ಥಿತಂ ವಿಷ್ಣುಂ ದೇವಾಃ ಪಶ್ಯಂತಿ ಸರ್ವದಾ ।*
*ಬಹು ಸಾಹಸ್ರ ವರ್ಷೇಣ ಮಹತ್ತತ್ವೇ ಕ್ವಚಿತ್ಕ್ವಚಿತ್ । ಎಂತ*
*ಸತ್ತತ್ವರತ್ನಮಾಲಾ ಜ್ಞಾನ ಪ್ರಕರಣ*

ಅಂದರೆ ಆದರ ಮುಖ್ಯತಾತ್ಪರ್ಯ, ಯಾವದವ್ಯಾಕೃತಾಕಾಶ ವ್ಯಾಪ್ತ ಭಗವದ್ರೂಪಾಪರೋಕ್ಷಿಗಳೂ ಸಕಲ ಮುಕ್ತಾ ಮುಕ್ತ ಬ್ರಹ್ಮ ಜೀವರುಗಳೂ ಅವರ ಪತ್ನಿಯರುಗಳಿಂದ ಮುಕ್ತಾಮುಕ್ತರುಗಳು ಗುಣತ್ರಯಾಂತ ನವಾವರಣಗಳಲ್ಲಿ ಕೊನೆಯ ಭಾಗದ ಸತ್ವಾವರಣದ ಮೇಲೆ ಶತಗುಣಾಧಿಕ ಸ್ಥಳದವರೆಗೆ ಶುದ್ಧ ಪ್ರಕೃತಿ ಸ್ಥಾನವಷ್ಟೆ. ಅದಕ್ಕೂ ಅವ್ಯಾಕೃತಾಕಾಶಕ್ಕೂ ವಿರಜೆಯು ಅಲ್ಲಿ ಮಧ್ಯ ಮರ್ಯಾದೆಯಾದುದರಿಂದ ಯಾವ ಜಡ ಪ್ರಕೃತಿ ವ್ಯಾಪ್ತ ಭಗವದ್ರೂಪಾಪರೋಕ್ಷಿಗಳಿಗೂ ಸರಸ್ವತೀ ಭಾರತೀರುಗಳು ಗರುಡ ಶೇಷ ರುದ್ರಾದಿಗಳು ಕೊನೆಯ ಭಾಗದ ಸತ್ವ ರಜೋ ಆವರಣಗಳ ಬಿಟ್ಟು ವಳಭಾಗ ತಮೋ ಆವರಣದ ತನಕ ಭಗವದ್ರೂಪಾಪರೋಕ್ಷಿಗಳು – ಸೌಪರ್ಣೀ ವಾರುಣೀ ಗಿರಿಜೆಯರುಗಳು ಮಹತ್ತತ್ವಾವರಣದ ಮಟ್ಟಿಗೆ ವ್ಯಾಪ್ತಾಪರೋಕ್ಷಿಗಳು. ಇಂದ್ರ ಕಾಮರು ಅಹಂಕಾರ ತತ್ವದತನಕ ವ್ಯಾಪ್ತಾಪರೋಕ್ಷಿಗಳು. ಆದರೊಳಗಿನ ಬುದ್ಧಿತತ್ವಾವರಣದ ಮಟ್ಟಿಗೆ ಸ್ವಾಯಂಭುವ ಮನು – ದಕ್ಷಪ್ರಜೇಶ್ವರಾದಿಗಳು ಮನಸ್ತತ್ವದತನಕ ವ್ಯಾಪ್ತರೂಪದರ್ಶಿಗಳು. ಯಥಾ ಯೋಗ್ಯ ಇಂದ್ರಿಯಾಭಿಮಾನಿಗಳು ಹೀಗೆ ವ್ಯಾಪ್ತಪರೋಕ್ಷದಲ್ಲಿ ಹ್ಯಾಗೆ ತಾರತಮ್ಯ ಉಂಟೋ ಹಾಗೇವೇ ಪರಮಾತ್ಮನ ಗುಣ ವಿಶೇಷದಲ್ಲಿಯೂ, ರಮಾದೇವಿಯರು ಕೂಡ ವಿಶೇಷಗಳನ್ನು ಬ್ರಹ್ಮದೇವರು ಅರಿಯರು. ಅಂದರೆ ತಾವು ತಾವು ಕಾಣತಕ್ಕ ಸ್ಥಳದ ಭಗವದ್ರೂಪಗಳಲ್ಲೇನೆ ಅವರವರ ಹಿರಿಯರು ಕಂಡ ವಿಶೇಷಗಳನ್ನು ಅರಿಯರು ಎಂತ ಅರ್ಥವು. ಅವರವರ ಹಿರಿಯರ ತತ್ವವ್ಯಾಪ್ತ ಭಗವದ್ರೂಪವನ್ನೇ ಕಂಡು ಗುರುಗಳಿಗೆ ಗುರುಗಳ ತತ್ವದ ಭಗವದ್ರೂಪವನ್ನು ಅರಿಯದೇ ಅವರವರ ನೀಚ ದೇವತೆಗಳ ತತ್ವಗಳಲ್ಲಿಯೂ ತಮ್ಮ ತಮ್ಮ

ಯೋಗ್ಯತೆ ಕಡಿಮೆ ಇಲ್ಲದೆ ಕಾಣುತ್ತಾರೆ. ಹೇಗೆಂದರೆ ಇಂದ್ರ ಕಾಮರು ಮಹತತ್ವದ ಭಗವದ್ರೂಪವನ್ನು ಅರಿಯರು ಎಂತ ಹೇಳಿದ್ದರಿಂದ ನಮ್ಮ ಶರೀರದಲ್ಲಿ ಇದ್ದು ಮನೋಭಿಮಾನಿ ಇಂದ್ರರೂ ಕೂಡ ನಮ್ಮ ಗುಣ ಸಂಬಂಧ ಮಹತತ್ವದಲ್ಲಿಯೂ ಕೂಡಾ ಶ್ರೀ ಹರಿಯನ್ನು ಅರಿಯರು ಎಂಬುದೇ ನಿಶ್ಚಯವು. ಬ್ರಹ್ಮಾಂಡದ ಮೇಲೆ ಪೃಥಿವ್ಯಾವರಣದ ಮೇಲೆ ಅಪ್ಪು- ಅದರ ಮೇಲೆ ತೇಜಸ್ಸು, ಹಾಗಾದರೆ ಈ ದೇಹದಲ್ಲಿಯಾದರೂ ದೇಹವೇ ಪೃಥ್ವೀ ಅದರೊಳಗೆ ಅಪ್ಪು ಅದರೊಳಗೆ ತೇಜಸ್ಸು ಹೀಗೆ ಅವ್ಯಕ್ತ ತತ್ವದ ತನಕ ಇದು ಹೀಗೆಯೇ ಸರಿ. ಇದರಲ್ಲಿ ಒಂದು ಚಿಂತನಾ ವಿಶೇಷವುಂಟು.

ಸುಳಾದಿ:- "ಅಧಿಕಾರತನ ಭೇದ ಇದರೊಳಗೆ ತಿಳಿವುದೂ ಅಧಿದೈವಮಿಗಿಲದ ಮುಕ್ತ ಜನರಾ. ಅದೇ ತನ್ನ ಸ್ವರೂಪ ಅವಲಂಬಿಸಿ ಲಿಂಗ ಹೃದಯದಲ್ಲಿ ಕಂಡು ವಿಶಿಷ್ಟ - ಮತ್ತೆ ಅಂದರೆ ಪ್ರಮಾಣವನ್ನು ಹಿಂದೆ ಬರೆದಿರುವ ಕ್ರಮಕ್ಕೆ "ಸರ್ವದೇವೈಸ್ತೂಯಮಾನೋ ಜೀವ ಹೃತ್ಕಮಲ ಸ್ಥಿತಃ" ಎಂತ ಸ್ಪಷ್ಟವಾಗಿ ಮುಕ್ತ ತಾತ್ವಿಕರು ಜೀವ ಸ್ವರೂಪದಲ್ಲಿ ಉಂಟು ಎಂತ ಜೀವಾಖ್ಯ ಸುಳಾದಿಯ- ಈ ಪ್ರಕೃತ ವಚನದಿಂದಲೂ ಸಾಧಾರಣ ಜೀವ ಪರಿಮಾಣಾಪೇಕ್ಷೆಯೂ ಪ್ರಾಣದೇವರಿಗೆ ಮತ್ತು ಅತ್ಯಣು ಪರಿಮಾಣವನ್ನು ತಾಮ್ರಪರ್ಣೀಯ, ವಾಯು ಲೀಲಾಮೃತದಲ್ಲಿ, ಜೀವಾಂತರ್ಯಾಮಿಗಳಾದ ಕಾರಣ ಜೀವಗಿಂತಲೂ ಅತ್ಯಂತ ಪರಮ ಸೂಕ್ಷ್ಮ ಪರಿಮಾಣ ಉಳ್ಳವರು ಎಂತ ಹೇಳಿರುವ ಪ್ರಕಾರ. ಇಂಥ ಅಣುತ್ವ ಮಹಾಯೋಗವೂ ಮುಕ್ತ ತಾತ್ವಿಕರಿಗೆ ಇರೋಣ ವಿಹಿತವೇ ಸರಿ. ಹರಿಕಥಾಮೃತಸಾರದಲ್ಲಿ ಚತುರ್ವಿಂಶತಿ ತಾತ್ವಿಕರೂಪಗಳನ್ನು ಪ್ರಾಣದೇವರು ಧರಿಸಿ ಜೀವ ಸ್ವರೂಪಾಂತರ್ಯಾಮಿಗಳು ಎಂತ ಹೇಳಿದ್ದಾರೆ.

*ಗರುಡ ಶೇಷ ಭವಾದಿ ನಾಮ ಧರಿಸಿ ಪವನ ಸ್ವರೂಪದೇಹದಿ*
*ಕರಣ ನಿಯಾಮಕನು ತಾನಿಪ್ಪ ಹರಿಯಂತೆ ।*
*ಸರಸಿಜಾಸನ ವಾಣಿ ಭಾರತಿ ಭರತನಿಂದೊಡಗೂಡಿ*
*ಲಿಂಗದೊಳಿರುತಿಹರು ಮಿಕ್ಕಾದ ದೇವಿಯರಿಗಿಲ್ಲವಾಸ್ಥಾನ*

ಎಂತ ಹರಿಕಥಾಮೃತ।

ಅಂದರೆ ರುದ್ರಾದಿಗಳು ಲಿಂಗದೇಹದಲ್ಲಿ ಇಲ್ಲವೆಂತಲೂ ಪ್ರಾಣದೇವರ ವ್ಯತಿರಿಕ್ತ ಸಂಸಾರಿ ಬ್ರಹ್ಮಾದಿಗಳು ಜೀವಸ್ವರೂಪದಲ್ಲಿ ಇಲ್ಲವೆಂತಲೂ ಮುಖ್ಯಾರ್ಥವು. "ಘರ್ಮಾಸಮಂತಾತ್" ಎಂಬ ಶೃತಿಯಲ್ಲಿ "ತಯೋರ್ಜುಷ್ಟಿಂ ಮಾತರಿಶ್ವಾಜಗಾಮ" ಎಂಬುದಕ್ಕೆ ಜೀವಾಂಗುಷ್ಠ ದೇಹಾಂಗುಷ್ಠ ಭಗವದ್ರೂಪಗಳು "ಜುಷ್ಟಿಂ ಸೇವಾ ಕರ್ಮಮಿತಿಶೇಷಃ" ಎಂತ ಹೇಳಿ ರೂಪದ್ವಯೇನ ಜಗಾಮ ಎಂತ ಭಾಷ್ಯದೀಪಿಕೆ ಒಳಗು ಅರ್ಥ ಮಾಡಿದ್ದಾರೆ. ಇಷ್ಟು ಮಾತ್ರವಲ್ಲ ನರಹರಿ ಆಚಾರ್ಯ (ಭಲಾರಿ) ಭಾಗವತ ತಾತ್ಪರ್ಯ ದೀಪಿಕಾ ವಚನ ಯವುದೆಂದರೆ, ಏಕಾದಶ ತಾತ್ಪರ್ಯ ಮುಖ್ಯಪ್ರಾಣ ಪ್ರಶಂಸಾ ಪ್ರಕರಣೇ

"ಪ್ರಾಣಸ್ಯ ಸರ್ವ ದೇಹಪ್ರಾಪ್ತಿಃ ಸರ್ವದೇವತಾನಿಯಾಮಕ ಹರಿ ಪ್ರೇರಣೆಯಾ ಸರ್ವಥಾ ಚತುರ್ವಿಧ ದೇಹಸ್ಥತ್ವಮುಕ್ತಂ ।ಉತ್ತಮಾಧಮ ಮಧ್ಯಮ ಜೀವಾನಾಂ ದೇಹೇ ಪ್ರಾಣಾಪಾನಾದಿ ಪಂಚರೂಪೇಣ ಉತ್ತಮ ಮಧ್ಯಮ ಸ್ವರೂಪ ಸ್ವರೂಪದೇಹೇಂದ್ರಿಯಾದಿ ಪ್ರೇರಕತ್ವೇನ ಇಂದ್ರಿಯಾಭಿಮಾನಿ ಪ್ರೇರಕತ್ವೇನ ತದ್ದೇಹೇ ಬಹಿಶ್ಚ ಪ್ರೇರಕತ್ವಂ ಪ್ರೋಕ್ತಂ। ಮುಕ್ತಾನಾಂ ಸಂಸ್ಸೃತಿ ಸ್ಥಾನಾಂ ನೀಚಾನಾಂ ದೇಹಿ ಮೋಹಿನೋ। ಇತ್ಯತ್ರ ಸ್ವರೂಪಭೂತ ದೇಹಸ್ಥತ್ವಂ ಸ್ಥೂಲ ಲಿಂಗ ಸೂಕ್ಷ್ಮ ಅನಿರುದ್ಧ ದೇಹಸ್ಥತ್ವಂ ತತ್ತದೇಹಸ್ಥಿತಸ್ಯ ಪೃಥಕ್ ಪೃಥಕ್ನಾಮಾನಿಚೋಕ್ತಾನಿ-ತದುಕ್ತಂ" ಜೀವಾಸ್ತು ತ್ರಿವಿಧಾ ಪ್ರೋಕ್ತಾ ಉತ್ತಮ ಮಧ್ಯಮಾಧಮಾಃ । ಉತ್ತಮದೇವತಾಪ್ರೋಕ್ತಾ ಋಷ್ಯದ್ಯಾ ಮಧ್ಯಮಾಸ್ಮೃತಾಃ । ಅಧಮಾ ಮಾನುಷೋತ್ಕೃಷ್ಟಾಸ್ತೇಚಾಪಿ ತ್ರಿವಿಧಾಮತಾಃ। ಸಾತ್ವಿಕಾ ರಾಜಸಾಃ ಪ್ರೋಕ್ತಾಸ್ತಾಮಸಾದಿ ಪ್ರಭೇದತಃ। ತೇಷು ಸರ್ವೇಷು ಜೀವೇಷು ದೇಹೇಷು ಚ ವಸತ್ಯಯಂ । ಪವಮಾನಾಭಿದೋ ವಾಯುರುತ್ತಮಾನಾಂ ಶರೀರಗಃ । ಸ್ವರೂಪೇಂದ್ರಿಯ ದೇಹೇಷು ಮಾತರಿಶ್ವಾಭಿಧಾನತಃ ಸ್ಥೂಲದೇಹಗತಃಸೋಪಿ ಮುಖ್ಯಪ್ರಾಣಾಭಿದೋಹಿ ಚ । ಧತ್ತೇ ಲಿಂಗಶರೀರಸ್ಥಃ ಸೂತ್ರನಾಮ ಪ್ರಕೀರ್ತಿತಃ। ಸೂಕ್ಷ್ಮ ದೇಹಗತಃ ಸೋಪಿ ಸೂಕ್ಷ್ಮರೂಪೀತಿಚೋಚ್ಯತೆ ॥ ಮಧ್ಯಮಾಧಮ ದೇಹೇಷು ಪ್ರಾಣಾಪಾನಾಭಿಧಾನತಃ । ಪೂರ್ವೋಕ್ತೇಷು ಚ ಸರ್ವೇಷು ಸ್ಥೂಲ್ಲದೇಹೇಂದ್ರಿಯಾನಿಷು ಸ್ವರೂಪದೇಹ ಬುಧ್ಯಾದಿ ಸ್ಥಿತತ್ವೇನ ಮಹಾವಿಭುಃ॥ ಪ್ರೇರಯತ್ಯಖಿಲಂ ವಿಶ್ವಂ ಜಂಗಮಾಜಂಗಮಂತಥಾ । ತತ್ತದೇಹಗತ ಪ್ರಾಣಃ

ತತ್ತದ್ದೇಹಸ್ಥ ಮೂರ್ತಿನಾ । ಅನಿರುದ್ಧಾದಿ ನಾಮ್ನಾಹಿ ಸರ್ವಪ್ರೇರಕ ರೂಪವಾನ್॥ ಇತಿ ಪವಮಾನ ಸಂಹಿತಾಯಂ ಎಂತಲೂ ಈ ಏಕಾದಶ ತಾತ್ಪರ್ಯ ಮೂಲಕವಾಗಿ ಇಷ್ಟು ಆ ಗ್ರಂಥದ ಸ್ವವಚನಗಳು.

ಪ್ರಕೃತ ಸುಳಾದಿ ಮತು.

*"ಅಧಿಕಾರತನಭೇದ ಇದರೊಳಗೆ ತಿಳಿವದು ಅಧಿದೈವ ಮಿಗಿಲಾದ ಮುಕ್ತ ಜನರಾ ।*
*ಅದೇ ತನ ಸ್ವರೂಪ ಅವಲಂಬಿಸಿ ಲಿಂಗ ಹೃದಯದಲ್ಲಿ ಕಂಡ ವಿಶಿಷ್ಟ ಮತ್ತೆ।*
*ಮುದದಿಂದ ಅನಿರುದ್ಧ ಸ್ಥೂಲ ದೇಹ ಆವಾವ ಉದ್ಭವಿಸಿ ಕಳೇಬರತೆರನೀ।*
*ತದನಂತರದಲಿ ಮರಿಯದೆ ಧರಣಿಯೇ ಜನರ ಲೆಖ್ಖ ಉನ್ನತೋನ್ನತ ಎಣಿಸಿ।*
*ಅದರಂತೆ ಚೇತರಸ್ರವಲಯಾಕಾರಾಧಿಕಾಧಿಕ ವಿಧಿ ಪರ್ಯಂತ ವ್ಯಾಪ್ತಿ ಸಿದ್ಧವು ।*
*ವಿದರಾಶನದಿಂದ ಅಲ್ಲಿಗಲಿಗೆ ಇದ್ದ ಪದುಮನಾಭನ ಮೂರ್ತಿಯನು ಕಾಂಬದೊ ।*
*ವಿಧುಜನರೂವಿಲಿಂಗರಾಗಿ ಸಂಸೃತಿಯಲಿ ಪದೋಪದಿಗೆ ನೋಡಿದರೆ ಸ್ಪಷ್ಟವಾಗಿ।*
*ಎದುರಲ್ಲಿ ಪ್ರತ್ಯಕ್ಷೀಕರೆಸಿ ನೋಡುವರ್ಯೆಯಾ।ಸದಮಲರಾಗಿ ಇಚ್ಛಾನುಸಾರ।*
*ಉದಕ ಮೊದಲಾದ ರೂಪವಧರಿಸಿ ಸ್ವೋತ್ತಮರ ಪದ ಪೂಜೆಯನು ಮಾಡುವರು ವಿನಯದಿಂದ।*
*ಮದನನ್ನ ಪೆತ್ತಸಿರಿ ವಿಜಯವಿಠಲರೇಯನ ಅದುಭುತ ಮಹಿಮೆಯನು ಹೊಗಳುತಲಿ"*

ಎಂದರೆ ಜೀವರ ಸ್ವರೂಪವನ್ನು ಮುಕ್ತರ ಅಧೀನವನ್ನಾಗಿಯೂ ಮಾತರಿಶ್ವಾಧೀನವನ್ನಾಗಿಯೂ ಚಿಂತಿಸಿ 'ಜೀವಮಾನ್ಯುತ್ತಮೋ ಬ್ರಹ್ಮಾ ।' ಇತ್ಯಾದಿ ತಾತ್ಪರ್ಯ ವಚನಗಳಿಂದಲೂ ಸರ್ವ ಜೀವಗತಾನಾಂಚ ಗಾಂಭೀರ್ಯಪ್ರಶ್ರಯೋದಿನಾಂ । ಕಥಂ ಚೇತ್ಸುಖ ಭಕ್ತ್ಯಾದಿ ಗುಣಾನಾಂ–

ಅಭಿಮಾನಿನಃ । ಎಂಬ ದೇವತಾ ಪ್ರಕರಣ ಸತ್ತತ್ವರತ್ನಮಾಲೆಯಿಂದಲೂ ಜೀವ ಭಕ್ತ್ಯಾದ್ಯಭಿಮಾನಿಗಳಾದ ನವಕೋಟಿ ಅಮುಕ್ತ ತಾತ್ವಿಕರನ್ನು ಚಿಂತಿಸಿ ಅಧೀನ ಚಿಂತನಾ ಭಾವದಲ್ಲಿ ಭಕ್ತಿ ಪೂರ್ವಕ ಇವನು ಮಾಡತಕ್ಕ ಪರಮಾತ್ಮನ ಧ್ಯಾನವೇ ಬ್ರಹ್ಮದೇವರು ಮಾಡತಕ್ಕ ಧ್ಯಾನವಾಗಿಯೂ ರುದ್ರಾದಿ ಪುಷ್ಕರಾಂತವೂ ಅವರವರು ಮಾಡತಕ್ಕ ಧ್ಯಾನವಾಗಿಯೂ ಏಕ ಕ್ರಿಯಾ ಸಂವಲಿತವಾಗಿ ಕಲೆಸಿ ಹೊಂದುಕೊಂಡಿರುವುದರಿಂದ ನಮ್ಮ ಬುದ್ಧಿಗೆ ಸ್ಥೂಲಾಂಗುಷ್ಠ ಪ್ರಾಜ್ಞ ಧ್ಯಾನ ಎಂದರೆ – ಈ ಧ್ಯಾನಾಂತರ್ಗತವಾಗಿ ದೇವತೆಗಳ ವ್ಯಾಪ್ತ್ಯೋಪಾಸನ ಮೂರುತಿ ಲಕ್ಷ್ಯಗಳೆ ಅವ್ಯಕೃತಾಕಾಶಾಂತವಾಗಿ ಅವರವಲಕ್ಷ್ಯ ಮೂರ್ತಿ ನಿಬಂಧನ ವ್ಯಾಪ್ತಿಗೆ ತಕ್ಕ ತಕ್ಕ ಹಾಗೆ ಬ್ರಹ್ಮಾಂಡದ ಹೊರಗಿನ ನವಾವರಣದಲ್ಲಿಯೂ ಬ್ರಹ್ಮಾಂಡದ ಒಳಗೂ ನಮ್ಮಶರೀರ ಲಿಂಗದೇಹ ಮೊದಲಾಗಿ ಸರ್ವತ್ರ '೨೪' ತತ್ವಗಳಲ್ಲಿ ಲಕ್ಷ್ಯ ನಿಬಂಧನೆಗೆ ತಕ್ಕ ಹಾಗೆ ಸಕಲದೇವತೆಗಳೂ ಶ್ರೀ ಹರಿಯನ್ನು ಕಂಡೇ ಇದ್ದಾರಾದ್ದರಿಂದ ಧ್ಯಾನವನ್ನು ಹೊರತಾಗಿ ಅವರು ಕಾಣತಕ್ಕ ಮರ್ಯಾದೆಯಾದುದರಿಂದ ಇಂಥಾ ಸಾಧನ ಸಂಪತುಳ್ಳ ಮಿಕ್ಕ ಮಹಾತ್ಮರುಗಳು ವಿಲಿಂಗರಾಗಿ ಅಂದರೆ ಜೀವನ್ಮುಕ್ತರಾಗಿ ಎಂದರ್ಥವು. ಅನಪರೋಕ್ಷಿಗಳಾದ ಸ್ವೋತ್ತಮರು ಅಪರೋಕ್ಷಿಗಳಾದ ಸ್ವಾಧಮ ಜೀವರನ್ನು ಅರಿಯರಾದುದರಿಂದ ಆ ಅಪರೋಕ್ಷಿಗಳಾದ ಸ್ವಾಧಮರು, ಸ್ವಂಯೋಗ್ಯಾಷ್ಟ ಮಹಾಸಿದ್ಧಿವಂತರಾದುದರಿಂದ, ಆ ಸ್ವೋತ್ತಮರು ತಮ್ಮ ಪಾದ ಪ್ರಕ್ಷಾಲನೆ ಮಡಿಕೊಳ್ಳಬೇಕೆಂದು ಉದಕವನ್ನು ಸ್ವೀಕರಿಸಿದರೆ– ಆ ಉದಕದಲ್ಲಿ ತಾವು ಪ್ರವೇಶ ಮಾಡಿ ಅಂಥ ಸ್ವೋತ್ತಮರ ಚರಣದಲ್ಲಿ ಹೊರಳಿ ವಿಶೇಷ ಧನ್ಯರಾಗುತ್ತಾರೆ ಎಂತ ಜೀವಾಖ್ಯ ಸುಳಾದಿಯ ಭಾವ. ಆದ ಪ್ರಯುಕ್ತ ಇದರ ಹಿಂದಿನ ತಾಳದಲ್ಲಿ

*"ಬುದ್ಧಿಯಲ್ಲೊ ಮನಸ್ಸು ಪೊಗ್ಗಿಸಿ ಹೊಂದಿಸಿ ಚಿತ್ತ*
*ಶುದ್ಧನಾಗಿ ನಿಂದು ತತ್ವ ವಿಚಾರಿಸಿ*
*ಬದ್ಧವಾದ ಪ್ರಕೃತಿ ಹಾರಿ ಹೋಗುವಂತೆ*
*ಸಿದ್ಧಾಂತವ ತಿಳಿದು ಭಕುತಿ ವೈರಾಗ್ಯದಲ್ಲಿ*
*ಮಧ್ವ ಮತವ ಪೊಂದಿ ಮುದದಿಂದಲಿ ಧ್ಯಾನ*
*ಪದ್ಧತಿ ತಪ್ಪದಲೆ ಪಾವನ ನೀನಾಗೋ*

*ಸಿದ್ಧಿಸುವುದು ನಿನಗೆ- ಈ ಪರಿ ಆರೋಹಣ*
*ಇದ್ದರೆ ಚನ್ನಾಗಿ ಉಪಕ್ರಮಿಸಿ ಮಾಡೋ*
*ಸದ್ಭಾವದಿಂದ ಉಪಸಂಹರಣೆಯನ್ನು*
*ನಿರ್ಧಾರಗೈಸಿ ವಳಗಾದ್ದ ನಿತ್ಯ*
*ಬುದ್ಧಿಯ ಮಧ್ಯದಲ್ಲಿ ಧ್ಯಾನರೂಪದಲ್ಲಿ ಇಟ್ಟು*
*ನಿರ್ದ್ವಂದನಾಗದೆ ಇದೆ ಲಯ ಚಿಂತನೆಯೂ ಇದೆ ಆಕಾರ ಪ್ರಣವ*
*ಪದ್ಮಾವಲ್ಲಭ ನಮ್ಮ ವಿಜಯವಿಠಲನಂಘ್ರಿ ಕಾಂಬುವುದಕ್ಕೆ ಇದೇ*
*ಪಾಯಗಳು."*

ತ್ರಿವಡಿ ॥

*ಆದಿ ಮಧ್ಯಂತದಲ್ಲಿ ಮನಸ್ಸು ಕಂಡ ಕಡೆ ಪೋದಡೆ ನೀನು ವ್ಯಾಕುಲವಾಗದೆ*
*ವೇದ ವೇದಾಂಗದಲಿ ಪೇಳಿದಂತೆ ಪಂಚ ಭೇದೋಕ್ತ ಮಾರ್ಗವನ್ನೇ*
*ಬಿಡದಿರಲೋ ॥*

ಸಾಧನವೆ ಮಾಡು ಮರಳಿ ಮರಳಿ ಸಂಪಾದಿಸು ಧ್ಯಾನವ ನಿನ್ನೊಳಗಾರಾಧನೆ ಮಳ್ಪೋದು ನಾನಾ ವಿಚಿತ್ರದಲ್ಲೆ ಸಾಧಿಸು ಮೆಲ್ಲ ಮೆಲ್ಲನೆ ಹರಿಪುರದ ಹಾದಿಯ ಮೆಟ್ಟುವೋದು।

ಆ ಹಾದಿ ಯಾವುದು ಎಂದರೆ, ಮುಂದಿನ ಮಾತು.

ಸ್ಥೂಲ ಸೂಕ್ಷ್ಮ ಬುದ್ಧಿ ಮೂಲವಿಡಿದು ಮೌಳಿತನಕ। ಅಂದರೆ ಸಾಂಗೋಪಾಂಗ ರೇಖೋಪರೇಖಾ ಸಹಿತ ದ್ವಾತ್ರಿಂಶಲಕ್ಷಣ ಪರಮ ಸುಂದರ ಪ್ರತಿಮೆಯನ್ನು ನೋಡಿಕೊಂಡು ಸೂಕ್ಷ್ಮ ಬುದ್ಧಿಯಿಂದ ಸಾಧಿಸಿ ಕೊಳ್ಳಬೇಕು. ಎಂತ ಅರ್ಥ. ಮುಂದಿನ ಮಾತು

"ವೋದದಿಂದಲಿ ಹರಿಯ ಶ್ರೀವಿರಾಟ್ರೂಪ ಶೋಧಿಸುತ ಜನ್ಯ ತದಾಶ್ರಯವೆಂದೂ ಆದ ಭುವನವೆಲ್ಲ ಆತನಲ್ಲಿ ಅನುವಾದ ಮಾಡು ಮನವೆ- ವಾಣಿಯಲ್ಲಿ ಶ್ರೀ ದೇವಿಯರಸ ನಮ್ಮ ವಿಜಯವಿಠಲರೇಯ ಆಧಾರ ನಮಗೆಲ್ಲ ಬೇಡಿದಿಷ್ಟಾರ್ಥವ ಕೊಡುವ"

ಅಂದರೆ ವಿರಾಡ್ರೂಪ ಧ್ಯಾನ ಹೊರತು ಬಿಂಬ ಮೂರ್ತಿಯು ಧ್ಯಾನಕ್ಕೆ ನಿಲ್ಲುವುದಿಲ್ಲ . "ಆದೌತು ಚಿಂತಯೇತ್ಸ್ಥೂಲಂ" ಎಂತ ದೈನಂದಿನ ಸದಾಚಾರ ದರ್ಪಣದ ವಚನವು. ಭಾಗವತ:- ಯಾವನ್ನಜಾಯೇತ ಪರಾವರೇಸ್ಮಿನ್ ವಿಶ್ವೇಶ್ವರಿ ದ್ರಷ್ಟೇತಿ ಭಕ್ತಿ ಯೋಗಃ । ತಾವತ್ಸ್ಥವೀಯಂ ಪುರುಷಸ್ಯ ರೂಪಂ ಕ್ರಿಯಾವಸಾನೇ ಸತತಂ ಸ್ಮರೇತ :- 'ಕ್ರಿಯಾವಸಾನೆ' ಎಂದರೆ ಸಂಧ್ಯಾದಿ ಕರ್ಮಗಳ ಪರ್ಯವಸಾನ ಕಾಲಗಳಲ್ಲಿ ಎಂತ ಅರ್ಥ- 'ದ್ರಷ್ಟರಿ' ಎಂದರೆ ಬಿಂಬ ವಿಷಯಕ ಅಂದರೆ ತೀವ್ರೋಪಾಸನೆಯಿಂದ ಭಕ್ತ್ಯಭಿವೃದ್ಧಿ ಆಗುವತನಕ ಎಂತ ಅರ್ಥ. ತ್ರಿವಿರಾಡ್ರೂಪ ಅಂದರೆ

"ಪ್ರಥಮಂ ಮಹತಃ ಸೃಷ್ಟು ದ್ವಿತೀಯಂತ್ವಂಡ ಸಂಸ್ಥಿತಂ ತೃತೀಯಂ ದೇಹಿನಾಂ ದೇಹೇ" ಎಂಬ ತಾತ್ಪರ್ಯ ವಚನದಿಂದ ಬ್ರಹ್ಮಾಂಡದ ಹೊರಗಿನ ಮಹತತ್ವ ಸೃಷ್ಟಿ ಒಂದು. ಎರಡನೆಯದು ಅಂಡದೊಳಗೆ ಪಾತಾಳದಲ್ಲಿ ಪಾದವೂ ಸತ್ಯ ಲೋಕದಲ್ಲಿ ಶಿರಸ್ಸು ಇರತಕ್ಕಾದ್ದೇ ಚತುರ್ಮುಖನ ವಿರಾಡ್ರೂಪಾಂತರ್ಗತ ಭಗವದ್ವಿರಾಡ್ರೂಪ.

ಚತುರ್ಮುಖ ಭುವನಾಗಿ ಚತುರ್ದಶ ತದಾಧಾರಾರ್ಥಮಸೃಜ್ಯಂ ದೇಹಮಾತ್ಮನಃ । ಮಹದಾದಖಿಲೈಸ್ತತ್ತ್ವೈಃ ನಿರ್ಮಿತಂ ವಿಶ್ವತೋ ಮುಖಂ। ತತ್ರೈವ ನಿದಧೇ ಸರ್ವಾನ್ ಜೀವಾನ್ನಿರಾಂಶಕಾನಪಿ। ವಿಧಾಯ ಪೌರುಷಂ ರೂಪಂ ಭಗವಾನ್ ತತ್ರಚಾವಿಶತ್। ತೇನಾಭೂದ್ದೀಪ್ಯಮಾನಂ ತದ್ದಿಶಃ ಸರ್ವಾಪ್ರಕಾಶಿರೆ । ಎಂತ ವಿಷ್ಣು ರಹಸ್ಯ.

ಮೂರನೇ ವಿರಾಡ್ರೂಪ ಯಾವುದೆಂದರೆ ಅದು ಎರಡು ಪ್ರಕಾರ ಜೀವಾಧಾರ ಪ್ರಾದೇಶ ನಾಮಕ ಪುರುಷ ಎಂತಲೂ, ಸ್ಥೂಲ ದೇಹದ ನಖಶಿಖ ಪರಿಯಂತ ಸದೃಶಾಕಾರ ವಿರಾಡ್ರೂಪ ಎಂತಲೂ ಅನ್ನಮಯನಾಮಕ ಅನಿರುದ್ಧನೇವೇ ಚೇಷ್ಟಾಪೂರ್ವಕ ವಿಶ್ವ ಮೂರ್ತಿ ಎಂತ ವಿರಾಡ್ರೂಪ ಎಂತಲೂ ಹೆಸರು ಉಂಟು. ವಿರಾಡ್ರೂಪದಲ್ಲಿ ವಿಶೇಷವೆನೆಂದರೆ, ಚತುರ್ದಶ ಭುವನದೊಳಗೆ ಭೂಲೋಕದಲ್ಲಿ ಮಾತ್ರ ಅದರಲ್ಲಿಯೂ ಮನುಷ್ಯ ಯೋನಿ ದೇಹಗಳಲ್ಲಿ ಮಾತ್ರವಿರತಕ್ಕ ವಿರಾಡ್ರೂಪಗಳಲ್ಲಿ ಮಾತ್ರ ೧೪ ದಳಗಳುಳ್ಳ ಪದ್ಮದಿಂದಲೇ ಸ್ಥೂಲದೇಹ ತಿಳಿ. ಅಬ್ಜದಿಂದ ಎಂತ ಜೀವಾಖ್ಯ ಸುಳಾದಿ. ಈ

ದೇಹದ ಒಳಗಿನ ಲೋಕಗಳು ಹೇಗೆ ಹುಟ್ಟಿದೆ ಎಂದರೆ, ಪುರಂದರದಾಸರ ಸುಳಾದಿ:–

"ಅತಳದಲ್ಲಿ ಪಾದವಿಹುದು ಆ ಪಾದೋರ್ಧ್ವ ವಿತಳದಲಿ, ಸುತಳದಲ್ಲಿ ಜಂಘೆ ಇಹದು ಚೋದ್ಯಜಾನು ತಳಾತಳದಿ ಸುತಳ ಮಹಾತಲದೀ ರಸಾತಲದಿ ಗುಹ್ಯ ಇಹದು. ಪ್ರತಿಯಲ್ಲಿದ್ದ ಕಟಿ ಭಾಗದಲ್ಲೇ ಪಾತಾಳ ಇಹದು" ಎಂತ ಹೇಳಿದ್ದಾರೆ. ಪ್ರಮಾಣ:–ಪಾದಸ್ತ್ವತಳಂ ವಿಂಧ್ಯಾತ್ಪಾದೋರ್ಧ್ವ ವಿತಳಂ ಭವೇತ್। ಸುತಳಂ ಜಾನುದೇಶೇತ್ತು ಜಂಘಯಾಸ್ತು ತಲಾತಲಂ। ಮಹಾತಲಂತೂರು ದೇಶೇ ಜಘನೇತು ರಸಾತಲಂ । ಪಾತಾಳಂ ಕಟಿದೇಶೇತು ಸಪ್ತಮಾ ಪರಿಕೀರ್ತಿತಂ॥ ಎಂತ ಪರಮ ಸಂಹಿತಾ. ಪ್ರಮಾಣವನ್ನು ಸುಳಾದಿಯಲ್ಲಿ ಮಧ್ಯೇ ಮಧ್ಯೇ ಉದಾಹರಿಸಿ ಇದ್ದಾರೆ. ಇದಕ್ಕೆ "ಪಚ್ಛ್ವಬ್ದೋ ಜಘನಪರಃ" ಎಂತ ಕೆಲವರು ಅರ್ಥ ಮಾಡಿದ್ದಾರೆಯಷ್ಟೆ. ಎಂದರೆ ಅದು ಕೂಡದು, ಯಾಕೆಂದರೆ ನಮ್ಮ ಯುಕ್ತಿಯಿಂದ ಈ ಸಪ್ತ ಲೋಕಗಳಿಗೂ ವಿಪರೀತಾರ್ಥ ಮಾಡಿ ಪ್ರಮಾಣಕ್ಕೆ ಅಪಾರ್ಥ ಹೇಳೋಣವೇ ಪರಮ ಸಂಗತ । ಹಾಗಾದರೆ ಇಲ್ಲಿ ಹೇಗೆ ತಿಳೀದುಕೊಳ್ಳ ಬೇಕೆಂದರೆ ಪುರಂದರದಾಸರೇನೇ ಇದರ ಮುಂದಿನ ವಚನದಲ್ಲಿ ವಿಪರೀತ ವಿರಾಟ್ಪುರುಷ ಎಂತ ಸ್ಪಷ್ಟವಾಗಿ ಹೇಳಿದ್ದಾದುದರಿಂದ ನಮ್ಮ ಸ್ಥೂಲ ದೇಹಾಂತರ ವಿರಾಡ್ರೂಪನ ಪಾದದಿಂದ ಪಾತಾಳ ಹುಟ್ಟಲೇ ಇಲ್ಲ ಅತಲವೇ ಹುಟ್ಟಿತು. ಕಟಿಯಿಂದಲೇ ಪಾತಾಳ ಲೋಕ ಹುಟ್ಟಿತು. ಈ ಏಳು ಲೋಕಗಳೇ ವಿಪರೀತಗಳೇ ಹೊರತು ಆತ್ಮರ ವಿರಾಟ್ಪುರುಷನಲ್ಲಿಲ್ಲ. ಎಂತ ಅರ್ಥ. ಈ ವಿರಾಡ್ರೂಪ ಚಿಂತನೆಗೆ ಮುಖ್ಯ ಯೋಗವೇನೆಂದರೆ ಈ ದೇಹ ವಿಯೋಗ ಕಾಲಕ್ಕೆ ದೇಹಾದ್ಬಹಿರ್ವ್ಯಾಪ್ತ ಈ ವಿರಾಡ್ರೂಪನಲ್ಲೇವೆ ಆತ್ಮನಾಮಕ ಉಪಾಸ್ಯ ಪ್ರಾಜ್ಞನ ಐಕ್ಯ ಚಿಂತನೆ ಮಾಡಬೇಕಾದ್ದರಿಂದ, ದ್ವಿತೀಯ ಸ್ಕಂಧ

*"ಮನ್ಯಶ್ಚ ಬುದ್ಧ್ಯಾ ಮಲಂಯಾ ನಿಯಮ್ಯ ಕ್ಷೇತ್ರಜ್ಞ ಏತಾಂ ನಿನಯೇತ್ಪರಾತ್ಮನಿ। ಆತ್ಮಾನಮಾತ್ಮನವರುಧ್ಯಧೀರೋ ಲಬ್ಧೋಪ ಶಾಂತಿರ್ವಿರಮೇತಕೃತ್ಯಾತ್"* ಎಂಬ ಮೂಲಕ್ಕೆ ತಾತ್ಪರ್ಯ ವಚನ.

*"ಜೀವಸ್ಥೋ ಭಗವಾನ್ವಿಷ್ಣುಃ ಕ್ಷೇತ್ರಜ್ಞ ಇತಿ ಗೀಯತೆ । ದೇಹಸ್ಥೋಪಿ ಸವಿವಾತ್ಮಾ ವ್ಯಾಪ್ತೋಪ್ಯಾತ್ಮೇತಿ ಭಣ್ಯತೆ। ಹರಿಂ ಹರೇರ್ಭವೇನ್ನೀತಿಸ್ತದೈಕಸ್ಯ*

*ಚಿಂತನಂ । ಅನ್ಯತ್ರ ತನ್ನಿಯಮ್ಯಾದಿ ಚಿಂತನಂ ನೀತಿರುಚ್ಯತೆ ।"*

ಹಾಗಾದರೆ ಈ ಸ್ಥೂಲದೇಹಗತ ಅನಂತ ಭಗವದ್ರೂಪಗಳೂನೂ ಆ ಕಾಲಕ್ಕೆ ಜೀವಾಂತರ್ಯಾಮಿ ಒಳಗೆ ಒಂದೇ ಆಗುತ್ತದೆ. ಎಂತ ಚಿಂತಿಸಿ, ಜೀವಾಂತರ್ಯಾಮಿಯಿಂದ, ಆ ಕ್ಷೇತ್ರಜ್ಞ ರೂಪಾಂಶವನ್ನು ತಾತ್ಪರ್ಯ ವಚನೋಕ್ತ ಆತ್ಮನಾಮಕ ಪ್ರಾಜ್ಞನಲ್ಲಿ ಐಕ್ಯ ಚಿಂತಿಸಿ ಆ ಕಾಲದಲ್ಲಿ ಈ ಪ್ರಾಜ್ಞಾಂಶವನ್ನು ದೇಹಾದ್ಬಹಿರ್ವ್ಯಾಪ್ತ ವಿರಾಡ್ರೂಪ ನಾಮಕ ಆತ್ಮನಲ್ಲಿ ಐಕ್ಯ ಚಿಂತಿಸಿ ಈ ಪಾಂಚಭೌತಿಕ ವಿಸರ್ಜನೆ ಮಾಡೋಣವೇ ವಿರಡ್ರೂಪ ಚಿಂತನೆಗೆ ಮುಖ್ಯೋಪಯೋಗವು.

"ಹತಾಹರೇರ್ಭವೇನ್ನೀತಿಸ್ತದೈಕತ್ವಸ್ಯ ಚಿಂತನಂ । ಅನ್ಯತ್ರ ತನ್ನಿಯಮ್ಯಾದಿ ಚಿಂತನಂವೀತಿರುಚ್ಯತೆ ।" ಎಂತ ತಾತ್ಪರ್ಯ ವಚನವು. ಮನೋಭಿಮಾನಿಗಳನ್ನು ಬುದ್ಧ್ಯಭಿಮಾನಿ ಬ್ರಹ್ಮ ಸರಸ್ವತ್ಯಾದಿಗಳಿಗೆ ಅಧೀನರನ್ನಾಗಿ ಅಧಮರಿಗೆ ಉತ್ತಮರ ಮಾನಸ ಬಿಂಬೋಪಾಸನೆಂಯೋ ಎರಡು ಪ್ರಕಾರ. ಹ್ಯಾಗೆಂದರೆ ಷೋಡಶೋಪಚಾರ ಕ್ರಿಯಾ ವಿಮರ್ಶನ ರೂಪ ಪೂರ್ವೋಕ್ತ ಧ್ಯಾನೋಪಾಸನೆ ಒಂದು. ದರ್ಪಣದಲ್ಲಿ ಮುಖವನ್ನು ನೋಡಿದಂತೆ ಚತುರ್ಗುಣ ಚಿಂತನ ಧ್ಯಾನ ಒಂದು. ಈ ಗುಣ ಚಿಂತನಾ ಧ್ಯಾನ ಕಾಲದಿಂದಲೂ ಪೂಜಾ ಧ್ಯಾನ ಕಾಲದಿಂದಲೂ ಎರಡೂ ಕಾಲಗಳಿಂದ ಸಾಧಿಸಿಕೊಂಡು, ಸರ್ವದಾ ಅಖಂಡ ಸ್ಮರಣೆಯನ್ನು ಧ್ಯಾನ ರೂಪವನ್ನಾಗಿ ಹೊಂದಿಸಿಕೊಳ್ಳತಕ್ಕದ್ದು.

## ಚತುರ್ಗುಣೋಪಾಸನೆ

ಗುಣ ಚಿಂತನೆ ಲಕ್ಷಣ. ನವೇ ಉಪಾಸ್ಯ ಮೂರ್ತಿಯನ್ನು 'ಸತ್' ಎಂತಲೂ. 'ಚಿತ್' ಎಂತಲೂ, 'ಆನಂದ' ಎಂತಲೂ 'ಆತ್ಮಾ' ಎಂತಲೂ ಧ್ಯಾನಿಸ ಬೇಕು. ಹ್ಯಾಗೆಂದರೆ ವಿವರ:- ಸತ್ ಎಂದರೆ ನಿರ್ದೋಷ ಜ್ಞಾನಾನಂದಾದಿಗಳಿಗೆ ನಿರ್ದೋಷಗಳವೋ ಅಂದರೆ, ಸರ್ವವೂ ನಿರ್ದೋಷವೇ ಸರಿ. ಆದರೂ 'ಸತ್' ಎಂದರೆ ನಿರ್ದುಷ್ಟ ಸ್ವರೂಪ ಸತ್ವ ರೂಪೀ ಎಂತ ಅರ್ಥ- 'ಸತ್' ಎಂದರೆ ಭಾವ ಪದಾರ್ಥ. ಹಾಗಲ್ಲದಿದ್ದರೆ ಜ್ಞಾನ ಸಂತೋಷ

ಇತ್ಯಾದಿ ಗುಣಗಳ ವ್ಯತಿರಿಕ್ತ ಶುಕ್ಲ ರಕ್ತಾದಿ ರೂಪಗಳೇ ಇಲ್ಲವೋ ಏನೋ ಅಂತ ಅಜ್ಞಾನಿ ಶಂಕಿಸುತ್ತಾನೆ. ಯದ್ಯಪಿ ಜ್ಞಾನಾದಿ ಗುಣಗಳೇ ಭಗವದ್ವಿಷಯದಲ್ಲಿ ಆಕಾರಗಳೇ ಸರಿ.

"ಜ್ಞಾನಿಸ್ಯ ಜ್ಞಾನಿತಾದೇವೇ ಜ್ಞಾನಿತಾಸ್ವೇನಚಾತ್ಮನಃ । ಜ್ಞಾನ ಭುಕ್ತ ಸುಖಿಸ್ಯಾಪಿ ಸುಖಿತ್ವಂ ಸುಖ ಭೋಕ್ತೃತಾ।" ಎಂತ ಸತ್ತತ್ತ್ವರತ್ನಮಾಲೆಯಿಂದಲೂ "ಮೂರ್ತಾಮೂರ್ತೇ ತವ ಬ್ರಹ್ಮನ ಸತ್ತನ್ನಸದುಚ್ಯತೆ"- ಎಂದು ಪ್ರಪಂಚದ ಸದ್ವಿಲಕ್ಷಣನಿಂದಾಗ್ಯೂ "ಗುಣಾಃ ಶೃತಾಃ ಸುವಿರುದ್ಧಾಶ್ಚ ದೇವೇ ಸಂತ್ಯಶೃತಾಶ್ಚನಾಜ್ಞ್ಯಸ್ತಹಿ ತಥಾ ಪ್ರತೀತಾಃ ॥" ಎಂಬ ಶೃತ್ಯಾದಿಗಳಿಂದಲೂ, ವಿರುದ್ಧಾಶ್ಚರ್ಯ ಧರ್ಮವುಳ್ಳ ಶ್ರೀ ಹರಿಯ ಸ್ವರೂಪಭೂತವಾದ ಆಕಾರ ಧ್ಯಾನಾರ್ಥವಾಗಿ ಅದೆ. ಪ್ರಥಮತಃ "ಸತ್ ಸದಿತಿ ಬ್ರಹ್ಮೇತಿ ಶೃತೇಃ" "ಓಂ ತತ್ಸತ್" ಎಂತ ಶ್ರೀ ಹರಿಯು ಹೇಳಿಸಿಕೊಳ್ಳುತ್ತಾನೆ. ಏತೇನ ಹೇ ಸ್ವಾಮಿಯೇ ನೀನು ನಿರ್ದುಷ್ಟ ಸತ್ವಸ್ವರೂಪಿಯು, ಜ್ಞಾನ ರೂಪೀ ಆನಂದರೂಪೀ ಆತ್ಮಾ ಎಂದರೆ ನನ್ನಲ್ಲಿ ಅಲಗಾಡುವನು ನೀನಾಗಿ ಸ್ವಾಮಿಯಾಗಿದ್ದಿ ಎಂತ ಇದೇ ಚತುರ್ಗುಣ, ಇಷ್ಟು ಮಾತ್ರವಲ್ಲ "ಪೃಥಕ್ ಪೂರ್ಣತೆಯೋಪಾಸ್ಯೋ ವೈಲಕ್ಷಣ್ಯೇನಚಾಖಿಲೈಃ" ಎಂತ ಸತ್ತತ್ತ್ವರತ್ನಮಾಲಾ. ಪೂರ್ಣತ್ವ ಬಿಟ್ಟು ಉಪಾಸನೆ ಕೂಡದು ಬ್ರಹ್ಮತ್ವವನು ಬಿಟ್ಟು ಧ್ಯಾನಿಸಕೂಡದು. "ಆತ್ಮೇತ್ಯೇವ ಸದೋಪಾಸಾ ತದಾ ಬ್ರಹ್ಮತ್ವ ಸಂಯುತಂ" ಎಂಬ ಭಾಷ್ಯೋಕ್ತಿಯಿಂದ ಅಲಗಾಡದವನೇ ಸ್ವಾಮಿ ಎಂಬ ಚಿಂತೆ ಸಂಗಾತಲೇ ಬ್ರಹ್ಮ ಎಂದರೆ ಅಪರಿಮಿತ ಗುಣ ಪೂರ್ಣ ಎಂಬ ಹೆಸರೂ ಇವಗೆ ನಿಷಿದ್ಧವಾದುದರಿಂದ ಆತ್ಮಾ ಬ್ರಹ್ಮ ಎಂದು ಕೂಡಿಸಿ ಇದ್ದಾರೆ. ಓಂಕಾರದಿಂದಲೂ ಉಪಾಸನೆಗೆ ಓಂ ಇತಿ ಶ್ರೀಹರಿಗೆ ಹೆಸರು. ಅಶೇಷಗುಣಾಧಾರ ಎಂತ ಅರ್ಥ. ನೀನೇ ಬ್ರಹ್ಮ ಓಂಕಾರ ವಾಚ್ಯ, ಚೇಷ್ಟಕ ಸ್ವಾಮಿ ಪೂರ್ಣ ಹೀಗೆ ಆತ್ಮ ಎಂಬ ನಾಲ್ಕನೇ ಚಿಂತನೆ ಯಾವುದೋ ಅದೇನೇ ಐದು ವಿಧವಾಗಿ ಒಂದಾಗಿ ಕರೆಸಿಕೊಂಡಿದ್ದರಿಂದ ಸರ್ವಾನ್ ಗುಣಾನಾತ್ಮ ಶಬ್ದೋ ಬ್ರವೀತಿ" ಎಂಬ ಶೃತಿಯಿಂದ ಅನಂತಾನಂತ ಗುಣಗಳನ್ನು ಆ ಒಂದು ಗುಣವೇ ಅಚಿಂತ್ಯೈಶ್ವರ್ಯಶಕ್ತಿಯಿಂದ ಹೇಳುತ್ತಾದುದರಿಂದ ಹೀಗೆ ಧ್ಯಾನಿಸುವವನೇ ಚತುರ್ಗುಣೊಪಾಸಕನು. "ನಾನಾಕ್ಲೇಶ ಸಮಾಯುಕ್ತೋ ಏತಾನ್ಯೈವ ವಿಸ್ಮರೇತ್। ಎಂತ ಭಾಷ್ಯ ವಚನ. ನರಕಯಾತನೆಗೆ ಸದೃಷವಾದ

ಕ್ಲೇಶಗಳು ಬಂದಾಗ್ಯೂ ಈ ಗುಣಗಳನ್ನು ಮರೆತಿರಬಾರದು ಎಂತ ಹೇಳಿದ್ದಾರೆ.'' ವಿಷ್ಣು ಬ್ರಹ್ಮತದಾದಾತೇತ್ಯೇವಂ ನಿತ್ಯಮುಪಾಸನಂ । ಕಾರ್ಯಮಾಪದ್ಯತಿ ಬ್ರಹ್ಮ ತೇನಯಾತ್ಯಪರೋಕ್ಷತಾಂ । ಎಂತ ಅಣುಭಾಷ್ಯ. ಇದರಲ್ಲಿ ಆಕ್ಷೇಪ ''ತಂ ಯಥಾಯಥೋಪಾಸತೇ ಸ ತಥೈವ ಭವತಿ'' ಎಂತ ಇವನು ಉಪಾಸನಾನುಕೂಲವಾಗಿ ಅವನ ಸ್ವರೂಪಗಳೆಲ್ಲವೂ ಮೋಕ್ಷದಲ್ಲಿ ಅಭಿವ್ಯಕ್ತಗಳಾಗುತ್ತಾದ ಕಾರಣ ಈಗ ಹೇಳಿದ ಚತುರ್ಗುಣಗಳಲ್ಲಿ ಸೌಂದರ್ಯವೂ ಪ್ರಕಾಶವೂ ಇವೆರಡೂ ಸೇರಿಲ್ಲವಾದುದರಿಂದ ಸಕಲ ಮುಕ್ತರ ಶರೀರದಲ್ಲಿಯೂ ಸೌಂದರ್ಯ ಪ್ರಕಾಶವೂ ಸಿದ್ಧವಾಗಿವೆಯಷ್ಟೆ. ಉಪಾಸನೆ ಹೊರತಾಗಿ ಅಭಿವ್ಯಕ್ತಯಾಗ ಕೂಡದಷ್ಟೆ. ಹೇ ಸ್ವಾಮಿಯೇ ನೀನು ಸುಂದರರೂಪಿಯೂ ಪ್ರಕಾಶರೂಪಿಯೂ ಎಂತ ಎರಡು ಗುಣ ಹೆಚ್ಚಿಸಿದರೆ ಸತ್ಯೋ ಜ್ಞಾನಂ ಪರ ಆನಂದರೂಪ ಆತ್ಮೇತ್ಯೇವಂ ಸರ್ವದೋಪಾಸನೆ ಸರ್ವದೋಪಾಸನಾ ಸ್ಯಾತ್ ನಾನ್ಯತ್ಕಿಂಚಿತ್ ಸಮುಪಾಸೀತ ಧೀರಃ ಎಂಬ ಶ್ರುತಿಯವಳಗೇನೇ ಚತುರ್ಗುಣಗಳನ್ನು ಹೊರತು ಅಧಿಕೋಪಾಸನೆ ಮಾಡಕೂಡದೆಂಬ ನಿಬಂಧನೆಗೆ ವಿರೋಧ ಬಂತಲ್ಲ ಎಂದರೆ ಸಮಾಧಾನ– ಆ ಒಂದು 'ಆತ್ಮ' ಎಂಬುದರಲ್ಲಿ ಹೇಗೆ ನಾಲ್ಕು ಗುಣಗಳು ಕೂಡಿ ಅದೆಯೋ ಹಾಗೆ ಪ್ರಥಮ ಗುಣವಾದ 'ಸತ್' ಎಂಬುದೇ ರೂಪವಾಗಿ ಆಕಾರವಾದುದರಿಂದ ಪ್ರಕಾಶವೂ ಸೌಂದರ್ಯವೂ ಅನಂತ ಲಕ್ಷಣ ಗುಣಗಳಾದಾಗ್ಯೂ ದ್ವಾತ್ರಿಂಶಲ್ಲಕ್ಷಣವೂ ಪೂರ್ಣವಾಗಿರುವುದರಿಂದ ಅಂತರ್ಭಾವ ಸಂಗತಿಯಿಂದ ಸ್ವಾಮಿ ಎನ್ನುವುದರಿಂದಲೂ ಬಲಾದಿ ನಿಸ್ಸೀಮಶಕ್ತಿಯನ್ನು ತಿಳಿದು ಪರಮ ಸೌಂದರ್ಯವುಳ್ಳ ರಮಾದೇವಿಯರಿಗೂ ಮೋಹಕ ಶೃಂಗಾರಾದಿ ಗುಣಗಳನ್ನು ತಿಳಿದು ಧ್ಯಾನಿಸುವವನೇ ಚತುರ್ಗುಣೋಪಾಸಕನು. ಪ್ರಮಾಣ :–

*ಸಚ್ಚಿದಾನಂದ ಆತ್ಮೇತಿ ಹ್ಯುಪಾಸ್ಯೋಮಾನುಷ್ಯೈರ್ಹರಿಃ ।*
*ಪ್ರಕಾಶ ಸೌಂದರ್ಯಮುಖಾಃ ಗುಣಾಃ ಕೇಚಿತ್ಕ್ರಿಯಾ ಅಪಿ ।*
*ಪ್ರಕಾಶಂತೇ ಹಿ ಭಗವದ್ರೂಪಾಂತರ್ಭಾವತಃ ಕ್ವಚಿತ್ ।*

ಎಂತ ಸತ್ತತ್ತ್ವರತ್ನಮಾಲಾ

ಇಷ್ಟು ತಿಳಿದ ಬಳಿಕ ಚತುರ್ಗುಣೋಪಾಸನೆ ಸುಲಭವಾಯಿತಷ್ಟೆ, ಎಂದರೆ ಈಗ ತಿಳಿದದ್ದು ಸರ್ವಥಾ ಉಪಾಸನೆಯಲ್ಲ. ಏಕೆಂದರೆ ಉಪಾಸನಾಭಾವ. ಪ್ರಕಾಶ ಸೌಂದರ್ಯೋಪೇತ ಗುಣಪೂರ್ಣಸದ್ರೂಪೀ ಎಂಬ ಪ್ರಥಮ ಗುಣ ಧ್ಯಾನಿಸುವಾಗಲೇ ಮರೆಯದ ಹಾಗೆ ಮಿಕ್ಕ ಪೂರ್ವೋಕ್ತ ಮೂರು ಗುಣಗಳನ್ನೂ ಅಲ್ಲಿಯೂ ಅಂತರ್ಭಾವ ಗುಣಗಳನ್ನೆಲಾ ಧಾರಣೆ ಮಾಡಬೇಕು ಎಂತ ಅರ್ಥ. ಧಾರಣೆ ಎಂದರೆ ಸತ್ ಎಂದು ಚಿಂತಿಸುವಾಗ ಜ್ಞಾನರೂಪೀ ಎಂಬುದನ್ನು ಮರಿಯೋಣ ಅಥವಾ ಆನಂದರೂಪೀ ಎಂಬುದನ್ನು ಮರೆಯೋಣ ಹೀಗೆ ಮಧ್ಯೆ ಎರಡು ಮೂರು ಗುಣಗಳನ್ನು ಮರೆತು ಮರೆತು ಬುದ್ಧಿಗೆ ಹಿಡಿಯದ ಹಾಗೆ ಆಗ ಬರದಾದುದರಿಂದ ಇವನ ಭಕ್ತಿಯ ವೇಗದಿಂದಲೂ ಬುದ್ಧಿ ಬಲದಿಂದಲೂ ಭಗವದನುಗ್ರಹದಿಂದ ಧಾರಣೆಗೆ ನಿಲ್ಲ ಬೇಕಾದುದರಿಂದ ಇದನ್ನು ಬಾಯಿಯಿಂದ ಹೇಳೋಣವೂ ತಿಳಿಯೋಣವೂ ಉಪಾಸನೆಯಾಗಲಾರದು. ಪ್ರಮಾಣ:– "ಆನಂದಾದಿ ವಿಶೇಷಾಣಾಂ ಸ್ಮೃತಿಮಾತ್ರಂ ನ ಧಾರಣಂ" ಎಂತ ರತ್ನಮಾಲಾ. ಅಂದರೆ ಆನಂದರೂಪೀ ಎಂಬ ಧ್ಯಾನದಲಿ ಮೋದ ರೂಪೀ ಪ್ರಮೋದರೂಪೀ ಎಂತಲೂ ಜ್ಞಾನಿ ಎಂಬ ಧ್ಯಾನದಲಿ ವಿಜ್ಞಾನ ರೂಪೀ ಪ್ರಜ್ಞಾನರೂಪೀ ಇತ್ಯಾದಿಗಳನು ಧಾರಣ ಮಾಡಕೂಡದು. ಧಾರಣೆಯೇ ಉಪಾಸನೆಯಾದುದರಿಂದ ಸ್ಮರಣ ಮಾತ್ರವೇ ಮಾಡತಕ್ಕದ್ದು. ದೇವತೆಗಳಿಂದ ಅವುಗಳು ಧಾರಣೆ ಮಾಡತಕ್ಕದ್ದೆ ಎಂತ ಹೇಳಿದ್ದ ಪ್ರಯುಕ್ತವೇ ಚತುರ್ಗುಣೋಪಾಸಕ ಎಂದರೆ ಚತುರ್ಗುಣಗಳ ಧಾರಣ ಮಾಡತಕ್ಕವನು, ಎಂತ ಅರ್ಥವು. ಹೀಗಾದರೆ ಸುಳಾದಿಯಲ್ಲಿ "ಮೋದ ಸುಖಾನಂದ ಪೂರ್ಣ ಸಂತೋಷ ಪ್ರಮೋದ ಪಾರವರ್ಯಪಾವನ್ನ ಪ್ರಿಯ ಅಹ್ಲಾದ ಜ್ಞಾನ ವಿಜ್ಞಾನ ಪ್ರಜ್ಞಾನ ಸಮ್ಮೋದ ಸಮ್ಯಕ್ ಜ್ಞಾನ" ಎಂತ ಜೀವಾಖ್ಯ ಸುಳಾದಿಯಲ್ಲಿ ಹೇಳಿದ್ದಾರಲ್ಲ ಎಂದರೆ ಸ್ಮರಣಾರ್ಥವಾಗಿ ಹೊರತು ಧಾರಣೆ ಮಾಡೋಣ ಪರಮ ಅಸಾಧ್ಯವಾದುದರಿಂದ ನಮಗೆ ಪ್ರತ್ಯವಾಯದಿಂದ ಈ ದೇವತೆಗಳೇ ಅದಕ್ಕೆ ಅರ್ಹರಾದರು.

ಆಕ್ಷೇಪ:– ಈ ಪ್ರಕಾರ ಬಿಂಬೋಪಾಸನೆಯ ನಿಬಂಧನೆಯು ಪ್ರತಿಮಾ ಪೂಜಾ ಸುಳಾದಿ ಪ್ರಕಾರ ಬಾಹ್ಯ ಪ್ರತಿಮಾ ಪ್ರತಿಮಾಪೂಜೆಯ ನಿಬಂಧನೆಯನ್ನು ಕೂಡಾ ಸೇರಿಸಿ ಇರುವುದಕ್ಕೆ ಬಾಧಕ ಪೊತ್ತಂತೆ ಏನೆಂದರೆ, ಸುಳಾದಿ ಅಣುವೆಂದು

ನಿನ್ನ ನಾನು ಘನವಾಗಿ ಪೂಜಿಸುವೆನೆ, ಅಣುವಲ್ಲ ಅಣುವಲ್ಲ, ಅಬುಜನಲ್ಲಿ ಘನವೆಂದು ನಿನ್ನ ಘನವಾಗಿ ಪೂಜಿಸುವೆನೆ - "ಅಣು ಮಾತು ರಾರ್ಚಿಸುವೆವೆ, ಘನಘನವಲ್ಲ, ಘನ ಸದೃಶ. ಅಣುವಲ್ಲ ಘನವಲ್ಲ ಗುಣಗಣ ನಿಲಯನೇ" ಎಂತ ಪ್ರಾರಂಭ ಮಾಡಿ ಸುಳಾದಿ ಮುಂದಿನ ವಚನ "ಪೊಡವಿಯೇ ಸಿಂಹಾಸನ ಕೊಡೆಯೇ ಗಗನ ನಿನಗೆ ಮಾಡುವೆನೋದಕ ಗೋವುಕೊಡುವ ಪಾಲು ಅಭಿಷೇಕ" ಎಂತಲೂ

ಬಿಡದೆ ತಿರುಗುವ ರವಿ ಕಡಲ ಸುತನು ದೀಪ ವಡೆಯ ತಾರೆಗಳು ನಿನಗೇವೇ ಆಭರಣಗಳು, ಕೊಡುವ ಕಪ್ಪಗಳು ನಿನಗಿದು ಕಾಣಿಕೆ ದೇವ। ಬಡಿವಾಣವೆಲ್ಲ ಅಂಗಡಿಯ ಪದಾರ್ಥವು ಸುಡುವದಾವಾಗ್ನಿಯು ಕಡತೇಜದಾರತಿ। ಅಡಿಗಡಿಗೆ ಸಂಶಂಯವಿಡದಲೆ ನಾನು। ತಡೆಂಯದೆ ಮನದಲಿ ಕೊಡುವೆನರ್ಪಿತವೆಂದೂ" ಎಂತಲೂ ಅದರ ಮುಂದೆ

. "ಎತ್ತಣ ಸಮರ್ಪಣೆ ಎತ್ತಣ ಪದಾರ್ಥವು ಎತ್ತಲಿಂದ ಶ್ರೀಹರಿಯು ಎತ್ತರ ತೃಪ್ತನಾಹನೆಂದು ಚಿತ್ತದಲ್ಲಿ ಖೇದಗೊಂಡೂ ಕತ್ತಲಾಗೋಂಬುವುದಲ್ಲಿ ನಿತ್ಯ ಭಕ್ತಿ ಇಲ್ಲದವನೂ ಹತ್ತೀಲಿ ಪದಾರ್ಥವೆಲ್ಲ ಚಿತ್ತಾಗಿ ಇರಿಸಿಕೊಂಡೂ ಸುತ್ತಲೂ ಸಮರ್ಪಣೆಯೆಂದು ಇಂತ ನಲಿದಾಡಿದರೆ ಉತ್ತಮ ಶ್ಲೋಕನು ಒಪ್ಪಾ। ಚಿತ್ತ ಶುದ್ಧನಾಗಿ ಕರವೆತ್ತಿ ಬಲುದೀನನಾಗಿ ಅತ್ತಲಿದ್ದ ಉದಕಾದಿ ಅತ್ತಲರ್ಪಿತವೆನು। ಚಿತ್ತಜಪಿತನ ಮೆಚ್ಚಿ ಚಿತ್ತದಲ್ಲಿ ಒಪ್ಪಿಕೊಂಡು। ಹತ್ತಕ್ಕೆ ನೂರಾರು ಮಾಡಿ ಬಿತ್ತಿ ಬೆಳಿಸಿ ಉಣಿಸುವ । ಇತ್ತ ಬರುವ ಭವದೂರ ವಿಜಯವಿಠಲರೇಯ। ಎತ್ತಲಾದರೇನೋ ತನ ಭೃತ್ಯನೆಂದೊಡಂಬಡುವ"

ಎಂತಲೂ ಸುಳಾದಿಯಲ್ಲಿ ಹೇಳಿದ ಪ್ರಕಾರ ಚಿಂತಿಸದೆ ಇದ್ದರೆ ಶ್ರೀಹರಿಯು ಒಪ್ಪುವುದಿಲ್ಲ ಎಂತಲೂ ಹೀಗೆ ಚಿಂತಿಸಿದರೆ ಮೆಚ್ಚುತ್ತಾನೆ ಎಂತಳೂ ಧೂಪ ದೀಪಾದಿ ಪೂಜಾ ನಿಬಂಧನೆ ಮಾಡಿಕೊಂಡಿರುವವನೆ ಭಕ್ತಿ ಶೂನ್ಯ ಎಂತಲೂ ಆದರಿಂದ ಶ್ರೀ ಹರಿಯು ಸರ್ವಥಾ ಮೆಚ್ಚುವುದಿಲ್ಲವೆಂತಲೂ ನಿಬಂಧನೆಯನ್ನೇ ವ್ಯರ್ಥ ಮಾಡಿದ್ದಾರಾದುದರಿಂದ ಮತ್ತು ಹರಿಕಥಾಮೃತಸಾರದಲ್ಲಿಯೂ ಇದೇ ಪ್ರಕಾರ ಹೇಳಿ "ಎಲ್ಲರು ಚಾಮರ ಶಬ್ದ ವಾದ್ಯಾದಿಗಳರ್ಪಿಸಲು ವಲಿವ" ಎಂತ ಹೇಳಿದ್ದಾರೆ. ಮತ್ತೊಂದು ಕಡೇ ಜಗನ್ನಾಥದಾಸರು

"ಸತ್ಯ ಸಂಕಲ್ಪ ಜಗದತ್ಯಂತ ಮಹಿಮ ಸರ್ವೋತ್ತಮೋತ್ತಮನೆ ಸುಖ ಪೂರ್ಣ ಸುಖಪೂರ್ಣ ನೀ ಎನ್ನ ಚಿತ್ತದಿಂದಗಲದಿರು ಕಂಡ್ಯಾ। ಮಳೆಯೇ ಮಜ್ಜನವೋ ದಿಗ್ವಲಯಂಗಳೇ ವಸನ ಬೆಳೆದ ಬೆಳಸುಗಳೇ ನೈವೇದ್ಯ । ನೈವೇದ್ಯ ಭಾಸ್ಕರನ ಕಾಂತಿಯೇ ನಿನಗೆ ಆರತಿ । ಧರಣಿರುಹ ಚಾಮರ ವರೂಥವು ನಿನಗೆ । ಸರಸ ಘೋಷಣಗಳೇ ಮಹವಾದ್ಯ । ಮಹವಾದ್ಯ ಜೀವರ ಸ್ವರಗಳೇ ನಿನಗೆ ಸಂಗೀತ। ನಕ್ಷತ್ರ ಮಂಡಲವೆ ಲಕ್ಷದೀಪವು ನಿನಗೆ ದೃಕ್ಷೇಶ ತರಣಿ ಆಕಾಶ । ಆಕಾಶ ದೀಪಗಳು । ವೃಕ್ಷದಲ್ಲೀವೆ ಫಲ ಪುಷ್ಪ ಪಾತಾಳ ಪಾದುಕ । ವಿಧಾತೃ ಲೋಕವೇ ಮುಕುಟ ಶ್ವೇತ ದ್ವೀಪವೇ ವಡ್ಯಾಣ್ಯ ವಡ್ಯಾಣ್ಯ ವೈಕುಂಠ ಆತಪತ್ರವೇ ನಿನಗೇವೇ"

ಎಂದು ಇಂಥ ಪರಮೈಕೋಪಾಸನೆಗೆ ಸಕಲ ನಿಬಂಧನೆಯೂ ವ್ಯರ್ಥವಾಯಿತಷ್ಟೆ ಅಂದರೆ ಸಿದ್ಧಾಂತ– ಇದು ಶುದ್ಧ ಬಿಂಬೋಪಾಸನೆಯೇ ಹೊರತು ಸರ್ವಥಾ ಹಾಗೆ ತೋರುವುದಿಲ್ಲವಲ್ಲ ಎಂದರೆ, ಈ ಸುಳಾದಿಯ ಮರ್ಮ "ತಡಯದೆ ಮನದಲ್ಲಿ ಕೊಡುವೆನರ್ಪಿತವೆಂದು" ಎಂತ ಹೇಳಿರುವುದರಿಂದ ಅದನ್ನೇ ಉದ್ದೇಶ ಮಾಡಿ ಜಗನ್ನಾಥದಾಸರ "ನೀ ಎನ್ನ ಚಿತ್ತದಿಂದಗಲದಿರು ಕಂಡ್ಯಾ" ಎಂತ ಹೇಳಿದ್ದೇ ಮರ್ಮೋಕ್ತಿಯಾದುದರಿಂದ ಪೂರ್ವೋಕ್ತ ರೀತಿಯಿಂದ ಕೇವಲ ಭಗವದೈಶ್ವರ್ಯ ಯೋಗದಿಂದ ಪರಿಚ್ಛೇದಸ್ತಥಾವ್ಯಾಪ್ತಿರೇಕರೂಪೋಪಿ ಯುಜ್ಯತೇ । ವಿಷ್ಣು ಅಂಗುಷ್ಠ ಪ್ರಮಾಣ ವಿಶ್ವ ವ್ಯಾಪಕನಾಗಿ ಎಂತ ಅತಿ ವಿಸ್ತರದಿಂದ ಬರೆದಿರುವ ಕ್ರಮದಿಂದ ಸತ್ಯಲೋಕದಲ್ಲಿ ಬ್ರಹ್ಮದೇವರ ಭೋಜನಾದಿ ಕ್ರಿಯೆಗಳನ್ನು ಕೂಡಾ ಸ್ವತ ಏವ ವ್ಯಾಪ್ತನಾಗಿದ್ದನವೇ ಬಿಂಬನೇ ಸ್ವೀಕರಿಸುತ್ತಾನೆ ಎಂತ ಮಾನಸ ಪೂಜೆ ಮಾಡು ಎಂಬ ಸುಳಾದಿಯ ಕ್ರಮಕ್ಕೆ ಸಾಕ್ಷಾದ್ಬಿಂಬಾರ್ಪಣವನ್ನು ಚಿಂತಿಸುವುದರಿಂದ ಈ ಬಿಂಬಾಂಶವನ್ನು ಹೊರಗಿನ ಪಂಚಲೋಹ ಬಿಂಬಾರ್ಚನೆಗೆ ತೆಗೆದಿಡದೆ– ಆ ಪೂಜೆ ಹೇಗೆ ನಿಷಿದ್ಧವೋ ಈ ಚಿಂತನೆಯೂ ಅದೇ ಪ್ರಕಾರ ಸರ್ವಾಕಾರನಾದನವೇ ಬಿಂಬಗೆ ಇದೇ ಸಾಕ್ಷಾದರ್ಚನ ಎಂತ ತಿಳಿಯೋಣ ಕೇವಲ ಯುಕ್ತವಾದ ಪ್ರಯುಕ್ತ – ಎತ್ತಲಾದರೇನು ತನ್ನ ಭೃತ್ಯನೆಂದರೆ ಒಡಂಬಡುವ ಎಂತ ಹೇಳಿ ಇದ್ದಾರೆ. "ಎತ್ತಲಾದರೇನು" ಎಂದರೆ ಪಂಚಲೋಹದಲ್ಲಿ ಅಂಶವನ್ನು ಇಟ್ಟಿದ್ದೇನೋ ಅದೇ ಪ್ರಕಾರ ಬಿಂಬರೂಪಿಯನ್ನು ಎತ್ತ ನೋಡಿದರೆ ಏನು ಎಂತ ಅರ್ಥ.

ಇದೂ ಕೂಡ ಪೂರ್ವೋಕ್ತ ಗೋಪ್ಯ ಮರ್ಮಗಳಿಗೆ ಸೇರಿದ ಮರ್ಮವಾದುದರಿಂದ ಹೀಗೆ ಚಿಂತಿಸುವವನಿಗೆ ಹತ್ತಕ್ಕೆ ನೂರು ಮಾಡಿ ಬಿತ್ತಿ ಬೆಳಸಿ ಉಣಿಸುವ ಇತ್ತ ಬರುವೆ ಭವದೊರೆ ಎಂತ ಸಂಪೂರ್ಣ ಭಗವದ್ಪ್ರಸಾದ ಒದಗುತ್ತದೆ ಎಂತ ತೋರಿಸಿ ಇದ್ದಾರೆ. ದೇಶ ಭೊಕ್ತಾ ಜಗನ್ನಾಥ ಸ್ವದ್ಗತಾಖಿಲ ಧರ್ಮ ಭುಕ್। ಅನಾದಿ ಕಾಲ ಸಂಸ್ಥಾನ ಭೋಕ್ತಾನವರಕೋ ವಿಭು॥ ಗೋ ಗಜಾಶ್ವಾದಿ ಪುತ್ರಾಪ್ತ ಬಂದ್ಯೈಶ್ವರ್ಯಾದಿಭಿರ್ಹರಿಃ । ಉಪಾಸನಾ ಜ್ಞಾನ ಭಕ್ತಿ ವೈರಾಗ್ಯ ಮುಖ ಭುತ್ಪ್ರಭುಃ । ಗ್ರಹವಿತ್ತ ಸಭಾರಾಮ ನದ್ಯಬ್ಧ್ಯದ್ರಾದಿ ಭುಕ್ತಧಾ। ಇತಿ ಸತ್ತತ್ವರತ್ನಮಾಲಾ

ಭಗವನ್ಮಹಿಮೆಗೆ ಈ ಪ್ರಮಾಣ ರಹಸ್ಯಕ್ಕೆ ಶೌನಕ ಸ್ಮೃತಿ. ಈ ಮಾನಸೋಪಾಸನೆಯಲ್ಲಿ ಇನ್ನೊಂದು ವಿಶೇಷವಿದೆ- ಅದು ಏನೆಂದರೆ ಮನಸ್ಸಿನಿಂದ ಕಲ್ಪಿಸುವ ವಸ್ತ್ರಾಭರಣ ಗಂಧ ತುಲಸೀ ಪುಷ್ಪ ಉದಕಾದಿ ಮತ್ತು ಕಸ್ತೂರಿ ಪುನಗು ಕೇಸರ ಮೊದಲಾದ ಸಕಲೋಪಕರಣ ಪಾತ್ರೆಗಳು ಭಕ್ಷ್ಯ ಭೋಜ್ಯಾದಿ ತಾಂಬೂಲ ದರ್ಪಣ ಛತ್ರ ಚಾಮರಾದಿ ಪದಾರ್ಥಗಳನ್ನು ಕಲ್ಪಿಸ ಬೇಕಷ್ಟೆ. ಅದಕೆ ಈ ಉಪಾಸ್ಯ ಪ್ರಾಜ್ಞನ ಹಿಂಭಾಗದಲ್ಲಿ ಇದ್ದ ಕಲ್ಪವೃಕ್ಷ ಕಾಮಧೇನು ಚಿಂತಾಮಣಿ ಇವು ಮೂರು ಮಧ್ಯಮಾಧಮ ದೇವತಾ ತಾರತಮ್ಯದಲಿ ಘಟಿತವಾಗಿದೆಯಷ್ಟೆ. ಅವುಗಳು ಶ್ರೀಹರಿ ಯೋಗ್ಯ ಪದಾರ್ಥಗಳು ಮೊದಲು ಮಾಡಿ ಪುಷ್ಕರಾಂತ ದೇವ ಯೋಗ್ಯಗಳಾದ ವಿಶಿಷ್ಟ ಪದಾರ್ಥಗಳನ್ನೂ ಇವನು ಬೇಕು ಎಂತ ಚಿಂತಿಸಿದ ಕಾಲದಲ್ಲೇನೆ ವೃಷ್ಟಿಕರಿಯುತ್ತಾ ಇರೋಣವೇ ಅವುಗಳ ಕಾರ್ಯವಾದುದರಿಂದ ಇವು ಮೂರೂ ಸಾಂಶ ಜೀವರುಗಳೆಂದು ಸುಳಾದಿ ಸಿದ್ಧ.

"ಕಾಮಧೇನ್ವಾದೀನಾಂ ಅಂಶ ವಿಭಾಗ ವಿಷಯೇ ಗುರೂಕ್ತಂ ನಸ್ಮರ್ಯತೇ ತಚ್ಚಿಂತ್ಯಂ" ಎಂತ ತಾಮ್ರಪರ್ಣೀಯ ಶ್ರೀನಿವಾಸ ತೀರ್ಥೀಯ ಬೃಹತ್ತಾರತಮ್ಯ ಟಿಪ್ಪಣೀ ವಚನ॥ "ಸ್ಪಷ್ಟವಾಗಿ ಅಂಶ ವಿಭಾಗ ಉಂಟೆಂಬುವುದಕ್ಕೆ ಸೊಲ್ಲು ಕಲ್ಪವೃಕ್ಷದ ಕೆಳಗೆ ಸುವರ್ಣ ಪೀಠ ಸಿಂಹಾಸನ" ಎಂತ ಪುರಂದರ ದಾಸರ ಹೃದಯಕಮಲ ಸುಳಾದಿ.

"ಸುರ ತರು ಕೆಳಗೆ ಫಣಿಮಂಚ" ಎಂತ "ಗುಪ್ತಾರ್ಚನೆ ಸುಳಾದಿ." ತೋರುತಿಹ ಕಲ್ಪತರು ಅದರ ಮೇಲೆ ಎಂತ ಮನಮೂರ್ತಿ ಸುಳಾದಿ. ಕಲ್ಪರೂಪ ಲಕ್ಷಣೆಯೂ, ಚಿಂತಾಮಣಿ ಕಾಮಧೇನುಗಳನ್ನು ಸಾಂಶತ್ವೇನ ತಿಳಿಯತಕ್ಕದ್ದು. ಕಾಮಧೇನು ನಿನ್ನ ಉಪ್ಪರಿಗೆ ಗೃಹಾದಿಗಳು ಬೇಕೆಂದು ಕೇಳಿದಾಗ್ಯೂ ಅದರ ಮುಖದಿಂದ ಕಾರೋಣ ಈ ಪ್ರಸಾದೋದ್ಗಿರಣಾದಿಗಳಿಗೆ ಪ್ರಮಾಣವೆಲ್ಲಿ ಅದೆ ಎಂದರೆ,

"ಸೌಧಾನಿ ಸುರಭಿರ್ಲೋಕೇ ಗಿಳತ್ಯ ಗಿಳತಿ ಸ್ವಯಂ । ದದೃತ್ಯಪ್ಯಖಿಲಾನ್ಕಾಮಾನ್ ತಥಾಯಂ ಭಗವಾನ್ಹರಿಃ । ಅತಿ ದೌರ್ಘ್ಯಟ್ಯ ಕರಣಂ ಜ್ಞಾಪನಾಯ ಚ ಸೃಷ್ಟವಾನ್। ಜಡೈಶ್ಚೇತನ ಕೃತ್ಯಾನಿ ಚೇತನೈಶ್ಚ ಜಡಕ್ರಿಯಾಂ । ಅಹಂಕಾರಯಿತುಂ ದಕ್ಷ ಇತಿ ಜ್ಞಾನಾಯ ಸ ಪ್ರಭುಃ । ಚಿಂತಾಮಣಿಂ ಕಲ್ಪತರುಂ ಪರ್ವತಾನ್ ಸೃಷ್ಟವಾನ್ ಹರಿಃ।" ಎಂತ ಶಾಂಡಿಲ್ಯ ತತ್ವ ಸಪ್ತದಶಾಧ್ಯಾಯಃ

ಸುಳಾದಿ–

*" ಗ್ರಂಥದಲ್ಲಿ ಉಂಟು ಮುಕುತಿಗೆ ಸೋಪಾನ ಎಂತಲೂ ಇಂತೆ*
*ಪೇಳಿದ ವ್ಯಾಪ್ತತ್ವವ ತಿಳಿದು ।*
*ಅಂತರಂ ನವ ಪೂಜೆ ಕೇವಲ ಪ್ರೀತಿ ಏಕಾಂತದಲ್ಲಿ ಮಾಳ್ಪ*
*ಉನ್ನತೋನ್ನತದ ಆತ್ಮ*
*ಅಂತರಾತುಮನು ಮೂರ್ತಿ ಎರಡು ಅಭೇದದಲ್ಲಿ ಅಂತರಂಗದಲಿ*
*ನಿಲಿಸಿ ವಲಿಸೀ*
*ಎಂತು ಹೇಳಲಿ ಈ ಮನದಲಿ ಸರಸ್ವತಿಕಾಂತಾಂಡ ತುಂಬಿ ಇದೆ*
*ಧ್ಯಾನ ಮಾಡೆ ।*
*ಕಂತುಪಿತನ ಪೂಜೆ ಮಾಳ್ಪ ಲಕ್ಷಣ ಆದ್ಯಂತ ಕಾಲದಲ್ಲಿರತಕ್ಕದೆಂದು*
*ಚಿಂತಾಮಣಿ ಕಾಮಧೇನು ಕಲ್ಪವೃಕ್ಷ ನಿಂತಿವೆ ಮನದಲ್ಲಿ ಅಂಶಿ ಅಂಶ*
*ಚಿಂತಿಸು ಪ್ರಾರ್ಥಿಸು ಕಲ್ಪಿಸು ಮುದದಿಂದ। ಇಂಥ ಪವಿತ್ರ ಷಡುರಸ*
*ಪದಾರ್ಥ*
*ಅಂತು ಇಲ್ಲದೆ ಸೂಕ್ಷ್ಮತರವಾಗಿ ಕೂಡುವವೋ ।*

*ಶಾಂತ ದಾಂತ ಸೂಚಿತ ತರತವೆ ಭಕ್ತಿ ಜ್ಞಾನ*
*ವಂತಗೆ ವೇಗದಿಂದ ಉಪಾಸನಾಮಯಾದಿ ।*
*ಇಂತು ಸುಪೂಜೆ ಮಾಡು ಆವಾವ ಬಗೆಯಿಂದಾ*
*ವೆಂತ ಕಾಲಕ್ಕೂ ಬಿಡದೆ ಯೋಚನೆಯಿಂದ ।*
*ನಿಂತಲ್ಲಿ ಕುಳಿತಲ್ಲಿ ಮಲಗಿ ತಿರುಗಾಡುವಲ್ಲಿ*
*ಇಂತಾದ್ದೇ ಕೈಗೊಂಡು ಕರ್ಮವೂ ತೊರೆಯೋ ।*
*ಸಂತೆಕೂಟದ ಪೂಜೆಯಾತಕ್ಕೆ ಪ್ರಯೋಜನ*
*ಭ್ರಾಂತಿಅಲ್ಲದೆ ಅಲ್ಪ ಸುಖವಹದೋ ।*
*ಅಂತಿಕಂತೇಕ ಪೂಜೆ ಮಹಿಮೆಯ ನಿರ್ಜರರ*
*ಸಂತತಿ ಮೆಚ್ಚಿಕೊಂಡು ಕೂಡರು ಕೇರೂ । "*

ಎಂದರೆ ಪರ್ಯವಸನ ಕಾಲವುಳ್ಳ ಬಾಹ್ಯ ಪೂಜೆಯು ಮುಖ್ಯ ಸಾಧಕವಲ್ಲ- ಎಂತ ಅರ್ಥ.

ಮುಂದಿನ ಮಾತು.

"ಅಂತಕ ನಗರಿಯ ಭಯ ಶೋಕ ಆದಿ ಮಧ್ಯಾಂತದಲ್ಲಿ ಎಲ್ಲ ಕಾರ್ಯದಲ್ಲಿ ಎಂತು ಕೊಂಡಾಡಲಿ. ಧ್ಯಾನ ಸಾಧನ ಪೂಜಾವಂತನ ಎಣಿಸಲಾಗಿ।"

"ಅಂತ್ಯಕಾಲಕ್ಕೆ ಕೇಳು ಕಠಿಣವಾಗಿದ್ದ ಹೃದಯಗ್ರಂಥಿ ಭೇದಿಸುವುದಕ್ಕೆ ಇದೆ ಇದೆ ಉಪಾಯ । ಚಿಂತೆ ಅಲ್ಪ ಯೋಗ್ಯತೆ ನಿನಗೆ ತಿಳಿದಷ್ಟು ಸತ್ಪಂಥ ಬಯಸುವ ಇದನೆ ನ್ಯಸಗಿ । ಪಂಥವ ಬಿಡು ಬಿಡು ಬಾಹ್ಯಾರ್ಚನೆಗೆ ಈ ಅಂತರಂಗದ ಪೂಜೆ ಕೂಡದಲೆ ಅಂತರೀಕ್ಷವಿಲ್ಲದೆ ಫಲವಿಲ್ಲ"

"ಆವಾಹಯೇದ್ಬಿಂಬ ರೂಪಂ ಹೃದಯೇ ಸ್ವರ್ಚಿತಂ ಪ್ರಭುಂ" ಎಂತಲೂ ಅಂತರಾರ್ಚನೆಯನ್ನು ಹೊರತು ಶುದ್ಧ ಬಾಹ್ಯಾರ್ಚನೆಗೆ ಆವಾಹನೆಯೇ ಕೂಡದಾದುದರಿಂದ ಅದು ಆರಣ್ಯ ರೋದನಕ್ಕೆ ಸಮ । ಎಂತ ಅರ್ಥ. ಮೂಲ ಗ್ರಂಥಕಾರರು ಅಂತರಪೂಜೆ ಬಿಡಕೂಡದೆಂದು ಎಲ್ಲಿ ಹೇಳಿ ಇದ್ದಾರೆ ಅಂದರೆ ಯತಿ ಪ್ರಣವ ಕಲ್ಪದಲ್ಲಿ ಸಿದ್ಧ. ಸುಳಾದಿ ಮುಂದಿನ ಮಾತು.

*ಅಂತರಿಕ್ಷವಿಲ್ಲದೆ ಫಲವಿಲ್ಲ ನಿರ್ಜಲದ*
*ಕಾಂತಾರದೊಳು ಪೊಕ್ಕು ಆಳಲಿದಂತೆ ।*
*ದಂತಿಯ ದಾಡಿಗೆ ತೂಗಿ ಬಿದ್ದಂತೆ ವಿ*
*ಶ್ರಾಂತನಾಗುವ ಜನ್ಮ ಧರಿಸುವನೋ ।*
*ದಂತೆ ರುಚಿ ಒಂದು ಸ್ಮರಿಸಿ ಕೂಡಿಸಲಾಗಿ*
*ಸಂತಸವಾಗುವುದೇ ರಸ ತಿಳಿವುದು ।*

ಅಂದರೆ ಬಾಹ್ಯಾರ್ಚನೆಯು ಜಿಹ್ವಾ ಚಪಲದ ಅತಿ ನಶ್ವರದ ರಸ ಭೋಜನದ ಸಮ ಎಂತ ತೋರಿಸಿದರು. ಮುಂದಿನ ಮಾತು.

*"ಮಂತ್ರ ತಂತ್ರೋಪಕರಣ ನಾನಾಚಿತ್ರ ವಿಚಿತ್ರ ಚಿಂತನೆ ಮಾಡುವಳಗೆ ಪ್ರಾಣಾಂತಸ್ಥಂ ದಂತಿ ವರದ ನಮ್ಮ ವಿಜಯವಿಠಲರೇಯ ಕುಂತಿ ಮಕ್ಕಳಿಗೊಲಿದಂತೆ ವಡನೆ ತಿರುಗುವ । ಜತೆ। ಸಂಚಿತಾಗಾಮಿ ನಾಶ ಪ್ರಾರಬ್ಧವುಪಮರ್ದ। ಪಂಚ ಪ್ರಾಣೇಶ ಶಿರಿ ವಿಜಯವಿಠಲ ಸಂವ್ಮೊಗ॥"*
ಎಂತ ಸಂಪೂಜಾದಿ ಸುಳಾದಿ.

ಇದರಲ್ಲಿ ವಿವರ. ಇಂಥಾ ಮಾನಸ ದಿವ್ಯ ಪದಾರ್ಥಗಳಲ್ಲಿ ಚಿಂತನೆ ಹೇಗೆಂದರೆ–

ಈ ಪದಾರ್ಥಗಳು ಸರ್ವವೂ ಮಾನಸಿಕ ಜಡವಾದುದರಿಂದ ಹೊರಗಿನ ಪದಾರ್ಥ ಹೇಗೋ ಹಾಗೆ ಆದ್ದರಿಂದ ಗರುಡ ದೇವರೇ ಸೂಪ ಕಾರಣನಾದನು ಕೇಳಿ. ಸರಸ್ವತೀ ದೇವಿಯೇ ಕ್ಷೀರ ಮಂಡಿಗೆ ಬ್ರಹ್ಮ ಉರುಗೇಂದ್ರ ಕುಂಡಲಿದ್ವಯನಾಗಿ ಕರ್ಣದಲ್ಲಿ ವರ ಮಕುಟ ಶಿರಿದೇವಿ ಪ್ರಕಾಶವೋ ಸುರಪತಿ ಮೊದಲಾದ ತಾತ್ವಿಕ ಜನರು ಆಭರಣವಾಗಿಪ್ಪರೋ ಪರಿಪರಿಯಿಂದ ಮರುತ ಜೊಂಡಾರತುನ ಗೋಪೀ ಚಂದನ ಕಾಮ ಸರಸಿಜ ಭವ ಸುತರು ಮನು ದಕ್ಷ ಪ್ರಜೇಶ್ವರ ಸಂಡಿಗೆ ಮಾಷ ಭಕ್ಷವಾದರು ಹರಿಗೆ" ಎಂತ ಹಿಂದೆ ಹೇಳಿದ ಧ್ಯಾನ ಪ್ರಕರಣ ಸುಳಾದಿ.

ದಿಗಳಿಂದಲೂ ಆ ಜಡದಲ್ಲಿ ಭಗವತ್ಸೇವಾರ್ಥವಾಗಿ ದೇವತೆಗಳು ತತ್ತದಾಕಾರವಾಗುತ್ತಾರೆ. ಅವುಗಳಲ್ಲಿ ರಸ ಭೇದವೆಷ್ಟು ಅಂದರೆ –ಒಂದು ಬಿಂದು ಉದಕದಲ್ಲಿಯೇ ಶುದ್ಧ ಭಗವದ್ಯೋಗ್ಯ ಉದಕ ರಸ ಒಂದು–ಲಕ್ಷ್ಮೀ

ಯೋಗ್ಯ ರಸ ಒಂದು ಬ್ರಹ್ಮಾದಿ ಸರ್ವ ತತ್ವಾತ್ಮಕಗಳಾದ ೨೪ ರಸಗಳು ಪೃಥ್ವೀ ರಸ ಜಲಸಾರ ತೇಜಸ್ಸಾರ ಹೀಗೆ ಅವ್ಯಕ್ತಸಾರದ ತನಕ ಇರುವುದೇ ಸಿದ್ಧ.

ಸುಳಾದಿ:– "ಪುತ್ರ ಜನಕರೊಬ್ಬ ಸುಂದರ ನಾರಿಯ ಸ್ಪರ್ಶ ಮಾಡಿದ ಹಾಗೆ ಮಾತೃ ಭಾವ ಒಬ್ಬನಿಗೆ ಪತ್ನೀ ಭಾವ ಒಬ್ಬನಿಗೆ ತತ್ವೇಶ ಜೀವಗೆಲ್ಲ ಸಮಸ್ತ ರಸದ ಜ್ಞಾನ ಪ್ರತ್ಯೇಕ ಪ್ರತ್ಯೇಕವಿಪ್ಪದ್ಯೆಯ್ಯ ।" ಎಂತ ಭೋಜನ ಪ್ರಕರಣ ಸುಳಾದಿ. ಪ್ರತಿಮಾ ಪೂಜಾ ಸುಳಾದಿಯಲ್ಲಿಯೂ ೨೪ ಸಾರಗಳು ಉಂಟು ಎಂತ ಹೇಳಿ ಇದ್ದಾರೆ. ಹೀಗೆ ೨೪ ರಸಗಳೂ ಅಂತರ್ಭೇದವಿದ್ದಾಗ್ಯೂ ವ್ಯವಹಾರಕ್ಕೆ ದೇವತೆಗಳ ರಸ ಒಂದು ಎಂತಲೇ ವ್ಯವಹರಿಸುತ್ತಾರೆ. ಏತೇನ ಮಾನಸ ಪದಾರ್ಥದಲ್ಲಿ ಜಡ ರಸ ರಮಾಸ್ವರಸ ಭಗವದ್ರೂಪ ರಸ ಹೀಗೆ ಮೂರು ಪ್ರಕಾರ ಬಾಹ್ಯ ಸ್ಥೂಲಾನ್ನ ರಸಗಳಲ್ಲಿಯಾದರೂ ಆ ದೇವತೆಗಳ ಸಮುದಾಯಾತ್ಮಕ ಒಂದು ರಸದ ಮೇಲೆ ಕವಚದ ರೀತಿಯಿಂದಲೇ ಅಪರೋಕ್ಷಿ ಭೋಗ್ಯರಸವೊಂದು ಅದರ ಮೇಲೆ ನಮ್ಮ ಸ್ಥೂಲ ಭೋಗಾರ್ಹವಾದ ರಸವೊಂದು. ಇದನ್ನು ನಮ್ಮ ಜಿಹ್ವೇಂದ್ರಿಯವೇ ತಿಳಿಸಿ ಅದೆ.

ಅಪರೋಕ್ಷ ಭೋಗ್ಯರಸ ಯಾವುದೆಂದರೆ ತಾತ್ಪರ್ಯ ನಿರ್ಣಯದ ೧೭ನೇ ಅಧ್ಯಾಯದಲ್ಲಿ "ಸಚೂರ್ಣಮಾಯ ಸಂತ್ವರ್ದರ್ಶಾಬ್ದತಃ ಶಿವಂ" ಎಂತ ಗರ್ಗಾಚಾರ್ಯರು ಕುಕಲ್ಯಾವೇಶದಿಂದ ರುದ್ರದೇವರನ್ನು ಕುರಿತು ತಪಸ್ಸು ಮಾಡಿದಾಗ ಕಬ್ಬಿಣದ ಕಿಟ್ಟದ ಪುಡಿಯನ್ನು ಒಂದು ಸಂವತ್ಸರ ಗ್ರಾಸ ಮಾಡಿ ಇದ್ದಾರೆ. ಆ ರಸದ ಅನುಭವ ಉದಕಪಾನದಿಂದ ಶಾಂತಿಯಾಗೋಣ ಅನುಭವ ಸಿದ್ಧವಷ್ಟೆ. ಸ್ನಾನ ಮಾಡುವ ಮಾತ್ರದಿಂದ ದಾಹ ಶಾಂತಿ ಅನುಭವ ಹ್ಯಾಗೋ ಹಾಗೆ ಎಂತ ಸತ್ತತ್ವರತ್ನಮಾಲಾ ಟಿಪ್ಪಣಿಯು ವಚನ. ಮುಖ್ಯ ತಾತ್ಪರ್ಯವೇನೆಂದರೆ – ಮಾನಸಿಕ ಮೂರು ಪ್ರಕಾರ. ಬಾಹ್ಯದ್ದು ಐದು ಪ್ರಕಾರ "ಏಕಸ್ಮಿನ್ ಕದಳೀ ಫಲೆ ಕೇವಲ ಭಗವದ್ಭೋಗ್ಯಾಃ ತದರಿಕ್ತ ಮಂದ ಜನ ಭೋಗ್ಯಾಃ ಇತಿ ಪಂಚ ವಿಧ ರಸ ವಿಶೇಷಾಃ ಸಂತಿ" ಎಂತ ಹೇಳುವುದರಲ್ಲಿ– ಶ್ರೀಹರಿಗೆ ಯೋಗ್ಯ ರಸವು ಶ್ರೀಹರಿಯ ಸ್ವರೂಪವೇ ಆದಪ್ರಯುಕ್ತ ಅದನ್ನು ಮಾತ್ರ ಸ್ವಾಮಿಯು ಚನ್ನಾಗಿ ಭೋಜನ ಮಾಡುತ್ತಾನ್ನೆ.

ಲಕ್ಷ್ಮೀ ಯೋಗ್ಯರಸವನ್ನು ಮೂಗಿನಿಂದ ವಾಸನೆ ನೋಡತಕ್ಕವನೇ ಆಘ್ರಾಣ ಮಾಡುವುದಿಲ್ಲ, ಏಕೆಂದರೆ ಜಡರೂಪಗಳಾದುದರಿಂದ ಹಾಗೆಯೇ ಸರಿ. ಹಾಗಾದರೆ ತನಗೆ ಬೇಡದೇ ಇದ್ದ ರಸಗಳಲ್ಲಿ ಒಂದಕ್ಕೆ ಆಘ್ರಾಣ ಮತ್ತೊಂದಕ್ಕೆ ದೃಷ್ಟ್ಯಾ ಸ್ವೀಕಾರಗಳನ್ನಾದರೂ ಯಾಕೆ ಮಾಡುತ್ತಾನೆ ಯೆಂದರೆ- ಈ ರಮಾ ಬ್ರಹ್ಮಾದಿಗಳು ಆತನ ಪ್ರಸಾದ ಭೋಜನ ಮಾಡುತ್ತಾರೆ- ಎನಿಸುವುದಕ್ಕೋಸ್ಕರ ಎಂತ ಸಿದ್ಧಾಂತ. ಇದರಲ್ಲಿ ವಿಶೇಷ ಲಕ್ಷ್ಮೀ ಸ್ವರೂಪ ಸಾರ ಬೇರೆ, ಲಕ್ಷ್ಮೀ ಯೋಗ್ಯ ಸಾರಬೇರೆ. ಮುಕ್ತ ಬ್ರಹ್ಮಾದಿ ತಾತ್ವಿಕರ ಸ್ವರೂಪ ರಸಬೇರೆ, ಮುಕ್ತ ದೇವತಾ ಸ್ವರೂಪ ಯೋಗ್ಯ ಸಾರ ಬೇರೆ. ಹೀಗೆ ಅಮುಕ್ತ ಬ್ರಹ್ಮಾದಿ ಯೋಗ್ಯ ಸಾರವೂ ಅವರ ಸ್ವರೂಪ ಸಾರವೂ ಉಂಟು. "ಸರ್ವಾತಾರಶ್ಚ ತೇ ದೇವಾಃ ಸ್ವಭೋಕ್ತಾರಶ್ಚ ಸರ್ವಶಃ । ಎಂತ ಸತ್ತತ್ವರತ್ನಮಾಲಾ।" ಅವರವರ ಎರಡು ಪ್ರಕಾರ ರಸವನ್ನು ಅವರು ಭೋಜನ ಮಾಡೋಣ ವಿಹಿತವೇ ಸರಿ ವಿಶೇಷವೆನೆಂದರೆ- ಶ್ರೀಹರಿಯು ಹೇಗೆ ತನ್ನ ಸ್ವರೂಪರಸ ಮಾತ್ರವನ್ನು ಚನ್ನಾಗಿ ಭೋಜನ ಮಾಡುತ್ತಾನೋ ಹಾಗೇವೇ ಲಕ್ಷ್ಮೀ ಯೋಗ್ಯರಸಗಳನ್ನು ಬಿಟ್ಟು ಮುಕ್ತ ಬ್ರಹ್ಮಾದಿಗಳಿಗೆ ಯೋಗ್ಯ ರಸಗಳನ್ನು ಆ ಲಕ್ಷ್ಮೀ ಸ್ವರೂಪ ಮಾತ್ರ ರಸಗಳನ್ನು ಕೇವಲ ಚಿದಾನಂದಾತ್ಮಕ ಮುಕ್ತ ಬ್ರಹ್ಮಾದಿ ಸ್ವರೂಪಭೂತ ಭಕ್ಷ್ಯ ಭೋಜ್ಯ ಫಲ ಕ್ಷೀರಾದಿಗಳನ್ನು ಚನ್ನಾಗಿ ಭೊಜನ ಮಾಡುವುದುಂಟು. ವಿಸ್ತರದಿಂದ ಫಲ ಪ್ರಕರಣ ಸತ್ತತ್ವರತ್ನಮಾಲಾ ಸಿದ್ಧ. ಹಾಗಾದರೆ ಮಾನಸ ಪದಾರ್ಥಗಳನ್ನು ಶ್ರೀಹರಿಯು ಸ್ವೀಕರಿಸದೇ ಇದ್ದ ಬಳಿಕ ಅದೇ ದೇವತೆಗಳೂ ತತ್ತದಾಕಾರವಾಗಿ ಪ್ರವೇಶ ಮಾಡುವುದಕ್ಕೂ ಉಪಯೋಗವೇನೆಂದರೆ- ಅದರ ತಾತ್ಪರ್ಯ ದೇವತೆಗಳು ತತ್ತದಾಕಾರ ಆಗದೇ ಹೋದರೆ ಸ್ವಾಮಿಯು ತತ್ತದಾಕಾರನಾಗಿ ವಿಶೇಷಸನ್ನಿಧಾನಾರ್ಥವಾಗಿ ಕೇಶವಾದಿ ರೂಪಗಳನ್ನು ಧರಿಸುವುದಿಲ್ಲವಾದುದರಿಂದ, ಆ ಭಗವದ್ರೂಪಗಳೇ ಅನ್ನಾದಿ ರಸಗಳಾದುದರಿಂದ,

*ಭುಂಕ್ತೇ ಸ್ವರೂಪಭೂತಾಸ್ತು ವಿವಿಧಾನ್ ಶುಭಾನ್।*
*ಭಕ್ಷ್ಯ ಭೋಜ್ಯ ಫಲ ಕ್ಷೀರ ಸ್ರಕ್ಚಂದನ ಮುಖಾನಿಚ ।*
*ಅನಂತೇಂದ್ರಿಯ ಸಂಭೋಗ್ಯಾನ್ ಅತರ್ಕ್ಯಾಂಶ್ಚ ರಮಾದಿಭಿಃ ।*

ಎಂತ ಸತ್ತತ್ವರತ್ನಮಾಲಾ.

ಹೀಗೆ ರಮಾದೇವಿಯರಿಂದ ಚಿಂತಿಸಲಿಕ್ಕೆ ಅಶಕ್ಯಗಳಾದ ಸಾರಗಳಿಗೆ ಅದೇ ದೇವತೆಗಳೂ ಪರಮ ಸಂತೋಷದಿಂದ ನವೇ ಮಾನಸಿಕಾ ಜಡತ್ವದಲ್ಲಿ ನಾವು ಸುಮ್ಮಗೆ ಹೋಗಿ ಸೇವಾರ್ಥವಾಗಿ ತತ್ತದಾಕಾರರಾಗೋಣ ಆ ಮಹಾನುಭಾವನೇ ನಮ್ಮಲ್ಲಿ ಸಾರರೂಪನಾಗಿ ಇರುತ್ತಾನೆ ಎಂತ ಪರಮ ಭಕ್ತಿಯಿಂದ ಪ್ರವೇಶ ಮಾಡುತ್ತಾರೆ. "ಅಕಳಂಕಾಶ್ಚ ಸರ್ವೇಪಿ" ಎಂಬ ಶೌನಕ ಸ್ಮೃತಿಯಿಂದ ಇವರು ಅಸುರಾವೇಶ ರಹಿತರು, ಎಂತ ಪೂರ್ವದಲ್ಲಿ ಹೇಳಿದ್ದೇನೆ. ಸ್ವರೂಪ ಸಾರ ವ್ಯತಿರಿಕ್ತ ರಸವನ್ನು ಶ್ರೀ ಹರಿ ಸ್ವೀಕರಿಸದ ಪ್ರಯುಕ್ತ ಆ ಮಾನಸ ಪದಾರ್ಥ ಏನಾಗುತ್ತದೆ ಎಂದರೆ ಆ ಸ್ವಾಮಿಯೇ ಎಲೆ(ಡೆ)ಯಾಗಿ ಪೃಥ್ವೀ ದೇವತೆಯೇ ಭಂಗಾರಮಯವಾದ ಸಕಲಮಾನಸ ಭಕ್ಷ್ಯ ಭೋಜ್ಯಾದಿಗಳ ಜೋಡಿಸಿ ಉಭಯ ಪಾರ್ಶ್ವ ಸನ್ನಿಧಿಯಲ್ಲಿಯೂ ಕೇಶವಾದಿ ಬ್ರಾಹ್ಮಣರುಗಳಿಗೆ ಎಡೆಗಳ ಜೋಡಿಸಿ ಶ್ರೀಹರಿಯ ಹಸ್ತದಲ್ಲಿ ರಮಾದೇವಿಯರು ಅಮೃತವನ್ನು ಪೂರ್ವಾಪೋಶನವನ್ನು ಹಾಕುತ್ತಾರೆ- ಎಂತಲೂ ಚಿಂತಿಸಿ ಅನಂತರ ಅಂತರ ಪಟ ಆಚ್ಛಾದನೆಯನ್ನು ಚೀಂತಿಸಿದರೆ, ಶ್ರೀಹರಿಯು ಪದಾರ್ಥಾಂತರ್ಗತ ದೇವತಾಂತರ್ಗತ ಗುಣಪೂರ್ಣ ಸ್ವರೂಪ ರಸಗಳನ್ನು ಚನ್ನಾಗಿ ಸಾಕ್ಷಾತ್ ಭೋಜನ ಮಾಡಿದನಂತರ ಮಾನಸ ರಸಗಳೂ ಅತ್ಯುತ್ತಮ ಪ್ರಸಾದರೂಪವಾಗಿ ಆ ಪಾತ್ರೆಯಲ್ಲಿ ನಿಲ್ಲತಕ್ಕ ಜಡವಾದ ಪ್ರಯುಕ್ತ ಆ ಪ್ರಸಾದವನ್ನು ವಿಷ್ವಕ್ಸೇನಾಧೀನವನ್ನು ಚಿಂತಿಸಿ ಪುನಃ ಧೂಪ ದೀಪ ನೀರಾಜನಾನಂತರ ಪುಷ್ಕರ ಪ್ರಾರಂಭಿಸಿ ರುದ್ರ ದೇವರ ಪರ್ಯಂತ ದೇವತೆಗಳು ಸಾಕ್ಷಾತ್ತಾಗಿ ನಾವು ಸ್ಥೂಲಾನ್ನವನ್ನು ಭೋಜನ ಮಾಡುವಂತೆ ಭೊಜನ ಮಾಡುತ್ತಾರೆ. ರಮಾದೇವಿಯರಿಗೂ ಬ್ರಹ್ಮ ಸರಸ್ವತೀ ವಾಯು ಭಾರತೀ ದೇವಿಯರಿಗಳಿಗೂ, ಆ ಪದಾರ್ಥಾಂತರ್ಗತ ಮಹತ್ತತ್ವಾತ್ಮಕ ರಸವೂ ರಮಾ ಯೋಗ್ಯವಾದ ರಸವೂ ಪ್ರತ್ಯೇಕ ಉಂಟಾದ ಪ್ರಯುಕ್ತ ಆ ರಸಗಳನ್ನು ಇದರಲ್ಲಿಯೇ ಸ್ವೀಕರಿಸುತ್ತಾರೆ- ಸುಳಾದಿ,

"ಉಮೆಯರಸನ ಪರ್ಯಂತ ಈ ರಸ ಸಲ್ಲುವೋದು ಕಮಲನಾಭಗೇ ಲಕುಮಿಗೆ ಇಲ್ಲವೋ" ಎಂತ ಸಮರ್ಪಣೆ ಪ್ರಕಾರ ಎಂಬ ಸುಳಾದಿಯಲ್ಲಿ ಸಿದ್ಧ. "ನಿಂತಲ್ಲಿ ಕುಳಿತಲ್ಲಿ ಮಲಗಿ ತಿರುಗಾಡುವಲ್ಲಿ ಇಂಥಾದ್ದೇ ಕೈಗೊಂಡು

ಕರ್ಮವ ತೊರೆಯೋ'' ಎಂತಲೂ ಕಂತುಪಿತನ ಪೂಜೆ ಮಾಳ್ಪ ಲಕ್ಷಣ ಆದ್ಯಂತ ಕಾಲದಲ್ಲಿರತಕ್ಕದ್ದೆಂದು ಎಂತಲೂ ಸಂಪೂಜಾ ಸುಳಾದಿಯನ್ನು ಹಿಂದೆ ಬರೆದಿರುವ ರೀತಿಯಿಂದ ಹಿರಿಯರ ಅನುಗ್ರಹದಿಂದ ಈ ಉಪಾಸನೆಯು ಒದಗಬೇಕಾದುದರಿಂದ ಆದಿ ಮಾತ್ರ ಉಂಟೇ ಹೊರತು ಕೊನೆಯೆಂಬ ಸಮಾಚಾರವೇ ಕೂಡದು. ಅದು ಹೇಗೆಂದರೆ

*''ಕೀಟೇಷು ಪಕ್ಷಿಷು ಮೃಗೇಷು ಸರೀಸೃಪೇಷು ರಕ್ಷಃ ಪಿಶಾಚಮನ*
*ಜೇಷ್ವಪಿ ಯತ್ರ ಕುತ್ರ ।*
*ಜಾತಸ್ಯಮೇ ಭವತು ಕೇಶವ ತೇ ಪ್ರಸಾದಸ್ತ್ವಯ್ಯೈವ ಭಕ್ತಿರಚಲಾ*
*ಅವ್ಯಭಿಚಾರಿಣೀತಿ।''*

ಎಂಬ ಭಾಗವತ ಶ್ಲೋಕ ರೀತಿಯಿಂದ

ಸುಳಾದಿ:- ''ಸಾಧನ ಮಾಡೋದು ಜನುಮ ಜನಮಾಂತರ ಸಂಸ್ಕಾರ -ಸಂಸ್ಕಾರ ಮನವೇ ಕಾರಣವೆನ್ನೋ'' ಎಂಬ ಭೌತಿಕ ಸುಳಾದಿ. ''ಮುಂದಿನ ಬಲು ಜನ್ಮಕ್ಕೆ ಸಾಧನವೆನ್ನು'' ಎಂಬ ಧ್ಯಾನ ಪ್ರಕರಣ ಸುಳಾದಿಯಿಂದಲೂ ಎಷ್ಟು ಜನ್ಮಗಳು ಬಂದರೂ ಈ ಉಪಾಸನೆಗೆ ಭಾದೆಯಿಲ್ಲವಾದುದರಿಂದ ಹರಿಕಥಾಮೃತಸಾರದಿಂದ ಸ್ತ್ರೀಯರಾಗಲೀ ಪುರುಷರಾಗಲೀ ತಮಗೆ ಯೋಗ್ಯವಾದ ಸ್ವರೂಪ ಜ್ಞಾನಾಧಿಕಾರಿಗಳಾಗಬಹುದೆಂದು ಹೇಳಿದ್ದಾರಾದುದರಿಂದ ಬಿಂಬಾಪರೋಕ್ಷದ ಜನುಮ ಪರ್ಯಂತ ಮಾಡಿಕೊಂಡು ಕಾದಿದ್ದು ಮುಕ್ತಿಯಲ್ಲಿ ಗುರುಗಳಾಗತಕ್ಕವರೇ ಇಲ್ಲಿ ನಿಜ ಗುರುಗಳಾಗಿ ಬಂದು ಈ ಉಪಾಸನೆಯೂ ಆಗ ಫಲವತ್ತಾಗಿ ಅಪರೋಕ್ಷಿಯಾದ ಮೇಲೆ ಮುಕ್ತಿಪರ್ಯಂತವೂ ಮತ್ತು ಉಪಾಸನೆ ಬಲವಾಗಿ ಅನಂತರ ಬ್ರಹ್ಮ ದೇವರ ಉಪದೇಶದಿಂದ ಸಕಲ ಮುಕ್ತಿಯೋಗ್ಯರಿಗೂ ವಿರಜಾ ಸ್ನಾನವಾಗಿ ಸ್ವೆಚ್ಛೆಯಿಂದ ನಿರುಪಾಧಿಕ ಧ್ಯಾನೋಪಾಸನ ಮಾಡಿಕೊಂಡಿರುವುದೇ ಜೀವರ ಧರ್ಮವು.

''ಓಂ ಆಪ್ರಾಯಿಣಾತ್ತತ್ರಾಪಿ ಹಿ ದೃಷ್ಟಂ ಓಂ'' ಎಂತ ಸೂತ್ರ ''ಮುಕ್ತಾ ಅಪಿಹಿ ಕುರ್ವಂತಿ ಸ್ವೆಚ್ಛೋಪಾಸನಂ ಹರೇಃ'' ಎಂಬ ಸೂತ್ರ ಭಾಷ್ಯ- ಅಪರೋಕ್ಷ ಕೊಡತಕ್ಕ ಗುರು ನಿಬಂಧನೆಗೆ ಪ್ರಮಾಣ:-

*"ಯತೋವರಾಣಾಂ ಸರ್ವೇಷಾಂ ಗುಣಃ ಸರ್ವ ಕ್ರಿಯಾ ಅಪಿ ।
ನಿಯಮೇನ್ಯೈವ ಪೂರ್ವೇಷಾಂ ಸುಪ್ರಸಾದ ನಿಬಂಧನಾಃ ।"*
ಎಂತ ಸತ್ತತ್ವರತ್ನಮಾಲಾ.

ಸುಳಾದಿ:- "ಇದೆ ಇದೆ ಅಭ್ಯಾಸ ಮಾಡಲು ಬಲು ಜನ್ಮಗಳಿಂದ ವಾಸನಾಮಯ ಮೂರ್ತಿ। ಪದೋಪದಿಗೆ ಸಾರಿ ಗೋಪಾಂಗದಿಂದಲ್ಲಿ ಪೊಳೆವ ಎದುರಲ್ಲಿ ಇದ್ದು ದ್ರವ್ಯದಂತೆ ಮದನ ಜನಕ ನಮ್ಮ ವಿಜಯವಿಠಲರೇಯ ಇದನೆ ಹಿಂದು ಮಾಡಿ ಮೋದ ಪರಿತೋರಿಸುವ ।" ಅಂದರೆ ಹಿಂದು ಮಾಡಿ ಎಂದರೆ ಶ್ರೀ ಹರಿಯು ಮನೋಮಯವನ್ನು ಹಾರಿಸಿ ಸಾಕ್ಷಿದರ್ಶನ ಕೊಡುವ ಎಂತ ಅರ್ಥ. ಮುಂದಿನ ಮಾತು.

*"ನಿರತೋಪಾಸನೆ ಮೂರ್ತಿ ಪೂಜಿಸಲು ಕಾಲ ಪರಿಪಕ್ವ
ಬರಲಾಗಿ ಹರಿಕರುಣದಿಂದಲಿ ಗುರು ಕೃಪೆ ಮಾಡುವವಸವನೆ.
ಈ ಮೂರ್ತಿ ಇವನ ಕಣ್ಣಿಗೆ ಗೋಚರಿಸುವುದು. ಈಶನೇ ತೋರುವ
ಪ್ರಾಜ್ಞ ಪೆಸರುಉಳ್ಳ ಆತ್ಮನಾಮಕ ಬಿಂಬನೆಂದು
ಕರೆಸಿಕೊಳ್ಳುತಲಿಪ್ಪ ಕಡೆಮನೆಧೊರೆ"*
ಎಂದು ಅಂದರೆ ಸ್ವರೂಪ ಲಿಂಗ ಅನಿರುದ್ಧ ದೇಹಗಳಿಗೆ ಸ್ಥೂಲ ದೇಹವೇ ಕಡೆಮನೆ, ಎಂತಲೂ ಅರ್ಥವು. ಮುಂದಿನ ಮಾತು.

"ಶರಣಗೆ ಮರುಗುವ ಅಂತರಂಗದೊಳು ಆದರೆ ಅವನೇ ಯೋಗ್ಯತೆಯನ್ನು ಪಸರಿಸಿ ಪರಮ ಪುರುಷ ನಮ್ಮ ವಿಜಯವಿಠಲ ಮುಂದೆ ಕುರುಹು ತೋರಿಸುವ ನಿಜಸ್ವರೂಪವನ್ನು" ಅಂದರೆ

*"ಬಿಂಬರೂಪಂ ಹರಿಂ ದೃಷ್ಟ್ವಾ ಹರಿ ಪಾದಾಬ್ಜ ಸಂಸ್ಥಿತಂ ಸ್ವಂ ಚ ಪಶ್ಯತ್ಯಾಪರೋಕ್ಷಾನ್ನಿವೃತ್ತಾಖಿಲ ಬಂಧನಂ । ಏವಮುತ್ಪನ್ನ ನಿರ್ದೋಷಾದ್ಭುಗವದ್ದರ್ಶನಾತ್ಸದಾ । ಅಪೇಕ್ಷಿತಸಲಾವಾಪ್ತಿರಾರಬ್ಧಸ್ಯಾನ್ನತಿ ಕ್ರಮಾತ್ ।" ಎಂತ ಸತ್ತತ್ವರತ್ನಮಾಲಾ.*

ಮುಂದಿನ ತಾಳ – "ಜೀವಾಂತರ್ಗತ ಮೂರ್ತಿಯು ತಾನಾಗಿ ಆವಾಗ ಪೊಳೆಯಲು ಸಂಚಿತಾಗಾಮಿ ಕರ್ಮಜವದೂ ಅನುಭವಿಸ ಪ್ರಾರಬ್ಧ ಕರ್ಮವೆಲ್ಲ

ನೋವು ಸುಖವಾದರೂ ಉಂಡು ತೀರಿಸ ಬೇಕು. ಆ ವಿರಜಾ ನದಿಯಲ್ಲಿ ಮುಳುಗುವ ಪರಿಯಂತ ತ್ರಿವಿಧವೆನಿಸುವ ದೇಹ ನಾಶವಿಲ್ಲವೋ। ದೇವನ ಲೀಲೆಯಂತೋ ಅಧಿಕಾದರಿತನ ಭೇದತಾ ಒಳಗಿದ್ದು ಸರ್ವ ಬಗೆಯನ್ನು ಮಾಡಿಸುವ ಪಾವನ್ನ ಜೀವಕ್ಕೆ ತಮಸ್ಸು ಎಂದಿಗೆ ಇಲ್ಲ – ಕೋವಿದರು ಕೇಳಿ ಕೌತುಕವೆನ್ನದಿರಿ ಶ್ರೀವಲ್ಲಭ ನಮ್ಮ ವಿಜಯವಿಠಲರೇಯ ಜೀವ ಸ್ವರೂಪದಂತೆ ಧ್ಯಾನವ ಕೊಡುವ"

ಅಂದರೆ– ಬಿಂಬಾಪರೋಕ್ಷವಾಗೋಣವೂ ಜೀವ ದರ್ಶನವಾಗುತ್ತಾದುದರಿಂದ ಜೀವಾಂತರ್ಯಾಮಿ ಜೀವಾಕಾರ ಮೂರ್ತಿ ಧ್ಯಾನ ಯೋಗ್ಯತೆ ನೂತನವಾಗಿ ಹುಟ್ಟುತ್ತದೆ ಎಂತ ಅರ್ಥವು.

*"ಇತ್ಥಂ ಲಯೋ ಸರ್ವ ಜೀವಾಃ ಸಂಪ್ರಾಪ್ಯ ಕಮಲಾಸನಂ ।*
*ಚತುರ್ಮುಖೋಪದೇಶಂ ಚ ಸ್ವಯೋಗ್ಯ ಪ್ರಾಪ್ಯ ಪುಷ್ಕಲಂ।*
*ವೈಕುಂಠ ಪರಿಘಾಂ ಕೃತ್ವಾಂ ವಿರಜಾಯಾಂ ಸಮಸ್ತಶಃ ।*
*ಪ್ರಾರಬ್ಧ ಕರ್ಮ ಶೇಷಂಚ ಲಿಂಗದೇಹಾದಿಕಂ ತಥಾ ।*
*ವಿನಾಶ್ಯ ಜಠರೇ ವಿಷ್ಣೋಃ ಪ್ರವಿಶ್ಯಾನುಗ್ರಹಾದ್ಧರೇಃ ।*
*ತಮೇವ ಪರಮ ಶ್ರೇಷ್ಠಂ ಧ್ಯಾಯತಃ ಕಮಲಾಪತಿಂ ॥*
*ಯಾವತ್ಸೃಷ್ಟಿರ್ವಸಂತ್ಯತ್ರ ಸಂಪೂರ್ಣಾನಂದ ಭೋಜನಾಃ।"* ಎಂತ
ಸತ್ತತ್ವರತ್ನಮಾಲಾ ಫಲ ಪ್ರಕರಣ

ಇದರಲ್ಲಿ ವೈಕುಂಠ ಪರಿಘಾರೂಪ ವಿರಜೆಯಲ್ಲಿ ಸರ್ವರಿಗೂ ಲಿಂಗದೇಹ ಹೋಗುತ್ತದೆ ಎಂದು ಹೇಳಿದೆಯಷ್ಟೆ – ಇದಕ್ಕೆ ವಿರೋಧವೇನೆಂದರೆ ಪ್ರಧಾನ ಪರಮೇವ್ಯೋಮ್ನೋರಂತರಾವಿರಜಾ ನದೀ। ಪಂಚ ಯೋಜನ ವಿಸ್ತೀರ್ಣಾ ಸರ್ವ ಸಂಸಾರ ಮೋಚನೀ । ಎಂತ ಗರುಡ ಪುರಾಣ ಬ್ರಹ್ಮ ಕಾಂಡ.

*"ಲಿಂಗದೇಹಯುತಾಃ ಸರ್ವೇ ಬ್ರಹ್ಮಾದ್ಯಾ ಜೀವರಾಶಯಃ ।*
*ಚರಮಾವರಣ ವ್ಯೋಮ ಮಧ್ಯ ಭಾಗ ವ್ಯವಸ್ಥಿತಾಃ ।*
*ವಿರಜಾಯಂತ್ಯಕ್ತಲಿಂಗಾಃ ಶುದ್ಧ ರೂಪಾಶ್ಚ ಸರ್ವಶಃ ।*
*ಮಾಯಾದ್ವಾರಾ ವಾಸುದೇವಂ ವಿಶಂತ್ಯಾನಂದ ಪೂರಿತಾಃ ।*
*ವಿಮುಕ್ತಾಖಿಲ ಬಂಧಾಸ್ತೇ ಮೋದಂತೇ ಸರ್ವದೇವ ಹಿ ।"*
ಎಂತ ವಿಷ್ಣು ರಹಸ್ಯ ಅಧ್ಯಾಯ ೪೫, ಶ್ಲೋಕ ೧೭–೧೯

ಈ ಪ್ರಮಾಣ ಬಾಧೆಗೆ ಹ್ಯಾಗೆಂದರೆ ಆ ಹೊರಗಿನ ಮೂಲ ವಿರಜೆಗೆ ಬ್ರಹ್ಮಾಂಡದೊಳಗಿನ ವೈಕುಂಠ ಪರಿಘಾಕಾರ ವಿರಜೆಂಯೂ ಅಂಶಭೂತವಾದುದರಿಂದ ಮಹಾ ಪ್ರಲಯ ಕಾಲದಲ್ಲಿ ಮೂಲ ವಿರಜೆಯು ಒಳಗೆ ಸೇರಿಕೊಳ್ಳುವುದರಿಂದ ಆ ಕಾಲದಲ್ಲಿ ಎರಡೂ ಕೂಡಿದ ವೈಕುಂಠ ವಿರಜಾ ಉದಕದಲ್ಲಿಯೇ ಸರ್ವ ಮುಕ್ತರೂ ಸ್ನಾನ ಮಾಡಿ ಲಿಂಗದೇಹ ಬಿಡುತ್ತಾರೆ - ಎಂತ ಹೇಳಿದ್ದಾರೆ. "ವೈಕುಂಠ ಪರಿಘಾಕಾರ ವಿರಜಾವಲಯೇ ನದೀ। ವಿಯತ್ಸಮೀಪಮಾಯಂತಿ ವಿಮುಕ್ತ್ಯೇ ವಿಷ್ಣುಸೇವಿನಾಂ।" ಎಂತ ವಿರೋಧೋದ್ಧಾರ. ನಾನು ಈ ಪ್ರಕಾರ ಸುಳಾದಿಗಳನ್ನು ಹಿಡಿದು ಪ್ರಾಕೃತಾರ್ಥವನ್ನು ಏಕೆ ಮಾಡಿದೆನೆಂದರೆ ಪುರಂದರದಾಸರ ನಾಮಗಳಂತೆ ಬ್ರಾಹ್ಮಣಾದಿ ಪಂಚಮಾಂತ ಸಕಲ ಜಾತಿ ಪ್ರಜೆಗಳಿಗೂ ಸ್ಥೂಲ ಮಾರ್ಗದಿಂದ ಭಕ್ತಿ ವಿರಕ್ತಿಗಳನ್ನು ಹುಟ್ಟಿಸೋಣ ಹೊರತು ವಿಜಯರಾಯರು ಒಬ್ಬರು ಈ ಇಬ್ಬರು ಮಾತ್ರ ಯಾವ ವಚನಗಳನ್ನು ಭೂಮಿಯಲ್ಲಿ ಹರವಿ ಇದ್ದಾರೋ ಅವುಗಳನ್ನು ಅಧಿಕಾರಿಗಳು ನೋಡೋಣ ಮಾತ್ರಕ್ಕೆ ಜೀವನ್ಮುಕ್ತಿ ಸಾಧನ ಒದಗುವುದೇ ಸಿದ್ಧ. ಈ ಇಬ್ಬರ ವಚನಗಳೂ ಲೇಶಮಾತ್ರ ಸತ್ಸಿದ್ಧಾಂತ ಶ್ರವಣ ಮಾಡಿದ ಅಧಿಕಾರಿಗಳಿಗೆ ಪರಮಾನಂದ ಜನಕಗಳೇ ಹೊರತು ಸಚ್ಛಾಸ್ತ್ರದ ಗ್ರಂಥ ಅರಿಯದವರಿಗೆ ವ್ಯಸನ ಜನಕಗಳೇ ಹೊರತು ಸುಖ ಸಾಧನಗಳಲ್ಲ. ಸುಳಾದಿ:- ವಾಙ್~ ಮನೋಗೋಚರ ಅಜ್ಞಾನಿಗಳಿಗೆ ಇದು ರಾಗತೊರೆಯದವನ ಮನಸ್ಸಿಗೆ ಹತ್ತದು. ಹೀಗೆ ಹಾಗ್ಯಾಕೆಂದು ವಿತ್ತಂಡ ಮಾಡಿದರೆ, ಆಗುವುದೇನಯ್ಯ ಅವನಿಂದ ಫಲಿತಾರ್ಥ. "ಭಾಗೀರಥೀ ಪಿತ ಪುಣ್ಯ ಪಾಪಕ್ಕೆ ಕರ್ತನಾಗಿಪ್ಪನು। ನಿತ್ಯ ಸರ್ವಜ್ಞ ಶಿಖಾಮಣಿ" ಎಂತ ಶೃತಿ ಸ್ಮೃತಿಗಳಿಂದ ತಿಳಿದರೆ ಸುಖ ನಿಶ್ಚಯವೆಂತ ಹೇಳಿದ್ದಾರೆ- ಆಗಮ ಶೃತಿಯಲ್ಲಿ ವರೆದೊರೆದು ಪೇಳಿದೆ- ಎಂತಲೂ, ಈಗಾಯನ್ನಸಲ್ಲ ವೈದಿಕ ಲೌಕಿಕ ಗುಣದಲ್ಲಿ ಗುಣಿಸಿ ತಿಳಿಯ ಬೇಕು, ಎಂತಲೂ ಶೃತಿ ಸ್ಮೃತಿಗಳ ಹಿಡಿದು ವಿಚಾರ ಮಾಡಿದ ಹೊರತು ತತ್ತ್ವ ನಿಶ್ಚಯವಾಗುವುದಿಲ್ಲವೆಂತ ಹೇಳಿದ್ದಾರೆ- ಭೂಗೋಳದೊಳಗಿದು ವಿವರಿಸಿ ಪೇಳುವುದಕ್ಕೆ ಸಾಗಿ ಸಾಗದು ಬುದ್ಧಿ ಸುಳಿಯಂತೆ ಸುತ್ತುತಿದೆ' ಎಂತ ವೈದಿಕ ಮಾರ್ಗವ ಬಗೆ ಬಗೆಯಿಂದ ಶೋಧಿಸು ಎಂತ ಮತ್ತೊಂದು ಸುಳಾದಿ:- "ಮಧ್ವ ಮತಾಬ್ಧಿಯೊಳು ಮೀನಿನಂತಿರು" ಎಂದು ಜಗನ್ನಾಥದಾಸರ ವಚನವು.

*"ಕೋವಿದರರಸರ ಹೆಗ್ಗದ ಕಾಯುವುದೇ ಫಲವಿದು ಬಾಳ್ದುದಕೆ ।
ಎಂತಲೂ ಹೇಳಿದ್ದಾರೆ. ವೀರ ವೈಷ್ಣವಾ ಸಚ್ಛಾಸ್ತ್ರಕ್ಕೆ
ದಾರಿಯಾಗುವುದೈಯ್ಯ! ಆಮೇಲೆ ಮನನ ವಿಚಾರ ನಿಧಿ ಧ್ಯಾಸ"*

ಎಂತ ಅನಾದಿ ಕರ್ಮ ಸುಳಾದಿ.

ಏತೇನ ಶಾಸ್ತ್ರಾಭ್ಯಾಸದಿಂದ ಕಿಂಚಿತ್ತಾದರೂ ಶ್ರೀಹರಿಂಯೇ ಸರ್ವೋತ್ತಮನೆಂಬ ಜ್ಞಾನ ಹುಟ್ಟಿದರೆ– ಈ ಪ್ರಾಕೃತವು ಅಜ್ಞಾನವನ್ನು ಪಕ್ವ ಮಾಡಿತೇ ಹೊರತು ನೂತನವಾಗಿ ನಿಶ್ಚಯ ಜ್ಞಾನವನ್ನು ಹುಟ್ಟಿಸಲಾರದು ಏಕೆಂದರೆ– ಮೂಲ ಟೀಕಾಗ್ರಂಥಗಳಿಂದಲೇ ತತ್ವ ನಿಶ್ಚಯಗಳಾಗದೆ ಪರಸ್ಪರ ಗ್ರಂಥಾರ್ಥಗಳ ಬಾಧೆಗಳು ಬಂದು ಅದರ ಸಂದೇಹ ಪರಿಹಾರಾರ್ಥವಾಗಿ ತಾಮ್ರಪರ್ಣೀಯ ಮೊದಲಾದ ಬಹು ಪ್ರಮೇಯ ಗ್ರಂಥಗಳಿಂದಲೂ ಜ್ಞಾನಿಗಳಿಗೆ ತತ್ವ ನಿಶ್ಚಯವಾಗ ಬೇಕು. ಅದರ ಮೇಲೂ ಬಿಂಬೋಪಾಸನೆಯಲ್ಲಿ ಮನಸ್ಸು ಯುರಗದೀ ಇರುವವರಿಗೆ ವಿಜಯರಾಯರ ಸುಳಾದಿ:– ಈ ಕಾಲಕ್ಕೆ ಬಿಂಬೋಪಾಸನಾ ಸಾಧನ ಪ್ರವರ್ತಕರು– ಅವರು ಆಯಾಸವಿಲ್ಲದೆ ಶಾಸ್ತ್ರಕ್ಕೆ ಅವಿರೋಧವಾಗಿ ಸಾಧನವೊದಗಿಸುತ್ತಾರೆ ಮಧ್ವ ಮತಕ್ಕೆ ವಿರೋಧವಾಗದಂತೆ ಕ್ಷಿತಿಯೊಳಗೆ ಸುಜನರಿಗೆ ಹಿತವಾಗುವಂತೆ ಶ್ರೀಪತಿಯ ಸೇವಿಸಿ ಮತಿಯ ಪಡೆಯೋ ಎಂತ ನೆಚ್ಚದಿರು ಸಂಸಾರವೆಂಬುದರಲ್ಲಿ ವಿಜಯರಾಯರ ವಚನವು. ಮಧ್ವ ಶಾಸ್ತ್ರವನ್ನು ಆಶ್ರಯಿಸೇನು ಎಂಬ ಕುತೂಹಲವನ್ನು ಹುಟ್ಟಿಸುವವರೇ ಇವರಾದ ಕಾರಣ ವಿಜಯರಾಯರ ಸೇವಾರ್ಥವಾಗಿ ಸಚ್ಛಾಸ್ತ್ರದಲ್ಲಿ ಕುತೂಹಲ ಚೆನ್ನಾಗಿ ಅಭಿವೃದ್ಧಿಯಾಗ ಬೇಕೆಂದು ಈ ಗ್ರಂಥವು ಪ್ರವೃತ್ತವಾಯಿತು. ಭೂಗೋಳದೊಳು ನಿರ್ಮಲ ಮಾರುತ ಆಲೈಸಿ ಕೇಳಿದರೆ ವೈಕುಂಠ ಮುಟ್ಟುತ್ತದೆ ಎಂತ ಸಾಧನ ಸುಳಾದಿ. ಸಕಲ ಗ್ರಂಥಗಳೂ ಸುಧೆಯ ತರುವಾಯ ಎಂತ ಶ್ರೀ ಕೃಷ್ಣ ಸುಳಾದಿಯಲ್ಲಿ ವಿಜಯರಾಯರ ಮಾತು. ಶಾಸ್ತ್ರವನ್ನೇ ಹೊರತು ಒಂದು ಸುಳಾದಿಗಾದರೂ ಅರ್ಥ ಹೊಂದಿಸೋಣ ಪ್ರಯಾಸವೇ ಸರಿ. ಗ್ರಂಥ ಶ್ರವಣ ಹೊರತು ಸುಳಾದಿಗೆ ನಿಶ್ಚಯಾರ್ಥ ಹೊಂದಿಸೇನೂ ಎಂತ ಭ್ರಮೆ ಇದ್ದ ಪುರುಷಗೆ ಉತ್ತರವೇನೆಂದರೆ– ಮುಕ್ತ ಪ್ರಕರಣ ಸುಳಾದಿಯಲ್ಲಿ

"ತ್ರಿನೇತ್ರನ ಸತಿವಿಡುದು ಚತುರಾನನ ತನಕ ಗುಣಕ್ಲಿಪ್ತ ಗಣನೆ ಅಧಿಕವಾಗಿ ಎಣಿಸು ಇದರೊಳಗೆ ವಿಚಿತ್ರವುಂಟು, ಇದೆ ಎಣಿಸುವುದು ಸಜಾತಿ ನಾಮದಲ್ಲಿ ವಿನಗುವ ವಿಜಾತೀಯ ಅನಂತ ಉಳ್ಳದ್ದಾಗಿ ಅನಿಮಿಷನಾಥನಿಂದ ಇತ್ತ ಬ್ಯಾರೆ ಎಣಿಕೆ ಮಾಡಲಿಸಲ್ಲ. ಇದು ಪರಿಮಿತಿ ಎನ್ನಿ. ಅನುಕೂಲವಾಗಿ ಸುಖದಲ್ಲಿ ಇಪ್ಪೋದು" ಎಂತ ಹೇಳಿದ್ದಾರಷ್ಟೆ. ಇದರಲ್ಲಿ ಸಜಾತೀಯ ಗುಣ ಯಾವುದು, ವಿಜಾತೀಯ ಗುಣ ಯಾವುದು ಇದರ ಅರ್ಥ ನಿಶ್ಚಯವನ್ನು ಹಿರಿಯರಿಂದಲೇ ತಿಳಿದು ಕೊಳ್ಳದೇ ಹೋದರೆ ಸುಳಾದಿಯ ಮಾತುಗಳಷ್ಟೂ ಇಂಥಾದ್ದೆ ಆದ ಪ್ರಯುಕ್ತ ಅದರ ಅರ್ಥಗಳೂ ಕನ್ನಡಿ ಒಳಗಿನ ಗಂಟಿನ ಹಾಗೆ ಸರಿ. ಸಜಾತೀಯ ಗುಣಗಳು ಯಾವುವೆಂದರೆ ತೃಣ ಜೀವರು ಮೊದಲು ರಮಾದೇವಿಯರ ತನಕ ಸ್ವರೂಪ ಗುಣಗಳಿಗೆ ತಾರತಮ್ಯ ಪ್ರಸಿದ್ಧಿಯೂ ಬ್ರಹ್ಮ ವಾಯುಗಳಿಗಿಂತಲೂ ಕೋಟಿ ಗುಣಾಧಿಕರು ಲಕ್ಷ್ಮೀದೇವಿಯರು. ಬ್ರಹ್ಮ ವಾಯುಗಳಿಗೆ ಸರಸ್ವತೀ ಭಾರತೀ ದೇವಿಯರು ನೂರು ಗುಣದಲ್ಲಿ ಕಡಿಮೆ ಎಂದರೆ ಅರ್ಥ ಬ್ರಹ್ಮ ವಾಯುಗಳಿಗೆ ಹರಿ ಭಕ್ತ್ಯಾದಿ ಸ್ವರೂಪ ಗುಣಗಳು ನೂರು ಕಾಸು ತೂಕವಾದರೆ ಸರಸ್ವತೀ ಭಾರತೀ ದೇವಿಯರಿಗೆ ಆ ಕಾಸುಗಳೊಳಗೆ ಒಂದೇ ಕಾಸು ತೂಕ ಸ್ವರೂಪಗುಣಗಳು ಎಂತ ಅರ್ಥ. ಆ ಒಂದೇ ಕಾಸಿನ ಒಳಗೆ ೧೦೦ ಭಾಗ ಮಾಡಿದರೆ, ಅದರೊಳಗಿನ ಒಂದೇ ಭಾಗ ತೂಕವು ಗರುಡ ಶೇಷ ರುದ್ರರ ಸ್ವರೂಪ ಗುಣಗಳು. ತೃಣ ಜೀವರ ತನಕ ಇದೇ ಭಾಗ ಕ್ರಮಕ್ಕೆ ಕಡಿಮೆಯನ್ನಾಗಿ ತಿಳಿಯತಕ್ಕದ್ದು.

ಬ್ರಹ್ಮದೇವರ ವಿಶಿಷ್ಟ ಸ್ವರೂಪ ಗುಣಗಳು ಒಂದು ಭಾರ ಕೂಡಿಸಿದಷ್ಟು ರಮಾ ಸ್ವರೂಪ ಗುಣಗಳು. ಸ್ವರೂಪ ಗುಣಗಳು ಯಾವುವೆಂದರೆ "ಯಥಾನಂದೇ ತಥಾ ಜ್ಞಾನೇ ವಿಷ್ಣು ಭಕ್ತ್ಯಾ ಬಲಾಧಿಕೆ" ಎಂತ ಆನಂದ ಜ್ಞಾನ- ವಿಷ್ಣು ಭಕ್ತಿ ಬಲ ವೀರ್ಯ ಶೌರ್ಯ ಔದರ್ಯ ಚಾತುರ್ಯ ಗಾಂಭೀರ್ಯ ಇವೇ ಮೊದಲಾದ ಸೌಂದರ್ಯಾದಿ ಸ್ವರೂಪ ಗುಣಗಳೇ ಸಜಾತೀಯ ಗುಣಗಳು. ಈ ಗುಣಗಳ ತಾರತಮ್ಯ ತಿಳಿಯುವುದಕ್ಕೋಸ್ಕರ ತೂಕದ ದೃಷ್ಟಾಂತದಿಂದ ತಾರತಮ್ಯಾನುಭವ ತೋರಿಸಿದೆನು. ವಿಜಾತೀಯ ಗುಣಗಳಲ್ಲಿ ವಿಶೇಷವೇನೆಂದರೆ ಉಮಾದಿಗಳಿಗಿಂತಲೂ ಷಣ್ಮಹೀಷಿಯರು ಅನಂತಗುಣಾಧಿಕರು, ಅವರಿಗಿಂತಲೂ

ರುದ್ರಾದಿಗಳು ಅನಂತ ಗುಣಾಧಿಕರು, ಅವರಿಗಿಂತಲೂ ಬ್ರಹ್ಮ ವಾಯುಗಳು ಅನಂತ ಗುಣಾಧಿಕರು.

"ಉಮಾ ಯಾವತ್ಪೂರ್ವ ಜ್ಞಾನೆ ಅನಂತ ಗುಣಾಧಿಕಾಃ । ಶಿವಾದ್ಯಾಃ ಸರ್ವೈರಜ್ಞಾತ ಗುಣೋಲ್ಲೇಖಿನನ್ಯಗೆ ।" ಅಂದರೆ ಭಗವದ್ರೂಪ ಪ್ರಕಾಶಾದಿ ಯಥೋಚಿತ ಗುಣಾನಂತ ಸ್ಪಷ್ಟ ದರ್ಶನ ವಿಷಯದಲ್ಲಿ ಎಂತ ಅರ್ಥ. ಸ್ವಾಧಮ ದೇವತೆಗಳು ತಾರದೇ ಇದ್ದ ಭಗವದ್ದರ್ಶನ ಸ್ವೋತ್ತಮ ದೇವತೆಗಳು ಮಾತ್ರ ಕಾಣತಕ್ಕದ್ದು. ಇದೇ ವಿಜಾತೀಯ ಗುಣ.

***"ಕೋಟ್ಯಾದಿ ತಾರತಮ್ಯ ಯದುಕ್ತಂ ಯದೃಷ್ಯತೇ ತಥಾ ॥***
***ತತ್ಸರ್ವಂ ಸುಖ ಪೂರ್ವಾಣಾಂ ಗುಣಾನಾಂ ಪರಿಮಾಣಗಂ ।"***

ಇದು ಸಜಾತೀಯ ಗುಣ ವಿಷಯ. ವಿಜಾತೀಯ ಗುಣದಲ್ಲಿ

"ಸ್ಥಾವರಾಜ್ಞಾತ ಗುಣೋಲ್ಲೇಖಿ ಅನನ್ಯಗೆ" ಅಂದರೆ ಉಮಾ ಪರ್ಯಂತಂ ಪೂರ್ವ ಪೂರ್ವೇ ಶಿವಾದ್ಯಾಃ ಸ್ಥಾವರಾಜ್ಞಾತ ಗುಣೋಲ್ಲೇಖಿನೀ। ಅತ ಏವ ನಾನ್ಯಗೆ । ಸ್ಥಾವರ ವ್ಯಾವೃತ್ತ್ಯೇ ವಾಸುದೇವ ಗುಣ ದರ್ಶನ ವಿಷಯಕೆ ವಿಜಾತೀಯೇ ಜ್ಞಾನೇ ಅನಂತ ಗುಣಾಧಿಕಾ ಇತ್ಯರ್ಥಃ । ಉಮಾ ಯಾವದನಂತಾಂಶಾನ್ ಪೂರ್ವ ದೃಷ್ಟೇಭ್ಯ ಏವತು । ವಿಶೇಷಾನ್ ವಾಸುದೇವಸ್ಯ ಪಶ್ಚಾದುಕ್ತಾನ್ವಿಚಕ್ಷತೇ । ಎಂತ ಅನುವ್ಯಾಖ್ಯಾನ

ಶಕ್ರಕಾಮಾದಯಶ್ಚೈವ ವಿಶೇಷಾನ್ ಬ್ರಹ್ಮಣಿ ಸ್ಥಿತಾನ್। ಉಮಾದಿಭ್ಯಃ ಪ್ರಬುಧೇಭ್ಯಃ ಶತಾಂಶೇನೇವಚಕ್ಷತೆ । ಅಂದರೆ "ಭವತ್ಯೇವಂ ಉಮಾ ವಾರುಣೀ ಸೌಪರ್ಣೀಭ್ಯಃ ಜಾಂಬವತ್ಯಾದಿ ಶಿವಾದೀನಾಂ ತೇಭ್ಯಃ ಸರಸ್ವತೀ ಭಾರತ್ಯೋಂಶಾಭ್ಯಾಂ ಬ್ರಹ್ಮ ವಾಯ್ವೋಃ । ತಾಭ್ಯಾಂ ರಮಾಯಾಃ ಅಪೂರ್ವ ಪೂರ್ವ ಭಗವದ್ಗುಣ ವಿಷಯಕೆ ವಿಜಾತೀಯ ಜ್ಞಾನೇ ತಾರತಮ್ಯಮಿತ್ಯತೋ ಅನುವ್ಯಾಖ್ಯಾನ ವಚನಂ । ಶಕ್ರ ಕಾಮಾದಯ ಇತಿ ವಾ ॥" ಎಂತ ತಾಮ್ರಪರ್ಣೀಯ ಬೃಹತ್ತಾರತಮ್ಯದಲಿ ಉದಾಹೃತ

ಅಂದರೆ ಇಂದ್ರ ಕಾಮರು ಉಮದೇವಿಯರಿಂದ ಉಪದಿಷ್ಟರಾಗಿ ಭಗವದ್ಗುಣಗಳನ್ನು ತಮ್ಮ ಸಜಾತೀಯ ಗುಣಗಳಿಗೆ ಸಮವಾಗಿ

ಶತಾಂಶಾಧಮವಿಜಾತೀಯ ದರ್ಶನವುಳ್ಳವರೇ ಸರಿ. ತೃಣಾಂತ ಜೀವರಿಗೂ ಹೀಗೆಯೇ ಸರಿ. ಇದೇ ಪ್ರಕಾರ ಇನ್ನೊಂದು ಮಾತನ್ನು ತೋರಿಸುತ್ತೇನೆ. ಹರಿಕಥಾಮೃತಸಾರದಲ್ಲಿ "ವಿತತ ಮಹಿಮನ ಬಿಟ್ಟು ಸುರರಿಗೆ ಪೃಥಗ್ವಂದನ ಮಾಳ್ಪ ನರ" ಎಂಬ ವಚನದಲ್ಲಿ ಶ್ರೀಹರಿಯನ್ನು ಬಿಟ್ಟು ದೇವತೆಗಳಿಗೆ ಪ್ರತ್ಯೇಕ ವಂದನೆ ಮಾಡತಕ್ಕ ಮನುಷ್ಯನೇ ದೈತ್ಯನು ಎಂತ ಮಹಾ ಅನರ್ಥವನ್ನು ಹೇಳಿ ಇದ್ದಾರಷ್ಟೆ. ದೇವತೆಗಳಲ್ಲಿಯೂ ಬ್ರಾಹ್ಮಣರಲ್ಲಿಯೂ ಪಿತೃವಂದನೆ ಗುರುವಂದನೆ ಸೂರ್ಯವಂದನಾದಿಗಳಲಿ ಮತ್ತು ಜಪ ಆಸನ ಆಗ್ನ್ಯಾದ್ಯಧಿಷ್ಠಾನಗಳಲ್ಲಿ ಅಲ್ಲಲ್ಲಿ ಅಂತರ್ಗತ ಶ್ರೀಹರಿಯನ್ನೇ ಕುರಿತು ವಂದನೆ ಮಾಡಿದರೆ, ಅಧಿಷ್ಠಾನರೂಪರಾದ ದೇವತೆಗಳು ಸಂತುಷ್ಟರಾಗದೇ ಹೋಗುವುದಿಲ್ಲವಾದುದರಿಂದ ದೇವತೆಗಳು ಸಂತುಷ್ಟರಾದ ಪ್ರಯುಕ್ತವೇ ನಮಸ್ಕಾರಾದಿ ಸೇವೆಗಳು ದೇವತೆಗಳಿಗೆ ಸಲ್ಲುವುದಿಲ್ಲ ಎಂದು ಹೇಳಿಕೊಂಡದಾದುದರಿಂದ ದೇವತೆಗಳಿಗೆ ಈ ನಮಸ್ಕಾರಾದಿ ಸೇವೆ ಸರಿದರೆ, ಅವರ ಅಂತರ್ಗತ ಶ್ರೀಹರಿಗೆ ಸಲ್ಲದೆ ಹೋಗಲಿ ಅಥವಾ ಅಂತರ್ಗತಗೆ ಮಾತ್ರ ಸೇರಿದರೆ– ಮಾತಾ ಪಿತೃ ಸೂರ್ಯಾಗ್ನ್ಯಾದಿ ಗುರು ದೇವತೆಗಳಿಗೆ ಸೇವೆಯು ಸಲ್ಲದೇ ಹೋಗಲಿ, ರಮಾ ಬ್ರಹ್ಮಾದಿಗಳಿಗೆ ಸೇವೆ ಇಲ್ಲದೇ ಹೋದರೆ, ಸರಿ ದೇವತಾ ಪೂಜೆಯೂ ಅಧಿಕಾರಿಗಳಿಗೆ ಆಗದೆ ದೇವತಾ ಪ್ರಸಾದವೂ ಸಮಸ್ತ ಗುರು ಭಕ್ತಿಯೂ ಮುಳುಗಿ ಹೋಗಿ ಪಿತೃ ಕ್ರಿಯೆ ಮೊದಲಾದುದರಿಂದ ಪಿತೃ ದೇವತಾದಿಗಳ ತೃಪ್ತಿಯೇ ಮುಳುಗಿ ಹೋಗಲಿ– ಮುಖ್ಯ ಪ್ರಾಣಾಧಿಷ್ಠಾನ ಹೊರತು ಶ್ರೀಹರಿ ಚಿಂತನೆಯೋ ನರಕ ಪ್ರಾಪಕ ಎಂತ ಹಿಂದೆ ಹೇಳಿದ್ದೇನಾದುದರಿಂದ ಇಲ್ಲಿ ತಿಳಿಯುತಕ್ಕದ್ದು ಹ್ಯಾಗೆ ಎಂದರೆ :– ಅಧಿಷ್ಠಾನಗಳಲ್ಲಿ ಅಂತರ್ಗತನಾದ ಶ್ರೀಹರಿಯು ಮಾತ್ರ ಸಂತುಷ್ಟನಾಗಲಿ ಎಂತ ನಿಶ್ಚಯಿಸಿ ಮುಖ್ಯವಾಗಿ ಭಗವದುಪಾಸನೆಯನ್ನು ಮಾಡ ಬೇಕು. ಹೀಗೆ ಉಪಾಸನೆ ಮಾಡುವುದರಿದ ಈ ವಂದನಾದಿ ಸೇವೆಗಳು ಪ್ರಾಣ ದೇವರು ಮೊದಲಾದ ಸೂರ್ಯಾದ್ಯಧಿಷ್ಠಾನಗಳಿಗೆ ಸರ್ವಥಾ ಸೆರುವುದಿಲ್ಲ ಶ್ರೀಹರಿಗೆ ಮಾತ್ರ ಸೇರುತ್ತದೆ, ಲಕ್ಷ್ಮೀ ಬ್ರಹ್ಮಾದಿಗಳ ಉಪಾಸನೆ ಹೇಗೆಂದರೆ ಶ್ರೀ ಹರಿಯನ್ನು ಬಿಟ್ಟು ಪುಥಗ್ವಂದನೆ ಮಾಡಿದ ಹಾಗೆ ರಮಾದೇವಿಯರಿಗೆ ನಮಸ್ಕಾರಾದಿ ಸೇವೆಯು ಕಾಲದಲ್ಲಿ ರಮಾಂತರ್ಗತ ಹರಿಯು ಮುಖ್ಯ ಸಂತುಷ್ಟನಾಗಲಿ ಎಂತಲೂ, ಅಮುಖ್ಯವೃತ್ತಿಯಿಂದ ಒಂದೇ ನಮಸ್ಕಾರಾದಿ ಕ್ರಿಯೆ ಒಳಗೆ ರಮಾದೇವಿಯರೂ

ಕೂಡ ಸಂತುಷ್ಟರಾಗಲಿ ಎಂತ ದ್ವಾದಶ ಗುರು ನಮಸ್ಕಾರದಲ್ಲಿಯೂ ಕೂಡ ಮಹಾಲಕ್ಷ್ಮ್ಯೈ ನಮಃ ಎಂಬ ಒಂದೇ ನಮಸ್ಕಾರದಲ್ಲಿ ಈ ಎರಡೂ ಚಿಂತನೆಯೂ ಇರತಕ್ಕದ್ದು. ಇದೇ ಪ್ರಕಾರಕ್ಕೆ ಓಂ ಶ್ರೀ ವಾಯವೇ ನಮಃ ಎಂಬ ವಾಯುದೇವರ ನಮಸ್ಕಾರದಲ್ಲಿಯೂ ವಾಯ್ವಂತರ್ಗತ ಶ್ರೀಹರಿಯು ಸಂತುಷ್ಟನಾಗಲಿ ಎಂತಲೂ ಪ್ರಾಣದೇವರೂ ಕೂಡ ಸಂತುಷ್ಟರಾಗಲಿ ಎಂತಲೂ ಈ ಎರಡು ಚಿಂತನೆಯನ್ನು ಒಂದೇ ನಮಸ್ಕಾರದಲ್ಲಿ ಭಾವಿಸೋಣವೇ ಇದೇ ಒಂದು ಪ್ರಾಣದೇವರ ನಮಸ್ಕಾರಕ್ಕೆ ಲಕ್ಷಣ. ಇದೇ ಪ್ರಕಾರ ಎರಡು ಚಿಂತನೆಯೂ ಬ್ರಹ್ಮಣೇ ನಮಃ ಮೊದಲು ಮಾಡಿ ಸರಸತ್ಯೇ ನಮಃ ಇತ್ಯಾದಿಗಳಲ್ಲಿಯೂ, ಸೂರ್ಯಾಯ ಸ್ವಾಹಾ, ಅಗ್ನಯೇ ಸ್ವಾಹ, ಪ್ರಜಾಪತಯೇಸ್ವಾಹ ಇತ್ಯಾದಿಗಳಲ್ಲಿಯೂ ಪಿತೃಗಳಿಗೆ ಸ್ವಧಾಕಾರಗಳಲ್ಲಿಯೂ, ಸಂಧ್ಯಾಯೈ ನಮಃ ಸಾವಿತ್ರ್ಯೈ ನಮಃ ಇತ್ಯಾದಿ ದೇವೇಭ್ಯೋ ನಮಃ ಋಷಿಭ್ಯೋ ನಮಃ ಗುರುಭ್ಯೋ ನಮಃ ಇತ್ಯಾದಿ ವೇದಾಸ್ತೃಪ್ಯಂತು ದೇವಾಸ್ತೃಪ್ಯಂತು ಋಷಯಸ್ತೃಪ್ಯಂತು ಇತ್ಯಾದಿ ಕರ್ಮಗಳಲ್ಲಿಯೂ ಸರ್ವೋಪಚಾರಗಳಲ್ಲಿಯೂ ಹರಿ ತುಷ್ಟಿ ಚಿಂತನೆಯನ್ನೂ ದೇವತಾ ತುಷ್ಟಿ ಚಿಂತನೆ ಒಳಗೆ ಕಲಸದೇ ಹೋದರೆ, ಅವನು ದೈತ್ಯನೇ ಸರಿ ಎಂತ ಹರಿಕಥಾಮೃತಸಾರದ ಭಾವ, ಹರಿಕಥಾಮೃತಸಾರ ಮಾತ್ರದಿಂದ ಇಂಥ ಅರ್ಥ ನಿಶ್ಚಯವಾಗುವುದಿಲ್ಲವಾದುದರಿಂದ ಇದಕ್ಕೆ ಮೂಲಕಾರರ ಸ್ಮೃತಿ ಹೊರತು ಇತ್ಯಾದಿ ಮರ್ಮ ಜ್ಞಾನವನ್ನು ಸಂಪಾದಿಸೇನೆಂಬ ಇಚ್ಛೆಯೇ ಭ್ರಾಂತಿ ಎಂತ ಅರ್ಥ. ಇದಕ್ಕೆ ಪ್ರಮಾಣ:–

*ಸದೇಹಮಾನಿ ಹರಯೇ ಪ್ರಣಮತ್ಕೇವಲಾಯವಾ,*
*ನದೇಹಾಯನತನ್ಮಾನಪರಾಯ ಚ ಕಥಂಚನ ।*

ಎಂತ ಕರ್ಮನಿರ್ಣಯ ಮೂಲವಾದುದರಿಂದ ಗುರ್ವಾದಿಗಳಲ್ಲಿ ಅಂತರ್ಗತ ಶ್ರೀಹರಿಯು ಮಾತ್ರ ಸಂತುಷ್ಟನಾಗಬೇಕೆಂದು ಯೋಚಿಸಿ ಸಹಸ್ರ ನಮಸ್ಕಾರಾ ಮಾಡಿದಾಗ್ಯೂ ಆ ಗುರ್ವಾದಿಗಳಿಗೆ ಒಂದು ನಮಸ್ಕಾರವೂ ಸೇರದೆ ಶ್ರೀಹರಿಯೊಬ್ಬನಲ್ಲಿಯೇ ಸೇರಿ ಕೇವಲ ಹರಿಯ ಉಪಾಸನೆ ಎನಿಸಿಕೊಳ್ಳುವುದೇ ಸಿದ್ಧ. ಆದೇ ಗುರ್ವಾದಿ ಜೀವರ ಸಂತೋಷ ಪಡಿಸಬೇಕೆಂದು ವಂದನಾದಿಗಳನ್ನು ಮಾಡುವ ಕಾಲದಲ್ಲಿ ಪೂರ್ವೋಕ್ತವಾದ ಎರಡು ಚಿಂತನೆಗಳನ್ನೂ ಮಾಡದೇತೀರದು ಎಂತ ಅರ್ಥ.

## ಪ್ರಾಕೃತ ಭಾಷೆಯಾದರೂ ಶಾಸ್ತ್ರಪರ
## (ಆಕ್ಷೇಪ ಸಮಾಧಾನ)

ಶೇಷ ಧರ್ಮ ವಚನದಿಂದ ಆಕ್ಷೇಪ:-

*ಪರನಿಂದಾ ಪ್ರಶಂಸಾಂ ಚಹ್ಯಾತ್ಮನಸ್ತು ಕರೋತಿಯಃ।*
*ಅಸ್ಯೇತಸ್ಯಾಯಸಂ ಪಿಂಡಂ ಪ್ರಕ್ಷಿಪಂತಿ ಚ ಕಿಂಕರಾಃ।*
*ಸ್ನಾನ ಹೀನಾಸ್ತು ಯೇ ವಿಪ್ರಾಃ ಗಾಯತ್ರೀ ಜಪ ವರ್ಜಿತಾಃ*
*ಬ್ರಹ್ಮಯಜ್ಞ ವಿಹೀನಾಂಶ್ಚ ತೀವ್ರೈ ನಿರಯಗಾಮಿನಃ।*
*ಸಾಯಂ ಪ್ರಾತಃ ಯಥಾ ಶಕ್ತ್ಯಾ ಪುರಾಣಂ ನ ಶೃಣೋತಿಯಃ ।*
*ಪುರಾಣ ಧರ್ಮ ಶಾಸ್ತ್ರೇಷು ಭಕ್ತಿಹೀನಾಂಶ್ಚ ಯೇ ದ್ವಿಜಾಃ ।*
*ಭಾಷಾ ಶಾಸ್ತ್ರೇಷು ಯೇ ನಿರತಾಸ್ತೇವೈ ನಿರಯಗಾಮಿನಃ ।*
*ದಿವ್ಯ ಭಾಷಾಂ ಪರಿತ್ಯಜ್ಯ ಭಾಷಯಾ ರಚಿತಾನಿಯ ।*
*ಶಾಸ್ತ್ರಾಣಿ ಹಿ ಪ್ರಶೃಣ್ವಂತಿ ತೇವೈ ನಿರಯಗಾಮಿನಃ ।*
*ಭಾಷಾಯಾರಚಿತಂ ಶಾಸ್ತ್ರಂ ಇಹಲೋಕೇ ಸುಖ ಪ್ರದಂ ಪರಲೋಕೇ*
*ಭಯಂಕರಂ ತಸ್ಮಾತ್ತಂ ವರ್ಜಯೇತ್ ।*
*ಭಾಷಾರಚಿತ ಶಾಸ್ತ್ರೇಷು ಗಾಂಧರ್ವೇಷು ರತಾಶ್ಚಯೇ*
*ತೇಷಾಂ ಸಂಗಮಪಿ ತ್ಯಾಜ್ಯಂ ಪರತ್ರ ಹಿತಕಾಂಕ್ಷಿಭಿಃ ।*
*ನಾಮಾನಿ ಮಮಶೃಣ್ವಂತಿ ಶಾಸ್ತ್ರಯುಕ್ತಾನಿ ಭಾರತ ।*
*ಶಾಸ್ತ್ರೇಷು ನಿರತಾ ಭಕ್ತ್ಯಾ ಪುರಾಣೇಷುರತಾಃ ದ್ವಿಜಾಃ।*
*ಭಾಷಾ ರಚಿತ ಶಾಸ್ತ್ರೇಷು ಬುಧಿಮಾನ್ನೈರತಿಂ ತ್ಯಜೇತ್ ।*
*ಮಮಾಜ್ಞಾ ಕರಣೇ ಯೇಷು ಪುರಾಣೇಷು ಮತಿಂ ಕುರು।*
*ಅಸಚ್ಛಾಸ್ತ್ರೇಷು ತೇಷಾಂ ಸಂಗಂ ಪರಿತ್ಯಜೇತ್।*

ಎಂತ ೨೦ ನೇ ಅಧ್ಯಾಯ

ಈ ಪ್ರಕಾರ ಪ್ರಾಕೃತ ಭಾಷಾ ಶಾಸ್ತ್ರದಲ್ಲಿ ಆಸಕ್ತರಿಗೆ ನರಕ ಪ್ರಾಪ್ತಿಯಂತ ನಿಶ್ಚಯಿಸಿ ಇದ್ದಾರಾದುದರಿಂದ ಈ ಪ್ರಾಕೃತ ಹರಿ ನಾಮ ಸುಳಾದಿಗಳನ್ನು ಈ

ಗ್ರಂಥದಲ್ಲಿ ನಿರೂಪಣೆ ಮಾಡಿದಮೇಲೆ ಈ ಗ್ರಂಥವೂ ಜ್ಞಾನಿಗಳಿಗೆ ಉಪಾದೇಯವಲ್ಲದೇ ಹೋಗಲಿ ಎಂಬ ಆಕ್ಷೇಪಕ್ಕೆ ಸಮಧಾನ, ಪುರಂದರದಾಸರು ವಿಜಯರಾಯರು ಶ್ರೀಪಾದರಾಯರು– ಶ್ರೀ ವ್ಯಾಸರಾಯರು ರಾಜರು ಜಗನ್ನಾಥದಾಸರು ಮೊದಲಾದ ಜಾತಾಪರೋಕ್ಷಿಗಳು ನರಕ ಸಾಧಕ ಪ್ರಾಕೃತ ಗ್ರಂಥ ನಿರ್ಮಾಣ ಮಾಡತಕ್ಕವರಲ್ಲವಾದುದರಿಂದ ಯೋಗ್ಯ ಜೀವರ ಸಾಕ್ಷಿ ಸಿದ್ಧವಾಗಿ ಇಂತಹ ಮಹಾ ಪುರುಷರುಗಳು ಸರ್ವಜ್ಞರಾಯರ ಚರಣ ಸೇವಾರ್ಥವಾಗಿ ಪಾಮರ ಜನಗಳಲ್ಲಿ ಇದ್ದ ಕಲಿಯ ಸನ್ನಿಧಾನ ಕಳೆದು ನಿಷ್ಕಳಂಕ ಮನಸ್ಸಿನಿಂದ ಜೀವರುಗಳು ಹರಿಗುರುಗಳ ಸೇವಾಸಕ್ತರಾಗಲಿ ಎಂತ ನಿರ್ಮಿಸಿ ಭೂಮಿಯಲ್ಲಿ ಹರವಿ ಇದ್ದಾರಾದುದರಿಂದ ಶೇಷಧರ್ಮ ವಚನಕ್ಕೆ ತಾತ್ಪರ್ಯವೇನೆಂದರೆ– ಯಾವ ಪ್ರಾಕೃತವು ಹರಿಗುರು ಭಕ್ತಿಸಾಧಕವಲ್ಲವೋ ಮತ್ತು ಭಾಗವತಾದಿ ಪುರಾಣ ಭಾರತ ಸತ್ಸಿದ್ಧಾಂತ ಶ್ರವಣಾದಿ ಸತ್ಕುತೂಹಲ ಜನಕವಲ್ಲವೋ ಅಂತಹ ವೀಣಾಗಾನಾದಿ ತಾಮಸ ರಾಜಸ ವಿಷಯಕ ಮನೋಪಯೋಗಿ ಪ್ರಾಕೃತ ಭಾಷಾ ಶಾಸ್ತ್ರಪರ ಎಂತ ಅರ್ಥ. ಅನುದಿನವು ಶ್ರವಣ ಮನನಾದಿ ಸಾಧನ ಮಾಡು ಇನ್ನು ಸಂಶಯವ್ಯಾತಕೋ । ಎಂತ ರಾಜರ ಉಕ್ತಿ. ಉದಯ ಕಾಲದಲ್ಲೆದ್ದು ಮುದದಿಂದ ಹರಿನಾಮ ವದಗಿ ಆತುರನಾಗಿ ವದನದಿ ಕೊಂಡಾಡಿ ವಿಧಿ ಪೂರ್ವಕವಾಗಿ ಸ್ನಾನಾದಿ ಕರ್ಮ ಮುಗಿಸಿ ಬುಧರಲ್ಲಿಗೆ ಹೋಗಿ ಕಥಾಶ್ರವಣ ಮಾಡಿ ತರುವಾಯ ಉದರಗೋಸುಗವಾಗಿ ಸಾಧುಗಳ ಮನೆಯಲ್ಲಿ ಶುದ್ಧ ವೃತ್ತಿಯ ಮಾಡಿ ಇದ್ದನಿತರೊಳು ಸಾಕ್ಷೀಭೂತನಾಗಿ ಮೆದ್ದು ಸಕಲ ಕಾಲವನ್ನು ಕಳೆಯ ಬೇಕು. ಮುದ್ದು ಮೋಹನರಂಗ ವಿಜಯ ವಿಠಲರೇಯಗೆ ಮುದ್ದಾಗುವವನೆ ನಿಜ ದಾಸ ಸಿದ್ಧ॥ ಎಂತ ಏತೇನ ಮೂಲ ಟೀಕಾಗ್ರಂಥಗಳಿಗೆ ಟಿಪ್ಪಣಿ ಕರ್ತೃಗಳೋಪಾದಿಯಲ್ಲಿ ಇವರುಗಳು ಗ್ರಂಥ ಪಂಗ್ತಿಯನ್ನು ಹಿಡಿದು ಅರ್ಥ ಮಡುವುದನ್ನು ಬಿಟ್ಟು ಜೀವರ ಭಕ್ತಿಯನ್ನೂ ಮನಸ್ಸನ್ನೂ ಇಂದ್ರಿಯಗಳನ್ನೂ ಹಿಡಿದು ನಿಷ್ಕಳಂಕರನ್ನು ಮಾಡಿ ಮೂಲ ಗ್ರಂಥದ ತಾತ್ಪರ್ಯದ ರುಚಿಯನ್ನು ತೋರಿಸಿ ಸದ್ಗತಿಪ್ರದರಾಗಿ ಇದ್ದಾರೆ ಎಂತ ಅರ್ಥ. ಶ್ರೀಹರಿಯು ಹನ್ನೆರಡಾವರ್ತಿ ಪುರಂದರದಾಸರ ಜಹಿಯನ್ನು ಸಚ್ಛಾಸ್ತ್ರದ ಮೇಲೆ ಇಡೋಣ ಅಜ್ಞಾನಿಯು ಆ

ಹರಿಯನ್ನು ಕಣ್ಣಲ್ಲಿ ಕಾಣದೆ ಹನ್ನೆರಡಾವರ್ತಿ ಕೆಳಗೆ ತೆಗೆದು ಬಿಸಾಡೋಣ ಅಜ್ಞಾನಿಕೃತ ಶ್ರೀಹರಿಕೃತ ಎರಡನ್ನೂ ಶ್ರೀವ್ಯಾಸರಾಯರು ನೋಡೀ ಪುರಂದರೋಪನಿಷತ್ತು ಎಂದು ಹೆಸರಿಟ್ಟು ಮಹಿಮೆಯನ್ನು ಒಂದಾನೊಂದು ದಿವಸದಲ್ಲಿ ಎಂಬ ವಿಜಯರಾಯರ ನಾಮದಲ್ಲಿ ಹೇಳಿ ಇದ್ದಾರೆ. ವಿಜಯರಾಯರ ಮಹಿಮೆ ತಾವು ಸೂತ್ರ ಭಾಷ್ಯ ಶ್ರವಣಾರ್ಥವಾಗಿ ಭಾಷ್ಯೋಪದೇಶ ಮಾಡಿಸತಕ್ಕ ಏನೂ ಅರಿಯದ ಅಜ್ಞಾನಿ ಬ್ರಾಹ್ಮಣನ ಕೈಯನ್ನು ತಾವು ಹಿಡಿದುಕೊಳ್ಳೋಣ ಮಾತ್ರಕ್ಕೆ ಆಬ್ರಾಹ್ಮಣರ ಮುಖದಿಂದ ಸೂತ್ರ ಭಾಷ್ಯ ಹೊರಡೋಣ ಅದೇ ಕಾಲದಲ್ಲಿ ತಾವು ಅನುಚ್ಚಾರಣೆ ಮಾಡಿಕೊಂಬೋಣ ಉತ್ತರ ಶಾಂತಿ ಆದಕೂಡಲೇ ಕೈ ಬಿಡೋಣ ಅನಂತರ ಅವರ ಮುಖದಿಂದ ಹೊರಡೋಣ ಇಲ್ಲ. ಹೀಗೆ ಗುರುಗಳನ್ನು ಮಾಡಿಕೊಂಡು ಮಹಿಮೆಯನ್ನು ಅವರನ್ನು ಕಂಡಂಥ ಸತ್ಯಧರ್ಮ ಶ್ರೀಪಾದಂಗಳವರು ಹೇಳಿದ ಮಾತನ್ನು ದೊಡ್ಡ ಪಂಡಿತರ ಮುಖದಿಂದ ಕೇಳಿ ಇದ್ದೇನೆ. ಅಜ್ಞಾನಿಗಳು ತಮ್ಮ ತಮ್ಮ ಪೂರ್ವೋತ್ತರ ಜನ್ಮ ಕರ್ಮಾದ್ಯದೃಷ್ಟಗಳ ಕೇಳಿಕೊಂಬ ಅಪೇಕ್ಷೆಗಳಿಗೆ ಮತ್ತೊಬ್ಬ ಅಜ್ಞಾನಿಯ ಹಸ್ತವನ್ನು ತಾವು ಹಿಡಿದುಕೊಂಡು ಅವನ ಮುಖದಿಂದ ಹೊರಡೋಣವೇ ಹೊರತು ಸಾಕ್ಷಾತ್ತಾಗಿ ಹೇಳೋಣವಿಲ್ಲ. ಮತ್ತು ಸುಧಾದಿ ಗ್ರಂಥಗಳ ಪ್ರಬಲ ಆಕ್ಷೇಪಗಳಿಗೆ ಇವರಿಂದ ಸಮಾಧಾನೋತ್ತರ ಬರಲಿ ಎಂತ ಮನಸ್ಸಿನಿಂದ ಜ್ಞಾನಿಗಳು ಚಿಂತಿಸೋಣ ಮಾತ್ರಕ್ಕೆ ಭಾವಜ್ಞನಾಗಿ ಅಜ್ಞಾನಿಯ ಹಸ್ತ ಸ್ಪರ್ಶ ಮಾಡಿ ಅವನ ಮುಖದಿಂದ ಅನುವಾದ ಪೂರ್ವಕವಾಗಿ ಪೂರ್ವ ಪಕ್ಷಕ್ಕೆ ಸಮಾಧಾನವನ್ನೇ ಹೊಂದಿಸೋಣ, ತಮ್ಮ ಅಪರೋಕ್ಷವನ್ನು ಹೀಗೆ ಜಗತ್ತಿನಲ್ಲಿ ಪ್ರಕಟ ಮಾಡಿ ತೋರಿಸಿ ಇದ್ದಾರೆ–

ಉಗಾಭೋಗ:– ಒಂದು ಕೈಯಲ್ಲಿ ಖಡ್ಗ ಒಂದು ಕೈಯಲ್ಲಿ ಹಲಗೆ ಅಂದವಾಗಿ ಧರಿಸಿಕೊಂಡು ದಿವಾರಾತ್ರಿಯಲ್ಲಿ ಒಂದು ಬದಿಯಲ್ಲಿ ನಿತ್ಯವೀರನಾಗಿ ಹಿಂದೆ ಮುಂದೆ ಉಪದ್ರವವಿಲ್ಲದಂತೆ ಇಂದಿರೇರಮಣ ತಾವು ಕಾವುತಲಿರೆ ಬಂಧಕಗಳು ಇಲ್ಲ ಧನ್ಯ ಧನ್ಯ ಕಂದರ್ಪನ್ನೈಯ್ಯ ವಿಜಯವಿಠಲರೇಯ ಎಂದೆಂದು ಆಪತ್ತು ಬರಲೀಯನೋ "ಎಂತ ತಮ್ಮ ಶರೀರದ ನೆರಳು ಹೇಗೆ ಸಂಗಾತ ಇರತದೋ ಹಾಗೆ ಕ್ಷಣಬಿಡದೆ ಅರವತ್ತು ಘಳಿಗೆಯೂ ಯಾವಜ್ಜನ್ಮವೂ

ಶ್ರೀಹರಿಯು ಇಂತಹ ರೂಪಧರಿಸಿ ಸಂರಕ್ಷಕನಾಗಿ ಇದ್ದಾನೆ ಎಂತ ಹೇಳಿಕೊಂಡಿದ್ದಾರೆ. ಮತ್ತು ತಮ್ಮ ಸ್ವರೂಪ ಸುಳಾದಿಯಲ್ಲಿ "ದಾಸ ಪುರಂದರ ಪಾದವ ಪೊಂದಿದೆನು ಏಸು ಜನ್ಮದ ಪುಣ್ಯದ ಫಲ ರಾಶಿ ಫಲಿಸಿತೋ । ಕಾಸಿಗಾದವನು ಸಾಸಿರಕ್ಕೆ ಬೆಲೆಯಾದೆ" ಎಂತ ಉಪಕ್ರಮಿಸಿ. "ರಾಮಾವತಾರದಲ್ಲಿ ಸುರಲೀಲನಾಮಕ ಕಪಿಯಾಗಿದ್ದೆವೆಂದು– ಕೃಷ್ಣಾವತಾರದಲ್ಲಿ ನಿಕಂಪನನೆಂಬ ಯಾದವನಾಗಿದ್ದೆವೆಂದು ಹೇಳಿ" ಇದ್ದಾರೆ, ಮುಂದಿನ ಮಾತು "ಸುರಲೀಲನಾಗಿ ನಿಕಂಪನನೆನಿಸಿ ದ್ವಾರಕದಲ್ಲಿ ಚಲಿಸಿದೆ, ಕೆಲವು ದಿನ ಬಿಡದೆ ತರುವಾಯ ವರ ಕಲಿಯುಗದಲ್ಲಿ ಜನನ ಮರಣವಾಗುತ ಬಂದು ಧರೆಯೊಳಗೆ ಮೆರೆದೆ. ಹರಿಕೃಪೆಯಿಂದಲಿ। ಇವರ ಸದನದಲ್ಲಿ ತುರುವಾಗಿ ಜನಿಸಿದೆ ಸುಕೃತದಿಂದ. ಶಿರಿಪತಿ(ಸ್ಮವಿಷ್ಣು) ವಿಜಯವಿಟ್ಟಲರೇಯನ ದಾಸರು ಪೇಳುವ ಕವನ ಯರಗಲು ಕರಣಕ್ಕೆ ॥ ಸ್ಮವಿಷ್ಣು ಎಂದರೆ ಭಾವ– ಒಂದೊಂದು ಸುಳಾದಿಯಲ್ಲಿ ವಿಶ್ವಾದಿ ಸಹಸ್ರ ನಾಮಗಳಲ್ಲಿ ಇದ್ದ ಭಗವದ್ರೂಪಗಳನ್ನು ಸೇರಿಸಿ ಇದ್ದಾರೆ. ಎಂಬುದೇ ಮರ್ಮ. ಜಾತಿಕಾರನು ಎಂಬ ಸುಳಾದಿಯಲ್ಲಿ ಭೂತ ಮಹೇಶ್ವರ ವಿಜಯವಿಠಲ ಎಂದರು. ನರಸಿಂಹ ಸುಳಾದಿಯಲ್ಲಿ ಪರದೈವ ಗಭೀರಾತ್ಮಾ ವಿಜಯವಿಠಲ ಎಂದರು ಹೀಗೆ ಸರ್ವತ್ರ ತಿಳಿದು ಕೊಳ್ಳತಕ್ಕದ್ದು. ಪ್ರಕೃತ ಸುಳಾದಿ ಮುಂದಿನ ತಾಳ, "ಎಪ್ಪತ್ತುಮೂರು ವರುಷ ತಪ್ಪದೆ ಭೂಮಿವಳಗೆ ಇಪ್ಪಕಾಯದಲ್ಲಿ ಆದರಪ್ಪಂತೆ ಧಾಳಿ ತಿರುಗಿ । ಇಪ್ಪತ್ತು ದಿನ ತಪ್ಪದೆ ಸುಲಭ ನರಕ ಒಪ್ಪದಿಂದಲಿ ತಿರುಗಿ ಬಪ್ಪೆನಯ್ಯಾ ಧರೆಗೆ । ಅಪ್ಪನಪ್ಪ ಮಹೀಭರ್ತ ವಿಜಯವಿಠಲ ವಲಿದಿಪ್ಪನೋ ಹಿಂದಿಗಿಂತ ಅಧಿಕವಾಗಿ ಬಿಡದೇ ಅಂದರೆ ತಿರುಗಿ ಧರೆಗೆ ಬಪ್ಪನೆಂಬ ಮಾತಿಗೆ ದೊಡ್ಡ ಪಂಡಿತರ ಉದರದಲ್ಲಿ ಒಂದು ಕಾಲು ಇಲ್ಲದ ಕುಂಟರಾಗಿ ಹುಟ್ಟುತ್ತೇವೆ ಎಂತ ಅವರು ಯಾವ ಬ್ರಾಹ್ಮಣರ ಮುಂದೆ ಹೇಳಿದರೋ ಆ ಮಾತನ್ನು ಮತ್ತೊಬ್ಬ ಹಿರಿಯರು ಹೇಳಿದ್ದಾರೆ. ಈ ಪ್ರಕಾರ ಅತೀತಾನಾಗತ ಜ್ಞಾನಿಗಳು ನಾವು ಎಂತ ಯಾವ ಜ್ಞಾನಿಗಳೂ ಹೇಳಿಕೊಂಡಿದಿಲ್ಲವಷ್ಟೆ, ಮತ್ತು "ಅಂತರಂಗದ ಕದವು ತೆಗೆಯಿತೀಗ" ಎಂದು ನಾಮದಲ್ಲಿ "ಸ್ವಮೂರ್ತಿಗಣ ಮಧ್ಯಗ ಸಚ್ಚಿದಾನಂದೈಕ ರಮೆಯ ಸಹಿತ ಆಲಿಂಗತ್ವದೀ । ಕಮಲಜಾದಿಗಳಿಂದ ಸ್ತುತಿಸಿಕೊಳ್ಳುತ ಹೃತ್ಕಮಲದೊಳಗಿದ್ದ

ವಿಜಯವಿಠಲನ ಕಂಡೆ" ಎಂತ ಯಾಕೆ ಹೇಳಿಕೊಂಡಿದ್ದಾರೆ, ಎಂದರೆ ಸ್ವರೂಪಯೋಗ್ಯ ಬಿಂಬಾಪರೋಕ್ಷಕ್ಕೆ ಉತ್ತಮ ಸಾಧನರೂಪ ಧ್ಯಾನೋಪಾಸನ ಪ್ರವರ್ತಿತರಾಗಿದ್ದಾರಾದುದರಿಂದ, ಇಂಥ ಹಿರಿಯರು ಇಂಥ ಜೀವಸ್ವರೂಪರು ಎಂತ ತಮ್ಮ ತಮ್ಮ ಜೀವಸ್ವರೂಪವನ್ನು ಮೊದಲು ಮಾಡಿ ದೊಡ್ಡವರ ಜೀವಸ್ವರೂಪಗಳನ್ನು ಹೇಳತಕ್ಕವರಾದುದರಿಂದಲೇ ಅಲ್ಲಲ್ಲಿ ಹೇಳಿ ಅವುಗಳಿಗೂ ವ್ಯಾಸರಾಯರ ವಿಷಯಕ್ಕೆ ಒಂದು ಸುಳಾದಿ, ಶ್ರೀಪಾದರಾಯರ ವಿಷಯಕ್ಕೆ ಒಂದು ಸುಳಾದಿ ಎರಡುಮೂರುಕಡೆ ಸತ್ಯಾಧಿರಾಜರ ವಿಷಯದಲ್ಲಿ ಪ್ರಹ್ಲಾದನಿಂದ ಸಾಕ್ಷಾದುಪದೇಶ ಪಾತ್ರನಾದ ಬಾಲಕನಾದ ಜೀವನೇ ಗೋವಿಂದ ವಡೆಯನಾಗಿ ಸತ್ಯಾಧಿರಾಜರೆಂದು ಒಂದು ನಾಮದಲ್ಲಿ ಹೇಳಿ ಇದ್ದಾರೆ. ಆದ ಪ್ರಯುಕ್ತ ದುರಭಿಮಾನದ ಮೂಢ ವಿಶ್ವಾಸದ ಮೋಹಕ ಮಾತನ್ನು ಅವರು ಆಡತಕ್ಕವರಲ್ಲವಾದುದರಿಂದ ಅವರ ವಚನಕ್ಕೆ ಅನ್ಯಥಾ ಹೇಳತಕ್ಕವನು ಶ್ರುತಿ ಸ್ಮೃತಿಗಳಿಗೆ ವಿಪರೀತ ಅರ್ಥವಾದಿಯಂತೆ ಹರಿಗುರು ದ್ರೋಹ ಪಾತ್ರನಾಗಿ ಆದರ ಫಲವು ಯಮಲೋಕದಲ್ಲಿ ಅವನಿಗೆ ಅನುಭವ ಬರುವುದೇ ನಿಶ್ಚಯವು. ಈ ಮಾತುಗಳನ್ನು ಈ ಗ್ರಂಥದಲ್ಲಿ ಬರಿಯದೆ ಇರಬಹುದಷ್ಟೆ ಅಂದರೆ ಪರಲೋಕ ಸಾಧನ ಪ್ರತಿಬಂಧಕವಾದ ಸ್ವೋಚ್ಛಾಪರಾಧ ದ್ರೋಹಗಳು ಇಷ್ಟು ಸೂಕ್ಷ್ಮ ಸ್ವಲ್ಪ ಮಾತುಗಳಲ್ಲಿಯೇ ತಗಲಿಕೊಂಡಿರುತ್ತದೆ ಎನ್ನುವುದಕ್ಕೋಸ್ಕರ ತೀರದ ಕರ್ಮರೂಪವನ್ನಾಗಿ ಬರೆದು ನಾನು ಒಂದನ್ನೂ ಅರಿತವನಲ್ಲವಾದುದರಿಂದ ನನ್ನ ಹಿರಿಯರೇ ಉದ್ಧಾರ ಮಾಡಬೇಕು. ನಾಮ

*ಆವಜನುಮದ ಪಾಪಬಂದೊದಗಿತೋ ಎನಗೆ ದೇವ ಗಂಗೆಯು ನೋಡಿದೆ, ದೇವಕೀ ಸುತನೊಲಿದು ಕರೆತಂದು ಎನನು । ಪಾವನ್ನ ಮಡಿದನೋ ಕೇಳಿ ॥ ಪ॥*

*ಗುರುಗಳನುವಹಿಸಿ ಭೂಸುರರಿಗೆ ಕಠಿನ ಉತ್ತರ ಹೇಳಿ ಸಾಗಿಸಿದೆನೋ। ಇದೇ ಪುಣ್ಯಜನಕ ಪಾಪ ಎಂತಲೂ ಮೂರು ನುಡಿಗಳ ಭಾವ ॥ ಮುಂದಿನ ಮಾತು*

ವರ ಬ್ರಾಹ್ಮಣನ ತಪ್ಪು ಬಲು ಇರಲು ಇಲ್ಲವೇ ಸರಿಯೆಂದು
ಸ್ಥಾಪಿಸಿದೆನೊ ।
ಮುರವ ಲಗ್ನಕ್ಕೆ ಪೋಗಿ ಪುಸಿ ದ್ರವ್ಯವನೆ ಪೇಳಿ ಮರಳಿ
ಪೂರ್ತಿಸದೆ ಪೋದೆನೋ । ಏನೋ ।
ಮರಳಿ ವಿಪ್ರಗೆ ವ್ಯಥೆ ಬರಲು ಸಾಕ್ಷಿಯಾಗಿ ಪರಿಹರಿಸಿ
ಬಂದಿದ್ದೇನೋ ಏನೋ ॥ ೧॥

ಘನ ತೀರ್ಥ ಯಾತ್ರೆಗೆ ಹೋಗುವಾಗಲಿ ವಂಚನೇ ಕರ್ಮ ಮಾಡಿದ್ದೇನೋ।
ಜನಪತಿಗಳ ಮಾತು ಕೇಳದೆ ಧರ್ಮಕ್ಕೆ ಅನುಕೂಲವಾಗಿದ್ದೆನೋ ।
ಮನೆಗೆ ಬಂದ ಆತಿಥಿಗಳ ಜರಿದು ಪಿತ್ರಾದ್ಯರಿಗೆ ಉಣಿಸಿ ಸುಖ
ಪಡಿಸಿದ್ದೆನೋ।
ವನಗಳನೆ ಕಡಿದು ದೇವಾಲಯವ ಕಟ್ಟಿಸಿ ಕ್ಷಣಕ್ಷಣಕೆ ಅರ್ಚಿಸಿದೆನೋ
ಏನೋ ॥೨॥

ಉತ್ತಮರು ಮನೆಗೆ ಬಂದಾಗ ಮಾಡುವ ಸತ್ಕರ್ಮ ತೊರೆದಿದ್ದೆನೋ
ಹೆತ್ತವರ ಬಾಂಧವರ ಧನದಿಂದ ಕೆರೆ ಭಾವಿ ಹತ್ತೆಂಟು ಕಟ್ಟಿಸಿದೆನೋ।
ದತ್ತಾಪಹಾರವನೆ ಮಾಡಿ ಆದರಿಂದಾಗ್ನಿಹೋತ್ರವನು ಸಾಧಿಸಿದೆನೋ
ಏನೋ
ಇತ್ಯಧಿಕ ನಿರ್ಬೀಜ ಪಾಪನ್ಯಸಗಿ ಕೃತಾರ್ಥನಾದೆನೋ ವಿಜಯವಿಠಲನ
ಕರುಣದಲಿ ॥೩॥

ಎಂತ ಇಂತಹ ಪರಲೋಕ ಸಾಧನ ಧರ್ಮಗಳು ಪರಮ ಸೂಕ್ಷ್ಮಗಳಾದುದರಿಂದ ಹಿರಿಯರನ್ನು ಬಿಟ್ಟು ಶ್ರೀಹರಿಯನ್ನು ನಂಬಿದವರು ಒಬ್ಬರೂ ಉದ್ಧಾರವಾಗಲಿಲ್ಲವಾದುದರಿಂದ ಗುರು ಹಿರಿಯರನ್ನು ನಂಬಿದವರು ಒಬ್ಬರೂ ಕೆಡಲಿಲ್ಲವಾದುದರಿಂದ ಪ್ರಾಕೃತ ಶರೀರ ರಹಿತನಾದ ಸ್ವಾಮಿಯು ಗುರುಗಳಲ್ಲಿ ಕಾಲನಾಮಕನಾಗಿ ಕುಳಿತು ಶಿಕ್ಷಿಸುತ್ತಾನೆ. ಆದುದರಿಂದ ಗುರುಗಳೇ ತಾರಕರಾಗ ಬೇಕೆಂದು ಇದನು ಬರೆದುಕೊಂಡು ಇದ್ದೇನೆ.

ಸುಳಾದಿ:-

*ಸಕಲವ ಕೃಪೆಯಿಂದ ಇತ್ತು ಪಾಲಿಸಿದೀ ಲೌಕಿಕದೊಳು ಎನ್ನನು*
*ಕಾಲ ಕಾಲಕ್ಕೆ ದೇವಾ ।*
*ಕಕುಲಾತಿ ಒಂದಿಲ್ಲ ಮುಂದಿನ ಅಭಿಲಾಷೆ ಆಕಟಕಟ ನಾನು*
*ಇದನೆ ಬೇಡಿಕೊಂಬೆ ।*
*ಅಕುಟಿಲ ನಿನ್ನ ಭಕುತರ ಕೂಡೆ ಸಖತನ ಸುಖವನು ಕೊಡು ಲವ*
*ಮಾತ್ರ ದ್ವೇಷ ಬೇಡಾ ।*
*ಮುಕುತಿಯನೊಲ್ಲೆ ಮುಕುತಾರ್ಥ ಇದೆ ಬೇಕೋ ಧಿಕು ಧಿಕು ।*
*ಈ ಸೌಖ್ಯ ಬೇಡದವನ ಜನ್ಮ ಅಖಿಲೇಶ್ವರ ಎನ್ನ ಭಾರ ನಿನ್ನದು*
*ಪಾತಕನೆಂದು ನೋಡದೆ ನಿನ್ನ ನಾಮದಿ*
*ಅಂತಕನ ಭಯದಿಂದ ಕಡೇ ಮಾಡೆ ದೂರವೇ ।*

ಎಂತ ಹೇಳಿಕೊಂಡಿದ್ದಾರಾದುದರಿಂದ

*ಹರಿಕಥಾಮೃತ ಸಾರದಲಿ*
*"ಈ ಉಪಾಸನೆಗೈವರಿಳೆಯೊಳು ದೇವತೆಗಳಲ್ಲದೆ ನರರಲ್ಲಾವ*
*ಬಗೆಯಿಂದಾದರಿವರರ್ಚನೆಯೆ*

*ಹರಿಯ ಪೂಜೆ ಕೇವಲ ಪ್ರತಿಮೆಗಳೆನಿಪರು ರಮಾವಿನೊಂದಿಗೆ ।*
*ಇವರನುಗ್ರಹವೇ ದೇವರನುಗ್ರಹವೆಂದು ಕರೆಸುವುದು ಮುಕ್ತಿಯೋಗ್ಯರಿಗೆ"*

ಎಂದು ಹೇಳಿರುವುದರಿಂದ ಈ ಗ್ರಂಥ ಮಾಡಿದರಿಂದ ಮನುಷ್ಯನ ಬುದ್ಧಿ ಹೇಗಾಗಬೇಕೆಂದರೆ- ಜ್ಞಾನಿಗಳ ದಾರಿದ್ರ್ಯಾದಿಗಳನ್ನು ಹರಿಭಕ್ತನು ಕಣ್ಣಿನಲ್ಲಿ ನೋಡಿ ಬದುಕಿರೋಣವೇ ಕಷ್ಟವಾದುದರಿಂದ ತನ್ನ ಶಕ್ತಿ ವಂಚನೆ ಮಾಡದೆ ಪುಣ್ಯವಂತರಿಗೆ ದ್ರವ್ಯಾದಿಗಳನ್ನು ದಾನ ಮಾಡುವ ಬುದ್ಧಿ ಹುಟ್ಟಿ ತನಗೆ ಮತ್ತೊಬ್ಬನಿಂದ ಕನಕಾಭಿಷೇಕ ಮಾಡುವ ಕಾಲದ ಸುಖಕ್ಕಿಂತಲೂ ಅನಂತ ಗುಣ ಸಂತೋಷ ಹುಟ್ಟಿಸ ಬೇಕೋ "ನದಾನಾತ್ಪರಮಂ ಸುಖಂ" ಅಂದರೆ ಜ್ಞಾನ ದಾನವೇ ಮೊದಲಾದ ಜ್ಞಾನ ಜನ್ಯ ಸುಖಕೆ ಮುಕ್ತಿ ಸುಖ ಮೊದಲಾದುದು

ಕಡಿಮೆ ಎಂತ ತಿಳಿಯ ಬೇಕು. ಎಂತ ತಾತ್ಪರ್ಯವು. ದರಿದ್ರನಾದರೂ ಒಬ್ಬ ಬ್ರಾಹ್ಮಣನಿಗೆ ಭೋಜನ ಮಾಡಿಸೋಣವೇ ಸಾಕಾದ ಪ್ರಯುಕ್ತ ಸರ್ವ ಸಮರ್ಥವಾದ ವ್ಯಷ್ಟಾನ್ನವನ್ನು ಭಕ್ತಿ ಪೂರ್ವಕವಾಗಿ ಸಮರ್ಪಿಸಿ ಧನ್ಯನಾಗೋಣ- ತನಗೆ ರೋಗಾದ್ಯುಪದ್ರವದಿಂದ ಜಿಹ್ವಾ ಚಾಪಲ್ಯವಿದ್ದರೆ ಪಂಗ್ತಿ ಸೇರದೆ ಮರೆಯಲ್ಲಿ ದುಃಖದಿಂದ ಚಾಪಲ್ಯ ಪರಿಹಾರ ಮಡಿಕೊಂಬೋಣ, ಪಂಗ್ತಿ ಭೇದ ಮಾಡಿ ಪಾತಕರ ಒಡಗೂಡಿ ಅಂತಕನ ಬಾಧೆಯಲಿ ಸಿಲುಕಿವೀ ಎಂತ "ಯಾಕೆ ಮೈಮರೆದಿ ನೀನು" ಎಂಬ ರಾಜರ ವಚನ.

ಸುಳಾದಿ:-

*ಘನ ಕರ್ಮಕ್ಕೆ ಕ್ಲಿಪ್ತಾನಂದ ನಾಶನ ಪ್ರಾರಬ್ಧಕ್ಕೆ ಸೂಚನವಾಗ್ಯದೆ । ಅಣು ವಿಕರ್ಮದಿಂದ ಉತ್ಸಾಹಕ್ಕೆ ನಾಶನ ಮಹತೀನ ವಿಕರ್ಮಕ್ಕೆ ಸಹಾಯ ವಿಕ್ಲಪ್ತಿಗೆ । ಅನಭಿವ್ಯಕ್ತಿ ಸಿದ್ಧ. ಇವರೇ ನಿರಂಶರು.*

ಈಗಿನ ಅಣು ಪಾಪವೇ ಮುಂದಿನ ಘನ ಪಾಪಕ್ಕೆ ಜನಕ । ಎಂತ ಉತ್ಕ್ರಾಂತಿ ಸುಳಾದಿ. ಆದುದರಿಂದ ಈ ಕಲಿ ಕಾಲದಲ್ಲಿ ಸಾಧನ ಮಾಡುವವರೇ ದುರ್ಲಭರು. ಮಾಡುವುದನ್ನೂ ದಕ್ಕಿಸಿಕೊಳ್ಳಲಾರರು, ಅವರವರ ಪೂರ್ವ ಕರ್ಮಾನುಕೂಲ ಬುದ್ಧಿ ಪ್ರೇರಕ ಪ್ರಾಣಾಂತರ್ಯಾಮಿಗೆ ಅನಂತಾನಂತ ನಮಸ್ಕಾರ. ಮನಸ್ಸಿನ ವ್ಯಾಪಾರ ನೋಡಲು ಬಲು ಕಠಿನ, ಎನಗೆ ನಿಲ್ಲದೋ ದೇವ ವಿಜಯವಿಠಲರೇಯ।

ಇದು ಯಾವ ಸುಳಾದಿ ಜತೆ ಎಂದರೆ – ಪರಾಧೀನಗಳಾದ ದ್ರವ್ಯಗಳನೆ ಬಯಸಿ ಬರಿದೆ ಆವಾಗಲೂ ನೋವೇ ನೋವೇ । ಕರಕೆ ಪ್ರಾಪುತವಾಗದಿರಲು ಕುದಿದು ಕುದಿದು ಇರಳೂ ಹಗಲೂ ಕೋಪದಿ ತೋವೆ ತೋವೆ ದೊರಕೆ ಅತಿ ಲೋಭದಿಂದ ಮತ್ತಾರಿಗೂ ಸುರದೆ ಮರೆಯದೆ ಬೊಬ್ಬಿಮ್ಮೆ ಸಾವೆ ಸಾವೆ । ಎಂಬ ಸುಳಾದಿಗೆ ಜತೆ. ವಿಜಯರಾಯರ ಸುಳಾದಿಗಳು ಯಾವ ಯಾವ ದೇಶಗಳಲ್ಲಿ ಎಷ್ಟೆಷ್ಟು ಹರವಿ ಆದೆಯೋ ಅವುಗಳ ಪ್ರಮೇಯ ರಹಸ್ಯಗಳು ಸಾಕಲ್ಯೇನ ಯಾವ ಹಿರಿಯರು ಬಲ್ಲರೇ?. ನಾನು ಅರಿಯದ ಬಾಲಕನಾದುದರಿಂದ

ಈ ದೇಶದಲ್ಲಿ ಒಂದು ಹರವಿ ಇರುವುದರಲ್ಲಿಯೂ ಶತಾಂಶದಲ್ಲಿ ಒಂದಂಶವನ್ನು ನಾನು ಮೂಢ ಬುದ್ಧಿಯಿಂದ ನೋಡಿದವನೇ ಹೊರತು ಸಾಕಲ್ಯೇನ ಅದರ ಮರ್ಮವನ್ನು ಸರ್ವಥಾ ನಾನು ಅರಿಯೆ.

## ವಿನಯೋಕ್ತಿ- ಗ್ರಂಥ ಸಮರ್ಪಣೆ

ಹಾಗಾದರೆ ಹೇಗೆ ಇದನ್ನು ಬರೆದದ್ದು ಎಂದರೆ ಬುದ್ಧಿ ವಿಶದರ್ಥವಾಗಿ ಹೊರಟ ಪ್ರಯುಕ್ತ ಅತಿಮಂದ ಜನರಿಗೆ ಸುಮಾರ್ಗದಲಿ ಆಸೆಯಾದರೂ ಹುಟ್ಟಿದರೆ ಸತ್ಸಿದ್ಧಾಂತಿಗಳು ನಮಗೆ ತಾರಕರು ಎಂಬ ಮೂಢ ಭಕ್ತಿಯೇ ಭಕ್ತರಿಗೆ ತಾರಕವಾಗಲಿ ಎಂತ ಗುರುಸೇವಾರೂಪವನ್ನಾಗಿ ನಾನು ಬರೆದುಕೊಂಡಿರುವುದರಿಂದ ವಿತಾರಿತವನ್ನೆಲ್ಲಾ ಲಾಭಾದಿ ಭಾಗ್ಯವಂತರಲ್ಲಾ ಎಂತಲೂ "ಯಾರಿಗೆ ನಿನ್ನ ಮಹಿಮೆ ಮಾರಿ ಧನ್ಯನಾಗಿ" ಎಂಬ ಸುಳಾದಿ ಮಾತನ್ನು ಮರೆತು, ಈ ಗ್ರಂಥದ ಪ್ರಮೇಯಗಳನ್ನು ಅಂತರಂಗ ಧ್ಯಾನರೂಪಯೋಗವನ್ನಾಗಿ ಮಾಡಿಕೊಳ್ಳದೆ ಜ್ಞಾನಿಗಳ ಮುಂದೆ ಬುದ್ಧಿವಂತನಂತೆ ಆಕ್ಷೇಪಗಳನ್ನು ಮಾಡಿಕೊಂಡು ದೊಡ್ಡವನು ಎನಿಸಿಕೊಳ್ಳಬೇಕೆಂದು ಅಪೇಕ್ಷೆ ಹುಟ್ಟೋಣ ಮಾತ್ರದಿಂದಲೂ ಅವನು ವಿಜಯರಾಯರಿಗೆ ದ್ರೋಹಿಯಾಗಲಿ. ತಮ್ಮ ತಮ್ಮ ಮನಃಪೂರ್ವಕ ತಿಳಿದುಕೊಳ್ಳಬೇಕೆಂಬ ವಿಶ್ವಾಸದಿಂದ ಕೇಳುವವರಿಗೆ ಶ್ರೀಹರಿಯು ಇಹಪರ ಸೌಖ್ಯಗಳನ್ನು ಕೊಟ್ಟು ಸಂರಕ್ಷಿಸುವುದೇ ಸಿದ್ಧ. ಸಂಶಯವಿಲ್ಲ. – ಅದು ಹ್ಯಾಗೆಂದರೆ ಸುಳಾದಿ :–

"ನದಿ ಮೇರು ಶಿಖರಾಗ್ರದಲಿ ಕುಳಿತು ಕರದಲ್ಲಿ ಪೀಯೂಷ ಪಾತ್ರೆಯ ಪಿಡಿದು ಸುರಿದು ಸುಖಿಸುವಂತೆ ಎನಗಿಂದು ದೊರಕಿತು ಹರಿಯ ಚರಣ ನಾಮಾಮೃತ ಸುರಿದು ಸುಖಿಸದೇ ಗುರುಗಳನುಗ್ರಹ ಪಿರಿದಾಗಿ ಸಿದ್ಧಿಸಿತು– ವೆಂಕಟ ಸಂಕಟಹರಣ ಹರಿ ಹರಿಣಾಂಕಗಿತಿರಾಯ । ನರಿಗೆ ವಂಚಕನಾಮ ಉಂಟಾಗಿದ್ದದ್ದೂ ಪರಿಹಾರವಾಯಿತು ನೋಡಿರೋ ನೋಡಿರೋ ಧರೆಯೊಳು– ನಾನೊಬ್ಬ ವಂಚಿತನಾಗಿದ್ದೆ ಕರುಣಮಾಡಿದ ಹರಿ– ತನ್ನ ನಾಮವೆಂದು

ಸುರಪಾಲಕ ರಂಗವಿಜಯವಿಠಲರೇಯನ ನಿರೀಕ್ಷಿಸಿಕೊಂಡಾಡಿ ಭವತಾರಕನಾದೆ॥" ಎಂದು ಸೂರ್ಯ ಪುಟದಂತೆ ಎಂಬ ಸುಳಾದಿ.

"ಶ್ರವಣ ಮನಕಾನಂದವೀವದು। ಭವಜನಿತ ದುಃಖಗಳ ಕಳೆವುದು। ವಿವಿಧ ಭೋಗಂಗಳಿಹ ಪರಗಳಲ್ಲಿತ್ತು ಸಲಹುವುದು." ಎಂತ ಜಗನ್ನಾಥದಾಸರ ಹರಿಕಥಾಮೃತಸಾರ. ಶ್ರೀ ಹರಿವಾಯುಗಳ ಆಶ್ಚರ್ಯ ವ್ಯಾಪಾರವೇ ಇದು ಹೊರತು ನನ್ನ ಯತ್ನವಲ್ಲವು. "ಆವುದಾವುದೋ ಪುಣ್ಯ ಎನಗೊಂದು ತಿಳಿಯದು। ದೇವೇಶ ವಿಜಯವಿಠಲ ವಲಿದ ಕಾರಣ ।" ಎಂತ ಗೋತ್ರಪುರವೆಂಬ ಸುಳಾದಿ ಜತೆಯಲ್ಲಿ ಅವರೇ ಹೇಳಿಕೊಂಡಿದ್ದಾರೆ. ಆದುದರಿಂದ ನಾನಲ್ಲವಾದ ಪ್ರಯುಕ್ತ ಶ್ರೀಹರಿವಾಯುಗಳೇ ಸಂತುಷ್ಟರಾಗಲಿ. ಇತ್ಯಶೇಷ ಮತಿ ಮಂಗಳಂ।

***ನಿತ್ಯೋತ್ಸವೋ ಭವತ್ತೇಷಾಂ ನಿತ್ಯಶ್ರೀರ್ನಿತ್ಯ ಮಂಗಳಂ ।***
***ಏಷಾಂ ಹೃದಿಸ್ಥೋ ಭಗವಾನ್ ಮಂಗಳಾಯತನೋ ಹರಿಃ ॥***
***ಇತ್ಯುಪಾಸನಾ ಪ್ರಕರಣಂ ಸಂಪೂರ್ಣಂ***

ದಾಸಾರ್ಯ ಪ್ರಾಕೃತೋಕ್ತಿಃ ಸುರತರೋ ಭರತ ಶ್ರೀ ಹರೇಸ್ಸನ್ನಿಧಾನಾತ್ಪೂರ್ಣ ತತ್ಪ್ರೀತ್ಯೈ ಗುರುಕುಲ ಪದ ಸೇವಾಭಿವೃದ್ಧ್ಯೈವ ಮುಕ್ತ್ಯೈ । ಸಚ್ಛಾಸ್ತ್ರಜ್ಞೇಷ್ವವಜ್ಞಾ ಕಲಿಗತ ಮತೇತ್ಯೇವ ಪದ ಜ್ಞಾನಮೂರ್ಧಾ ಶಿಕ್ಷಾರ್ಥಂ ಪ್ರಾಕೃತಾನಾಮತಿ ವಿಶದ ಕೃತೇ ಗ್ರಂಥತೋಸ್ತ್ವಾರ್ಯ ಸೇವಾ॥೧॥

ಇತ್ಯಾಲೋಚ್ಯ ಮಯಾ ಸುಮಂದ ಮತಿನಾ ಭಕ್ತ್ಯಾದಿ ವೃದ್ಧೀಪ್ಸುನಾ। ಶಾಸ್ತ್ರಾರ್ಥ ನವಿಜಾನತ್ಯೇವ ಹಿ ರತಾ ಉಕ್ತೇತಿ ಸೇವಾಕೃತಾ। ಹಾಸ್ಯಂ ವೈ ವಿಜಯಾರ್ಯದಾಸ ವಚನಂ ಬ್ರಹ್ಮಾಪರೋಕ್ಷಂ ವಿನಾ । ಯೋ ನಿರ್ವಕ್ತಿ ತಥಾಪ್ಯವಕ್ರ ಪದವೀಂ ಗಂತುಂ ಹಿ ಸತ್ಪ್ರಾಣಿನಾಂ । ಶ್ವೇತಾದ್ರೀಂದ್ರಗ ರಂಗ ಪಾಲಿತ ಪುರೇ ದಾಸಾರ್ಯಕಾನ್ ಶ್ರೀಗುರೂನ್ ವಿದ್ಯಾಧೀಶ ಗುರೂನ್ ಪ್ರಣಮ್ಯ ಶಿರಸಾ ನಾಮ್ನಾ ನೃಸಿಂಹೇನವೈ। ಸ್ವಪ್ನೇ ಆಚಾರ್ಯ ಯತೀಶ್ವರೈರ್ಹರಿಪದೇ ಮತ್ಪ್ರಾಣಿನಾರ್ಚಾ ವಿಧೌ ಸ್ಥಿತ್ವಯೋಕ್ತ್ಯಭಿದೀರಿತೇ ಚ ಗುರವೋ ಕ್ಷಾಮ್ಯಂತು ದೋಷಾನ್ ಬಹೂನ್ । ಗ್ರಂಥೋ ಅಯಂ ಬಾಲ ಬುಧ್ಯಾ ವಿರಚಿತ ಪರತತ್ತ್ವ

ವಸ್ಯ ಸಂವರ್ಣನಾಖ್ಯೋಪ್ಯಸ್ಯಾರ್ಥೇ ಸ್ವಪ್ನ ಲಬ್ಧೈಃರ್ಯತಿಭಿರಭಿಹಿತಂ ವಿಷ್ಣು ಭಕ್ತೇಮದನ್ಯೇ ॥ ಶೃಣ್ವೆತ ನಾಮಧೇಯಂ ತವನಿಜ ಸುಖದಾ ಮುಕ್ತಿಮಾಣಿಕ್ಯಮಾಲೇತಿ ಯಂ ಪಾಣಯ್ಯೆಜ್ಞಪ್ತ ಲಬ್ಧೈಃರನವಗತ ಪರ್ಯೈರ್ಮುಕ್ತಿ ಮಾಣಿಕ್ಯಮಾಲಾ ॥

*ಯಸ್ಸರ್ವಗುಣ ಸಂಪೂರ್ಣಂ ಸರ್ವದೋಷ ವಿವರ್ಜಿತಃ ।*
*ಪ್ರಿಯತಾಂ ಪ್ರೀತಾಏವಾಲಂ ವಿಷ್ಣುರ್ಮೇ ಪರಮಸ್ಸುಹೃತ್ ॥*

*ಇತಿ ಶ್ರೀ ಪರತತ್ತ್ವ ವರ್ಣನ ಮುಕ್ತಿ ಮಾಣಿಕ್ಯ ಮಾಲಾ*
*ಸಂಪೂರ್ಣಂ*
*ಶ್ರೀ ಭಾರತೀರಮಣ ಮುಖ್ಯಪ್ರಾಣಾಂತರ್ಗತ*
*ಶ್ರೀ ಲಕ್ಷ್ಮೀ ನರಸಿಂಹ ಪ್ರಿಯತಾಂ*
*॥ ಶ್ರೀ ಕೃಷ್ಣಾರ್ಪಣಮಸ್ತು ॥*

ಶ್ರೀ ವಿಶ್ವಾವಸು ಸಂವತ್ಸರೇ– ಜ್ಯೇಷ್ಠ ಮಾಸೇ–
ಕೃಷ್ಣ ಪಕ್ಷೇ– ಷಷ್ಠ್ಯಾಂ – ಭಾನುವಾಸರೇ–
ಜೀ. ಕೆ. ಮಧ್ವರಾಯೇಣ ಲಿಖಿತಂ
॥ ಸಂಪೂರ್ಣಂ ॥ ಶ್ರೀ ಕೃಷ್ಣಾರ್ಪಣಮಸ್ತು ॥
ಬೆಂಗಳೂರು. ೨೦–೬–೧೯೬೫.

* * * * *

# ಆಕರಗ್ರಂಥಗಳು

ಪಂಚರಾತ್ರ ಅಷ್ಟೋತ್ತರ ಅಷ್ಟೋತ್ತರ ಶತ ಸಂಹಿತಾಂತರ್ಗತ ಪ್ರಕಾಶ ಸಂಹಿತಾ ಮತ್ತು ವಿಷ್ಣು ರಹಸ್ಯ

ಭಗವಾನ್ ಶ್ರೀ ವೇದವ್ಯಾಸ ಕೃತ–

ಬ್ರಹ್ಮ ಸೂತ್ರ

ಗರುಡ ಪುರಾಣ (ಬ್ರಹ್ಮ ಕಾಂಡ)

ಗೀತಾ

ವಾಯು ಪುರಾಣ

ಆದಿತ್ಯ ಪುರಾಣ (ವೇಂಕಟೇಶ ಮಾಹಾತ್ಮ್ಯ)

ತಂತ್ರ ಭಾಗವತ

ಗೀತಾಕಲ್ಪ (ಶ್ರೀಮದಾಚಾರ್ಯರು ತಮ್ಮ ಗ್ರಂಥಗಳಲ್ಲಿ ಉಲ್ಲೇಖಿಸಿರುವುದು)

ಶ್ರೀಮದಾನಂದತೀರ್ಥ ಭಗವದ್ಪಾದರ ಕೃತಿಗಳು

ಗೀತಾ ಭಾಷ್ಯ

ಛಾಂದೋಗ್ಯ ಭಾಷ್ಯ

ಮಾಂಡೂಕ್ಯ ಭಾಷ್ಯ

ಅಣುಭಾಷ್ಯ

ಶ್ರೀಮನ್ಮಹಾಭರತ ತಾತ್ಪರ್ಯ ನಿರ್ಣಯ

ಶ್ರೀಮನ್ಮಹಾಭಾಗವತ ತಾತ್ಪರ್ಯ ನಿರ್ಣಯ

ತಂತ್ರಸಾರ

ಕೃಷ್ಣಾಮೃತಮಹಾರ್ಣವ
ದ್ವಾದಶ ಸ್ತೋತ್ರ
ಸದಾಚಾರ ಸ್ಮೃತಿ
ಯತಿಪ್ರಣವಕಲ್ಪ

ಷಟ್ಪ್ರಶ್ನೋಪನಿಷತ್
ಮಹಾನಾರಾಯಣೋಪನಿಷತ್
ಶೌನಕ ಶೃತಿ ಮತ್ತು ಹಾರೀಕ ಸ್ಮೃತಿ
ಸತ್ತತ್ವರತ್ನಮಾಲಾ
(ತಾಮ್ರಪರ್ಣೀ ಶ್ರೀ ಆನಂದತೀರ್ಥಾಚಾರ್ಯಾಃ)
ಮುಕ್ತಿತತ್ವ
(ಶ್ರೀಮದಾಚಾರ್ಯ ಭಗವತ್ಪಾದರಿಂದ ಉಲ್ಲೇಖಿಸಿದ ಗ್ರಂಥ)
ಸಂಧ್ಯಾಭಾಷ್ಯ
ಗೀತಾವಿವೃತ್ತಿ
ಹರಿಕಥಾಮೃತಸಾರ
ಪುರಂದರದಾಸರ ದೇವರ ನಾಮ ಮತ್ತು ಸುಳಾದಿಗಳು
ಶ್ರೀವಿಜಯದಾಸರ ಕೃತಿಗಳು
ಶ್ರೀವಾದಿರಾಜರ ಕೃತಿಗಳು
ಆಧ್ಯಾತ್ಮ ಮಾಲಾ (ಶ್ರೀ ರಘುಪತಿ ವಿಠಲ ದಾಸರು)
ಮಾನಸ ಸ್ಮೃತಿ (ಶ್ರೀ ಐ ಜಿ ಆಚಾರ್ಯರು–ವ್ಯಾಸತತ್ವಜ್ಞರು)
ಶ್ರೀ ವ್ಯಾಸರಾಜರ ವಚನಗಳು
ಶ್ರೀಮುಷ್ಣಂ ಹಯಗ್ರೀವ ದಂಡಕ

## ಶ್ರೀಹರಿವಾಯುಗಳ ಪ್ರೀತ್ಯರ್ಥವಾಗಿ
## ಈ ಗ್ರಂಥ ಪ್ರಕಾಶನಕ್ಕೆ ಆರ್ಥಿಕ ಸಹಾಯ ನೀಡಿದ ದಾನಿಗಳು

ಶ್ರೀ ಶ್ರೀನಿವಾಸ ರಾವ್ ಎಚ್. ರೂ.೧೦,೦೦೦
ಎ.ಆರ್. ಉದ್ಯೋಗ್ ಇಂಡಿಯನ್ ಆಯಿಲ್ ಡೀಲರ್ಸ್,
ಹೊಸಪೇಟೆ.

ಶ್ರೀ ಸಿ.ಕೆ. ವಿಜಯ ರೂ.೧೦,೦೦೦
ಹೈದರಾಬಾದ್

ಶ್ರೀ ಸಿ.ಕೆ. ನಾರಾಯಣ ರಾವ್ ರೂ.೧೦,೦೦೦
ಬೆಂಗಳೂರು

ಶ್ರೀ ಸಿ.ಕೆ. ಶ್ರೀಧರಮೂರ್ತಿ ರೂ.೧೦,೦೦೦
ಚಾರ್ಟಡ್ ಅಕೌಂಟೆಂಟ್
ಬೆಂಗಳೂರು

ಶ್ರೀ ರಘುನಂದನ ಎನ್.
ಶ್ರೀ ಸಿ.ಕೆ.ನಾರಾಯಣ ರಾವ್ ಅವರ ಪುತ್ರ ರೂ.೧೦,೦೦೦

ಶ್ರೀ ಕುಪ್ಪು ರಾವ್ ರೂ.೫,೦೦೦
ಹೈದರಾಬಾದ್

ಶ್ರೀ ಎಚ್.ಕೆ. ರಮೇಶ್ ರೂ.೫,೦೦೦
ಕಾರ್ಪೋರೇಷನ್ ಬ್ಯಾಂಕ್,
ವಸಂತನಗರ ಬೆಂಗಳೂರು.

ಶ್ರೀ ಆರ್. ಜಗನ್ನಾಥ ರಾವ್ ರೂ.೧,೦೦೦
ಬೆಂಗಳೂರು

